# ಭಾರತೀಯ ಇತಿಹಾಸ ಪ್ರವೇಶಿಕಾ

## ಪ್ರಥಮ ಭಾಗ

ಕಂ. ಕೃಷ್ಣಯ್ಯಂಗಾರ್, ಬಿ.ಎ.
ಅಧ್ಯಾಪಕರು, ದೇಶೀಯ ವಿದ್ಯಾಶಾಲಾ, ಬೆಂಗಳೂರು

ಸತ್ಯಶೋಧನ ಪ್ರಕಟನ ಮಂದಿರ
ಬೆಂಗಳೂರು
೧೯೩೪

ಬೆಲೆ ರೂ. ೨—೮—೦

# ಪೀಠಿಕೆ

ಇದು ಪ್ರೌಢ ಗ್ರಂಥವಲ್ಲ, ಸಾಮಾನ್ಯವಾದುದು. ಬಾಲ್ಯವನ್ನು ಕಳೆದು ಕೌಮಾರದಲ್ಲಿರುವವರನ್ನು ಉದ್ದೇಶಿಸಿಯೇ ಇದನ್ನು ಬರೆದಿದೆ. ಪ್ರೌಢವರ್ಗಗಳಲ್ಲಿ ವ್ಯಾಸಂಗ ಮಾಡುವವರಿಗೆ ಈ ಪುಸ್ತಕದ ವಿಸ್ತಾರವು ಸಾಮಾನ್ಯವೆನ್ನಿಸುವುದು ಸಹಜ. ಆದರೆ ಪ್ರಾಪ್ತವಯಸ್ಕರಾಗುವ ಬಹು ಮಂದಿಗೆ ಶಾಲೆಗಳೇ ಪರಮಾವಧಿ; ಅಂತಹ ಯುವಕರಿಗೆ ಸ್ವದೇಶದ ಇತಿಹಾಸದಲ್ಲಿ ಎಷ್ಟು ಮಾತ್ರದ ಪರಿಚಯವು ಅವಶ್ಯಕವೋ ಅಷ್ಟನ್ನು ಮಾತ್ರ ವಿಶದಪಡಿಸಲು ಈ ಪುಸ್ತಕದಲ್ಲಿ ಪ್ರಯತ್ನ ಮಾಡಿದೆ. ಸಾಮಾನ್ಯವಾಗಿ ಪ್ರತಿ ಆಂಗ್ಲೇಯ ಯುವಕನೂ ವಯಸ್ಕನಾಗುವ ವೇಳೆಗೆ ಟೌಟ್ ಪಂಡಿತರು ಬರೆದಿರುವ ಗ್ರಂಥಗಳಲ್ಲಿ ಮೂರನೆಯ ಪುಸ್ತಕವೆಂಬ ಹಿರಿಯದನ್ನು ಓದಿರುತ್ತಾನೆ; ಆಂಗ್ಲೇಯ ಚರಿತ್ರೆಗೆ ಆ ಗ್ರಂಥವು ಹೇಗೋ ಅದೇ ಪರಿಮಾಣವುಳ್ಳ ಭಾರತೀಯ ಚರಿತ್ರೆಯು ನಮ್ಮ ಯುವಕ ಯುವತಿಯರಿಗೆ ಲಭ್ಯವಾಗಿಲ್ಲ. ಈ ಪುಸ್ತಕವು ಪರಿಮಾಣದಲ್ಲಿ ಅದಕ್ಕಿಂತಲೂ ಕಡಿಮೆಯಾದುದು; ಆದುದರಿಂದ ಕನ್ನಡ ನಾಡಿನ ಕುಮಾರ ಕುಮಾರಿಯರು ಈ ಪುಸ್ತಕದಲ್ಲಿರುವಷ್ಟನ್ನು ತಾವು ತಿಳಿಯತಕ್ಕ ಕನಿಷ್ಠಾಂಶವೆಂದು ಭಾವಿಸಬೇಕು.

ಭಾರತೀಯ ಇತಿಹಾಸವನ್ನು ಭಾರತೀಯರಿಗೆ ಬೋಧಿಸುವಾಗ ಪರಂಪರಾಗತವಾಗಿ ನೆಲೆಸಿರುವ ವಿಧಾನಕ್ಕೆ ಭಂಗವನ್ನು ತಂದಿಟ್ಟು ಅನರ್ಥಕ್ಕವಕಾಶಕೊಡುವ ರೀತಿಯನ್ನು ಅವಲಂಬಿಸುವುದು ಖಂಡನೀಯವಾದುದು. ಸಾಧಾರಣ ಜನ ಶಿಕ್ಷಣದಲ್ಲಿ ಮಹಾಭಾರತ ಪುರಾಣಾದಿಗಳ ಪಠನೆಯೇ ಇತಿಹಾಸ ಪರಿಚಯವನ್ನು ಇಂದಿಗೂ ಉಂಟುಮಾಡುವುದು; ಭಾರತೀಯ ಸ್ತ್ರೀ ಬಾಲ ವೃದ್ಧರೆಲ್ಲರಿಗೂ ಆ ಮೂಲಕವೇ ಪ್ರಾಚೀನ ಮಹರ್ಷಿಗಳ ಮತ್ತು ಸಾರ್ವಭೌಮರ ಸ್ಮರಣೆಯುಂಟಾಗುವುದು. ನಿವೇದನ ರೀತಿಯಲ್ಲಿ ಮೌಢ್ಯವು ನೆಲೆಗೊಂಡಿರುವುದು ಸಹಜ; ಆದರೆ ಪರಿಣತರಾಗುತ್ತ ಆ ಮೌಢ್ಯವು ಕ್ರಮವಾಗಿ ಮಾಯವಾಗುವುದೂ

ಸಹಜ. ನೀತಿ ಮತ್ತು ಧರ್ಮ ತತ್ವಗಳ ಪ್ರಚಾರಕ್ಕಾಗಿಯೇ ಪುರಾಣ ಹರಿಕಥೆಗಳು ಪ್ರಯೋಗವಾಗುವಲ್ಲಿ ಪಾಮರ ರಂಜನೆಗಾಗಿ ಅತಿಮಾನುಷ ವ್ಯಾಪಾರ ವರ್ಣನೆಗಳು ಹೆಚ್ಚಿ ಮೌಢ್ಯಕ್ಕೆ ಆಸ್ಪದವನ್ನು ಕೊಡುತ್ತವೆ. ಕಾಲಕ್ರಮದಲ್ಲಿ ಶಾಸ್ತ್ರಗ್ರಂಥಗಳನ್ನೋ ಭಗವದ್ಗೀತಾ ಮುಂತಾದ ಪ್ರೌಢ ಗ್ರಂಥಗಳನ್ನೋ ಗ್ರಹಿಸಿ ಅನುಭವಶಾಲಿಗಳಾದವರಲ್ಲಿ ಆ ಮೌಢ್ಯವು ಸಹಜ ವಾಗಿ ತೊಲಗುತ್ತದೆ. ಆದಿಶೇಷನೊಬ್ಬನೇ ಆದರೂ ಒಂದೆಡೆಯಲ್ಲಿ ಭೂಮಿ ಯನ್ನು ತಲೆಯಮೇಲೆ ಹೊತ್ತಿದ್ದು ಮತ್ತೊಂದೆಡೆಯಲ್ಲಿ ಕ್ಷೀರಸಾಗರದಲ್ಲಿ ಶ್ರೀ ವಿಷ್ಣುವಿಗೆ ಪರ್ಯಂಕರೂಪವಾಗಿರುವುದು ಹೇಗೆ ಎಂಬ ಪ್ರಶ್ನೆಯು ತರುಣರ ಮನಸ್ಸಿನಲ್ಲಿ ತೋರಿದಾಗ ಬಾಧಿಸುವ ಪರಿಯಲ್ಲಿಯೇ ಪರಿಣತರ ಮನಸ್ಸಿನಲ್ಲಿ ತೋರಿಕೊಂಡಾಗ ಏಕೆ ಬಾಧಿಸುವುದಿಲ್ಲ? ಭಾರತ ಯುದ್ಧಾ ರಂಭದಲ್ಲಿ ಹದಿನೆಂಟು ಅಧ್ಯಾಯಗಳ ಭಗವದ್ಗೀತೆಯನ್ನು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಮಾಡಿದನೆಂಬುದನ್ನೋ ಅಥವಾ ರಾಜಸೂಯ ಸಮಯದಲ್ಲಿ ಯುಧಿಷ್ಠಿರನ ತುಂಬಿದ ಸಭೆಯಲ್ಲಿ ಭೀಷ್ಮನು ದಶಾವತಾರ ಗಳ ವೃತ್ತಾಂತವನ್ನು ವಿವರಿಸಿದನೆಂಬುದನ್ನೋ ಯೋಗ್ಯತಾನುಸಾರವಾಗಿ ಗ್ರಹಿಸುವುದೇ ಇತಿಹಾಸ ಬೋಧನೆಯ ಪ್ರಾಚೀನ ಗತಿಯ ಲಕ್ಷಣ.

ಆಧುನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಭಾರತೀಯ ಇತಿಹಾಸವನ್ನು ಬೋಧಿಸುವಾಗ ವಿಚಾರಶಕ್ತಿಯು ಹುಟ್ಟುವ ಮೊದಲೇ ಪುರಾಣಲಬ್ಧ ವೃತ್ತಾಂತಗಳನ್ನು ಧೂಳೀಪಟಮಾಡಿಬಿಡುತ್ತೇವೆ; ಇಲ್ಲವೆ ಅವುಗಳ ಗೋಜಿಗೇ ಹೋಗದೆ ಒಂದೆರಡು ವಾಕ್ಯಗಳಲ್ಲಿ ಹಾರಿಸಿಬಿಡುತ್ತೇವೆ. ಪಠ್ಯಪುಸ್ತಕಗಳನ್ನು ಬರೆಯಲು ಆರಂಭಿಸಿದಾಗ ಇತಿಹಾಸ ಶೋಧನೆಯು ಅಲ್ಪವಾಗಿದ್ದುದರಿಂದ ವಿವರವು ಗ್ರಾಹ್ಯವಾಗಿರಲಿಲ್ಲ; ಸಿಂಕ್ಲೇರ್, ಗ್ಯಾರೆಟ್ ಮುಂತಾದವರು ಮೊದಲಿಟ್ಟ ರೀತಿಯನ್ನೇ ಮಾರ್ಸ್ಡೆನ್ ಮುಂತಾದವ ರೆಲ್ಲರೂ ಅನುಸರಿಸುತ್ತ ಬಂದರು. ರಾಮಾಯಣ ಮಹಾಭಾರತಾದಿ ವೃತ್ತಾಂತಗಳನ್ನು ತಾಯಹಾಲಿನೊಡನೆ ಸವಿದು, ಮುಗ್ಧವಾದರೂ ಅತಿ ಸುಂದರವಾದ ಭಾವನೆಗಳನ್ನು ಮನಸ್ಸುಗಳಲ್ಲಿ ತುಂಬಿಕೊಂಡ ಮಕ್ಕಳಿಗೆ ಶಾಲೆಗಳ ಇತಿಹಾಸ ಪಾಠಗಳಲ್ಲಿ ಶಿಬಿ, ಹರಿಶ್ಚಂದ್ರ, ಭಗೀರಥ, ಭೀಷ್ಮ, ಕರ್ಣ ಮುಂತಾದವರ ಸ್ಮರಣೆಯನ್ನು ನಾಶಗೊಳಿಸತಕ್ಕ ರೀತಿಯು

ಅಪವಿತ್ರವೂ ಅಕ್ಷಮ್ಯವೂ ಆದುದು. ಪರಂಪರಾಗತವಾಗಿ ನೆಲೆಸಿರುವ ಪುರಾಣೇತಿಹಾಸಗಳನ್ನೂ ಶಾಸ್ತ್ರೀಯವಾದ ಇತಿಹಾಸವನ್ನೂ ಬೋಧನ ಕ್ರಮದಲ್ಲಿ ಪರಸ್ಪರವಾಗಿ ಹೊಂದಿಸುವ ಭಾರವೂ ಕರ್ತವ್ಯವೂ ಇತಿಹಾಸ ಪಾಠಕರಿಗೆ ಸೇರಿರುತ್ತದೆ. ಅದನ್ನು ಅಸಡ್ಡೆಮಾಡಿದರೆ ಬೋಧಕರು ತರುಣರಿಗೆ ದ್ರೋಹಮಾಡಿದಂತೆಯೇ ಪರಿಣಮಿಸುವುದು. ಈ ಪ್ರಬಲ ಕಾರಣದಿಂದ ಬುದ್ಧಪೂರ್ವ ಭಾಗವೆಂದು ಹೆಸರಾದ ಆರ್ಯ ಸಂಸ್ಕೃತಿ ಭಾಗವನ್ನು ತಕ್ಕ ರೀತಿಯಲ್ಲಿ ಪಾಠ ಹೇಳುವುದು ಅವಶ್ಯವೂ ಅನಿವಾರ್ಯವೂ ಆದುದು.

ಪ್ರಬಲತರವಾದ ಮತ್ತೊಂದು ಕಾರಣವೂ ಉಂಟು. ಭಾರತೀಯ ನಾಗರಿಕತೆಯೆಂಬುದರ ಮೂಲವೂ ಅಲ್ಲಿಯೇ, ಆದರ್ಶವೂ ಅಲ್ಲಿಯೇ, ತಿರುಳೂ ಅಲ್ಲಿಯೇ. ಭಾರತೀಯ ಇತಿಹಾಸವನ್ನೇ ಆಜೀವವಾಗಿ ವ್ಯಾಸಂಗಮಾಡಿದವರಿಗೂ ತತ್ವಜ್ಞರಿಗೂ ಭಾರತೀಯರಲ್ಲಿ ಮಹಾಪುರುಷರು ಯಾರೆಂದರೆ ಮಹರ್ಷಿಗಳೇ ಎಂಬುದೂ, ವೈದಿಕಕಾಲವೇ ಅತಿಪ್ರಭಾವ ಯುಕ್ತವಾದುದೆಂಬುದೂ ನಿರ್ಣಯವಾಗುತ್ತದೆ. ಹೀಗಿರುವಲ್ಲಿ ಬುದ್ಧ ಪೂರ್ವಕಾಲದ ವಿವರವನ್ನು 2–3 'ಪೀರಿಯಡ್ಡು'ಗಳಲ್ಲಿ ಮುಗಿಸಿಬಿಡುವುದು ಘೋರವಾದ ದೋಷವೆನಿಸುತ್ತದೆ. ಆ ಕಾಲದ ಸ್ಥಿತಿಗತಿಗಳ ವಿವರವು ಕಷ್ಟವೆನ್ನುವುದು ತಥ್ಯವಲ್ಲ; ಬೋಧಕರಲ್ಲಿ ನಿರುತ್ಸಾಹವೋ ಪರಿಚಯಾ ಭಾವವೋ ನೆಲೆಸಿದ್ದಲ್ಲಿ ಕಷ್ಟ ತೋರುವುದು. ಭಾರತೀಯ ತರುಣರಿಗೆ ಭಾರತೀಯ ಇತಿಹಾಸದಲ್ಲಿ ಸಹಜವಾದ ಆಸಕ್ತಿಯಿರುತ್ತದೆ. ಸದ್ಯಃ ಸ್ಥಿತಿಯಲ್ಲಿ ಆ ಕುತೂಹಲವು ವಿಶೇಷವಾಗಿಯೇ ಇರುತ್ತದೆ. ಆದ್ದರಿಂದ ಇತಿಹಾಸ ಬೋಧನೆಯಲ್ಲಿ ಕಷ್ಟ ತೋರಿದರೆ ಅದಕ್ಕೆ ಕಾರಣ ವಿಷಯ ದಲ್ಲಿಲ್ಲ; ಪಾಠಕರ ಅನರ್ಹತೆಯಲ್ಲಿ ಎಂಬ ಅಂಶವನ್ನು ನಿಷ್ಠುರವೆಂದು ತೋರಿದಾಗ್ಯೂ ಒಪ್ಪತಕ್ಕದ್ದಾಗಿರುತ್ತದೆ.

ದೌರ್ಭಾಗ್ಯವಶಾತ್ ಭಾರತೀಯ ಚರಿತ್ರೆಯ ವಿವರವು ನಮ್ಮಲ್ಲಿ ಹಿರಿಯರಿಗೂ ಕಿರಿಯರಿಗೂ ಸಹ ಕಷ್ಟಸಾಧ್ಯವಾಗಿರುವುದಲ್ಲದೆ ಕೆಲವು ಕುಟಿಲ ವ್ಯಾಜಗಳಿಂದ ಕಠಿನವೆಂದು ತೋರುವುದು. 'ಇದನ್ನು ಓದಿ ನೆನಪಿನಲ್ಲಿಡುವುದು ಹೇಗೆ?' ಎಂಬ ಪ್ರಶ್ನೆಗಿಂತಲೂ 'ಇದನ್ನು ಓದದೆ

ಬಿಡುವುದು ಹೇಗೆ? ಮರೆಯುವುದು ಹೇಗೆ?' ಎಂಬುದೇ ಸಹಜವಾದುದು. ವಯಸ್ಕರಾದವರು "ಇವುಗಳನ್ನು ನಾವು ಕೇಳಿದುದೇ ಇಲ್ಲ, ನಮ್ಮ ಕಾಲದಲ್ಲಿ ಇವೊಂದನ್ನೂ ಪಾಠ ಹೇಳುತ್ತಲೇ ಇರಲಿಲ್ಲ" ಎನ್ನುವುದು ಸಾಮಾನ್ಯ. ಇದು ವಾಸ್ತವವಾದರೂ ಇಂತಹ ವಾಕ್ಯಗಳಿಂದ ಯುವಕ ಜನರಲ್ಲಿ ಅಸಡ್ಡೆ ತೋರುವಂತಾದರೆ ವಿಷಾದಕರ. ಭಾರತೀಯ ಇತಿಹಾಸ ವಿಷಯದಲ್ಲಿ ಅನಾದರವು ನೆಲೆಸಿರಲು ಅಜ್ಞತೆಯೇ ಮೂಲಕಾರಣ; ಅದರೊಂದಿಗೆ ಸೋಮಾರಿತನವೂ ಕಲೆತಾಗ ಮೂಡುವ ಪರಿಣಾಮವು ಅನುಭವದಲ್ಲಿಯೇ ಇದೆ. ಇದಕ್ಕೆ ತಕ್ಕ ಚಿಕಿತ್ಸೆಯು ನಡೆಯಬೇಕಾದುದು ವಿಶ್ವವಿದ್ಯಾನಿಲಯಗಳಲ್ಲಿ.

ಭಾರತೀಯ ಇತಿಹಾಸದ ಮಹತ್ವವನ್ನು ಅತ್ಯುಕ್ತಿಗೆ ಗುರಿ ಮಾಡುವುದು ಸುಲಭಸಾಧ್ಯವಲ್ಲ. ಕೆಲ ವರ್ಷಗಳ ಹಿಂದೆ ವಿಲಿಯಂ ಆರ್ಚರ್ ಎಂಬ ಆಂಗ್ಲೇಯ ರಸಜ್ಞನು 'India and the Future' ಎಂಬ ಪುಸ್ತಕವನ್ನು ಬರೆದು ಭಾರತೀಯ ಸಭ್ಯತೆಯು ಶೂನ್ಯ ಸಮಾನ ವೆಂದು ಪ್ರತಿಪಾದಿಸಿದುದಕ್ಕೆ ಪ್ರತಿಯಾಗಿ ಸರ್ ಜಾನ್ ವುಡ್ರೋಫ್ ಎಂಬ ಆಂಗ್ಲ ಮಹಾಶಯನೇ 'Is India Civilized' ಎಂಬ ಪುಸ್ತಕವನ್ನು ಬರೆದ ಸಂಗತಿಯು ವಯಸ್ಕರಾದವರೆಲ್ಲರಿಗೂ ತಿಳಿದಿದೆ. ಅದರಂತೆಯೇ ಎಚ್. ಜಿ. ವೆಲ್ಸ್ ಎಂಬ ಪ್ರಸಿದ್ಧ ಆಂಗ್ಲ ಲೇಖಕನು ಮಾನವರಾಶಿಯ ಇತಿಹಾಸವನ್ನೇ ಸಂಕ್ಷೇಪವಾಗಿ ಬರೆದು ಪ್ರಕಟಿಸಿದಾಗ ಇ. ಬಿ. ಹ್ಯಾವೆಲ್ ಎಂಬ ಆಂಗ್ಲೇಯ ಪಂಡಿತನು ಆ ಗ್ರಂಥದಲ್ಲಿ ಭಾರತೀಯ ಅಥವಾ ಪೌರಸ್ತ್ಯ ರಾಶಿಯ ಮಹಿಮೋನ್ನತಿಗಳ ವಿವರವು ಲುಪ್ತವೇ ಆಗಿದ್ದ ದೋಷವನ್ನೆತ್ತಿ ಹಿಡಿದು ಮಾನವರಾಶಿಯ ಅಭ್ಯುದಯದಲ್ಲಿ ಭಾರತೀಯರ ತೇಜಸ್ಸನ್ನು ತೋರಿಕೊಡಬೇಕೆಂದು ತಾನೇ ಒಂದು ಪುಸ್ತಕವನ್ನು ಬರೆದನು. ಭಾರತೀಯತ್ವದ ವಿವರ ವಿಚಾರಗಳಲ್ಲಿ ಆಂಗ್ಲೇಯರಲ್ಲಿಯೇ ಪಕ್ಷ ವಿಪಕ್ಷಗಳುಂಟು; ಅವರಿಂದ ಪ್ರಕಟವಾದ ಪುಸ್ತಕಗಳೇ ಎಲ್ಲೆಲ್ಲಿಯೂ ಗೋಚರವಾಗುತ್ತವೆ. ಆಂಗ್ಲೇಯರಿಗೆ ಭರತವರ್ಷದಲ್ಲಿ ವಿಶೇಷವಾದ ಆಸಕ್ತಿಯುಂಟು; ಆದರೆ ಆ ಆಸಕ್ತಿಯು ಸದಾ ಮೋಹರಹಿತವಾಗಿರುವುದಿಲ್ಲ. ಅವರಿಂದ ಸಿದ್ಧವಾದ ಭಾರತೀಯ ಇತಿಹಾಸ ಕಥನಗಳಲ್ಲಿ ಯಾವುದಾದರೊಂದು ಬಗೆಯ

ಮೋಹವು ಕವಿದಿರುತ್ತದೆ. ಇಂತಹ ಮೋಹವು ವಿಪರೀತವಾಗಿ ಕಾಣಿಸಿ ಕೊಳ್ಳುವ ಪುಸ್ತಕಗಳನ್ನೋದಿ ಕ್ರುದ್ಧರಾಗಿ ಪ್ರತಿಯಾಗಿ ಬರೆಯಲು ಯತ್ನಿಸಿದ ಭಾರತೀಯರಲ್ಲಿಯೂ ಮತ್ತೊಂದು ಬಗೆಯ ಮೋಹವು ತೋರಿಕೊಳ್ಳದೆ ಬಿಡಲಿಲ್ಲ. ಈ ಮೋಹ ಪ್ರಪಂಚದಿಂದ ಪಾರಾಗುವುದು ಸುಲಭವಲ್ಲ. ಎಂದಿನವರೆಗೂ ನಮ್ಮ ವಿಶ್ವವಿದ್ಯಾನಿಲಯಗಳ ಇತಿಹಾಸ ಪಾಠಪ್ರವಚನಗಳಲ್ಲಿ ಪಾಶ್ಚಾತ್ಯರಾಶಿಯೇ ಸರ್ವ ಪ್ರಧಾನವಾಗಿ ಪೌರಸ್ತ್ಯ ರಾಶಿಯು ಅಲಕ್ಷ್ಯಕ್ಕೀಡಾಗಿರುವುದೋ ಅಂದಿನವರೆಗೂ ಭಾರತೀಯ ಇತಿಹಾಸದ ಅಥವಾ ಪೌರಸ್ತ್ಯ ವಿಭಾಗದ ಪೂರ್ಣ ರೂಪವು ಸಿದ್ಧವಾಗ ಲಾರದು. ನಮ್ಮ ವಿಶ್ವವಿದ್ಯಾಪೀಠಗಳಲ್ಲಿ ಪದವೀಧರರಾದವರಿಗೆ ಯೂರೋಪ್ ಖಂಡದ ಇತಿಹಾಸದ ಪರಿಚಯವೆಷ್ಟು ಮಾತ್ರ ಇರುವುದೋ ಏಷ್ಯಾ ಖಂಡದ ಇತಿಹಾಸ ಪರಿಚಯವೆಷ್ಟು ಮಾತ್ರ ಇರುವುದೋ ವಿವರಿಸ ಬೇಕಾಗಿಲ್ಲ. ಭಾರತೀಯ ಇತಿಹಾಸವನ್ನು ಬೋಧಿಸುವುದಕ್ಕೆ ಮಾತ್ರವೇ ಅಲ್ಲದೆ ಗ್ರಹಿಸುವುದಕ್ಕೂ ಕೂಡ ಏಷ್ಯಾಖಂಡದ ಇತಿಹಾಸದ ಸ್ಥೂಲ ಪರಿಚಯವು ಅವಶ್ಯಕ; ಏಕಂದರೆ ಭಾರತೀಯ ಚರಿತ್ರೆಯ ವಿವರವೇ ಪೌರಸ್ತ್ಯ ಜಗತ್ತಿನ ಇತಿಹಾಸದ ತಿರುಳು.

ಭಾರತೀಯ ಸಭ್ಯತೆಯ ವೃದ್ಧಿ ವಿಕಾಸಗಳ ವಿವರವನ್ನೂ ಪ್ರಭಾವ ವನ್ನೂ ವಿಮರ್ಶನ ರೀತಿಯಿಂದ ವಿಶದಗೊಳಿಸುವುದರಲ್ಲಿ ಸಮರ್ಪಕ ಗ್ರಂಥವು ಇಂಗ್ಲೀಷಿನಲ್ಲಿಯೂ ತೋರಿಕೊಂಡಿಲ್ಲ; ಅಂತಹ ಗ್ರಂಥವು ಸಿದ್ಧವಾಗುವುದು ಸುಲಭವೂ ಅಲ್ಲ. ಭಿನ್ನ ಭಿನ್ನವಾದ ರಾಶಿಗಳ ವಿಚಾರವು ದೊರಕಬಹುದು, ಪ್ರತ್ಯೇಕ ವಿಭಾಗಗಳಲ್ಲಿ ಯಥೇಷ್ಟವಾದ ಪರಿಚಯ ವೊದಗಬಹುದು, ಒಟ್ಟುಗೂಡಿಸಿದ ಪೂರ್ಣರೂಪವು ಲಭ್ಯವಾಗಿಲ್ಲ. ವಿಕಾಸ ಗತಿಯ ಪರೀಕ್ಷೆಯೇ ಅತೃಪ್ತಿಕರವಾಗಿರುವಲ್ಲಿ ಇತಿಹಾಸ ಗ್ರಂಥಗಳಲ್ಲಿ ಭಿನ್ನ ಭಿನ್ನವಾದ ಅಂಗಾಂಗಗಳನ್ನು ಜೋಡಿಸಿ ಮೂರ್ತಿಯನ್ನು ಸಿದ್ಧ ಗೊಳಿಸುವ ಪ್ರಯತ್ನವೇ ಸಾಧಾರಣವಾಗಿದೆ. ನೂತನವಾಗಿ ತಿಳಿದು ಬರತಕ್ಕದ್ದಾಗಿ ಸದ್ಯಃ ಅಜ್ಞಾತವಾಗಿರತಕ್ಕ ಭಾಗವು ವಿಶೇಷವಾಗಿಯೇ ಇದ್ದಾಗ್ಗೂ ತಿಳಿದುಬಂದಿರುವ ಭಾಗವೂ ವಿಶೇಷವಾಗಿಯೇ ಇದೆ. ಅದನ್ನಾದರೂ ವಿಚಾರ ಸಹಿತವಾಗಿ ನಿವೇದಿಸುವ ಪ್ರಯತ್ನವು ಇನ್ನೂ

ಆರಂಭದಲ್ಲಿದೆ. ಈ ಮಧ್ಯೆ ಅಲ್ಪ ವಿಚಾರದಿಂದಲೇ ತೃಪ್ತರಾದವರ ಗರ್ಜನೆಗಳು ಆಗಾಗ್ಗೆ ಕೇಳಬರುತ್ತವೆ. ಮತ್ತೆ ಕೆಲವೆಡೆಗಳಲ್ಲಿ ಇತಿಹಾಸವೇ ಬೇರೆ, ಪ್ರಾಕ್ತನ ಪರೀಕ್ಷೆಯೇ ಬೇರೆಯೆಂಬ ಅಂಶವನ್ನು ಮರೆತುಬಿಡುವುದೇ ಲಕ್ಷಣವಾಗಿದೆ. ಪ್ರೌಢವಾದ ಭಾರತೀಯ ಇತಿಹಾಸದ ನಿರೂಪಣೆಯು ಸುಲಭವಾದುದಲ್ಲ. ರಾಜಕೀಯ ಘಟನೆಗಳ ಪರಂಪರೆಯನ್ನು ಕಾರ್ಯಕಾರಣ ವಿಚಾರಯುಕ್ತವಾಗಿ ಸಿದ್ಧಗೊಳಿಸುವುದು ಇತಿಹಾಸದಲ್ಲಿ ಬೆನ್ನುಮೂಳೆಯನ್ನು ಮಾತ್ರ ಇಟ್ಟಹಾಗೆ. ಅಂಗಾಂಗ ವಿನ್ಯಾಸ, ಅವಯವ ಪರಿಪುಷ್ಟಿ, ಇಂದ್ರಿಯ ವಿಕಾಸ, ರಕ್ತ ಚಲನ, ಚೈತನ್ಯ, ಅಲಂಕಾರ ಮುಂತಾದ ಲಕ್ಷಣಗಳು ಬೆನ್ನುಮೂಳೆಯ ತರುವಾಯ ಶಾಸ್ತ್ರಜ್ಞನಾದ ಕಲಾವಂತನು ರಚಿಸತಕ್ಕವು. ಇತಿಹಾಸವು ಜೀವಕಳೆಯಿಂದ ಶೋಭಿಸುವ ಸಂಪೂರ್ಣವಾದ ಆಕೃತಿಯೇ ವಿನಾ ಅಸ್ಥಿಪಂಜರವಲ್ಲ. ಪ್ರಾಕ್ತನ ಪರೀಕ್ಷಕರ ವರದಿಗಳ ಅಂಶಗಳನ್ನು ಕ್ರೋಢೀಕರಿಸಿದಲ್ಲಿ ಇತಿಹಾಸವು ಸಿದ್ಧವಾಗುವುದಿಲ್ಲ. ಇಕ್ಷ್ವಾಕು ವಂಶದವರ ಅಥವಾ ಬಾಣ ವಂಶದವರ ವೃತ್ತಾಂತವಿಲ್ಲದಿದ್ದರೆ ದೋಷವೇನೂ ಇಲ್ಲ; ಕಾಲಿದಾಸನ, ಶಂಕರಾಚಾರ್ಯರ ಅಥವಾ ಗೋಸ್ವಾಮಿ ತುಲಸೀದಾಸನ ವೃತ್ತಾಂತವಿಲ್ಲದಿದ್ದರೆ ಗುರುತರವಾದ ದೋಷವುಂಟಾಗುವುದು.

ಇಂತಹ ಇತಿಹಾಸವನ್ನು ಸಾಮಾನ್ಯ ಪ್ರಜ್ಞೆಗಾಗಿ ನಿರೂಪಿಸುವಾಗ ಭಾಗಗಳಾಗಿ ಭೇದಿಸುವುದು ಸರ್ವಥಾ ಉಚಿತವಲ್ಲ. ಮುದ್ರಣದ ಅನುಕೂಲಕ್ಕಾಗಿ ಅಥವಾ ವ್ಯಾಸಂಗಾನುಕೂಲ್ಯಕ್ಕಾಗಿ ವಿಭಾಗ ರಚನೆ ಮಾಡುವಲ್ಲಿ ಹೇಗೆ ವಿಭಾಗಿಸಿಕೊಂಡಾಗ್ಯೂ ಗುಪ್ತಸಾರ್ವಭೌಮರ ಅಥವಾ ಕಾಲಿದಾಸನ ಕಾಲವೆಂಬುದನ್ನೇ ಮಧ್ಯಸ್ಥಾನವೆಂದು ಭಾವಿಸಿ ಅದಕ್ಕೆ ಪೂರ್ವಭಾಗವೆಲ್ಲವೂ ಆ ಘಟ್ಟದ ತೇಜಃಪುಂಜತೆಗೆ ಸನ್ನಾಹ ಮಾತ್ರವೆಂದೂ ಅದಕ್ಕೆ ಉತ್ತರಭಾಗವು ಆ ತೇಜಃಪುಷ್ಟಿಯ ಪರಿಣಾಮವೆಂದೂ ಗ್ರಹಿಸಬೇಕು. ಆ ಅಂಶವು ಮನದಟ್ಟಾದರೆ ಭಾರತೀಯ ಇತಿಹಾಸದ ಏಕಧಾರಾ ಸ್ವರೂಪದಲ್ಲಿ ಸಂದೇಹ ತೋರುವುದಿಲ್ಲ.

ತರುಣರನ್ನುದ್ದೇಶಿಸಿಯೇ ಈ ಪುಸ್ತಕವನ್ನು ಬರೆದಿದೆಯಾದರೂ ಕೆಲವು ಕೃತ್ರಿಮ ಕಾರಣಗಳಿಂದ ಕೆಲವೆಡೆಗಳಲ್ಲಿ ವಿಪುಲವಾಗಿ ಬೆಳೆಸ

ಬೇಕಾಯಿತು. ದೋಷಯುಕ್ತವಾದ ವಿಚಾರ ನಿರ್ಣಯಗಳು ನೆಲೆಗೊಂಡಿರುವ ಭಾಗಗಳಲ್ಲಿಯೂ ಅಪರಿಚಿತವಾದ ಭಾಗಗಳಲ್ಲಿಯೂ ವಿವರವನ್ನು ಅಸಹಜವಾಗಿಯಾದರೂ ಅನಿವಾರ್ಯವಾಗಿ ತೋರಬೇಕಾಯಿತು. ಭಾರತೀಯತ್ವದ ವೃದ್ಧಿ ವಿಕಾಸಗಳ ಸಕಾರಣ ಪ್ರಮಾಣ ವಿಚಾರವು ಯಾರಿಗಾದರೂ ಸಾಹಸವೇ. ಈ ಪ್ರಯತ್ನದಲ್ಲಿ ಸಾಹಸ ಮಾತ್ರವೇ ತೋರಿಕೊಂಡಿದ್ದಲ್ಲಿ ಕನ್ನಡಿಗರು ಕ್ಷಮೆಯನ್ನು ತೋರಬೇಕು. ವಿವರವು ಹೆಚ್ಚಾಗಿ ಪರಿಮಾಣ ಭಂಗದ ಶಂಕೆಯು ತೋರಿದಾಗಲೂ ವಿಷಯವು ಮಾತ್ರ ತರುಣರಿಗೆ ಕಠಿಣವೂ ಅಲ್ಲ, ಘೋರವೂ ಅಲ್ಲ. ಸ್ವಭಾಷೆಯಲ್ಲಿಯೇ ಇರುವುದರಿಂದ ದೊಡ್ಡ ಭೂತವೊಂದು ತೊಲಗಿಹೋಗುವುದು. ತರುಣರ ಗ್ರಹಣಶಕ್ತಿಗೆ ಇದು ಮೀರಿದುದಲ್ಲವೆಂದು ಹತ್ತಾರು ವರ್ಷಗಳ ಅನುಭವದಿಂದ ಹೇಳಬಹುದಾಗಿದೆ. ಶಿಕ್ಷಣ ಕ್ರಮದಲ್ಲಿಯೂ ಪರೀಕ್ಷಾ ವ್ಯವಸ್ಥೆಯಲ್ಲಿಯೂ ಭಾರತೀಯ ಚರಿತ್ರೆಗೆ ಸಲ್ಲಬೇಕಾದ ಸ್ಥಾನವು ಸಂದುದೇ ಆದರೆ ಈ ಪುಸ್ತಕವು ಹೈಸ್ಕೂಲುಗಳ ವಿದ್ಯಾರ್ಥಿಗಳಿಗೆ ಉಪಯುಕ್ತವಾದೀತೆಂದು ತೋರುವುದು.

ಇಂಗ್ಲೀಷ್ ಭಾಷೆಯ ಗ್ರಂಥಗಳೇ ಹೆಚ್ಚು ಬಳಕೆಯಲ್ಲಿವೆ; ರಮೇಶ ಚಂದ್ರ ದತ್, ವಿನ್ಸೆಂಟ್ ಸ್ಮಿತ್, ಹ್ಯಾವೆಲ್, ಜಯಸ್ವಲ, ಮುಖರ್ಜಿ, ಸರ್ಕಾರ್ ಮುಂತಾದವರೆಲ್ಲರೂ ಇಂಗ್ಲೀಷಿನಲ್ಲಿಯೇ ಬರೆದಿರುತ್ತಾರೆ; ಗೌರೀಶಂಕರ ಓಝಾ, ಸರದೇಶಾಯಿ ಮುಂತಾದ ಕೆಲವರು ಮಾತ್ರ ದೇಶ ಭಾಷೆಗಳಲ್ಲಿ ಬರೆದಿದ್ದಾರೆ. ಇಂತಹ ಪಂಡಿತವರ್ಯರ ಗ್ರಂಥಗಳಿಂದ ಬೇರೆ ಬೇರೆ ಭಾಗಗಳಲ್ಲಿ ವಿಶೇಷವಾದ ಪರಿಚಯವನ್ನು ಪಡೆಯಬಹುದು; ಸಾಮಾನ್ಯ ಪರಿಚಯಕ್ಕೆ ಅನುವಾದ ಗ್ರಂಥವಿಲ್ಲ. ಪಠ್ಯಪುಸ್ತಕಗಳೇನೋ ಸಂಖ್ಯೆಯಲ್ಲಿ ಹೇರಳ; ಒಂದೊಂದರಲ್ಲಿಯೂ ಒಂದೊಂದು ದೋಷವಾದರೂ ಕಾಣುತ್ತದೆ. ಮೂಲ ಗ್ರಂಥಗಳೂ ಆಧಾರಗಳೂ ಭಾರತೀಯವೇ ಆಗಿರುವಲ್ಲಿ ಯೋಗ್ಯವಾದ ಪರಿಚಯವು ಬೇಕಾದರೆ ಮೂಲವಸ್ತುಗಳ ಪರಿಚಯವು ಸಾಮಾನ್ಯವಾಗಿಯಾದರೂ ಇದ್ದೇ ಇರಬೇಕು. ಕನ್ನಡದಲ್ಲಿ ಬರೆಯುವುದೊಂದು ಪರಿ; ಇಂಗ್ಲೀಷಿನಲ್ಲಿ ಉಪನ್ಯಾಸಕೊಡುವುದಿನ್ನೊಂದು ಪರಿ. ಉಚ್ಚಾರಣೆಯ ಒಂದು ಅಲ್ಪಾಂಶವೇ ಈ ಭೇದವನ್ನೂ ಇರುವ ತೊಂದರೆ

ಯನ್ನೂ ಸೂಚಿಸುತ್ತದೆ. ಭಾರತೀಯ ಪಂಡಿತನು 'ಬುದ್ಧಿಸ್ಟ್, ಸಂಗ, ಡೇರಿಯಸ್, ಮೆಹಾಮೆಡನ್' ಮುಂತಾದ ಅಪಶಬ್ದ ಪರಂಪರೆಯನ್ನು ಬಿಂಕದಿಂದ ಒದರುವುದು ಕರ್ಣಕಠೋರವಾಗಿರುತ್ತದೆ. ದೇಶಭಾಷೆ ಯಲ್ಲಿಯೇ ಬೋಧನೆಯನ್ನೂ ಲೇಖನವನ್ನೂ ಕೈಗೊಂಡಾಗ ಇಂತಹ ಲೋಪಗಳೂ ದೋಷಗಳೂ ಎದ್ದು ಪ್ರಬಲವಾಗಿ ತೋರಿಕೊಳ್ಳುತ್ತವೆ. ಹೆಸರುಗಳನ್ನು ಹೇಳುವಾಗ ಒಂದೆರಡು ನಿಯಮಗಳನ್ನೆಲ್ಲರೂ ಅನುಸರಿ ಸುವುದು ಅವಶ್ಯ. ಪೌರಸ್ತ್ಯ ಪ್ರಪಂಚದ ಹೆಸರುಗಳನ್ನು ಪೌರಸ್ತ್ಯ ರೂಪಗಳಲ್ಲಿಯೂ ಪಾಶ್ಚಾತ್ಯ ಜಗತ್ತಿನ ಹೆಸರುಗಳನ್ನು ಇಂಗ್ಲೀಷ್ ಮೂಲಕವೇ ಕಲಿಯುವ ಕಾರಣದಿಂದ ಇಂಗ್ಲೀಷ್ ಪದ್ಧತಿಗನುಸಾರ ವಾಗಿಯೂ ಉಪಯೋಗಿಸುವುದೇ ಸಹಜವಾದ ಮಾರ್ಗ. ಕೂಡಿದ ಮಟ್ಟಿಗೂ ಕನ್ನಡದ ರೂಪವು ಹಿಂದೀ ರೂಪಕ್ಕೆ ಹೊಂದಿಕೊಂಡಿರತಕ್ಕದ್ದೂ ಅವಶ್ಯವಾದುದೇ.

ಈ ಪುಸ್ತಕದಲ್ಲಿ ಪ್ರತ್ಯಂಶವನ್ನೂ ಸಪ್ರಮಾಣವಾಗಿಯೇ ಬರೆದಿರುತ್ತದೆ. ಪ್ರಮಾಣಗಳನ್ನೂ ಆಧಾರಗಳನ್ನೂ ಸೂಚಿಸದಿರುವುದಕ್ಕೆ ಕಾರಣ ಸ್ಪಷ್ಟ ವಾಗಿಯೇ ಇದೆ. ಪ್ರೌಢ ಗ್ರಂಥಗಳಲ್ಲಿ ಅದು ಅತ್ಯವಶ್ಯಕ; ಸಾಮಾನ್ಯ ಗ್ರಂಥಗಳಲ್ಲಿ ಟಿಪ್ಪಣಿಗಳ ರೂಪದಲ್ಲಿ ಪ್ರಮಾಣಗಳನ್ನೂ ಆಧಾರಗಳನ್ನೂ ಉದ್ಧೃತ ವಾಕ್ಯಗಳನ್ನೂ ಕ್ರೋಡೀಕರಿಸುವುದು ಪಾಂಡಿತ್ಯ ಪ್ರದರ್ಶನ ಚಾಪಲ್ಯ ಮಾತ್ರ. ಅಲ್ಲದೆ ಕನ್ನಡಿಗರಿಗಾಗಿ ಸಿದ್ಧಗೊಳಿಸಿದ ಪುಸ್ತಕದಲ್ಲಿ ಇಂಗ್ಲೀಷ್ ಗ್ರಂಥಗಳ ಹೆಸರುಗಳನ್ನೂ ಪುಟಗಳನ್ನೂ ಅಲ್ಲಲ್ಲಿ ಎತ್ತಿಯಾಡು ವುದು ವ್ಯರ್ಥ ಚೇಷ್ಟೆ. ಆ ಕಾರಣದಿಂದ ಎಲ್ಲಿ ಮಾತ್ರ ವೈಶದ್ಯಕ್ಕಾಗಿ ಒಂದೆರಡು ಮಾತುಗಳನ್ನು ಹೇಳಬಹುದೋ ಅಂತಹ ಎಡೆಗಳಲ್ಲಿ ಹಲಕೆಲವು ಟಿಪ್ಪಣಿಗಳನ್ನು ಬರೆದಿದೆ.

ಹದಿನೈದು ವರ್ಷಗಳ ಹಿಂದೆ ಇದೇ ಇತಿಹಾಸ ಭಾಗವನ್ನು ಕುರಿತು ನಾನೊಂದು ಗ್ರಂಥವನ್ನು ಬರೆದು ಮೈಸೂರು ವಿಶ್ವವಿದ್ಯಾನಿಲಯದವರ ಮನ್ನಣೆಗೆ ಪಾತ್ರನಾದುದುಂಟು. ವಿಶ್ವವಿದ್ಯಾನಿಲಯದಲ್ಲಿ ಧನಾಭಾವದಿಂದ ಆ ಗ್ರಂಥವು ಮುದ್ರಿತವಾಗಲಿಲ್ಲ; ಹಾಗುಳಿದುದೇ ಮೇಲೆಂದು ನನ್ನ ಈಗಿನ ನಿರ್ಣಯ. ಈ ಪುಸ್ತಕಕ್ಕಿಂತಲೂ ಅದು ವಿಸ್ತಾರವಾಗಿತ್ತು;

ಹದಿನೈದು ವರ್ಷಗಳ ಹಿಂದಿನ ಸರಕಾದ ಕಾರಣದಿಂದಲೂ ನನಗೂ ತಾರುಣ್ಯವೇ ಆಗಿದ್ದ ಕಾರಣದಿಂದಲೂ ಆ ಗ್ರಂಥವು ಮೂಲೆಗೆ ಬಿದ್ದುದರಿಂದ ಏನೂ ನಷ್ಟವಿಲ್ಲ. ಕೇವಲ ವಿಸ್ತಾರದಿಂದಲೇ ಪ್ರೌಢಿಮೆಯುಂಟಾಗುವುದಿಲ್ಲ; ಮತ್ತು ಪ್ರೌಢ ಗ್ರಂಥಗಳ ಸಾಹಸಕ್ಕೆ ಇನ್ನೂ ಕಾಲ ಒದಗಿಲ್ಲ. ಆಧಾರಭೂತವಾಗಿಯೂ ಸಾಮಾನ್ಯವಾಗಿಯೂ ಇರುವ ಗ್ರಂಥಗಳು ಬಳಕೆಯಾಗಿ ಜನತೆಯ ಕುತೂಹಲವು ಉತ್ತೇಜಿತವಾಗುವ ಮೊದಲೇ ಪ್ರೌಢ ಗ್ರಂಥಗಳಲ್ಲಿ ಆದರವು ಅಸಂಭವ. ಭಾರತೀಯ ಇತಿಹಾಸವನ್ನು ಸರ್ವಸಾಧಾರಣವಾಗಿ ನಿರೂಪಿಸುವ ಪ್ರಯತ್ನವೇ ಪ್ರಥಮ ಕರ್ತವ್ಯವೆನಿಸಿದುದು ಆ ಕಾರಣದಿಂದ. ಸಾಮಾನ್ಯ ಪರಿಚಯವು ಸಾರ್ವತ್ರಿಕವಾದ ತರುವಾಯ ಮೌಲಿಕ ಗ್ರಂಥಗಳು ಉಪಯುಕ್ತವಾದಾವು.

ಕಾಲೇಜಿನಲ್ಲಿದ್ದಾಗ ಭಾರತೀಯ ಇತಿಹಾಸದಲ್ಲಿ ಆಸಕ್ತಿಜನಕವಾದ ಪಾಠಕ್ರಮವಾಗಲಿ ವಿವರ ವಿಚಾರ ಸಹಿತವಾದ ಪ್ರವಚನವಾಗಲಿ ನನಗೆ ಲಭಿಸಲಿಲ್ಲ. ಕಾಲೇಜಿನಿಂದ ಹೊರಗೆ ಬಿದ್ದ ಬಳಿಕ ಕುತೂಹಲದಿಂದ ಸ್ವತಂತ್ರವಾಗಿಯೇ ಪುಸ್ತಕಗಳನ್ನೋದಲಾರಂಭಿಸಿದೆನು. ಕೀರ್ತಿಶೇಷರಾದ ಶ್ರೀ ಹೊಸಕೋಟೆ ಕೃಷ್ಣಶಾಸ್ತ್ರಿಗಳ ಗುರುತ್ವದಲ್ಲಿ ಕೆಲಕಾಲ ಮದರಾಸಿನ ಪ್ರಾಚೀನ ಪರೀಕ್ಷೆಯ ಕಚೇರಿಯಲ್ಲಿದ್ದು ಶಾಸನಗಳ ಪರೀಕ್ಷಾ ಪ್ರಯೋಗಗಳಲ್ಲಿ ಅನುಭವವನ್ನು ಪಡೆದೆನು. ಅಂದಿನಿಂದ ಹೈಸ್ಕೂಲು ವಿದ್ಯಾರ್ಥಿಗಳಿಗೇ ಅಧ್ಯಾಪಕನಾಗಿದ್ದಾಗ್ಗೂ ವಿಷಯದಲ್ಲಿ ಕುತೂಹಲವು ಕುಂದದೆಯೇ ಇದೆ. ಪಾಠ ಹೇಳುವ ಕರ್ತವ್ಯದಲ್ಲಿ ತೃಪ್ತಿಕರವಾದ ಪಠ್ಯ ಪುಸ್ತಕವಿಲ್ಲದೆ ತೊಂದರೆಯನ್ನು ಪಟ್ಟೂ ಕೊಟ್ಟೂ ಕಡೆಗೆ ವಿದ್ಯಾರ್ಥಿಗಳಿಗೆ ಉಪಯುಕ್ತವಾಗುವಂತೆ ಪುಸ್ತಕ ಬರೆಯಲು ಮನಸ್ಸುಮಾಡಿ ಇಂಗ್ಲೀಷಿನಲ್ಲಿಯೇ ಉಪಕ್ರಮಿಸಿ ಸ್ವಲ್ಪ ದೂರ ಬರೆದಿದ್ದೆ. ಅಷ್ಟರಲ್ಲಿಯೇ ಬಹುಕಾಲ ನಿರೀಕ್ಷಿತವಾಗಿದ್ದ ಕನ್ನಡ ನುಡಿಯಲ್ಲಿಯೇ ಪಾಠಕ್ರಮ ನಡೆಯುವ ಸಂಸ್ಕಾರವು ಆಚರಣೆಯಲ್ಲಿ ಮೂಡಲು ವಿಳಂಬಕ್ಕೆ ಕಾರಣವಿಲ್ಲವೆಂದು ಕನ್ನಡದಲ್ಲಿಯೇ ಈ ಪ್ರಥಮ ಭಾಗವನ್ನು ಬರೆದು ಪ್ರಕಟಿಸುವ ಸಾಹಸಕ್ಕೆ ತೊಡಗಿದ್ದೇನೆ. ವಿಷಯ ಶುದ್ಧಿ ಮರ್ಯಾದೆಗಳನ್ನೇ ಪ್ರಧಾನ ಲಕ್ಷ್ಯವನ್ನಾಗಿಟ್ಟುಕೊಂಡು ಇದನ್ನು ಬರೆದಿದೆಯೆಂದು ಮಾತ್ರ ಹೇಳುವುದು ಅವಶ್ಯ

ಈ ಪ್ರಯತ್ನದಲ್ಲಿ ಯಾವ ಒಂದು ಗ್ರಂಥವು ಅತ್ಯುಪಯುಕ್ತ ವಾಯಿತೆಂದು ಹೇಳಲಾಗುವುದಿಲ್ಲ. ಕೈಗೆ ಸಿಕ್ಕಿದ ಗ್ರಂಥಗಳೆಲ್ಲವೂ ಯಾವುದಾದರೊಂದು ರೀತಿಯಲ್ಲಿ ಉಪಕಾರವನ್ನು ಹೊರಿಸಿಯೇ ಇವೆ. ಆದರೂ ಪ್ರಾಯಶಃ ಸಿಸ್ಟರ್ ನಿವೇದಿತಾ ಎಂಬ ವಿದುಷೀಮಣಿಯು ಬರೆದಿರುವ ಗ್ರಂಥಗಳಿಂದ ಹೆಚ್ಚು ಉಪಕೃತನಾಗಿದ್ದೇನೆ. ಇತಿಹಾಸವನ್ನು ಬರೆಯದೆ ಇತಿಹಾಸ ವಿಚಾರಮಾಡುತ್ತ ಆಕೆಯು ಭಾರತೀಯ ಸಂಸ್ಕೃತಿಯ ವಿಚಾರದಲ್ಲಿ ಅಸಾಧಾರಣವಾದ ಪ್ರಜ್ಞೆಯನ್ನು ತೋರುತ್ತ ಬರೆದಿದ್ದಾಳೆ. ಪುಸ್ತಕಗಳಿಗಿಂತಲೂ ನನ್ನ ಕೃತಜ್ಞತೆಯು ಆಕಸ್ಮಿಕವಾಗಿ ಮೃತಿಹೊಂದಿದ ಡಾ|| ಕುನ್ಹಿಕಣ್ಣನ್‌ರವರಿಗೆ ಸಲ್ಲುತ್ತದೆ. ಭಾರತೀಯ ಸಭ್ಯತೆಯ ವಿಚಾರ ದಲ್ಲಿ ಅವರೊಡನೆ ನಡೆದ ಸಂಭಾಷಣೆಗಳಿಂದ ಉಂಟಾದ ಪ್ರಜ್ಞೆಯು ಯಾವ ಪುಸ್ತಕದಿಂದಲೂ ಲಬ್ಧವಾಗಲಿಲ್ಲ.

ಈ ಪುಸ್ತಕವು ಸರ್ವಸಮರ್ಪಕವಾಗಿರುತ್ತದೆಂದು ನಿರೀಕ್ಷಿಸಲಾಗುವುದಿಲ್ಲ. ದೋಷಗಳನ್ನೂ ಲೋಪಗಳನ್ನೂ ತೋರಿಕೊಡುವ ಮಿತ್ರರಿಗೆ ಗ್ರಂಥಕರ್ತನು ಕೃತಜ್ಞನಾಗಿರುತ್ತಾನೆ.

ಕೇಳಿದ ಕೂಡಲೆ ಔದಾರ್ಯದಿಂದ ಅನೇಕ ಚಿತ್ರಗಳ ಪಡಿಯಚ್ಚುಗಳನ್ನು ಕೊಡಿಸಿದ ದೇಶೋದ್ಧಾರಕ ಶ್ರೀ ನಾಗೇಶ್ವರರಾವ್ ಪಂತರಲ್ಲಿಯೂ, 'ಭಾರತಿ' ಮಾಸಪತ್ರಿಕೆಯ ಶ್ರೀ ಸುಬ್ಬರಾಮಯ್ಯನವರಲ್ಲಿಯೂ ನಾನು ಚಿರ ಋಣಿಯಾಗಿದ್ದೇನೆ. ಬೇರೆ ಎರಡು ಚಿತ್ರಗಳನ್ನು ಸೇರಿಸಲು ಸಹಾಯ ಮಾಡಿದ ಧಾರವಾಡದ ಕರ್ನಾಟಕ ಶಿಕ್ಷಣ ಸಮಿತಿಯ ಸನ್ಮಿತ್ರರೂ ಉಪಕಾರವನ್ನು ಹೊರಿಸಿರುತ್ತಾರೆ.

ಮುದ್ರಣ ಕಾರ್ಯವನ್ನು ಸಮರ್ಪಕವಾಗಿ ನೆರವೇರಿಸಿರುವ ಬೆಂಗಳೂರು ಪ್ರೆಸ್ಸಿನವರನ್ನೂ, ನಕ್ಷೆಗಳನ್ನು ತೃಪ್ತಿಕರವಾಗಿ ಮುದ್ರಿಸಿರುವ ರಾಜಗೋಪಾಲ್ ಫೋಟೋ ಸಿಂಕೊ ಆಫೀಸಿನವರನ್ನೂ ಮೆಚ್ಚತಕ್ಕದ್ದಾಗಿದೆ.

ಕಂ. ಕೃಷ್ಣಯ್ಯಂಗಾರ್

# ಅನುಕ್ರಮಣಿಕೆ

# ಚಿತ್ರಗಳು

# ನಕ್ಷೆಗಳು



---

# ಕಾಲಕ್ರಮ ಸೂಚಿ

# ಭಾರತೀಯ ಇತಿಹಾಸ ಪ್ರವೇಶಿಕಾ

## ಮುನ್ನುಡಿ

1. ನಮ್ಮ ದೇಶ. 2. ಪರಿಸ್ಥಿತಿ ಪ್ರಭಾವ.
3. ಭಾರತೀಯ ಚರಿತ್ರೆಯ ಮಹತ್ವ. 4. ಇತಿಹಾಸದ ಉಪಯೋಗ.
5. ಈ ಚರಿತ್ರೆಯ ಸಾಧನೆ. 6. ಆಧಾರಗಳು.
7. ಕಾಲಮಾನ.

## ನಮ್ಮ ದೇಶ

ನಮ್ಮ ಮಾತೃಭೂಮಿಯನ್ನು ನಾವು **ಜಂಬೂದ್ವೀಪ, ಭರತವರ್ಷ, ಭರತಖಂಡ, ಹಿಂದೂಸ್ಥಾನ**ಗಳೆಂದು ಕರೆಯುತ್ತೇವೆ. ಕೆಲವು ವೇಳೆ ಭಕ್ತಿಯಿಂದ **ಕರ್ಮಭೂಮಿ**ಯೆಂದೂ **ಪುಣ್ಯಭೂಮಿ**ಯೆಂದೂ ಕರೆಯುತ್ತೇವೆ. ಪೃಥ್ವಿಯಲ್ಲಿರುವ ದೇಶಗಳಲ್ಲೆಲ್ಲ ಭರತವರ್ಷವೇ ಅತಿ ಪವಿತ್ರವಾದುದೆಂದೂ, ಕರ್ಮದಿಂದ ಬಿಡುಗಡೆಯನ್ನು ಹೊಂದಿ ಮುಕ್ತಿಯನ್ನು ಸಾಧಿಸಲು ಈ ಪುಣ್ಯಭೂಮಿಯಲ್ಲಿ ಜನ್ಮವೆತ್ತಿ ಸಾಧುಜೀವನವನ್ನು ನಡೆಸಬೇಕೆಂದೂ ನಮ್ಮ ಗುರುಹಿರಿಯರ ನಂಬಿಕೆ. ಇಂಡಿಯ ಎಂಬ ಹೆಸರು ಐರೋಪ್ಯರು ಉಪಯೋಗಿಸತಕ್ಕುದು. ಸಿಂಧು ಎಂಬ ಶಬ್ದವು ಗ್ರೀಕರ ಬಾಯಿಗಳಲ್ಲಿ ಇಂಡಸ್ ಎಂದಾಗಿ **ಇಂಡಿಯ**ವೆಂಬ ಮಾತು ಸಿದ್ಧವಾಯಿತು. ಹಿಂದೂ ಎಂಬುದೂ ಸಿಂಧು ಶಬ್ದದಿಂದಲೇ ಹುಟ್ಟಿದ್ದು; ಸ್ತಾನ್ ಎಂಬುದು ಸ್ಥಾನವೆಂಬುದಕ್ಕೆ ಫಾರಸೀ. **ಹಿಂದೂಸ್ತಾನ್** ಎಂಬ ಶಬ್ದವು ಸಂಸ್ಕೃತ ಮತ್ತು ಫಾರಸೀ ಭಾಷೆಗಳ ಸಂಬಂಧವನ್ನು ಪಡೆದು ಇಂದಿನ ಭಾರತೀಯರೆಲ್ಲರಿಗೂ ಪ್ರಿಯವಾದ ಮಾತಾಗಿದೆ. ಹಿಂದೂಸ್ತಾನವೇ ನಮ್ಮೆಲ್ಲರಿಗೂ ಪಾವನವಾದ ಜನ್ಮಭೂಮಿ.

**ಸ್ಥಾನ**

ಈ ದೇಶವು ಪೂರ್ವಾರ್ಧಗೋಳದ ಮಧ್ಯಭಾಗದಲ್ಲಿ ಪದಕ ಮಧ್ಯ ರತ್ನದಂತಿದೆ. ಜಗತ್ತಿನ ಪೂರ್ವಾರ್ಧಕ್ಕೆ ನಮ್ಮ ದೇಶವೇ ಕೇಂದ್ರ. ಪರ್ವತ ಪಙ್ಕ್ತಿಗಳನ್ನೇ ಕೋಟೆಯ ಗೋಡೆಗಳನ್ನಾಗಿಯೂ ಸಾಗರವನ್ನೇ ಕಂದಕವಾಗಿಯೂ ಪಡೆದು ಮಹಾದುರ್ಗದಂತಿರುವ ಈ ದೇಶವು ಪ್ರಕೃತಿ ಸಿದ್ಧವೂ ಅದ್ಭುತವೂ ಆದ ಮೇರೆಗಳಿಂದ ಪ್ರತ್ಯೇಕವಾಗಿ, ಏಷ್ಯಾಖಂಡದ ಭಾಗವಾಗಿದೆ. ಭೂಖಂಡವೊಂದರ ಭಾಗವಾಗಿದ್ದಾಗ್ಯೂ ವೈಶಾಲ್ಯದ ದೆಸೆಯಿಂದ ತಾನೇ ಒಂದು ಭೂಖಂಡವಾಗಿದೆ. ವಿಸ್ತೀರ್ಣದಲ್ಲಿ ರಷ್ಯಾದೇಶವನ್ನು ಬಿಟ್ಟರೆ ಯೂರೋಪು ಖಂಡವೂ ಭರತಖಂಡವೂ ಒಂದೇ.

**ವೈಶಾಲ್ಯ**

ಉತ್ತರ ದಕ್ಷಿಣವಾಗಿಯೂ ಪೂರ್ವಪಶ್ಚಿಮವಾಗಿಯೂ 1900 ಮೈಲಿಗಳಷ್ಟು ವಿಶಾಲವಾದ ಕ್ಷೇತ್ರವಿದು. ಬೋರ್ಡೋ (Bordeaux) ಇಂದ ಕಾನ್‌ಸ್ಟಾಂಟಿನೋಪಲಿ (Constantinople—ಕುಸ್ತುಂತಿನಿಯ)ಗೆಷ್ಟು ದೂರವೋ ಕರಾಚಿಯಿಂದ ಚಟ್ಟಗ್ರಾಮ (ಚಿತ್ತಗಾಂಗ್) ಕ್ಕಷ್ಟೇ ದೂರ; ಆರ್ಕೇಂಜಲ್ಸ್ಕ (Archangelsk) ಪಟ್ಟಣದಿಂದ ನೇಪಲ್ಸ್ (Naples) ಪಟ್ಟಣವು ಎಷ್ಟು ದೂರವೋ, ಶ್ರೀನಗರದಿಂದ ರಾಮೇಶ್ವರಕ್ಕೆ ಅಷ್ಟೇ ದೂರ. ಇಂಗ್ಲೆಂಡ್, ಫ್ರಾನ್ಸ್, ಸ್ಪೈನ್, ಇಟಲಿ, ಜರ್ಮನಿ ಮುಂತಾದ ಐರೋಪ್ಯ ರಾಷ್ಟ್ರಗಳು ನಮ್ಮ ದೇಶದ ಬೇರೆ ಬೇರೆ ಪ್ರಾಂತಗಳಿಗೆ ಮಾತ್ರವೇ ಸಮ. ಭರತಖಂಡದ ಈ ವೈಶಾಲ್ಯಕ್ಕೆ ತಕ್ಕಂತೆ ಅದ್ಭುತವಾದ ಮೇರೆಗಳು ಪ್ರಕೃತಿ ಸಿದ್ಧವಾಗಿಯೇ ಇವೆ.

**ವೈವಿಧ್ಯ**

ವೈಶಾಲ್ಯವೊಂದರಲ್ಲಿಯೇ ಅಲ್ಲದೆ ಇತರ ಅಂಶಗಳಲ್ಲಿಯೂ ಭರತಖಂಡವು ಅದ್ಭುತವಾದ ದೇಶ. ಇಲ್ಲಿ ಕಾಣಿಸಿಕೊಳ್ಳುವಷ್ಟು ವೈವಿಧ್ಯವು ಬೇರಾವ ದೇಶದಲ್ಲಿಯೂ ಇಲ್ಲ; ಎತ್ತರ ತಗ್ಗುಗಳಲ್ಲಿ, ಉಷ್ಣಾಂಶದಲ್ಲಿ, ಮಳೆಬೆಳೆಗಳಲ್ಲಿ, ಭೂಗುಣದಲ್ಲಿ, ಸಸ್ಯ ಪ್ರಾಣಿರಾಶಿಗಳಲ್ಲಿ ಜಗತ್ತಿನಲ್ಲಿ ತೋರಿಬರುವ ಸಕಲ ಲಕ್ಷಣಗಳೂ ರಾಶಿಗಳೂ ಈ ದೇಶದಲ್ಲಿ ಕಾಣಿಸಿಕೊಂಡು ಅದ್ಭುತವಾದ ವೈವಿಧ್ಯವನ್ನು ಬೀರುತ್ತವೆ. ಉಷ್ಣವಲಯದಲ್ಲಿದ್ದು ಜೀವನದಾಯಕವಾದ

ನದಿಗಳನ್ನೊಳಗೊಂಡಿರುವ ಈ ದೇಶವು ಸಂಪದ್ಯುಕ್ತವಾದುದು. ಸರ್ವ

**ಐಶ್ವರ್ಯ**

ಕಾಲಗಳಲ್ಲಿಯೂ ಈ ದೇಶವು ಸಂಪತ್ತಿಗೆ ತವರ್ಮನೆಯೇ ಎನಿಸಿದೆ. **ಸ್ಥಾನದಲ್ಲಿ, ವೈಶಾಲ್ಯದಲ್ಲಿ, ವೈವಿಧ್ಯದಲ್ಲಿ, ಐಶ್ವರ್ಯದಲ್ಲಿ ಅದ್ಭುತವೆನಿಸಿದ** ಈ ದೇಶದ ಪ್ರಾಕೃತಿಕ ಲಕ್ಷಣಗಳಲ್ಲಿ ಮುಖ್ಯವಾದುವನ್ನು ನಾವು ಮೊದಲೇ ಗಮನಿಸಬೇಕು.

**ಐಕ್ಯತೆ**

ನಕ್ಷೆಯನ್ನು ನೋಡಿದ ಕೂಡಲೆ ಈ ದೇಶಕ್ಕೆ ವಾಯುವ್ಯದಲ್ಲಿ ಮಾತ್ರ ಭೂಮಾರ್ಗಗಳಿರುವುದು ಸ್ಪಷ್ಟವಾಗುವುದು. ಜಲ ಮಾರ್ಗಗಳನ್ನು ಸಾಧಿಸುವ ಮೊದಲು ನಮ್ಮ ದೇಶಕ್ಕಿವೇ ಬಾಗಿಲುಗಳು. ದೇಶದಲ್ಲಿ ಜೀವನ ಸೌಲಭ್ಯವೂ ಐಶ್ವರ್ಯವೂ ನೆಲೆಸಿರುವುದರಿಂದ ದೇಶದೊಳಕ್ಕೆ ಬಂದವರು ಈ ಮಾರ್ಗಗಳನ್ನೇ ಸಾಧಿಸಿ ಬರಬೇಕಾಗಿತ್ತು. ಅದ್ಭುತವಾದ ದೇಶದಲ್ಲಿ ನೆಲೆಸಲು ಅನೇಕ ಜನಸಮೂಹಗಳಿಗೆ ಆಸೆ ಹುಟ್ಟಿದುದೂ, ವಾಯುವ್ಯ ಮಾರ್ಗವಾಗಿ ಅವರು ಪದೇ ಪದೇ ಪ್ರಯತ್ನಮಾಡಿದುದೂ ಸಹಜವೇ. ದೇಶದವರು ಹೊರಗೆ ಹೊರಡಬೇಕಾಗಿದ್ದರೂ ಆ ದಾರಿಯೇ; ಸಮುದ್ರ ವನ್ನು ಸಾಧಿಸಿದ ತರುವಾಯ ಜಲಮಾರ್ಗ. ಯೂರೋಪನ್ನೂ ಭರತ ಖಂಡವನ್ನೂ ಹೋಲಿಸಿ ನೋಡಿದರೆ ಮತ್ತೊಂದು ಮುಖ್ಯಲಕ್ಷಣವು ಗೋಚರವಾಗುತ್ತದೆ. ಸಾಮಾನ್ಯವಾಗಿ ನದಿಯಬಯಲುಗಳು, ತೀರ ಪ್ರದೇಶಗಳು, ಪ್ರಸ್ಥಭೂಮಿಗಳೆಂದು ವಿಭಾಗಮಾಡಿದಾಗ್ಯೂ ಈ ದೇಶವು ಯೂರೋಪಿನಂತೆ ಭಿನ್ನ ಭಿನ್ನವಾಗಿಲ್ಲ. ದೇಶದೊಳಗೆ ಸಂಚಾರಕ್ಕೆ ಚಿರಕಾಲ ಅಡ್ಡಿಯಾಗಿ ನಿಲ್ಲುವ ಮೇರೆಗಳಿಲ್ಲ. ಬಾಲ್ಟಿಕ್, ಎಡ್ರಿಯಾಟಿಕ್, ಪಿರನೀಸ್, ಆಲ್ಪ್ಸ್, ಕಾರ್ಪೇಥಿಯನ್ ಮುಂತಾದ ಐರೋಪ್ಯ ಮೇರೆಗಳಂತಹ ಒಳ ಮೇರೆಗಳು ಈ ದೇಶದಲ್ಲಿಲ್ಲ. ಇದರ ಪರಿಣಾಮವಾಗಿ ಯೂರೋಪಿನಲ್ಲಿ ಅನೇಕವಾಗಿ ರಾಷ್ಟ್ರಗಳು ಸಿದ್ಧವಾದವು; ಭರತಖಂಡವು ವಿಶಾಲವಾದರೂ 'ಆಸೇತುಹಿಮಾಚಲಪರ್ಯಂತ' ಒಂದೇ ರಾಷ್ಟ್ರವಾಗತಕ್ಕುದಾಗಿ ನಿಂತಿತು. ಒಂದೇ ದೇಶವಾದ ಕಾರಣದಿಂದ ಒಂದೇ ಪ್ರಭುತ್ವವು ಅವಶ್ಯಕವಾಯಿತು. ಈ ಮೂಲಕಾರಣದಿಂದ ಅಡಿಗಡಿಗೂ ಸಾಮ್ರಾಜ್ಯ ಸ್ಥಾಪನೆಯ ಪ್ರಯತ್ನವೇ



1. ಹಿಮವತ್ಪರ್ವತದ ಒಂದು ದೃಶ್ಯ

ನಮ್ಮ ದೇಶದ ಚರಿತ್ರೆಯಲ್ಲಿ ತೋರಿಕೊಳ್ಳುವುದು. ಯೂರೋಪಿಗೂ ನಮ್ಮ ದೇಶಕ್ಕೂ ಹೋಲಿಕೆಯಿಲ್ಲ; ಹೋಲಿಕೆ ಬೇಕಾದಾಗ ನಾವು ಚೀನಾ, ಕೆನಡ, ಆಸ್ಟ್ರೇಲಿಯ, ಅಥವಾ ಸಂಯುಕ್ತ ಸಂಸ್ಥಾನಗಳಂತಹ ವಿಶಾಲವಾದ ಭೂಭಾಗಗಳನ್ನೇ ಆರಿಸಿಕೊಳ್ಳಬೇಕು.

## ಪರಿಸ್ಥಿತಿ ಪ್ರಭಾವ

ಮಾನವ ಜೀವನವೆಲ್ಲಿ ಸುಲಭವೋ ಅಲ್ಲಿಯೇ ವಿರಾಮ ದೊರಕಿ ಮನಶ್ಶಕ್ತಿಯು ಅಭಿವೃದ್ಧಿಯಾಗಿ ಸಭ್ಯತೆಯು ಬೆಳೆಯುವುದು. ಚೀನಾ,



2. ಕನ್ಯಾಕುಮಾರಿ ಅಗ್ರ

ಮಿಶ್ರ (Egypt), ಮೆಸೊಪೊಟೇಮಿಯ, ಭರತಖಂಡಗಳಲ್ಲಿ ಈ ಕಾರಣದಿಂದಲೇ ಮಾನವರಾಶಿಯ ಸಭ್ಯತೆಯು ಪ್ರಾಚೀನ ಕಾಲದಲ್ಲಿಯೇ ಹುಟ್ಟಿತು. ಅತಿ ಪುರಾತನ ಕಾಲದಲ್ಲಿಯೇ ಗಂಗಾ ಸಿಂಧು ನದಿಗಳ ಬಯಲುಗಳು ಸಭ್ಯ

ತೆಯ ಕ್ಷೇತ್ರವಾದುದಲ್ಲದೆ, ಇತರರನ್ನು ಆಕರ್ಷಿಸುತ್ತ ಈ ದೇಶದಲ್ಲಿ ಅನೇಕ ಮಾನವರಾಶಿಗಳು ಸಂಧಿಸುವಂತೆ ಮಾಡಿದವು. ಸಭ್ಯತೆಗೂ ಐಶ್ವರ್ಯಕ್ಕೂ ನೆಲೆಯೆನಿಸಿ ಇತರರನ್ನು ಆಕರ್ಷಿಸಿದ ಈ ದೇಶವು ಪೃಥ್ವಿಯ ಪೂರ್ವಾರ್ಧದಲ್ಲಿ ಬಹುಮುಖವಾಗಿ ವಿರಾಜಮಾನವಾಯಿತು. ಪ್ರಕೃತಿಯೇ ಇತಿಹಾಸದ ಗತಿಯನ್ನು ಸಿದ್ಧಗೊಳಿಸಿತು. ಪ್ರಾಕೃತಿಕ ಲಕ್ಷಣಗಳಿಂದಲೇ ಒಂದು ದೇಶದ ಚರಿತ್ರೆಯ ಮುಖ್ಯ ಲಕ್ಷಣಗಳನ್ನು ಊಹಿಸಲು ಸಾಧ್ಯ. ಈ ದೇಶವು ಅನೇಕಾನೇಕ ಮಾನವರಾಶಿಗಳಿಗೂ ಅವರ ಭಿನ್ನ ಭಿನ್ನ ಸಭ್ಯತೆಗಳಿಗೂ ಸಂಧಿ ಸ್ಥಾನವಾಗುವುದೆಂದೂ, ಸಕಲ ಸಮೃದ್ಧಿಯ ಮಧ್ಯೆ ಬೆಳೆಯತಕ್ಕ ಸಂಸ್ಕೃತಿ ಸಭ್ಯತೆಗಳಿಗೆ ಕ್ಷೇತ್ರವಾಗುವುದೆಂದೂ ಪ್ರಕೃತಿಯೇ ಸೂಚಿಸಿದಂತೆ ಕಾಣು ವುದು. "ಪ್ರಕೃತಿಯಂತೆ ವೃದ್ಧಿ ವಿಕಾಸ"ಗಳೆಂಬ ಒಂದು ನಿಯಮವು ಈ ರೀತಿ ಸಿದ್ಧವಾಗುವುದು. ಇದೇ ಪ್ರಕೃತಿಯ ಪ್ರಭಾವ, ಅಥವಾ ಪರಿಸ್ಥಿತಿ ಪ್ರಭಾವ.

ಪರಿಸ್ಥಿತಿ ಪ್ರಭಾವವನ್ನು ಗಮನಿಸುವಾಗ ಪ್ರಾಕೃತಿಕ ಲಕ್ಷಣಗಳೂ ಕಾಲಗತಿಯಲ್ಲಿ ಬದಲಾಗಬಹುದೆಂಬುದನ್ನೂ ಮಾನವನ ಬುದ್ಧಿಬಲವು ಕೆಲವು ವೇಳೆ ಪ್ರಾಕೃತಿಕ ಬಂಧನಗಳನ್ನು ಕಿತ್ತು ಬಿಸುಡುವುದೆಂಬುದನ್ನೂ ನೆನಪಿನಲ್ಲಿಡಬೇಕು. ತೀರಪ್ರದೇಶವು ಇಂಗ್ಲೆಂಡಿನಂತೆ ಒಡೆದಿಲ್ಲವಾದ ಕಾರಣದಿಂದ ಭಾರತೀಯರು ನೌಕಾವಿದ್ಯೆಯನ್ನೇ ಅರಿಯಲಾರರೆನ್ನುವುದು ತಥ್ಯವಲ್ಲ. ಹಡಗುಗಳನ್ನು ಕಟ್ಟಿ ನಡೆಸುವುದೇ ಅಲ್ಲದೆ ಭಾರತೀಯರು ಪೂರ್ವಪಶ್ಚಿಮ ದಿಕ್ಕುಗಳೆರಡಲ್ಲಿಯೂ ಹೊರಹೊರಟು ಭಾರೀ ವ್ಯಾಪಾರ ವನ್ನು ನಡೆಸುತ್ತಿದ್ದರೆಂದು ಚರಿತ್ರೆಯಲ್ಲಿ ದೃಢವಾಗಿ ತಿಳಿಯುವುದು. ನದಿಗಳು ತಮ್ಮ ಗತಿಗಳನ್ನು ಬದಲಾಯಿಸುವುದು, ನದೀಮುಖಜಭೂಮಿ ಗಳಿಂದು ಹೊಸ ಪ್ರದೇಶಗಳು ಸಿದ್ಧವಾಗುವುದು, ಸಮುದ್ರವು ಭೂಮಿ ಯನ್ನು ಬಿಟ್ಟು ದೂರವಾಗುವುದು ಮುಂತಾದುವು ಪ್ರಕೃತಿಯಲ್ಲಿಯೇ ನಡೆದಿರುವ ಘಟನೆಗಳು. ದಟ್ಟವಾದ ಅರಣ್ಯವನ್ನು ನೆಲಸಮಮಾಡಿದಾಗ ಅಥವಾ ದೊಡ್ಡ ಸರೋವರವನ್ನು ನಿರ್ಮಿಸಿದಾಗ ವಾಯುಗುಣವೆಂಬುದೇ ಬದಲಾಯಿಸುವುದು. ಈ ಕಾರಣದಿಂದ ಕೇವಲ ಪ್ರಕೃತಿ ಪರೀಕ್ಷೆಯಿಂದಲೇ ಇತಿಹಾಸವು ನಿರ್ದೋಷವಾಗಿ ಊಹ್ಯವಾಗುವುದಿಲ್ಲ.

## ಭಾರತೀಯ ಚರಿತ್ರೆಯ ಮಹತ್ವ

ಪೃಥ್ವಿಯ ದೇಶಗಳ ಸಮುದಾಯದಲ್ಲಿ ಭರತವರ್ಷವು ಎಷ್ಟು ಅದ್ಭುತವೋ ದೇಶಗಳ ಅಥವಾ ಜನಸಮೂಹಗಳ ಇತಿಹಾಸ ರಾಶಿಯಲ್ಲಿ ಭಾರತೀಯ ಚರಿತ್ರೆಯು ಅಷ್ಟೇ ಅದ್ಭುತವಾದುದು. ನಾವು ಆ ಚರಿತ್ರೆಯನ್ನು ಭಕ್ತಿಯಿಂದ ವ್ಯಾಸಂಗ ಮಾಡುವುದು ನಮ್ಮ ಮಾತೃಭೂಮಿಯ ವೃತ್ತಾಂತನೆಂಬ ಒಂದು ಕಾರಣದಿಂದಲೇ ಅಲ್ಲ. ಇತರ ಜನರಿಗೂ ಈ ಚರಿತ್ರೆಯು ಮಹತ್ವವುಳ್ಳುದು. ಅದ್ಭುತವೆನಿಸಿದ ದೇಶದ ಚರಿತ್ರೆಯೆಂದೂ, ಮಾನವರಾಶಿಯ ಐದರಲ್ಲೊಂದು ಪಾಲಿನ ಇತಿಹಾಸವೆಂದೂ ವ್ಯಾಸಂಗ ಮಾಡುವುದಲ್ಲದೆ ಬೇರೆ ಕೆಲವಂಶಗಳನ್ನು ಕಂಡೇ ಮುಗ್ಧರಾಗಬಹುದು. ಈ ದೇಶವು ಪ್ರಾಚೀನವೆಂಬ ರಾಶಿಯಲ್ಲಿ ಪ್ರಾಚೀನವಾದುದು. ಈ ದೇಶದ ಚರಿತ್ರೆಯು ಎಂದು ಮೊದಲಾಗುವುದೆಂದು ಹೇಳುವುದೇ ಕಷ್ಟ. ಅಷ್ಟು ಪ್ರಾಚೀನವಾಗಿರುವುದರಿಂದ ಈ ಚರಿತ್ರೆಯು ಅತಿ ದೀರ್ಘಕಾಲದ್ದು. ಇಂಗ್ಲೆಂಡೆಂದು ಸಾಮಾನ್ಯವಾಗಿ ಕರೆಯುವ ದೇಶದ ಹದಿನೈದರಷ್ಟು ವಿಸ್ತೀರ್ಣದಲ್ಲಿ, ಎಂಟರಷ್ಟು ಜನಸಂಖ್ಯೆಯಲ್ಲಿ, ನಾಲಕ್ಕರಷ್ಟು ಕಾಲಗತಿಯಲ್ಲಿ ಆಗಿರುವುದರಿಂದ ಭಾರತೀಯ ಇತಿಹಾಸವು ಇಂಗ್ಲೆಂಡಿನ ಇತಿಹಾಸದ ನಾನ್ನೂರೆಂಭತ್ತರಷ್ಟು ಪ್ರಮಾಣದಲ್ಲಿ ಎಂದು ಮಾತಿಗೆ ಹೇಳಬಹುದು. ಮಿಶ್ರ, ಗ್ರೀಕ್, ರೋಮಕ ಮುಂತಾದ ಪ್ರಾಚೀನ ಸಂಸ್ಕೃತಿಗಳು ಭೂಗತವಾಗಿ ನಾಮಾವಶಿಷ್ಟವಾಗಿರುವುವು; ಭಾರತೀಯ ಸಂಸ್ಕೃತಿಯು ಇನ್ನೂ ಸಜೀವಿಯಾಗಿರುವುದು. ಕಾಲಗತಿಯಲ್ಲಿ ನಷ್ಟವಾಗದೆ ಇರುವ ಈ ಸಂಸ್ಕೃತಿಯು ಇಡೀ ಪೃಥ್ವಿಯಲ್ಲೇ ಹಿರಿಯದು, ಅಮೃತವಾದುದು. ಪೌರಸ್ತ್ಯ ಜಗತ್ತಿಗೆ ಕೇಂದ್ರವಾದ ಈ ದೇಶದ ಇತಿಹಾಸವು ಪೌರಸ್ತ್ಯ ಸಭ್ಯತೆಯ ಹೃದಯದ ವಿವರವೇ ಆಗಿರುವುದು. ಏಷ್ಯಾ ಖಂಡದ ಭೂಭಾಗಗಳಿಗೇ ಅಲ್ಲದೆ ಐರೋಪ್ಯದೇಶಗಳಿಗೂ ಕೂಡ ನಾಗರಿಕತೆಯಂಶಗಳನ್ನು ಎರೆದ ಕ್ಷೇತ್ರವಿದೇ ಆದುದರಿಂದ ಪೌರಸ್ತ್ಯ ಪಾಶ್ಚಾತ್ಯರಿಬ್ಬರಿಗೂ ಭಾರತೀಯ ಇತಿಹಾಸದ ತಿಳಿವು ಅವಶ್ಯಕ. ನಾನಾ ಜಾತಿಗಳಿಗೂ, ನಾನಾ ಮತಗಳಿಗೂ, ನಾನಾ ಸಭ್ಯತೆಗಳಿಗೂ ಸಂಧಿಸ್ಥಾನವಾದ ಈ

ದೇಶದಲ್ಲಿ ಹುಟ್ಟಿ ಬೆಳೆದ ಸಭ್ಯತೆಯು ಪುರಾತನವೂ ಆಗಿದೆ, ಆಧುನಿಕವೂ ಆಗಿದೆ. ಮೇಲೆ ಮೇಲೆ ಬಂದ ಇತರ ಸಂಸ್ಕೃತಿಗಳಿಗೆ ಸೋಲದೆ ಚಿರಾಯುವಾಗಿದೆ. ಈ ಒಂದು ಕಾರಣದಿಂದಲೇ ಭಾರತೀಯ ಚರಿತ್ರೆಯು ಅಮೋಘವೆನಿಸುವುದು.

## ಇತಿಹಾಸದ ಉಪಯೋಗ

ಚರಿತ್ರೆಯೆಂಬುದು ಕಾಲಗತಿಯನ್ನನುಸರಿಸುವ ವಿವರ; ಯಾವುದಾದರೂ ಒಂದು ಜನಸಮೂಹದ ವೃತ್ತಾಂತ. ಆ ವೃತ್ತಾಂತವು ಅನೇಕಾನೇಕ ಆದರ್ಶಪುರುಷರ ಜೀವನದ ಕಥೆಗಳನ್ನೊಳಕೊಂಡ ಕಥನ. ಕಥೆಯೆಂದರೆ ಕಲ್ಪಿತ ಕಥೆಯಲ್ಲ, ಸತ್ಯವನ್ನು ಎಳ್ಳಷ್ಟೂ ಬಿಡದ ಕಥೆ. ಭಾರತೀಯ ಇತಿಹಾಸವೆಂಬ ಅತ್ಯದ್ಭುತ ಕಥೆಯನ್ನು ಓದುವುದರಿಂದ ಸದ್ಯದಲ್ಲಿರುವ ಸ್ಥಿತಿಗತಿಗಳ ಜ್ಞಾನವುಂಟಾಗುವುದು ಕನಿಷ್ಠವಾದ ಪ್ರಯೋಜನ. ರಸ್ತೆಗಳೂ, ಕಾಲುವೆಗಳೂ, ಸೇತುವೆಗಳೂ, ತಟಾಕಗಳೂ ನಮ್ಮ ಕಣ್ಣೆದುರಿಗುಂಟು; ದೇವಾಲಯಗಳೂ, ನಗರಗಳೂ, ದುರ್ಗಗಳೂ, ಪ್ರಸಿದ್ಧ ಕಟ್ಟಡಗಳೂ ಉಂಟು. ಅವೆಲ್ಲವೂ ಮಾನವಕೃತವಾದವೇ; ಪ್ರತಿಯೊಂದೂ ತನ್ನ ಸ್ವಂತ ಕಥೆಯನ್ನು ಹೇಳಬಲ್ಲದು. ಇವು ಸುಲಭವಾಗಿ ದೃಷ್ಟಿಗೆ ಬೀಳುವುವು; ಸೂಕ್ಷ್ಮದೃಷ್ಟಿಗೆ ಗೋಚರವಾಗುವ ಕಂದಾಯ, ತೆರಿಗೆ, ಆಡಳಿತ, ಸರ್ಕಾರ, ವ್ಯಾಪಾರ, ಉದ್ಯೋಗ, ನೀತಿ, ಆಚಾರ, ಸಾಹಿತ್ಯ, ಕಲೆ, ಮತ ಮುಂತಾದವೂ ತಮ್ಮ ವೃತ್ತಾಂತಗಳನ್ನು ವಿಚಾರವಂತರಿಗೆ ತಿಳಿಸುತ್ತವೆ. ಕ್ರಿಸ್ತ ಶಕ 20ನೆಯ ಶತಮಾನದಲ್ಲಿ ಜೀವಿಸುವ ನಾವು ಹಿಂದಿನವರು ನಡೆಸಿದ ಕಾರ್ಯಗಳನ್ನು ತಿಳಿಯಬೇಕು, ಆಚಾರ ಸಂಪ್ರದಾಯಗಳನ್ನರಿತು ಅನುಸರಿಸಬೇಕು, ಕೃತಜ್ಞತೆ ತೋರುವೆಡೆಗಳಲ್ಲಿ ಕೃತಜ್ಞರಾಗಿರಬೇಕು, ಕಷ್ಟದಲ್ಲಿ ಪೂರ್ವಿಕರು ಅವಲಂಬಿಸಿದ ನೀತಿ ರೀತಿಗಳನ್ನು ತಿಳಿದು ನಾವೂ ಕಷ್ಟದಿಂದ ಪಾರಾಗಬೇಕು, ಪಿತರಾರ್ಜಿತವನ್ನು ಕಾಪಾಡಿಕೊಂಡಂತೆ ನಮ್ಮ ಪೂರ್ವಿಕರಿಂದ ನಮಗೆ ದತ್ತವಾಗಿರುವ ಸಂಸ್ಕೃತಿಯನ್ನು ಕಾಪಾಡಿ ಮುಂದೆ ಸಾಗಿಸಬೇಕು. ಭಾರತೀಯರಿಗಿದ್ದಷ್ಟು ಪುರಾತನ ಭಂಡಾರವು ಪೃಥ್ವಿಯಲ್ಲಿ ಮತ್ತಾರಿಗೂ ಇಲ್ಲ.

ಅಮೋಘವಾದ ಈ ವಿವರವನ್ನು ವ್ಯಾಸಂಗ ಮಾಡುವುದರಲ್ಲಿ ದುರ್ಬಲರಾದವರು ಮಾತ್ರ ಅಂಜಬೇಕು; ಭಾರತೀಯ ತರುಣರು ಹೆಮ್ಮೆಗೊಳ್ಳಬೇಕು.

ಸಾಧಾರಣವಾಗಿ ಪ್ರಯಾಣಿಕರು ನಮ್ಮ ದೇಶವನ್ನು ನಾನಾ ಜಾತಿಗಳೂ, ನಾನಾ ಭಾಷೆಗಳೂ, ನಾನಾ ಮತಗಳೂ, ನಾನಾ ಸಂಸ್ಕೃತಿಗಳೂ ಸಂಧಿಸಿರುವ ಚಿತ್ರವಿಚಿತ್ರ ಪ್ರದರ್ಶನ ಕ್ಷೇತ್ರವೆಂದು ವರ್ಣಿಸುವರು. ನೀಗ್ರೋ ಅಥವಾ ಕೃಷ್ಣವರ್ಣ, ಮಂಗೋಲಿಯನ್ ಅಥವಾ ಪೀತವರ್ಣ ಮತ್ತು ಕಕೇಷಿಯನ್ ಅಥವಾ ಶ್ವೇತವರ್ಣಗಳೆಂಬ ಮೂರು ಮುಖ್ಯವರ್ಣಗಳು ಶುದ್ಧವಾಗಿಯೂ ಮಿಶ್ರವಾಗಿಯೂ ಈ ದೇಶದ ಜನರಲ್ಲಿ ಕಾಣುತ್ತವೆ. ಕೋಲ, ದ್ರಾವಿಡ, ಮಂಗೋಲ, ಸೆಮಿಟಿಕ್, ಸಂಸ್ಕೃತ ಗುಂಪುಗಳ ಭಾಷೆಗಳೆಲ್ಲವೂ ಉಂಟು; ಒಟ್ಟು 222 ಭಾಷೆಗಳುಂಟು. ಝರದಸ್ತ (Zoroaster) ನ, ಪೈಗಂಬರ ಮುಹಮ್ಮದನ, ಈಸು (Jesus) ವಿನ ಮತಗಳು ಇಲ್ಲಿಗೆ ಬಂದು ಬೌದ್ಧ ಹಿಂದೂಮತಗಳನ್ನು ಸಂಧಿಸಿವೆ. ಇವುಗಳೆಲ್ಲಕ್ಕಿಂತಲೂ ವಿಚಿತ್ರವೆನಿಸಿದ ಸಾಂಸ್ಕೃತಿಕ ತರಂಗಾವಳಿಗಳು ಅಂತಸ್ತಿನ ಮೇಲಂತಸ್ತಿನಂತೆ ಕಾಣುವ ಭಿನ್ನ ಭಿನ್ನ ಜಾತಿಗಳ ಸಭ್ಯತಾಸಭ್ಯತೆಗಳಲ್ಲಿ ತೋರಿಕೊಂಡು, ಅತ್ಯುತ್ತಮ ಜಾತಿಯಿಂದ ಅನಾಗರಿಕರಾದ ಕಾಡುಜನರ ಜಾತಿಗೂ ಇರುವ ಅಂತರವು ಪದರ ಪದರವಾಗಿ ಕಾಣಿಸಿಕೊಳ್ಳುವುದು ಈ ದೇಶದಲ್ಲಿಯೇ. ಈ ಚಿತ್ರವಿಚಿತ್ರಗಳ ವಿವರವನ್ನು ಕಾರ್ಯಕಾರಣ ಸಹಿತವಾಗಿ ಇತಿಹಾಸದಲ್ಲಿಯೇ ತಿಳಿಯತಕ್ಕದ್ದು.

## ಈ ಚರಿತ್ರೆಯ ಸಾಧನೆ

ಈ ಇತಿಹಾಸವ್ಯಾಸಂಗವನ್ನು ಮೊದಲು ಮಾಡಿದವರು ಇಂಗ್ಲೀಷರು. ಬಂಗಾಳದಲ್ಲಿ ಆಡಳಿತವನ್ನು ಮೊದಲಿಟ್ಟಾಗ ಅವರಿಗೆ ಈ ದೇಶದ ಜನರ ರೀತಿ ನೀತಿಗಳೂ ಆಚಾರ ವ್ಯವಹಾರಗಳೂ ತಿಳಿದಿರಲಿಲ್ಲ. ಸ್ವಲ್ಪ ಕಾಲದಲ್ಲಿಯೇ ಅವರಲ್ಲಿ ಸಾಹಸಿಗಳಾದವರು ಕೆಲವರು ಈ ದೇಶದ ಭಾಷೆಗಳನ್ನು ಅಭ್ಯಾಸ ಮಾಡಿ ಗ್ರಂಥಗಳನ್ನೂ ಹುಡುಕಿಕೊಂಡು ಓದಲಾರಂಭಿಸಿದರು. ಸರ್ ವಿಲಿಯಂ ಜೋನ್ಸ್ (Sir W. Jones), ಕೋಲ್ಬ್ರುಕ್ (Colebrooke),

ವಿಲ್ಸನ್ (Wilson), ಮ್ಯಾಕ್ಸ್‌ಮುಲ್ಲರ್ (Max-Muller) ಮುಂತಾದವರು ಸಾಹಸಪಟ್ಟು ಸಂಸ್ಕೃತ ಭಾಷೆಯನ್ನು ಅಭ್ಯಾಸಮಾಡಿ, ಪುರಾತನ ಗ್ರಂಥಗಳನ್ನರಸಿ ವ್ಯಾಸಂಗಮಾಡಿ, ಈ ದೇಶದ ಪೂರ್ವೇತಿಹಾಸವನ್ನು ಪ್ರಾರಂಭ ಮಾಡಿದರು. ಓದುತ್ತ ಓದುತ್ತ ಅವರ ಆಶ್ಚರ್ಯಕ್ಕೂ ಆನಂದಕ್ಕೂ ಮಿತಿಯಿಲ್ಲದಂತಾಯಿತು. ದೇಶದಲ್ಲಿ ಸಂಚಾರಮಾಡಿದ ಐರೋಪ್ಯರು ಪುರಾತನ ಗುಹೆಗಳನ್ನೂ ದೇವಾಲಯಗಳನ್ನೂ ಕಂಡು ಅಚ್ಚರಿಯನ್ನು ಹೊಂದಿದರು; ಪುರಾತನ ಗ್ರಂಥಗಳನ್ನು ಶೇಖರಿಸುವುದಕ್ಕೂ ಪ್ರಾಚೀನ ವಸ್ತುಗಳನ್ನು ಪರೀಕ್ಷೆ ಮಾಡುವುದಕ್ಕೂ ತೊಡಗಿ, ಲಭಿಸಿದ ರಾಶಿಯನ್ನು ಕಂಡು ಮುಗ್ಧರೇ ಆದರು. ಕಾಲಕ್ರಮದಲ್ಲಿ ಈ ಪರೀಕ್ಷೆಯು ಮುಂದರಿದು ಈ ಕೆಲಸಕ್ಕಾಗಿಯೇ ಆಡಳಿತದಲ್ಲಿ ಪ್ರಾಕ್ತನ ಪರೀಕ್ಷೆಯ ಇಲಾಖೆಯೇರ್ಪಟ್ಟಿತು. ಈ **ಪ್ರಾಕ್ತನ ಪರೀಕ್ಷೆಯ** (Archæology) ಸಹಾಯದಿಂದ ನಮ್ಮ ದೇಶದ ಇತಿಹಾಸವು ಶಾಸ್ತ್ರೀಯವಾದ ಮಾರ್ಗದಲ್ಲಿ ಸಿದ್ಧವಾಗಲು ಅನುಕೂಲವಾಯಿತು.

ರಾಮಾಯಣ, ಮಹಾಭಾರತ, ಅಷ್ಟಾದಶ ಪುರಾಣಗಳಲ್ಲಿ ಹಿಂದಿನ ವೃತ್ತಾಂತವುಂಟು; ಆದರೆ ಚರಿತ್ರೆಯ ರೂಪದಲ್ಲಿಲ್ಲ. ಚರಿತ್ರೆಗೆ ಸಂಬಂಧಪಟ್ಟ ವಿಷಯಗಳನ್ನು ಅಂತಹ ಗ್ರಂಥಗಳಿಂದ ಆರಿಸಿಕೊಳ್ಳಬೇಕು. ಪುರಾತನ ಕಾಲದಲ್ಲಿ ರಚಿತವಾದ ಗ್ರಂಥಗಳೆಲ್ಲವೂ ಸುರಕ್ಷಿತವಾಗಿಲ್ಲ; ಬಹುಭಾಗವು ನಷ್ಟವಾಗಿಯೇ ಇದೆ. ಅಲ್ಲಲ್ಲಿ ಅಡಗಿರುವ ಪುರಾತನ ಗ್ರಂಥಗಳ ಸಂಶೋಧನೆಯೆಂಬುದೇ ಈ ವಿಶಾಲ ದೇಶದಲ್ಲಿ ಸುಲಭವಾದ ಕೆಲಸವಲ್ಲ. ಕೇವಲ ಗ್ರಂಥಗಳಿಂದಲೇ ನಮಗೆ ಸರ್ವಸ್ವವು ತಿಳಿಯುವುದೂ ಇಲ್ಲ. ಲೋಕ ವಿಖ್ಯಾತವಾದ ಅಜಂತದ ಗುಹೆಗಳಲ್ಲಿರುವ ಚಿತ್ರ, ಶಿಲ್ಪ ಮತ್ತು ವಾಸ್ತುವಿದ್ಯೆಯ ವಿವರವು ಇನ್ನೂ ಲಭ್ಯವಾಗಿಲ್ಲವೆಂಬುದೇ ಸೋಜಿಗವಲ್ಲವೇ? ದೃಷ್ಟಾಂತಕ್ಕೆ ಅವುಗಳಲ್ಲೊಂದರಲ್ಲಿ ವಾಕಾಟಕ ವಂಶದವರಿಗೆ ಮಂತ್ರಿಯಾಗಿದ್ದ ವರಾಹದೇವನೆಂಬಾತನು ಕಟ್ಟಿಸಿದ್ದೆಂದು ಲೇಖನವಿದೆ; ಈತನ ವಿವರವನ್ನು ಇತರ ಮಾರ್ಗಗಳಲ್ಲಿಯೂ ಹುಡುಕಬೇಕು. ಸಾವಿರ ವರ್ಷ ಕಾಲದ ಕಲಾಸ್ಥಿತಿಗಳನ್ನು ಅಲ್ಲಿಯ 26 ಗುಹೆಗಳು ತೋರುತ್ತವೆ; ಅವುಗಳ ಪರೀಕ್ಷೆಯೇ ಸಂಪೂರ್ಣವಾಗಿಲ್ಲ. ಹೀಗೆಯೇ ದೇಶದಲ್ಲಿ ಮೇಲೆ ಮೇಲೆ

ತೋರುವ ವಸ್ತುಗಳನ್ನು ಪರೀಕ್ಷೆಮಾಡುವುದೇ ಅಲ್ಲದೆ ಭೂಗತವಾಗಿರುವುದನ್ನೂ ಪರೀಕ್ಷೆ ಮಾಡಬೇಕು. ಕಾಶಿ, ಪಾಟಲಿಪುತ್ರ, ಉಜ್ಜಯಿನಿ, ತಕ್ಷಶಿಲ ಮುಂತಾದ ಪುರಾತನ ನಗರಗಳು ಹೂತುಹೋಗಿ ಪಾಳು ಬಿದ್ದಿವೆ. ಪ್ರಾಚೀನ ಗ್ರಂಥಗಳ ಮತ್ತು ಪ್ರಾಚೀನ ವಸ್ತುಗಳ ಪರೀಕ್ಷೆಯು ಇತಿಹಾಸದ ರಚನೆಗೆ ಅತ್ಯವಶ್ಯಕ.

## ಆಧಾರಗಳು

ಗ್ರಂಥರಾಶಿಯ ಮತ್ತು ವಸ್ತುರಾಶಿಯ ಪರೀಕ್ಷೆಯೇ ನಮ್ಮ ದೇಶದ ಇತಿಹಾಸಕ್ಕೆ ವಿಷಯವನ್ನೊದಗಿಸತಕ್ಕ ಮೂಲಾಧಾರಗಳು. ಐತಿಹಾಸಿಕ ಪಂಡಿತರು ದೊಡ್ಡ ಗ್ರಂಥಗಳನ್ನು ಬರೆಯುತ್ತಾರೆ; ಅವರಿಗೆ ಸಂಗತಿಗಳು ಎಲ್ಲಿ ದೊರಕುತ್ತವೆ? ಅವರು ಕಲ್ಪನೆಮಾಡಿ ಬರೆದಿಡದಿದ್ದರೆ ಎಲ್ಲಿಂದ ತರುತ್ತಾರೆ? ಎಂದು ಕೇಳಿದರೆ ಅದಕ್ಕೆ ಉತ್ತರ ಇದೇ. ಪ್ರಾಚೀನ ಗ್ರಂಥವೋ ಪ್ರಾಚೀನವಸ್ತುವಿಶೇಷವೋ ಅದರ ಪರೀಕ್ಷೆಯಿಂದ ಸಿದ್ಧವಾದ ವಿಷಯವನ್ನೇ ಅವರು ತಿಳಿದು ವಿವರಿಸುವರು. ಪ್ರಾಚೀನ ಗ್ರಂಥವಾವುದಾದರೂ ತಾಳಪತ್ರವೋ, ಭೂರ್ಜತ್ವಕ್ಕೋ ದೊರೆತ ಕೂಡಲೆ ಅದರ ವಿಮರ್ಶೆಯನ್ನು ನಡೆಸಿ ಚರಿತ್ರೆಗೆ ಸಂಬಂಧಿಸಿದ ವಿಷಯವನ್ನು ಅದರಿಂದ ಹೀರಿ ಉಪಯೋಗಿಸುವರು. ಹಾಗೆಯೇ ಪುರಾತನವಾದ ಶಿಲಾಲೇಖವೆಲ್ಲಿಯಾದರೂ ಹೊಸದಾಗಿ ಕಂಡರೆ ಅದನ್ನೂ ಪರೀಕ್ಷೆ ಮಾಡಿ ಅದರಿಂದ ದೊರಕಬಹುದಾದ ವಿಷಯವನ್ನು ಸೆಳೆಯುವರು. ಬೆಲ್ಲಕ್ಕೆ ಕಬ್ಬು ಹೇಗೆ ಮೂಲವೋ ಚರಿತ್ರೆಗೆ ಹಾಗೆಯೇ ಈ ಪರೀಕ್ಷೆಯು ಮೂಲವೆನ್ನಬಹುದು.

ಪ್ರಾಚೀನ ಗ್ರಂಥರಾಶಿಯೆಂಬುದು ಒಂದು ದೊಡ್ಡ ಸಾಗರದಂತೆ.

ಗ್ರಂಥರಾಶಿ

ಈ ದೇಶದಲ್ಲಿ ಮೊದಲಿನಿಂದಲೂ ಎಷ್ಟು ಗ್ರಂಥಗಳನ್ನು ಪೂರ್ವಿಕರು ಬರೆದರೋ ಅವುಗಳಲ್ಲಿ ಕೆಲವು ಮಾತ್ರ ರಕ್ಷಿತವಾಗಿವೆ. ಅವು ಅನೇಕ ಭಾಷೆಗಳಲ್ಲಿವೆ. ಚರಿತ್ರೆಗೆ ಇವೂ ಬೇಕು, ಹೊರಗಿನ ಗ್ರಂಥಗಳೂ ಬೇಕು. ಭರತವರ್ಷದ ಸಂಬಂಧವನ್ನು ಕಟ್ಟಿಕೊಂಡ ದೇಶಗಳ ಗ್ರಂಥಗಳಲ್ಲಿ ಉಪಯುಕ್ತವಾದ ವಿವರವಿರುತ್ತದೆ. ದೇಶದಲ್ಲಿ ಸಂಚಾರಮಾಡಿ ಹೋದ ವಿದೇಶೀಯರು

ತಮ್ಮ ಗ್ರಂಥಗಳಲ್ಲಿ ಉಪಯುಕ್ತವಾದ ಸಂಗತಿಗಳನ್ನು ವಿವರಿಸಿರುತ್ತಾರೆ. ಹೀಗೆ ಗ್ರಂಥರಾಶಿಯಲ್ಲಿ ದೇಶೀಯ ಮತ್ತು ವಿದೇಶೀಯ ಎಂದು ವಿಭಾಗ ಮಾಡಿಕೊಳ್ಳಬಹುದು. ಇರಾನೀ ಚರಿತ್ರೆ, ಚೀನೀ ಚರಿತ್ರೆ, ಮುಂತಾದ ಗ್ರಂಥಗಳೂ ಉಪಯುಕ್ತವಾದವುಗಳೇ; ಮೆಗಾಸ್ಥೆನೀಸ್ (Megasthenes), ಫಾಹಿಯನ್ (Fa Hien), ಯುವನ್‌ಚ್ವಾಂಗ್ (Yuan Chwang), ಆಲ್ಬಿರೂನಿ (Albiruni), ಅಬ್ದುರ್ ರಜ಼ಾಕ್ (Abdur Razaak), ಮನುಚಿ (Manucci), ಮುಂತಾದ ಪ್ರಯಾಣಿಕರ ವೃತ್ತಾಂತಗಳೂ ಉಪಯುಕ್ತವಾದವುಗಳೇ. ದೇಶೀಯ ಗ್ರಂಥಗಳು ಅನೇಕವಾಗಿ ನಷ್ಟವಾಗಿದ್ದರೂ ಯಥೇಚ್ಛವಾಗಿಯೇ ಇವೆ. ಅವುಗಳಲ್ಲಿ ರಾಜತರಂಗಿಣಿ, ಹರ್ಷಚರಿತೆ, ವಿಕ್ರಮಾಂಕ ಚರಿತೆ, ಪೃಥ್ವೀರಾಜ ರಾಸ, ತಾರೀಖಿ ಫಿರೂಸ್ ಷಾಹಿ, ಅಕ್ಬರ್ ನಾಮಾ ಮುಂತಾದವು ಚರಿತ್ರೆಯ ರೂಪದಲ್ಲಿಯೇ ಇವೆ. ಇವುಗಳನ್ನು ಪರಸ್ಪರವಾಗಿ ಹೋಲಿಸಿ ನಿಜವಾದ ವಿವರವನ್ನು ಸಿದ್ಧಪಡಿಸಬೇಕೇ ವಿನಾ ಇರುವಹಾಗೆಯೇ ಪ್ರಮಾಣ ಗ್ರಂಥಗಳೆಂದು ಸ್ವೀಕರಿಸಲಾಗುವುದಿಲ್ಲ. ಚರಿತ್ರೆಗಳಲ್ಲದೆ ರಾಮಾಯಣ ಮಹಾಭಾರತಗಳೆಂಬ ಮಹಾಕಾವ್ಯಗಳು, ಪುರಾಣಗಳು, ಶ್ರುತಿಸ್ಮೃತಿಗಳು, ಶಾಸ್ತ್ರಗಳು, ಕಾವ್ಯಗಳು ಮುಂತಾದವೆಲ್ಲವೂ ಉಪಯುಕ್ತವಾದವುಗಳೇ. ಚರಿತ್ರೆಯ ವಿವರಸಿದ್ಧಿಗೆ ಅವುಗಳ ವಿಮರ್ಶೆಯೂ ಅವಶ್ಯಕವಾಗಿಯೇ ಇರುವುದು.

**ವಸ್ತುರಾಶಿ**

ಪ್ರಾಚೀನ ವಸ್ತು ಪರೀಕ್ಷೆಯಿಂದ ತಿಳಿಯುವ ವಿವರವು ಗ್ರಂಥದಲ್ಲಿ ದೊರಕುವ ವಿವರಕ್ಕಿಂತಲೂ ಹೆಚ್ಚು ಪ್ರಮಾಣವುಳ್ಳುದೆಂದು ಕೆಲವರು ಪಂಡಿತರು ಅಭಿಪ್ರಾಯಪಡುತ್ತಾರೆ. ವಸ್ತು ಪರೀಕ್ಷೆಯನ್ನು ನಾವು ಸುಲಭವಾಗಿ ಕಟ್ಟಡದ ಭಾಗ, ಲೇಖನದ ಭಾಗ, ನಾಣ್ಯದ ಭಾಗಗಳೆಂದು ಮೂರಾಗಿ ವಿಂಗಡಿಸಿಕೊಳ್ಳಬಹುದು. ದೇವಾಲಯಗಳು, ಗುಹೆಗಳು, ಪಟ್ಟಣಗಳು ಮೊದಲ ಭಾಗಕ್ಕೆ ಸೇರತಕ್ಕವು. ಶಿಲಾಲೇಖಗಳು, ಲೋಹಶಾಸನಗಳು ಎರಡನೆ ಭಾಗದಲ್ಲಿ ಸೇರತಕ್ಕವು. ಮೂರರೂ ಒಟ್ಟಿಗೆ ಒಂದೇ ಎಡೆಯಲ್ಲಿ ಕಾಣುವುದರಲ್ಲಿ ಆಶ್ಚರಿಯೇನೂ ಇಲ್ಲ. ಅಜಂತ, ಎಲ್ಲೋರ, ಘಾರಾಪುರಿ (Elephanta), ಮಾಮಲ್ಲಪುರ, ಕಾಂಚೀಪುರ ಮುಂತಾದೆಡೆ

ಗಳಲ್ಲಿರುವ ಪುರಾತನ ಕಾಲದ ಕಟ್ಟಡಗಳು ಮೊದಲನೆ ಭಾಗಕ್ಕೆ ನಿದರ್ಶನಗಳು. ಅಶೋಕ, ರುದ್ರದಾಮ, ಸಮುದ್ರಗುಪ್ತ ಮುಂತಾದವರ ಶಾಸನಗಳು ಶಿಲಾಲೇಖಗಳ ರೂಪದಲ್ಲಿವೆ; ಅನೇಕ ತಾಮ್ರ ಶಾಸನಗಳೂ ಇವೆ; ಇವು ಎರಡನೆ ಭಾಗದವು. ಯವನರ, ಕುಶೀಕುಲದವರ (Kushan), ಗುಪ್ತವಂಶದವರ ನಾಣ್ಯಗಳು ಪ್ರಸಿದ್ಧ. ಇದುವರೆಗೆ ನಡೆದಿರುವ ಸಂಶೋಧನೆಯಿಂದಲೇ ಯಥೇಚ್ಛವಾದ ಸಂಗತಿಗಳು ದೊರಕಿರುತ್ತವೆ; ಪ್ರಾಕ್ತನಪರೀಕ್ಷೆಯು ಸಂಪೂರ್ಣವಾಗಿ ನಡೆದಲ್ಲಿ ಏನು ಏನು ಹೊರ ಬೀಳುವುದೋ ಹೇಳಲಿಕ್ಕೆ ಸಾಧ್ಯವಿಲ್ಲ. ಪ್ರಾಚೀನ ಗ್ರಂಥರಾಶಿಯು ಮತ್ತು ಪುರಾತನ ವಸ್ತುಗಳ ಪರೀಕ್ಷೆಗಳು ಒಂದಕ್ಕೊಂದು ಸಹಾಯವಾಗಿದ್ದು ಚರಿತ್ರೆಯ ವಿವರವನ್ನು ದೃಢಪಡಿಸುತ್ತವೆ. ಎರಡನ್ನೂ ಸಮಾನವಾದ ಪ್ರಮಾಣಗಳೆಂದೇ ಭಾವಿಸಬೇಕು.

ಈ ಎರಡು ತೆರದ ಪರೀಕ್ಷೆಗಳೂ ಸಮಾನವಾದ ಬಲವುಳ್ಳವುಗಳು; ಇನ್ನೂ ಪ್ರಾರಂಭದಲ್ಲಿರತಕ್ಕವುಗಳು. ಇದುವರೆಗೆ ನಡೆದಿರುವ ಕೆಲಸದಿಂದ ಪ್ರಾಕ್ತನಪರೀಕ್ಷೆಯಲ್ಲಿ ಕ್ರಿಸ್ತ ಪೂರ್ವ 3000ದಷ್ಟು ಪುರಾತನ ವಸ್ತುಗಳು ದೊರೆತಿವೆ. ಗ್ರಂಥರಾಶಿಯ ಭಾಗದಲ್ಲಿ ಅತಿಪುರಾತನವೆಂದು ನಿಶ್ಚಿತವಾಗಿರುವ ಗ್ರಂಥವು ಎಷ್ಟು ಪುರಾತನವೆಂದು ಹೇಳಲು ಸಾಧ್ಯವಾಗದೆಯೇ ಇದೆ. ಇದರ ಪರಿಣಾಮವಾಗಿ ನಮ್ಮ ದೇಶದ ಚರಿತ್ರೆಯು ಪೂರ್ತಿಯಾಗಿಲ್ಲ; ಅಲ್ಲಲ್ಲಿ ತಿಳಿಯದಿರುವ ವಿಷಯವು ಅಜ್ಞೇಯವಾದ ಅಂತರವನ್ನುಂಟುಮಾಡಿ ಅಜ್ಞಾನವನ್ನುಂಟುಮಾಡುವುದು. ಮತ್ತು ಕೆಲವೆಡೆಗಳಲ್ಲಿ ವಿಷಯವು ಸಂದಿಗ್ಧವಾಗಿರುವುದು. ಈ ಎರಡು ತೊಂದರೆಗಳಿದ್ದಾಗ್ಯೂ ಭದ್ರವಾಗಿ ತಿಳಿದಿರುವ ವಿಷಯವೇ ಸಾಕಾದಷ್ಟಿರುವುದು.

ಅಸಂಪೂರ್ಣತೆ

## ಕಾಲಮಾನ

ಎಲ್ಲಿಯೋ ಹುಟ್ಟಿ, ಬೆಟ್ಟಗುಡ್ಡಗಳಲ್ಲಿ ಧುಮುಕಿ, ಮೈದಾನದಲ್ಲಿ ಇಳಿದು, ಇತರ ಉಪನದಿಗಳನ್ನು ಒಳಮಾಡಿ ಸೇರಿಸಿಕೊಂಡು, ಸಮುದ್ರದ ಕಡೆಗೆ ಹರಿದು ಸಮುದ್ರವನ್ನು ಸೇರುವ ನದಿಯಂತೆಯೇ ಚರಿತ್ರೆಯೂ

ಕೂಡ ಕಾಲಗತಿಯು ಆರಂಭವಾದಾಗಿನಿಂದ ಪ್ರವಹಿಸುತ್ತಲಿರುವುದು. ಚರಿತ್ರೆಯ ಗತಿಗೆ ತಡೆಯೇ ಇಲ್ಲ. ಆದರೆ ನಾವು ವ್ಯಾಸಂಗ ಸೌಲಭ್ಯಕ್ಕಾಗಿ ಅದರ ಗತಿಯನ್ನು ಭಾಗ ಮಾಡಿಕೊಂಡು ಗುರುತುಗಳನ್ನಿಟ್ಟುಕೊಂಡು ಓದುತ್ತೇವೆ. ನಮ್ಮ ದೇಶದ ಇತಿಹಾಸವನ್ನು ಈ ಅನುಕೂಲಕ್ಕಾಗಿ ಆರ್ಯಪೂರ್ವ, ಬುದ್ಧಪೂರ್ವ, ಬೌದ್ಧ, ಹಿಂದೂ, ಇಸ್ಲಾಮ್, ಮರಾಟಾ, ಬ್ರಿಟಿಷ್ ಕಾಲಗಳೆಂಬ ದೊಡ್ಡ ದೊಡ್ಡ ವಿಭಾಗಗಳನ್ನು ವಿಂಗಡಿಸಿಕೊಳ್ಳುವುದು ರೂಢಿಯಾಗಿದೆ. ಈ ವಿಭಾಗಗಳು ನಮ್ಮ ಅನುಕೂಲಕ್ಕೆ ಮಾತ್ರ. ಆ ವಿಭಾಗಗಳನ್ನು ಗುರುತಿಸುವುದಕ್ಕೆ ನಮಗೆ ಕಾಲಮಾನವು ಅವಶ್ಯ. * ದೇಶೀಯರಾದ ನಮ್ಮಲ್ಲಿ ಕಲಿಯುಗ (ಪ್ರಾರಂಭ ಕ್ರಿ. ಪೂ. 3102), ಬುದ್ಧಶಕ (ಪ್ರಾರಂಭ ಕ್ರಿ. ಪೂ. 546), ವಿಕ್ರಮ ಶಕ (ಪ್ರಾರಂಭ ಕ್ರಿ. ಪೂ. 57), ಶಾಲಿವಾಹನ ಶಕ (ಪ್ರಾರಂಭ ಕ್ರಿ. ಶ. 78), ಹಿಜಿರಾ ಶಕ (ಪ್ರಾರಂಭ ಕ್ರಿ. ಶ. 622) ಮುಂತಾದವು ಬೇರೆ ಬೇರೆ ಪ್ರಾಂತಗಳಲ್ಲಿ ಉಪಯೋಗದಲ್ಲಿವೆ. ಕ್ರಿಸ್ತ ಶಕವೆಂಬುದೇ ಸರ್ವತ್ರ ವಾಡಿಕೆಯಲ್ಲಿರುವುದರಿಂದ ನಮಗೆ ಶಾಲಿವಾಹನ ಶಕೆ, ವಿಕ್ರಮ ಶಕೆ, ಹಿಜಿರಾ ಶಕೆಗಳಿಗಿಂತಲೂ ಅದೇ ಅನುಕೂಲ. ಗೊತ್ತಾದ ಒಂದು ಸ್ಥಲದಿಂದ ಹಿಂದಕ್ಕೂ ಮುಂದಕ್ಕೂ ಎಣಿಸಿಕೊಳ್ಳುವುದು ಅದರ ವಿಧಾನ. ಅದರಂತೆ ಕ್ರಿ. ಶ. 15ನೆ ಶತಮಾನವೆಂದರೆ 1400ರಿಂದ 1500ರವರೆಗೆ; ಕ್ರಿ. ಪೂ. 15ನೆ ಶತಮಾನವೆಂದರೆ ಕ್ರಿ. ಪೂ. 1500ರಿಂದ 1400ರವರೆಗೆ.

ನಮ್ಮ ದೇಶದ ಇತಿಹಾಸವು ಅತಿಪ್ರಾಚೀನವಾದುದರಿಂದ ಕ್ರಿಸ್ತಶಕದ ಕಾಲಕ್ಕಿಂತಲೂ ಕ್ರಿಸ್ತಪೂರ್ವ ಕಾಲವೇ ಹೆಚ್ಚಾಗಿ ದೊಡ್ಡದಾಗಿರುವುದು. ಆ ದೀರ್ಘಕಾಲದಲ್ಲಿ ಅನಿಶ್ಚಿತವೂ ಅಜ್ಞಾತವೂ ಆದ ಭಾಗವು ಸಹಜವಾಗಿಯೇ ಇರುತ್ತದೆ. ಆದರೂ ಅದ್ಭುತವೂ ಪ್ರಾಚೀನತಮವೂ ಆದ ದೇಶದ ಇತಿಹಾಸವು ಅಪಾರವೂ ಅಮೋಘವೂ ಆಗಿಯೇ ಇರುತ್ತದೆ.

* ಹಿಂದೂಜನರು ಸಂಕಲ್ಪದಲ್ಲಿ "ಶ್ರೀ ಬ್ರಹ್ಮಣೋ ದ್ವಿತೀಯ ಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತ ಮನ್ವಂತರೇ ಕಲಿಯುಗೇ ಪ್ರಥಮ ಪಾದೇ" ಎಂದು ಹೇಳುವುದು ವಾಡಿಕೆ. ಅವುಗಳ ಗಣನೆಯು ಶಾಸ್ತ್ರಜ್ಞರಿಂದ ಭದ್ರಗೊಂಡಿಲ್ಲದಿದ್ದರೂ ವಿದ್ಯಾರ್ಥಿಗಳು ತಿಳಿದುಕೊಳ್ಳತಕ್ಕದ್ದು.

# ಆರ್ಯ ಪೂರ್ವ

1. ಶಿಲಾ ಯುಗಗಳು. 2. ತಾಮ್ರ ಯುಗ. 3. ದ್ರಾವಿಡರು.
4. ಇತರ ಜನರು. 5. ಮೊಹೆಂಜೊದಾರೊ, ಹರಪ್ಪ. 6. ಆರ್ಯರ ಪ್ರವೇಶ.
7. ಆರ್ಯ ಶಾಖೆಗಳು. 8. ಆರ್ಯ ಕಾಲ ವಿಭಾಗಗಳು.

ಟಿಪ್ಪಣಿ.—ಬುದ್ಧ ಪೂರ್ವ ಗ್ರಂಥರಾಶಿ.

## ಶಿಲಾ ಯುಗಗಳು

**ಮೊದಲಿನವರು**

ಅತಿ ಪುರಾತನ ಕಾಲದಲ್ಲಿ ಹಿಂದೂ ಸಾಗರವೇ ಇರಲಿಲ್ಲ. ಆಫ್ರಿಕಾ ಆಸ್ಟ್ರೇಲಿಯಾ ಖಂಡಗಳನ್ನು ಒಟ್ಟುಗೂಡಿಸಿಕೊಂಡು ಈಗ ಸಮುದ್ರವಿರುವ ಸ್ಥಳದಲ್ಲಿ ಒಂದು ಭೂಖಂಡವಿದ್ದು ಕಾಲಗತಿಯಲ್ಲಿ ಮುಳುಗಿ ಹೋಯಿತು. ಆ ಖಂಡವಿದ್ದ ಕಾಲದಲ್ಲಿ ಸಮ್ಮ ದೇಶವು ಈಗಿದ್ದಂತೆ ಇರಲೇ ಇಲ್ಲ. ದಖನ್ನಿನ ಭಾಗವು ವಾಸಯೋಗ್ಯವಾಗಿತ್ತು; ಗಂಗಾ ಸದಿಯ ಬಯಲು ಇನ್ನೂ ಸಿದ್ಧವಾಗುವುದರಲ್ಲಿತ್ತು. ಆಗ ದಖನ್ನಿನ ಕೆಲವೆಡೆಗಳಲ್ಲಿ ಹಲಕೆಲವರು ಜೀವಿಸುತ್ತಿದ್ದರು. ಅವರು ಬೇಟೆಯಿಂದಲೂ ಮೀನು ಹಿಡಿಯುವುದರಿಂದಲೂ ಜೀವಿಸುತ್ತ ಯಾವ ಲೋಹವನ್ನೂ ಅರಿಯದೆ ಕಲ್ಲಿನ ಚೂರುಗಳನ್ನೇ ಉಪಯೋಗಿಸುತ್ತಲಿದ್ದರು. ಈಗಲೂ ಕರಾಚಿಗೆ ಪಶ್ಚಿಮದ ತೀರಪ್ರದೇಶದಲ್ಲಿರುವ ಕಾಡುಜನರು ಈ ಪುರಾತನಶಿಲಾ ಯುಗದ ನಿವಾಸಿಗಳ ಸಂತತಿಯವರೆಂದು ಪಂಡಿತರು ಊಹಿಸಿದ್ದಾರೆ. ದಖನ್ನಿನ ಕೆಲವೆಡೆಗಳಲ್ಲಿ ಈ ಪೂರ್ವನಿವಾಸಿಗಳು ಉಪಯೋಗಿಸುತ್ತಿದ್ದ ಒರಟಾದ ಆಯುಧಗಳ ಮಾದರಿಗಳು ಹಲಕೆಲವು ಕಂಡಿವೆ. ಪ್ರಾಯಶಃ ಈ ಆದಿನಿವಾಸಿಗಳು ಆಕಾರದಲ್ಲಿ ಗಿಡ್ಡರಾಗಿಯೂ ಬಣ್ಣದಲ್ಲಿ ಕಪ್ಪಾಗಿಯೂ ಇದ್ದರು. ಮೆಕ್ರಾನ್ ತೀರಪ್ರದೇಶದ ಕಾಡುಜನರೂ ಅಂಡಮಾನ್ ದ್ವೀಪಗಳ ಆದಿನಿವಾಸಿಗಳೂ ಈ ಪೂರ್ವಶಿಲಾ ಯುಗದವರ ಸಂಬಂಧವನ್ನು ಪಡೆದವರಾಗಿರಬೇಕೆಂದು ಪಂಡಿತರು ಅನುಮಾನ (Inference) ಪಟ್ಟಿರುವರು.

**ಎರಡನೆಯವರು**

ಎಷ್ಟೋ ಕಾಲ ಕಳೆದಮೇಲೆ ಬೇರೆ ಗುಂಪಿನ ಜನರು ಈಶಾನ್ಯ ದಿಕ್ಕಿನಿಂದ ದೇಶದೊಳಕ್ಕೆ ಪ್ರವೇಶಮಾಡಿ ಈ ಪುರಾತನ ಶಿಲಾಯುಗದ ಜನರನ್ನು ಸೋಲಿಸಿ ಅವರ ಪ್ರದೇಶಗಳನ್ನು ಕಿತ್ತುಕೊಂಡು ಅವರನ್ನು ಬೇರೆಡೆಗಳಿಗೆ ಅಟ್ಟಿಬಿಟ್ಟರು. ಈ ಹೊಸ ಜನರೂ ಕಲ್ಲನ್ನು ಮಾತ್ರ ಉಪಯೋಗಿಸ ಬಲ್ಲವರೇ ಆಗಿದ್ದರು ; ಲೋಹವು ಅವರಿಗೆ ತಿಳಿದಿರಲಿಲ್ಲ. ಆದರೆ ಶಿಲೆಯಲ್ಲಿಯೇ ಕೊಡಲಿ, ಭರ್ಜಿ, ಬಾಣ, ಚೂರಿಗಳಿಗೆ ಹರಿತವಾದ ಅಲಗುಗಳನ್ನು ಮಾಡಿಕೊಂಡು ಅವುಗಳನ್ನೂ, ಶಿಲೆಯಿಂದಲೂ ಮಣ್ಣಿನಿಂದಲೂ ಮಾಡಿದ ಪಾತ್ರೆಗಳನ್ನೂ ಉಪಯೋಗಿಸುತ್ತಿದ್ದರು. ಅವರು ಬರುವ ವೇಳೆಗೆ ಸಿಂಧು ಗಂಗಾ ನದಿಗಳ ಬಯಲುಗಳು ಸಿದ್ಧವಾಗಿದ್ದವು. ಆ ಬಯಲುಗಳನ್ನು ಈ ಹೊಸ ಜನರು ಆಕ್ರಮಿಸಿಕೊಂಡರು. ಆ ಕಾರಣದಿಂದ ಅವರ ಆಯುಧಗಳ ಅವಶಿಷ್ಟಗಳು ಆ ಬಯಲುಗಳ ಕೆಲವೆಡೆಗಳಲ್ಲಿ ದೊರೆತಿವೆ. ಈ ಜನರು ಶಿಲಾಯುಗದವರೇ ಆದರೂ ಸ್ವಲ್ಪ ನಾಗರಿಕತೆಯನ್ನು ಪಡೆದಿದ್ದರು. ಮನೆಗಳನ್ನು ಕಟ್ಟಿಕೊಂಡು ಬೆಂಕಿಯನ್ನು ಉಪಯೋಗಿಸಿಕೊಳ್ಳುತ್ತಿದ್ದುದಲ್ಲದೆ ತಮ್ಮ ಆಯುಧ ಸಾಮಗ್ರಿಗಳಿಗೆ ತಕ್ಕಮಟ್ಟಿಗೆ ಅಲಂಕಾರವನ್ನೂ ಮಾಡಿ ತಮ್ಮ ಜೀವನದಲ್ಲಿ ಸೊಬಗನ್ನು ಕಾಣುತ್ತಿದ್ದರು. ನಿಕೊಬಾರ್ ದ್ವೀಪಗಳ ಆದಿನಿವಾಸಿಗಳು ಈ ಜನರ ಸಂತತಿಯವರೆಂದು ಪಂಡಿತರ ಊಹೆ. ಅವರು ಆಡುವ ಭಾಷೆಯು ಸಯಾಂ, ಅನಾಂ, ಕಾಂಬೋಡಿಯ ದೇಶಗಳಲ್ಲಿ ಬಳಕೆಯಲ್ಲಿರುವ ಖ್ಮೇರ ಗುಂಪಿಗೆ ಸೇರಿದ್ದು ; ಅದೇ ಗುಂಪಿಗೆ ಸೇರಿದ ಮಾತುಗಳನ್ನು ಮಧ್ಯಪ್ರಾಂತ್ಯಗಳಲ್ಲಿರುವ ಸಂತಾಲರು, ಕೋಲರು, ಮುಂಡರು, ಸವರರು ಮುಂತಾದವರು ಆಡುತ್ತಾರೆ. ಆದ್ದರಿಂದ ಈ ಗುಂಪುಗಳಿಗೂ ಎರಡನೆ ಶಿಲಾಯುಗದ ಜನರಿಗೂ ಏನಾದರೂ ಸಂಬಂಧವಿದ್ದೀತೆಂದು ತೋರುತ್ತದೆ. ಪುರಾತನ ಶಿಲಾಯುಗದ ಜನರು ಈ ಎರಡನೆ ಶಿಲಾಯುಗದವರಿಗೆ ಸೋತುಹೋದಾಗ್ಯೂ ಅನೇಕೆಡೆಗಳಲ್ಲಿ ಅವರೊಡನೆ ಬೆರೆತರು. ಎಷ್ಟು ಕಾಲ ಈ ಮಿಶ್ರ ಗುಂಪು ಗಂಗಾ ಸಿಂಧು ನದಿಗಳ ಪ್ರದೇಶಗಳನ್ನು ಅನುಭವಿಸುತ್ತಿದ್ದರೋ ಹೇಳಲು ಶಕ್ಯವಿಲ್ಲ. ಕಾಲಕ್ರಮದಲ್ಲಿ ಅವರು ಫಲವತ್ತಾದ ನದೀಪ್ರದೇಶಗಳನ್ನು ಬೇರೆ ಹೊಸ ಜನರಿಗೆ ಬಿಟ್ಟು

ಕೊಟ್ಟು ತಾವು ವಿಂಧ್ಯಪರ್ವತ ಪ್ರಾಂತದ ಅರಣ್ಯಗಳನ್ನು ಸೇರಿಕೊಳ್ಳ ಬೇಕಾಯಿತು.

## ತಾಮ್ರ ಯುಗ

ಬೇರೆಯವರಾದ ಈ ಜನರು ತಾಮ್ರವನ್ನು ತಿಳಿದವರಾಗಿ ತಾಮ್ರದ ಆಯುಧಗಳನ್ನು ಉಪಯೋಗಿಸುತ್ತಲಿದ್ದರು. ಶಿಲಾ ಯುಗದ ಜನರಂತೆ ಇವರು ಕುಳ್ಳರಾಗಿಯೂ ಕಪ್ಪಾಗಿಯೂ ಇರಲಿಲ್ಲ; ಎತ್ತರವಾಗಿಯೂ ಬಿಳುಪಾಗಿಯೂ ಇದ್ದರು. ದೇಶದಲ್ಲಿ ಮೊದಲೇ ಇದ್ದ ಜನರನ್ನು ಬೆಟ್ಟ ಗುಡ್ಡಗಳಿಗೂ ಅರಣ್ಯಗಳಿಗೂ ಅಟ್ಟಿದಮೇಲೆ ಇವರು ಸಿಂಧು ಗಂಗಾ ನದಿಗಳ ಬಯಲಿನಲ್ಲಿ ನೆಲೆಸಿದರು. ಇವರ ಆಯುಧಗಳ ಮಾದರಿಗಳು ಆ ಮೈದಾನದ ಹಲವೆಡೆಗಳಲ್ಲಿ ದೊರೆತಿವೆ. ಇವರನ್ನು ಸೋಲಿಸಿ ನದೀಬಯಲುಗಳಿಂದ ಓಡಿಸಿದವರು ವಾಯವ್ಯ ಮಾರ್ಗಗಳಿಂದ ಪ್ರವೇಶಿಸಿದಂತಹ ದ್ರಾವಿಡರೆಂಬ ಜನರು. ಇವರು ನಾಗರಿಕತೆ ಪಡೆದಿದ್ದರು; ಪುರಾತನನಿವಾಸಿಗಳಲ್ಲಿ ಪ್ರಬಲರಾಗಿಯೂ ಜಾಣರಾಗಿಯೂ ಇದ್ದವರು. ದ್ರಾವಿಡರ ನಾಗರಿಕತೆಯೇ ನಮ್ಮ ದೇಶದಲ್ಲಿ ಮೊದಲು ತೋರಿಕೊಂಡ ಮಾನವಸಭ್ಯತೆ ಯೆನ್ನಬಹುದು.

## ದ್ರಾವಿಡರು

ಸಭ್ಯತೆ

ದ್ರಾವಿಡರಿಗೆ ಲೋಹಗಳು ತಿಳಿದಿದ್ದವು; ಅವರು ಉತ್ತಮ ತೆರದ ಆಯುಧಗಳನ್ನೂ ಚಿನ್ನದ ಆಭರಣಗಳನ್ನೂ ಮಾಡಿಕೊಳ್ಳಬಲ್ಲವರಾಗಿದ್ದರು. ಕಲ್ಲಿನಲ್ಲಿ ಮನೆ ಮಂದಿರಗಳನ್ನು ಕಟ್ಟಲು ಅವರಿಗೆ ಗೊತ್ತಿದ್ದಿತು. ಕಬ್ಬಿಣದ ಉಪಯೋಗವೂ ಅವರಿಗೆ ತಿಳಿದಿದ್ದಂತೆ ಕಾಣುತ್ತದೆ. ಬಾಬಿಲೋನಿಯಾ (ಬವೇರು) ಪ್ರದೇಶದಲ್ಲಿದ್ದ ಅತಿಪೂರ್ವ ನಿವಾಸಿಗಳಿಗೂ ದ್ರಾವಿಡರಿಗೂ ಸಂಬಂಧವಿದ್ದಂತೆ ಕಾಣುತ್ತದೆ. ಅವರಾಡುತಿದ್ದ ಭಾಷೆಗೂ ಶಿಲಾ ಯುಗದವರ ಅಥವಾ ತಾಮ್ರ ಯುಗದವರ ಭಾಷೆಗೂ ಸಂಬಂಧವಿರಲಿಲ್ಲ. ಅವರು ಮಣ್ಣಿನ ಪೆಟ್ಟಿಗೆಯಂತೆ ಮಾಡಿ ಅವುಗಳಲ್ಲಿ ಸತ್ತವರನ್ನು ಹೂಳಿಡುತ್ತಿದ್ದರು; ಅನೇಕ ದೇವತೆಗಳನ್ನು ಪೂಜಿಸುತ್ತಿದ್ದರು. ದೇಶದಲ್ಲಿ ಅವರು ನೆಲೆಸಿದ

ತರುವಾಯ ಸೋತುಹೋದ ಗುಂಪುಗಳ ಜನರು ಅವರನ್ನು ಅನುಕರಿಸಿದರು ; ದ್ರಾವಿಡರ ನಾಗರಿಕತೆಯೆಂಬುದು ವೃದ್ಧಿಯಾಯಿತು. ನದೀ ಬಯಲುಗಳನ್ನೆಲ್ಲವನ್ನೂ ಅವರು ಆಕ್ರಮಿಸಿದಮೇಲೆ ಸಮುದ್ರವನ್ನು ದಾಟಿ ಮಲಯದ್ವೀಪಗಳಿಗೂ ಫಿಲಿಪ್ಪೈನ್ ಮತ್ತು ಆಸ್ಟ್ರೇಲಿಯಾ ಭೂಭಾಗಗಳಿಗೂ ಹೊರಟು ಅಲ್ಲಿಯೂ ಇವರು ವ್ಯಾಪಿಸಿದರು. ಸಿಂಧು ಗಂಗಾ ಪ್ರದೇಶಗಳನ್ನು ಆರ್ಯರು ಆಕ್ರಮಿಸಿದ ತರುವಾಯ ದ್ರಾವಿಡರು ದಖನ್ನಿನಲ್ಲಿ ಹೆಚ್ಚಾಗಿ ಸೇರಿಕೊಂಡರು ; ಹಿಂದೂ ಸಾಗರದಲ್ಲಿರುವ ಭೂಪ್ರದೇಶಗಳಲ್ಲೆಲ್ಲ ಅವರೇ ಆಗಿದ್ದರು. ಆರ್ಯರ ಮತ್ತು ದ್ರಾವಿಡರ ಸಭ್ಯತೆಗಳು ಒಂದರೊಡನೊಂದು ಕಲೆತು ಏಕೀಭವಿಸಿದಮೇಲೆ ಭಾರತೀಯ ಸಭ್ಯತೆಯೆಂಬುದು ಹುಟ್ಟಿಕೊಂಡಿತಾದ ಕಾರಣದಿಂದ ದ್ರಾವಿಡ ಸಭ್ಯತೆಯ ವಿವರವು ಮುಖ್ಯವಾದುದು.

**ಭಾಷೆ**

ಬಲೂಚಿಸ್ಥಾನದೊಂದೆಡೆಯಲ್ಲಿ ಬ್ರಾಹ್ವಿ ಎಂಬ ಭಾಷೆಯನ್ನಾಡತಕ್ಕ ಜನರಿಗೂ ದ್ರಾವಿಡರಿಗೂ ಭಾಷಾ ಸಂಬಂಧ ತೋರುವುದರಿಂದ ವಾಯುವ್ಯ ಮಾರ್ಗವನ್ನು ಸಾಧಿಸಿಯೇ ದ್ರಾವಿಡರು ದೇಶದಲ್ಲಿ ನುಗ್ಗಿರಬೇಕೆಂದು ಪಂಡಿತರು ಸಿದ್ಧಾಂತ ಮಾಡಿರುವರು. ದ್ರಾವಿಡರು ದೇಶದಲ್ಲಿ ನುಗ್ಗಿ ಪುರಾತನ ನಿವಾಸಿಗಳನ್ನು ಸೋಲಿಸಿ ತಾವೇ ಯಜಮಾನರಾಗಿ ಕಾಲಕ್ರಮೇಣ ನಾಗರಿಕತೆಯಲ್ಲಿ ಅಭಿವೃದ್ಧಿಪಡೆದು ಇತರ ಜನರನ್ನು ತಮ್ಮಲ್ಲಿ ಕೂಡಿದ ಮಟ್ಟಿಗೆ ಸೇರಿಸಿಕೊಂಡರು. ಇವರಾಡುತ್ತಿದ್ದ ಭಾಷೆಯನ್ನು ಮೂಲದ್ರಾವಿಡವೆಂದು ಕರೆಯಬೇಕು. ಅವರ ಭಾಷೆಗೂ ಆರ್ಯಭಾಷೆಯಾದ ಸಂಸ್ಕೃತಕ್ಕೂ ಯಾವ ಸಂಬಂಧವೂ ಇರಲಿಲ್ಲ ; ದ್ರಾವಿಡರು ದಖನ್ನಿನಲ್ಲಿ ಸೇರಿಕೊಂಡಾಗ ಅವರ ಭಾಷೆಯು ದಕ್ಷಿಣದಲ್ಲಿಯೇ ಅಭಿವೃದ್ಧಿಹೊಂದಿ ಕಾಲಕ್ರಮೇಣ ಐದು ಶಾಖೆಗಳಾಗಿ ಒಡೆಯಿತು. ಈಗಿನ ತಮಿಳು, ಮಲೆಯಾಳ, ಕನ್ನಡ, ತೆಲುಗು, ತುಳು ಭಾಷೆಗಳೇ ಆ ಪಂಚದ್ರಾವಿಡ ಭಾಷೆಗಳು. ಅವುಗಳಲ್ಲಿ ತಮಿಳು ಭಾಷೆಯೇ ಪ್ರಾಚೀನವಾದುದರಿಂದ ಮೂಲದ್ರಾವಿಡ ಭಾಷೆಗೆ ಅದರ ಸಾಮೀಪ್ಯವೇ ಹೆಚ್ಚು. ಇತರ ಭಾಷೆಗಳಲ್ಲಿ ಆರ್ಯಭಾಷೆಯ ಪ್ರಭಾವವು ಹೆಚ್ಚು ಹೆಚ್ಚಾಗಿ ಕಾಣುವುದು.

ದ್ರಾವಿಡರು ದೇಶವನ್ನು ಪ್ರವೇಶಿಸಿದ ಕಾಲದಲ್ಲಿ ದೇಶವು ಘೋರವೂ ದಟ್ಟವೂ ಆದ ಅರಣ್ಯಗಳಿಂದಲೇ ಕೂಡಿತ್ತು. ನೆಲವು ಬಹು ಫಲವತ್ತಾಗಿದ್ದಿತು. ಚತುರರೂ ಸಾಹಸಿಗಳೂ ಆಗಿದ್ದ ಆ ಜನರು ಭೂಮಿಯನ್ನು ಉತ್ತು ಬಿತ್ತಿ ಬೆಳೆಯನ್ನು ಬೆಳೆಸಲು ಮೊದಲಿಟ್ಟು, ಗುಂಪು ಗುಂಪಾಗಿ ಸಂಚರಿಸಿ, ಅರಣ್ಯಗಳನ್ನು ನೆಲಸಮಮಾಡುತ್ತ ಮನೆಗಳನ್ನು ಕಟ್ಟುತ್ತ ಅಲ್ಲಲ್ಲಿ ಗ್ರಾಮಗಳನ್ನು ರಚಿಸಿಕೊಂಡರು. ಕೆಲವೆಡೆಗಳಲ್ಲಿ ತಮ್ಮ ಗ್ರಾಮಗಳಿಗೆ ಕೋಟೆಗಳನ್ನೂ ಕಟ್ಟಿಕೊಳ್ಳುತ್ತಿದ್ದರು. ಗ್ರಾಮಜೀವನವೆಂಬುದನ್ನು ಇವರೇ ದೇಶದಲ್ಲಿ ಪ್ರಾರಂಭಿಸಿದವರು. ಗ್ರಾಮದಲ್ಲಿದ್ದವರೆಲ್ಲರೂ ಅಣ್ಣತಮ್ಮಂದಿರಂತೆ ಇದ್ದು ಭೂಮಿಗಳನ್ನು ಸಮುದಾಯ ರೀತಿಯಲ್ಲಿಯೇ ಸಾಗುವಳಿ ಮಾಡುತ್ತಿದ್ದರು. ಇವರ ಮನೆಗಳಲ್ಲಿ ತಾಯಿಗೇ ಹೆಚ್ಚಿನ ಅಧಿಕಾರವಿದ್ದುದು; ತಂದೆಗಲ್ಲ. ಮಾತೃಪ್ರಧಾನವಾದ ಕುಟುಂಬವೇ ಮಾನವ ಚರಿತ್ರೆಯಲ್ಲಿ ಮೊದಲು; ಈಗಲೂ ಮಲೆಯಾಳ ಮುಂತಾದ ಪ್ರದೇಶಗಳಲ್ಲಿ ಮಾತೃಪ್ರಧಾನವಾದ ಕುಟುಂಬವೇ ಪದ್ಧತಿಯಾಗಿದೆ.

ಗ್ರಾಮ ರಚನೆ

ವ್ಯವಸಾಯವನ್ನಲ್ಲದೆ ದ್ರಾವಿಡರು ಇತರ ಉದ್ಯೋಗಗಳನ್ನೂ ಅವಲಂಬಿಸಿ ಚತುರತೆಯನ್ನು ಪಡೆದು ವ್ಯಾಪಾರವನ್ನು ಮೊದಲಿಟ್ಟು ಅದರಲ್ಲಿ ಸಾಹಸವನ್ನೂ ತೋರಿದರು. ಕಲ್ಲು, ಲೋಹ, ಮರ ಮತ್ತು ಚರ್ಮಗಳಲ್ಲಿ ನಾನಾ ವಿಧವಾದ ಆಯುಧಗಳನ್ನೂ ಪಾತ್ರೆಗಳನ್ನೂ ಒಡವೆಗಳನ್ನೂ ಸಿದ್ಧಮಾಡಿಕೊಳ್ಳುತ್ತಿದ್ದರು. ದೋಣಿಗಳನ್ನು ಕಟ್ಟಿಕೊಂಡು ನದಿಗಳ ಮೇಲೆ ಓಡಾಡಿ ಸಮುದ್ರ ತೀರಪ್ರದೇಶಗಳ ಪರಿಚಯವನ್ನು ಪಡೆದು, ಆ ತರುವಾಯ ಬಲವಾದ ಹಡಗುಗಳನ್ನು ಕಟ್ಟಿಕೊಂಡು ಸಮುದ್ರದಾಚೆ ಇರುವ ದೂರ ದೇಶಗಳಿಗೂ ಪ್ರಯಾಣಮಾಡಿ ವ್ಯಾಪಾರವನ್ನು ಬೆಳೆಸಿಕೊಂಡಿದ್ದರು. ಮಲಯದ್ವೀಪಗಳು, ಫಿಲಿಪೈನ್ ಮತ್ತು ಆಸ್ಟ್ರೇಲಿಯಾ ಪ್ರದೇಶಗಳು ಪೂರ್ವದಿಕ್ಕಿನಲ್ಲಿ ಅವರ ಸಂಬಂಧವನ್ನು ತೋರಿಕೊಡುವಂತೆಯೇ ಪಶ್ಚಿಮ ದಿಕ್ಕಿನಲ್ಲಿ ಈಜಿಪ್ಟ್, ಜುಡೇಯ ಮತ್ತು ಬಾಬಿಲೋನಿಯಗಳಲ್ಲಿ ಅವರ ಕುರುಹುಗಳು ಕಾಣಿಸಿವೆ. ಈ ಪಶ್ಚಿಮ ದಿಕ್ಕಿನ ರಾಜ್ಯಗಳಲ್ಲಿ ಅತಿಪೂರ್ವ

ಉದ್ಯೋಗ

ಕಾಲದಲ್ಲಿಯೇ ದ್ರಾವಿಡರು ವ್ಯಾಪಾರ ಮಾಡುತ್ತ ದಂತ, ತೇಗ, ವಾಸನಾ ದ್ರವ್ಯಗಳು, ಒಡವೆಗಳನ್ನು ಮಾರುತ್ತಲಿದ್ದರು.

**ವ್ಯಾಪಾರ**

ನಮ್ಮ ದೇಶದ ಹೊರಗಿನ ವ್ಯಾಪಾರವು ಅತಿ ಪುರಾತನ ಕಾಲದಲ್ಲಿಯೇ ಧೀರರಾಗಿದ್ದ ದ್ರಾವಿಡರಿಂದ ಮೊದಲಾಗಿ ಕಾಲಕ್ರಮದಲ್ಲಿ ಪ್ರಾಬಲ್ಯವನ್ನು ಪಡೆಯಿತು. ವ್ಯವಸಾಯ, ಕೈಗಾರಿಕೆ, ವ್ಯಾಪಾರಗಳಲ್ಲಿ ಮುಂದರಿದಿದ್ದ ದ್ರಾವಿಡ ಜನರು ಗ್ರಾಮಗಳನ್ನೇ ಅಲ್ಲದೆ ಚಿಕ್ಕ ಚಿಕ್ಕ ಪಟ್ಟಣಗಳನ್ನೂ ಕಟ್ಟಿಕೊಂಡಿದ್ದರು. ಪ್ರಾಚೀನ ನಗರಗಳಲ್ಲಿ ಪ್ರಸಿದ್ಧವಾದ ತಕ್ಷಶಿಲೆ, ಉಜ್ಜಯಿನಿ, ಪತ್ತಲ, ಭರುಕಚ್ಛಗಳು ಮೊದಲು ದ್ರಾವಿಡ

**ನಗರ ನಿರ್ಮಾಣ**

ನಿರ್ಮಾಣಗಳೇ ಎಂದು ಸಿದ್ಧಾಂತವಾಗಿದೆ. ದ್ರಾವಿಡ ಜನರು ಯುದ್ಧಪ್ರಿಯರಾಗಿದ್ದರು. ಬಿಲ್ಲು ಬಾಣಗಳನ್ನೂ, ಕತ್ತಿ ಭರ್ಜಿಗಳನ್ನೂ, ಕವಣೆಕಲ್ಲುಗಳನ್ನೂ ಉಪಯೋಗಿಸುತ್ತ ತಮ್ಮ ವೈರಿಗಳಿಗೆ ತೊಂದರೆ ಕೊಡುತ್ತಿದ್ದರು. ಆತ್ಮರಕ್ಷಣೆಗಾಗಿ ಅಪಾಯ ಸಮಯಗಳಲ್ಲಿ ಹಲಕೆಲವು ಗ್ರಾಮಗಳವರು ಒಟ್ಟುಗೂಡಿ ಒಬ್ಬ ನಾಯಕನನ್ನು ರಾಜನಂತೆ ಗೌರವಿಸಿ ಆತನನ್ನು ಮುಂದಿಟ್ಟು

**ಯುದ್ಧ ಪ್ರೀತಿ**

ಕೊಂಡು ಹೋರಾಡುತ್ತಿದ್ದರು. ಶತ್ರುಗಳ ಕಾಟವಿಲ್ಲದಿದ್ದಾಗ ಬೇಟೆಯಾಡುವುದರಲ್ಲಿಯೂ ಮೀನು ಹಿಡಿಯುವುದರಲ್ಲಿಯೂ ಗುಂಪು ಗುಂಪುಗಳಾಗಿ ತೊಡಗಿ, ಹಾಡುತ್ತ ಕುಣಿಯುತ್ತ ಜೀವನದಲ್ಲಿ ಉಲ್ಲಾಸ ಸಂತೋಷಗಳನ್ನು ಅನುಭವಿಸುತ್ತಿದ್ದರು. ಎತ್ತರವಾದ ಮರಗಳು, ಕತ್ತಲೆಯ ಗವಿಗಳು, ಅದ್ಭುತವಾದ ಬಂಡೆಗಳು, ಭಯಂಕರವಾದ ಸರ್ಪಗಳು ಮುಂತಾದ ಭೀಕರವಾದ ಪ್ರಕೃತಿಯ ದೃಶ್ಯಗಳನ್ನು ಕಂಡು ಅವರು ಅಂತಹ ಸ್ಥಳಗಳಲ್ಲಿ ದೇವತೆಗಳುಂಟೆಂದು ಭಾವಿಸುತ್ತಿದ್ದರು. ಸರ್ಪಗಳನ್ನೇ ಪೂಜಿಸುತ್ತಲಿದ್ದವರು ನಾಗ

**ದೇವತೆಗಳು**

ಕುಲದವರೆಂದು ಹೆಸರು ಪಡೆದರು. ಭೂಮಿಯೇ ಅವರೆಲ್ಲರಿಗೂ ಸಾಮಾನ್ಯವಾದ ದೇವತೆಯಾಗಿದ್ದಿತು; ಮತ್ತು ಗಂಭೀರವಾದ ಎಡೆಗಳಲ್ಲೆಲ್ಲ ಅವರು ವಿಸ್ಮಯವನ್ನೂ ಭಯವನ್ನೂ ಪಟ್ಟು ಅಲ್ಲಿಯ ದೇವತೆಗಳಿಗೆ ರಕ್ತಬಲಿಯನ್ನು ಕೊಡುತ್ತಿದ್ದರು. ಪ್ರತಿ

ಗ್ರಾಮಕ್ಕೂ ಗ್ರಾಮದೇವತೆ ಅಥವಾ ಸ್ಥಳದೇವತೆಯಿರುವುದು ದ್ರಾವಿಡರ ಕಾಲದಿಂದ ನಡೆದುಬಂದಿರುವ ಪದ್ಧತಿ. ಒಟ್ಟಿನಲ್ಲಿ ದ್ರಾವಿಡ ದೇವತೆಗಳು ಕ್ರೂರ ದೇವತೆಗಳು ; ಅವರ ಕ್ರೌರ್ಯವನ್ನು ನಿವಾರಿಸುವುದಕ್ಕಾಗಿಯೇ ಬಲಿಯನ್ನು ಸಮರ್ಪಿಸಿ ಅವರನ್ನು ಸಮಾಧಾನಸ್ಥಿತಿಯಲ್ಲಿಡಲು ಪ್ರಯತ್ನಿಸುತ್ತಿದ್ದರು.

## ಇತರ ಜನರು

ದ್ರಾವಿಡ ಜನರ ಗುಂಪಿನಲ್ಲಿ ಸೇರದೆ ಪ್ರತ್ಯೇಕರಾಗಿದ್ದ ಇತರ ಜನರೂ ದೇಶದಲ್ಲಿ ಅಲ್ಲಲ್ಲಿ ನೆಲೆಸಿದ್ದರು. ಎಲ್ಲರನ್ನೂ ಎದುರಿಸಿದ ಆರ್ಯರು ಅವರಲ್ಲಿ



3. ಮೊಹಂಜೊದಾರೊ ದೃಶ್ಯ

ನಾಗ, ಯಕ್ಷ, ನಿಷಾದ, ಶಬರ, ಪುಳಿಂದ, ನೀಚ್ಯ, ಅಪಾಚ್ಯ ಮುಂತಾದ ಕುಲಗಳನ್ನು ಒಂಗಡಿಸಿಕೊಂಡಿದ್ದರು. ಈ ಗುಂಪುಗಳು ಪ್ರಾಯಶಃ ಸಭ್ಯತೆಯಲ್ಲಿ ವಿಧವಿಧವಾಗಿದ್ದು ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆಸಿದ್ದವು. ಆರ್ಯರು ವಾಯವ್ಯ ಪ್ರಾಂತದಲ್ಲಿ ಪಿಶಾಚರೆಂಬ ಜನರೊಡನೆ ಕಾದಾಡಬೇಕಾಯಿತು. ಈ ಜನರು ಕ್ರೂರವಾದ ರೂಪವನ್ನು ಪಡೆದಿದ್ದುದಲ್ಲದೆ ಅಸಹ್ಯವಾದ ಆಚಾರಗಳನ್ನು ಅವಲಂಬಿಸುತ್ತಿದ್ದಾಗ್ಯೂ ಯಾವುದೋ ಒಂದು ಭಾಷೆಯನ್ನು ಅಭಿವೃದ್ಧಿ ಮಾಡಿಕೊಂಡಿದ್ದರು. ಎಷ್ಟೋ ಕಾಲದ ತರುವಾಯ ಸಂಸ್ಕೃತದಲ್ಲಿ ರೂಪಗೊಂಡ ಬೃಹತ್ಕಥಾ ಎಂಬ ಗ್ರಂಥವು ಮೊದಲು ಈ ಪಿಶಾಚ ಭಾಷೆಯಲ್ಲಿದ್ದಿತು. ಶಸ್ತ್ರ ಚಿಕಿತ್ಸೆಯ ವಿದ್ಯೆಯೂ ಪಿಶಾಚವೇದ ಎಂಬ ಹೆಸರನ್ನು ತಾಳಿ ಆ ಜನರ ಚತುರತೆಯನ್ನು ಸೂಚಿಸುತ್ತದೆ. ದೇಶದ ಫಲಪತ್ಪ್ರದೇಶಗಳಲ್ಲೆಲ್ಲ ನೆಲೆಯಾಗಿದ್ದ ಈ ವಿವಿಧ ಕುಲಗಳ ಜನರನ್ನು ಭಾರತೀಯರಿಗೂ ಐರೋಪ್ಯರಿಗೂ ಪೂರ್ವಿಕರಾದ ಆರ್ಯರು ಜಯಿಸಿ ದೇಶವನ್ನು ಆಕ್ರಮಿಸಿದರು. ಈ ಆರ್ಯ ಜನರೇ ಭಾರತೀಯ ಸಭ್ಯತೆಯ ಗುರುಗಳು. ಆರ್ಯರ ವೃತ್ತಾಂತವು ಪೌರಸ್ತ್ಯಪಾಶ್ಚಾತ್ಯರಿಬ್ಬರಿಗೂ ಅತ್ಯವಶ್ಯವಾದ ವಿಷಯ.

## ಮೊಹೆಂಜೊದಾರೊ, ಹರಪ್ಪ

ಇತ್ತೀಚೆಗೆ ಪ್ರಾಕ್ತನ ಪರೀಕ್ಷೆಯಲ್ಲಿ ಆಶ್ಚರ್ಯಕರವಾದ ಸಂಗತಿಗಳು ಕೆಲವು ಕಂಡುಬಂದವು. ಪಂಜಾಬು ಪ್ರಾಂತದ ಮಾಂಟ್ಗೊಮೆರಿ ಜಿಲ್ಲೆಯಲ್ಲಿ ರಾವಿ ನದಿಯ ತಟಪ್ರದೇಶದಲ್ಲಿ ಹರಪ್ಪ ಎಂಬೆಡೆಯಲ್ಲಿಯೂ ಸಿಂಧು ಪ್ರಾಂತದ ಲಾರ್ಕಾನಾ ಜಿಲ್ಲೆಯಲ್ಲಿ ಮೊಹೆಂಜೊದಾರೊ ಎಂಬೆಡೆಯಲ್ಲಿಯೂ ಭೂಗತವಾದ ಪುರಾತನ ನಗರಗಳು ಪ್ರಕಾಶವಾದವು. ಅಲ್ಲಿರುವುದು ಒಂದು ನಗರವಲ್ಲ; ನಗರದ ಮೇಲೆ ನಗರ. ಅಲ್ಲಿ ಸುಟ್ಟ ಇಟ್ಟಿಗೆಗಳಿಂದ ನಿರ್ಮಿತವಾದ ಮನೆ ಮಂದಿರ ದೇವಾಲಯಗಳೂ, ಆಶ್ಚರ್ಯಕರವಾದ ಚರಂಡಿಗಳ ಏರ್ಪಾಟೂ, ತಾಮ್ರ, ಸೀಸ, ಬೆಳ್ಳಿ, ಚಿನ್ನಗಳ ವಸ್ತುಗಳೂ, ಉತ್ಕೃಷ್ಟವಾದ ಅಲಂಕಾರದಿಂದ ಕೂಡಿದ ಆಟದ ಸಾಮಾನುಗಳೂ, ಆಭರಣಗಳೂ, ಯಾವುದೋ ಚಿತ್ರಲಿಪಿಯುಳ್ಳ ಮುದ್ರೆಗಳೂ ಕಂಡುಬಂದು

ಎಲ್ಲರನ್ನೂ ಬೆರಗುಗೊಳಿಸಿವೆ. ಆ ನಗರಗಳಲ್ಲಿ ಘನವಾದ ನಾಗರಿಕತೆಯು ಹೆಜ್ಜೆ ಹೆಜ್ಜೆಗೂ ವಸ್ತು ವಸ್ತುವಿನಲ್ಲಿಯೂ ಪ್ರಕಟವಾಗುತ್ತದೆ. ಪರೀಕ್ಷೆ ಮಾಡಿರುವ ಪಂಡಿತರು ಆ ನಾಗರಿಕತೆಯು ಕ್ರಿಸ್ತ ಪೂರ್ವ 3000 ವರ್ಷಗಳಿಗೆ



4. ಮೊಹೆಂಜೊದಾರೊ ವಸ್ತು ಚಿತ್ರ



5. ಮೊಹೆಂಜೊದಾರೊ ವಸ್ತು ಚಿತ್ರ

ಹಿಂದಿನದೇ ಹೊರತು ಈಚಿನದಲ್ಲವೆಂದು ಕಂಠೋಕ್ತವಾಗಿ ಅಭಿಪ್ರಾಯ ಪಟ್ಟಿದ್ದಾರೆ. ಆ ಪಟ್ಟಣಗಳನ್ನು ಕಟ್ಟಿದವರು ಯಾರು? ಯಾವ ಜನರದು ಆ ನಾಗರಿಕತೆ? ಅವರು ಆರ್ಯರೇ, ದ್ರಾವಿಡರೇ? ಎಂಬ ಪ್ರಶ್ನೆಗಳಿಗೆ



೬. ಮೊಹೆಂಜೊದಾರೊ ಮುದ್ರೆ

ಇದುವರೆಗೆ ಸಮಾಧಾನವು ಸಿದ್ಧವಾಗಿಲ್ಲ. ಪರೀಕ್ಷೆಯೂ ಆರಂಭದಲ್ಲಿರುವುದರಿಂದ ನಿಷ್ಕೃಷ್ಟವಾಗಿ ಏನು ಹೇಳುವುದಕ್ಕೂ ಕಷ್ಟವಾಗಿಯೇ ಇದೆ. ಕೆಲವು ಕುರುಹುಗಳಿಂದ ಆರ್ಯರು ದೇಶದಲ್ಲಿ ನೆಲೆಸಿದ ತರುವಾಯವೇ ಈ ನಗರಗಳು ತೋರಿಕೊಂಡಿರಬೇಕೆಂದು ಅನುಮಾನ ಹುಟ್ಟುವುದು. ಹೇಗಿದ್ದರೂ ಪ್ರಾಕ್ತನಪರೀಕ್ಷೆಯಲ್ಲಿ ಶಿಲಾ ಯುಗದ ಅವಶಿಷ್ಟಗಳನ್ನು ಬಿಟ್ಟರೆ ಅತಿಪ್ರಾಚೀನವೆನ್ನುವುದು ಈ ನಗರಗಳ ವಿಷಯವೇ ಆದುದರಿಂದ ಆರ್ಯರ ವೃತ್ತಾಂತವನ್ನು ಪ್ರಾರಂಭಿಸುವ ಮೊದಲೇ ಅದನ್ನು ಗುರುತಿಟ್ಟುಕೊಳ್ಳುವುದು ಉಚಿತ.

## ಆರ್ಯರ ಪ್ರವೇಶ

ಈಗಿನ ಕಾಶ್ಮೀರ ದೇಶದ ಪಶ್ಚಿಮ, ಉತ್ತರ ಮತ್ತು ಪೂರ್ವದಿಕ್ಕುಗಳ ಪ್ರದೇಶಗಳಲ್ಲಿ ಮೊದಲಿನಿಂದಲೂ ನೆಲೆಸಿದ್ದ ಆರ್ಯರೆಂಬ ಸುಪ್ರಸಿದ್ಧ ಜನರು ಸಾಹಸ ಪ್ರೀತಿಯಿಂದಲೋ ಸಂಖ್ಯಾವೃದ್ಧಿಯಿಂದಲೋ ತಮ್ಮ ನೆಲೆಯಲ್ಲಿ ನಡೆದ ಪ್ರಕೃತಿಭೇದದಿಂದಲೋ ಸಿಂಧು ಮತ್ತು ಅದರ ಉಪನದಿಗಳ ಪ್ರದೇಶಗಳಿಗೆ ನುಗ್ಗಿ ಆ ಪ್ರದೇಶಗಳಲ್ಲಿ ಮೊದಲೇ ನಿವಾಸಿಗಳಾಗಿದ್ದ ದ್ರಾವಿಡರೇ ಮುಂತಾದ ಜನರೊಡನೆ ಹೋರಾಡಿ ಆ ಭೂಭಾಗವನ್ನು ತಾವೇ ಆಕ್ರಮಿಸಿಕೊಂಡರು. ಅಲ್ಲಿದ್ದ ಜನರೆಲ್ಲರನ್ನೂ ಒಟ್ಟಿಗೆ ದಸ್ಯುಗಳೆಂಬುದಾಗಿ

ಆರ್ಯರು ಕರೆದರು. ದಸ್ಯು ಜನರು ತಮ್ಮ ಕೋಟೆಗಳನ್ನು ಭದ್ರಪಡಿಸಿಕೊಂಡು ಪ್ರಬಲವಾದ ಯುದ್ಧಗಳನ್ನೇ ನಡೆಸಿದರು. ಶಂಬರ, ದನು, ಕುಯವ ಮುಂತಾದ ದಸ್ಯು ರಾಜರು ಛಲದಿಂದ ಹೋರಾಡಿದರು. ಆರ್ಯರು ತಮ್ಮ ಕುಲಮುಖ್ಯರನ್ನು ಮುಂದಿಟ್ಟುಕೊಂಡು ಸಾಹಸದಿಂದ ಕಾದಾಡಿ ದಸ್ಯುಗಳನ್ನು ಸೋಲಿಸಿದರು. ದಭೀತಿಯೆಂಬ ಆರ್ಯ ನಾಯಕನು ಒಂದು ಸಲ 30,000 ದಸ್ಯುಗಳೊಡನೆ ಕಾದಿದನಂತೆ. ಋಜಿಸ್ವನ್ ಎಂಬ ಇನ್ನೊಬ್ಬಾತನು ನೂರು ಕೋಟೆಗಳನ್ನು ಸಾಧಿಸಿದನಂತೆ. ಕುತ್ಸನೆಂಬ ಆರ್ಯವೀರನು 50,000 ದಸ್ಯುಗಳನ್ನು ಯುದ್ಧದಲ್ಲಿ ಆಹುತಿಕೊಟ್ಟನಂತೆ. ಜೀವದ ಆಸೆಯನ್ನು ತೊರೆದು ದಸ್ಯುಗಳು ಉನ್ಮತ್ತರಂತೆ ಹೋರಾಡಿದರು. ಯುದ್ಧಭೂಮಿಗೆ ಅವರ ಸ್ತ್ರೀಯರೂ ಬಂದು ಹುರುಪಿನಿಂದ ಯುದ್ಧಮಾಡಿ ಮಡಿದರು. ಏನಾದರೂ ಸಹಜಧೀರರೂ ಬಲಿಷ್ಠರೂ ಆದ ಆರ್ಯರು ಪ್ರಸಿದ್ಧವೀರರಾದ ದಿವೋದಾಸ, ಸುದಾಸ, ಸುಶ್ರವಸ್, ಕುತ್ಸ ಮುಂತಾದವರ ನಾಯಕತ್ವದಲ್ಲಿ ಯುದ್ಧವನ್ನು ಮಾಡಿ, ದಸ್ಯುಗಳ ದುರ್ಗಗಳನ್ನು ಹಿಡಿದು ಸಿಂಧು ಮತ್ತು ಅದರ ಉಪನದಿಗಳ ಪ್ರಾಂತ (ಪಂಚನದ ಪ್ರಾಂತ)ವನ್ನು ಸ್ವಾಧೀನಪಡಿಸಿಕೊಂಡರು. ಪೂರು ಕುಲದವರು ಪರುಷ್ಣೀನದಿಯ ಉತ್ತರ ಪಾರ್ಶ್ವದಲ್ಲಿ ನೆಲೆಸಿದರು; ತ್ರಿತ್ಸು ಕುಲಸ್ಥರು ಶತದ್ರು ನದಿಯ ದಕ್ಷಿಣ ದಿಕ್ಕಿನಲ್ಲಿಯೂ, ತುರ್ವಶ ಮತ್ತು ಯದು ಕುಲಗಳವರು ಅವರಿಗೆ ಪಶ್ಚಿಮದಲ್ಲಿಯೂ ಕ್ಷೇತ್ರಗಳನ್ನು ಆಕ್ರಮಿಸಿದರು.

ಇದೇ ಆರ್ಯರ ಪ್ರವೇಶ ಮತ್ತು ಆಕ್ರಮಣ. ಈ ಪ್ರವೇಶವು ಕನಿಷ್ಠ ಪಕ್ಷ ಆರು ಸಾವಿರ ವರುಷಗಳ ಹಿಂದೆಯೇ ನಡೆದಿರಬೇಕು. ವಿದ್ವಾಂಸರು ಆರ್ಯರ ಪ್ರವೇಶವು ಕ್ರಿ. ಪೂ. 4,500ರ ವೇಳೆಗೆ ನಡೆದು ಹೋಗಿದ್ದಿರಬೇಕೆಂದು ಅಭಿಪ್ರಾಯಪಡುವರು. ಭಾರತೀಯ ವಿದ್ವಾಂಸರು ಈ ಘಟನೆಯು ಕ್ರಿ. ಪೂ. 15,000ದಷ್ಟು ಪ್ರಾಚೀನವೆಂದು ಪ್ರಮಾಣ ಪೂರ್ವಕವಾಗಿ ವಿಶದಗೊಳಿಸಿರುವರು. ವೇದಗಳ ಕಾಲವೆಂಬುದು ಕ್ರಿ. ಪೂ. 6,000ರಿಂದ ಪ್ರಾರಂಭವಾಯಿತೆಂದು ನಾವು ಸದ್ಯಃ ಭಾವಿಸಬಹುದು.

ಸ್ಫುರದ್ರೂಪಿಗಳೂ, ಉತ್ತಮ ವರ್ಣದವರೂ, ಆಜಾನುಬಾಹುಗಳೂ, ಧೀರರೂ, ಪ್ರಾಜ್ಞರೂ ಆದ ಆರ್ಯರು ಸಕಲ ಮಾನವರಾಶಿಗೇ ಆರ್ಯರು

ಅಥವಾ ಮಾನ್ಯರಾದವರು. ಪಾಶ್ಚಾತ್ಯ ದೇಶಗಳಲ್ಲಿ ಮೊದಲು ನಾಗರಿಕತೆಯು ತೋರಿಕೊಂಡ ಗ್ರೀಕ ಮತ್ತು ರೋಮಕ ರಾಷ್ಟ್ರಗಳಲ್ಲಿ ಆರ್ಯ ಶಾಖೆಗಳವರೇ ನಾಗರಿಕತೆಗೆ ಕಾರಣರು. ಪೌರಸ್ತ್ಯ ಪಾಶ್ಚಾತ್ಯ ಮಾನವವರ್ಗಗಳ ಸಾಧನೆಗೆ ಮೂಲ ಕಾರಣರೂ ಜನಕರೂ ಆದ ಈ ಆರ್ಯಜನರೆಂಬುವರು ಯಾರು? ಅವರ ಮೂಲ ವಾಸಸ್ಥಾನವು ಯಾವುದು? ಆ ಪ್ರದೇಶವನ್ನು ಅವರು ಯಾವಾಗ ಬಿಟ್ಟು ಹೊರಟರು? ಅವರಲ್ಲಿ ಶಾಖೆಗಳು ಏಂಗಡವಾದುದು ಯಾವಾಗ? ಎಂಬ ಪ್ರಶ್ನೆಗಳು ಎಲ್ಲ ವಿದ್ವಾಂಸರ ಚಿತ್ತವನ್ನು ಆಕರ್ಷಿಸಿ ವಿಧವಿಧವಾದ ಉತ್ತರಗಳನ್ನು ಪಡೆದಿವೆ. ಪಾಶ್ಚಾತ್ಯ ಪಂಡಿತರು ಕ್ರಮವಾಗಿ ಆಕ್ಸಸ್ ನದೀಪ್ರದೇಶ, ರಷ್ಯಾದೇಶದ ಉತ್ತರ ಭಾಗ, ಕ್ಯಾಸ್ಪಿಯನ್ ಸಮುದ್ರದ ಪಾರ್ಶ್ವ, ಯುರೋಪಿನ ಮಧ್ಯದಲ್ಲಿರುವ ಹಂಗೆರಿಯೆಂಬ ಮೈದಾನ ಪ್ರದೇಶಗಳನ್ನು ಸೂಚಿಸಿ ಸರ್ವರ ಸಮ್ಮತಿಯನ್ನು ಪಡೆಯದಾದರು. ಜ್ಯೋತಿಶ್ಶಾಸ್ತ್ರದ ಗಣನೆಯ ಆಧಾರದ ಮೇಲೆ ಲೋಕಮಾನ್ಯ ತಿಲಕರು ಉತ್ತರಮೇರುಪ್ರದೇಶವೇ ಆರ್ಯರ ಮೂಲನಿವಾಸಕ್ಷೇತ್ರವಾಗಿದ್ದಿತೆಂದೂ, ಅಲ್ಲಿಂದ ಅವರು ಉತ್ತರ ರಷ್ಯಾ, ಮಧ್ಯ ಏಷ್ಯಾ ಪ್ರದೇಶಗಳಲ್ಲಿ ಕಾಲ ಕಳೆದು ನಮ್ಮ ದೇಶವನ್ನು ಹೊಕ್ಕರೆಂದೂ ವಾದಿಸಿದರು. ಇತ್ತೀಚೆಗೆ ಭಾರತೀಯ ವಿದ್ವಾಂಸರು ಬಹುಮತವಾಗಿ ಹಿಮವತ್ಪರ್ವತದ ಪಶ್ಚಿಮಕ್ಷೇತ್ರ ಅಥವಾ ಕಾಶ್ಮೀರ ಪಾಮಿರ್ ಪ್ರದೇಶಗಳ ಒತ್ತಿನ ಪ್ರದೇಶವೇ ಆದಿಯಿಂದಲೂ ಆರ್ಯರ ಆವಾಸಸ್ಥಾನವಾಗಿದ್ದಿತೆಂದು ಅಭಿಪ್ರಾಯ ಪಟ್ಟಿದ್ದಾರೆ. ಹಂಗೆರಿ ಮೈದಾನದಿಂದ ಹೊರಟು ಪೂರ್ವದಿಕ್ಕಿನಲ್ಲಿ ಸಂಚಾರಮಾಡುತ್ತ ಆರ್ಯ ಶಾಖೆಗಳು ಗ್ರೀಸ್, ಮೆಸೊಪೊಟೋಮಿಯ, ಇರಾನ್ ಪ್ರದೇಶಗಳಲ್ಲಿ ನೆಲೆಯಾದುವೆಂದೂ ಕಡೆಯ ಶಾಖೆಯು ನಮ್ಮ ದೇಶದಲ್ಲಿ ಪ್ರವೇಶಮಾಡಿತೆಂದೂ ಪಾಶ್ಚಾತ್ಯ ಪಂಡಿತರು ವಿಶದಪಡಿಸುವ ವಾದಕ್ಕಿಂತಲೂ ಹಿಮವತ್ಪರ್ವತ ಪ್ರಾಂತದಿಂದ ಚಲಿಸಿ ಆರ್ಯರು ಸಿಂಧು ನದೀಪ್ರದೇಶಕ್ಕೆ ಬಂದರೆಂದೂ ಕೆಲವು ಶಾಖೆಗಳವರು ಕಾರಣಾಂತರದಿಂದ ಪಶ್ಚಿಮಕ್ಕೆ ಹೊರಟು ಇರಾನ್ ಪ್ರಸ್ಥಭೂಮಿ, ಮೆಸೊಪೊಟೇಮಿಯ ಮೈದಾನ, ಕ್ಯಾಸ್ಪಿಯನ್ ಪಾರ್ಶ್ವ, ಗ್ರೀಸ್, ಇಟಲಿ ಮುಂತಾದ ಕ್ಷೇತ್ರ

ಆರ್ಯರ ಮೂಲ

ಗಳಲ್ಲಿ ನೆಲೆಸಿದರೆಂದೂ ವಿವರಿಸುವ ಭಾರತೀಯ ಪಂಡಿತರ ವಾದವು ಕಾಲ ಗತಿಯ ಆನುಪೂರ್ವಿಗೆ ಸಮಂಜಸವಾಗಿರುವುದರಿಂದ ಒಪ್ಪತಕ್ಕದ್ದಾಗಿದೆ.

## ಆರ್ಯ ಶಾಖೆಗಳು

ಪ್ರಧಾನ ಶಾಖೆಯು ಸಿಂಧು ಪ್ರದೇಶದಲ್ಲಿ ನೆಲೆಸಿದಾಗ ಒಂದು ಶಾಖೆಯು ಪಡುವಲಲ್ಲಿ ಪ್ರಯಾಣಮಾಡಿ ಇರಾನ್ ಎಂಬ ಕ್ಷೇತ್ರದಲ್ಲಿ ನೆಲೆಸಿತು. ಪುರಾತನ ಇರಾನೀ ಜನರು ಆಕೃತಿ ರೂಪಗಳಲ್ಲಿ ಆರ್ಯ ರಂತೆಯೇ ಇದ್ದರು. ಅದೇ ಭಾಷೆಯನ್ನು ಆಡುತ್ತಿದ್ದರು. ಪುರೋಹಿತರ ಮಂತ್ರೋಚ್ಚಾರಣ ಸಹಿತವಾಗಿ ಅಗ್ನಿಯಲ್ಲಿ ಹೋಮಮಾಡಿ, ಋಗ್ವೇದ ದಲ್ಲಿ ಪ್ರಕಾಶರಾದ ದೇವತೆಗಳನ್ನೇ ಆರಾಧಿಸುತ್ತಿದ್ದರು. ಮಿತ್ರ, ವೃತ್ರಘ್ನ, ಹೋತೃ, ಆಹುತಿ ಮುಂತಾದ ಶಬ್ದಗಳು ಇರಾನೀ ಜನರ ವೇದಗ್ರಂಥ ವೆನಿಸಿದ ಜೆಂದ್ ಅವೆಸ್ತ (ಜಿಂದಬಸ್ತ) ಎಂಬುದರಲ್ಲಿ ಮಿಹ್ತ್ರ, ವೆರೆತ್ರಘ್ನ, ಜಓತರ್, ಅಸ್ಪೃತಿ ಮುಂತಾದ ಸಂಬಂಧಸೂಚಕರೂಪಗಳನ್ನು ಹೊಂದಿರುತ್ತವೆ. ದೇವ, ಅಸುರಗಳೆಂಬ ಶಬ್ದಗಳಿಗೆ ಇಬ್ಬರಲ್ಲಿಯೂ ವಿರೋಧಾರ್ಥಗಳುಂಟು; ಮತದಲ್ಲಿ ಯಾವುದೋ ಭೇದವು ಹುಟ್ಟಿ ಜಗಳ ವಾಗಿ ಬೇರೆ ಬೇರೆಯಾದರೆಂದು ಆ ಕಾರಣದಿಂದ ಕೆಲವರು ಅನುಮಾನ ಪಟ್ಟಿದ್ದಾರೆ. ಭಾಷೆಯಲ್ಲಿಯೂ ಆಚಾರ ವ್ಯವಹಾರಗಳಲ್ಲಿಯೂ ಇಷ್ಟು ಸಾಮೀಪ್ಯವನ್ನು ತೋರುವುದಕ್ಕೆ ಇರಾನೀ ಜನರು ಆರ್ಯರ ಗುಂಪಿಗೆ ಸೇರಿದ್ದು ಶಾಖೆಯಾಗಿ ಹೊರಟುದೇ ಕಾರಣ. ಏಷ್ಯಾಮೈನರ್ ಎಂದು ನಾವು ಈಗ ಕರೆಯುವ ಪ್ರದೇಶದಲ್ಲಿ ಪುರಾತನಕಾಲದ ಎರಡು ಲೇಖನಗಳು ಬೊಘೊಸ್‌ಕೋಯ್ ಮತ್ತು ಟೆಲ್ ಅಲ್ ಅಮಾರ ಎಂಬೆಡೆಗಳಲ್ಲಿ ಸಿಕ್ಕಿವೆ. ಅವುಗಳಲ್ಲಿಯೂ ಆರ್ಯ ಸಂಬಂಧವು ತೋರಿದೆ. ಅದರಂತೆಯೇ ಗ್ರೀಸ್ ದೇಶದಲ್ಲಿಯೂ ಆರ್ಯರ ಶಾಖೆಯೇ ನೆಲೆಸಿತೆಂಬುದು ಸಿದ್ಧಾಂತ ವಾಗುತ್ತದೆ. ಈ ಕಾರಣದಿಂದ ಪ್ರಾಚೀನಕಾಲದಲ್ಲಿ ನಾಲ್ಕು ಆರ್ಯಾವರ್ತ ಗಳಿದ್ದವೆಂದು ಕೆಲವರು ಉದ್ಘೋಷಿಸುತ್ತಾರೆ. ಆರ್ಯಾವರ್ತವೆಂದರೆ ಆರ್ಯರ ನೆಲೆಯೆಂಬ ಸಾಮಾನ್ಯ ಅರ್ಥವನ್ನೇ ಇಟ್ಟು ನೋಡಿದಲ್ಲಿ ಸಿಂಧು ನದಿ ಪ್ರದೇಶ, ಇರಾನ್ ಪ್ರಸ್ಥಭೂಮಿ, ಮೆಸೊಪೊಟೇಮಿಯ,

ಯುರೋಪಿನ ನೈಋತ್ಯ ಭಾಗಗಳು ಆರ್ಯರ ಬಿಡಾರಗಳಾಗಿ ಆರ್ಯಾವರ್ತವೆಂಬ ಹೆಸರಿಗೆ ಯೋಗ್ಯಗಳಾಗುವುವು. ಆದರೆ ಆರ್ಯಾವರ್ತವೆಂಬ ಹೆಸರನ್ನು ನಮ್ಮ ದೇಶಕ್ಕೇ ಹೆಸರಾಗಿ ಉಪಯೋಗಿಸುವುದು ವಾಡಿಕೆ.

## ಆರ್ಯ ಕಾಲ ವಿಭಾಗಗಳು

ದಸ್ಯುಗಳ ಪರಾಭವದಿಂದ ಆರ್ಯರ ಕಾಲವೆನ್ನುವುದು ನಮ್ಮ ದೇಶದ ಇತಿಹಾಸದಲ್ಲಿ ಪ್ರಾರಂಭವಾಗುತ್ತದೆ. ಆರ್ಯರ ಕಾಲದ ಚರಿತ್ರೆಗೆ ಗ್ರಂಥರಾಶಿಯೇ ಆಧಾರ; ಪ್ರಾಕ್ತನ ಪರೀಕ್ಷೆಯಿಂದ ಯಾವ ಸಹಾಯವೂ ಒದಗಿಲ್ಲ. ಈ ಕಾರಣದಿಂದ ಬುದ್ಧಪೂರ್ವವಾದ ಗ್ರಂಥಗಳೆಲ್ಲವನ್ನೂ ಒಂದು ರಾಶಿಯಾಗಿ ಕಂಡು ಅವುಗಳಿಂದ ಲಬ್ಧವಾದ ವಿವರವನ್ನು ಚರಿತ್ರೆಯಲ್ಲಿ ಕಾಣಿಸಬೇಕು. ಆ ಗ್ರಂಥಗಳ ಭಾಷೆಯು ಆರ್ಯಭಾಷೆಯಾದ ಸಂಸ್ಕೃತವೇ. ಆ ಗ್ರಂಥಗಳನ್ನು ಶ್ರುತಿ ಸ್ಮೃತಿಗಳೆಂದು ಸಾಮಾನ್ಯವಾಗಿ ಕರೆಯುವುದುಂಟು. ಅವುಗಳಲ್ಲಿ ಸಂಹಿತೆಗಳು, ಬ್ರಾಹ್ಮಣಗಳು, ಆರಣ್ಯಕಗಳು, ಉಪನಿಷತ್ತುಗಳು ಎಂದೂ, ಸ್ಮೃತಿಗಳು, ಮಹಾಕಾವ್ಯಗಳು, ಸೂತ್ರಗಳು ಎಂದೂ ಮುಖ್ಯ ವಿಭಾಗಗಳು. ನಾಲ್ಕೈದು ಸಾವಿರ ವರ್ಷಗಳಷ್ಟು ದೀರ್ಘಕಾಲಕ್ಕೆ ಸಂಬಂಧಪಟ್ಟವುಗಳಾಗಿ ಅಲ್ಲಲ್ಲಿ ಇತಿಹಾಸೋಪಯುಕ್ತವಾದ ವಿವರಗಳನ್ನೊಳಗೊಂಡಿರುವ ಈ ಗ್ರಂಥ ರಾಶಿಯೇ ಹಿಂದೂ ಜನರ ಸರ್ವಸ್ವವೆನ್ನಬಹುದಾಗಿದೆ. ಅವರ ನಾಗರಿಕತೆಗೆ ಅವೇ ಮೂಲ ಮತ್ತು ಹೃದಯ. ಅನೇಕ ಕಾಲ ಅವುಗಳು ಗ್ರಂಥರೂಪವನ್ನೇ ಹೊಂದದೆ ಪರಂಪರೆಯಾಗಿ ಕಂಠಪಾಠ ವಿಧಾನದಿಂದಲೇ ರಕ್ಷಿತವಾದವುಗಳು. ಅವುಗಳಲ್ಲಿ ಮೊದಲಿನವು ಯಾವುವು, ಆಮೇಲಿನವು ಯಾವುವು ಎಂಬ ಕಾಲಕ್ರಮವನ್ನು ನಿರ್ಣಯಿಸಿ ಆ ಕ್ರಮವನ್ನನುಸರಿಸಿ ಮುಖ್ಯ ವಿಭಾಗಗಳನ್ನು ಮಾಡಿರುತ್ತಾರೆ. ಅವುಗಳಲ್ಲಿ ಸಂಹಿತೆಗಳು ಮೊದಲು, ತರುವಾಯ ಬ್ರಾಹ್ಮಣಗಳು, ಆರಣ್ಯಕಗಳು, ಉಪನಿಷತ್ತುಗಳು ಸಿದ್ಧವಾದವು. ಆದ್ದರಿಂದ ಮೊದಲನೆಯ ವಿಭಾಗಕ್ಕೆ ಮಂತ್ರಗಳ ಕಾಲ ಅಥವಾ ಸಂಹಿತೆಗಳ ಕಾಲ, ಅಥವಾ ಸಪ್ತಸಿಂಧುವಿನಲ್ಲಿ ಆರ್ಯರು ನೆಲೆಸಿದ್ದ ಕಾಲ, ಅಥವಾ ಸುಲಭ ರೀತಿಯಲ್ಲಿ ಮಹರ್ಷಿಗಳ ಕಾಲವೆಂಬ ಹೆಸರನ್ನಿಟ್ಟುಕೊಳ್ಳಬಹುದು.

---

# ಬುದ್ಧ ಪೂರ್ವ ಗ್ರಂಥರಾಶಿ

ಶ್ರುತಿ ಸ್ಮೃತಿಗಳೆಂಬ ಈ ರಾಶಿಯಲ್ಲಿ ಶ್ರುತಿಯೆಂಬುದು ಋಷಿಗಳಿಗೆ ಗೋಚರವಾಗಿ ಅವರಿಂದ ಸಂಗ್ರಹವಾದ ಪರಮಪವಿತ್ರವಾದ ಭಾಗ. ಸಂಹಿತೆಗಳು, ಬ್ರಾಹ್ಮಣಗಳು, ಆರಣ್ಯಕಗಳು, ಉಪನಿಷತ್ತುಗಳು—ಶ್ರುತಿ ಭಾಗಗಳು, ಇವುಗಳೆಲ್ಲಕ್ಕೂ ವೇದವೆಂದು ಹೆಸರು.

ಸಂಹಿತೆಗಳೆನ್ನುವುದು ಋಷಿಗಳ ಮುಖದಿಂದ ಬಂದ ಮಂತ್ರಗಳಿಂದಲೇ ಕೂಡಿದ್ದು. ಮೊದಲು ಸಂಹಿತೆಗಳು ಮೂರೇ—ಋಕ್, ಯಜುಸ್ ಮತ್ತು ಸಾಮ ಸಂಹಿತೆಗಳು. ಅಥರ್ವವೆಂಬುದು ಕೆಲವು ಕಾಲವಾದ ಮೇಲೆ ಸಂಹಿತೆಯಾಗಿ ಗೌರವಕ್ಕೆ ಪಾತ್ರವಾಯಿತು. ಮೊದಮೊದಲು ಅದನ್ನು ಉಪವೇದವೆಂದೇ ಭಾವಿಸುತ್ತಿದ್ದರು. ಸಂಹಿತೆಗಳಲ್ಲಿ ಮೊದಲಿನದು ಋಕ್ಸಂಹಿತೆ; ಅದರಲ್ಲಿ 1028 ಸ್ತೋತ್ರಗಳುಂಟು; ಅವುಗಳನ್ನು 10 ಮಂಡಲಗಳಾಗಿಯೂ, ಪ್ರತಿಮಂಡಲವನ್ನು ಅನುವಾಕ, ಸೂಕ್ತ ಮುಂತಾದ ವಿಭಾಗಗಳಾಗಿಯೂ ಅಧ್ಯಯನ ಮಾಡುತ್ತಾರೆ. ಯಜುಸ್ಸಂಹಿತೆಯೆಂಬುದು ಎರಡನೆಯದು; ಅದರಲ್ಲಿ ತೈತ್ತಿರೀಯ ಅಥವಾ ಕೃಷ್ಣ, ಮತ್ತು ವಾಜಸನೇಯ ಅಥವಾ ಶುಕ್ಲಗಳೆಂದು ಎರಡು ಭಾಗಗಳು; ಅವುಗಳಲ್ಲಿ ಯಜ್ಞವಿಚಾರವೇ ಪ್ರಧಾನವಾದುದು. ಮೂರನೆಯದಾದ ಸಾಮಸಂಹಿತೆಯು ಗಾನಕ್ಕೆ ಉದ್ದಿಷ್ಟವಾದುದು. ಈ ಮೂರೂ ತ್ರಯೀ ವಿದ್ಯಾ ಎಂದು ಮೊದಲು ಪ್ರಸಿದ್ಧವಾಗಿತ್ತು. ಕೆಲಕಾಲದ ಮೇಲೆ ಭೂತವಿದ್ಯೆಯನ್ನೂ ಇತರ ಶಾಸ್ತ್ರಗಳ ವಿಚಾರವನ್ನೂ ಒಳಗೊಂಡ ಅಥರ್ವವೆಂಬುದೂ ಸಂಹಿತೆಯೆಂದು ಎಣಿಕೆಯಾಯಿತು.

ಬ್ರಾಹ್ಮಣಗಳೆಂಬುವು ಯಜ್ಞಯಾಗಾದಿಗಳ ಕ್ರಮವನ್ನು ವಿವರಿಸುವ ಗದ್ಯ ಗ್ರಂಥಗಳು. ಸಾಧಾರಣವಾಗಿ ಬ್ರಾಹ್ಮಣಗಳು ಸಂಹಿತೆಗಳಿಗೆ ಸಹಾಯಕವಾದ ವಿಭಾಗಗಳಾಗಿವೆ. ಮೂರು ಮುಖ್ಯ ಸಂಹಿತೆಗಳಿಗೂ ಪ್ರತ್ಯೇಕವಾದ ಬ್ರಾಹ್ಮಣಗಳುಂಟು. ಆರಣ್ಯಕಗಳೂ ಬ್ರಾಹ್ಮಣಗಳಂತೆಯೇ; ಅವುಗಳನ್ನು ಅರಣ್ಯಗಳಲ್ಲಿಯೇ ಹೇಳಿಕೊಂಡದ್ದರಿಂದ ಆ ಹೆಸರು. ಸಾಮಾನ್ಯವಾಗಿ ಅವು ತಪಸ್ಸಿನ ಕ್ರಮವನ್ನು ವಿವರಿಸುತ್ತವೆಂದು ಹೇಳಬಹುದು. ಉಪನಿಷತ್ತುಗಳೆಂಬುವು ಗುರುಮುಖದಿಂದಲೇ ಕಲಿಯತಕ್ಕ ರಹಸ್ಯ ವಿದ್ಯೆ; ತತ್ತ್ವ ವಿಚಾರವೇ ಅವುಗಳಲ್ಲಿ ಪ್ರಧಾನ. 108 ಉಪನಿಷತ್ತುಗಳೆಂದು ಗಣನೆಯಿದ್ದರೂ ಮುಖ್ಯವೂ ಪ್ರಾಚೀನವೂ ಆದವು 18; ಅವು ಗುರುಶಿಷ್ಯರ ಸಂಭಾಷಣೆಯ ರೂಪದಲ್ಲಿದ್ದು ಅಮೋಘವೆನಿಸಿರುವ ತತ್ತ್ವ ವಿಚಾರವನ್ನು ಒಳಗೊಂಡಿವೆ. ಅವುಗಳೆಲ್ಲಕ್ಕೂ ವೇದಾಂತ ಅಥವಾ ಜ್ಞಾನದ ಕೊನೆ ಅಥವಾ ಜ್ಞಾನದ ಗುರಿಯೆಂಬ ಅರ್ಥವುಳ್ಳ ಹೆಸರು ಸಾಮಾನ್ಯ. ಬ್ರಾಹ್ಮಣಗಳಿಗೆ ಕರ್ಮಕಾಂಡವೆಂದೂ ಉಪನಿಷತ್ತುಗಳಿಗೆ ಜ್ಞಾನಕಾಂಡವೆಂದೂ ಬೇರೆ ಹೆಸರುಗಳೂ ರೂಢಿಯಲ್ಲುಂಟು.

ಇವುಗಳಿಗೆ ಸಂಬಂಧಿಸಿದವುಗಳಾಗಿ ಬೇರೆ ಎರಡು ರಾಶಿಗಳುಂಟು. ಯಾವುವೆಂದರೆ ಉಪವೇದಗಳು ಮತ್ತು ಷಡಂಗಗಳು. ಧನುರ್ವೇದ, ಆಯುರ್ವೇದ, ಗಾಂಧರ್ವವೇದ, ಅಥರ್ವವೇದಗಳೆಂಬವು ನಾಲ್ಕು ಉಪವೇದಗಳು. ಷಡಂಗಗಳೆನಿಸಿದ ಶಿಕ್ಷಾ, ವ್ಯಾಕರಣ,

ನಿರುಕ್ತ, ಛಂದಸ್, ಜ್ಯೋತಿಷ ಮತ್ತು ಕಲ್ಪವೆಂಬವು ಸ್ಮೃತಿ ಭಾಗವನ್ನು ವ್ಯಾಸಂಗ ಮಾಡಲು ಸಹಾಯಕ ಗ್ರಂಥಗಳು. ಇವೆರಡೂ ಶಾಸ್ತ್ರ (Science) ಗಳ ಮೊಟ್ಟಮೊದಲಿನ ರೂಪಗಳು.

ಇವೆಲ್ಲವೂ ಒಂದೇ ಕಾಲದವುಗಳಲ್ಲ. ಋಕ್ಸಂಹಿತೆಯೇ ಅತಿ ಪ್ರಾಚೀನವಾದಂತೆ ಐತರೇಯಬ್ರಾಹ್ಮಣವೆಂಬುದೂ ಅತಿ ಪ್ರಾಚೀನವೇ. ಸಾಧಾರಣವಾಗಿ ಸಂಹಿತೆಗಳು ಮೊದಲು, ತರುವಾಯ ಅನ್ಯ ಗ್ರಂಥಗಳು ಎಂಬುದು ಸರ್ವವಾದವಾದ ಅಂಶ. ಕಾಲ ವಿಭಾಗದಲ್ಲಿ ಮೊದಲಿನ ಕಾಲಕ್ಕೆ ಸಂಬಂಧಿಸಿದವು ಸಂಹಿತೆಗಳು. ಎರಡನೆ ವಿಭಾಗವನ್ನು ಬ್ರಾಹ್ಮಣಗಳ ಕಾಲವೆಂದು ಕರೆಯುವುದುಂಟು. ಈ ಬ್ರಾಹ್ಮಣಗಳ ಕಾಲದೊಳಗೇ ಮಹಾಕಾವ್ಯಗಳಾದ ರಾಮಾಯಣ ಮಹಾಭಾರತಗಳಲ್ಲಿಯೂ ಅತಿಪ್ರಾಚೀನವೆಂಬುದಾಗಿ ಪುರಾಣಗಳಲ್ಲಿಯೂ ವಿವರಿಸಿರುವ ಸಂಗತಿಗಳು ಪ್ರಾರಂಭವಾದವು. ಆದ್ದರಿಂದ ಬ್ರಾಹ್ಮಣಗಳ ಕಾಲವು ಮುಗಿಯುವುದರೊಳಗಾಗಿಯೇ ಮಹಾಕಾವ್ಯಗಳ ಕಾಲ ಅಥವಾ ಸಾರ್ವಭೌಮರ ಕಾಲವೆನ್ನುವುದು ಪ್ರಾರಂಭವಾಯಿತು. ಮಹಾಭಾರತದಲ್ಲಿ ವರ್ಣಿತವಾಗಿರುವ ಕುರುಕ್ಷೇತ್ರ ಯುದ್ಧದ ತರುವಾಯ ಬುದ್ಧ ಜನ್ಮದವರೆಗೆ ನಡೆದ ಕಾಲಕ್ಕೆ ಸೂತ್ರಗಳ ಕಾಲವೆಂದು ಸಾಧಾರಣವಾದ ಹೆಸರು.

ವೇದವೆಂಬ ಶಬ್ದವು ವಿದ್ ಎಂಬ ಧಾತುವಿನಿಂದ ಹುಟ್ಟಿದ್ದು; ಜ್ಞಾನ, ಅರಿವು ಎಂಬುದು ಅದರ ಅರ್ಥ. ಪ್ರಮಾಣಭೂತವಾದುದಕ್ಕೆ ವೇದ ಎಂಬ ಹೆಸರು ಸಲ್ಲುವುದು. ವೇದವೆಂಬುದು ನಿತ್ಯವಾದ, ಸತ್ಯವಾದ, ಅನಂತವಾದ ಜ್ಞಾನರಾಶಿ. ಸತ್ಯಲೋಕದಲ್ಲಿ ಋಷಿಗಳಿಂದ ಸ್ತುತ್ಯನಾದ ಬ್ರಹ್ಮನಿಗೆ ನಾಲ್ಕು ಮುಖಗಳಿರುವುದೂ, ಸರಸ್ವತಿಯು ಮಗಳಾಗಿ ವೇದಮಾತೆಯಾದುದೂ ಭಾವಗರ್ಭಿತವಾದ ಮತ್ತು ಗೂಢವಾದ ಅರ್ಥವುಳ್ಳ ವಿವರಗಳು. ವೇದಗಳು ಅನಂತವೆಂಬುದೂ, ಋಷಿಗಳೂ ದೇವತೆಗಳೂ ಸದಾ ವೇದಗಳನ್ನು ಸಂರಕ್ಷಣೆ ಮಾಡಲುದ್ಯುಕ್ತರಾಗಿರುವರೆಂಬುದೂ, ವೇದವೆಂಬುದು ದೇವತೆಗಳಿಗೂ ಕೂಡ ಪೂಜ್ಯವಾದುದೆಂಬುದೂ ಹಾಗೆಯೇ ಅರ್ಥಗರ್ಭಿತವಾದವುಗಳು.

---

# ಪ್ರಥಮ ಕಲ್ಲೋಲ

## ಆರ್ಯ ಜ್ಯೇಷ್ಠರ ಕಾಲ

1. ಮಹರ್ಷಿಗಳ ಕಾಲ.

2. ಬ್ರಹ್ಮರ್ಷಿ ಸಾರ್ವಭೌಮರ ಕಾಲ.

3. ಸೂತ್ರಕಾರರ ಕಾಲ.

# ಮಹರ್ಷಿಗಳ ಕಾಲ

[ಅಥವಾ ಮಂತ್ರಗಳ ಕಾಲ, ಸಂಹಿತೆಗಳ ಕಾಲ, ಋಕ್ಕುಗಳ ಕಾಲ, ಸಪ್ತಸಿಂಧುವಿನಲ್ಲಿ ಮಾತ್ರವೇ ಆರ್ಯರು ನೆಲೆಸಿದ್ದ ಕಾಲ, ಅಥವಾ ವೇದಗಳ ಕಾಲ.]

(ಕ್ರಿ. ಪೂ. ಸುಮಾರು 6000 ದಿಂದ 3500 ರ ವರೆಗೆ.)

1. ಸಪ್ತಸಿಂಧು—ಆರ್ಯರ ನೆಲೆ, ಕುಲಕಲಹಗಳು, ಅನಾರ್ಯರು. 2. ರಾಜಕೀಯ ಜೀವನ—ಕುಲ, ಕುಲನಾಯಕ, ರಾಜನ್, ಸಮಿತಿ, ರಾಜತ್ವ, ಋಷಿಜನ, ಪ್ರಸಿದ್ಧ ಋಷಿಗಳು. 3. ಆರ್ಥಿಕ ರೀತಿ—ವ್ಯವಸಾಯ, ಪಶುಪಾಲನೆ, ಕಸಬು, ವ್ಯಾಪಾರ. 4. ಸಾಮಾಜಿಕ ನೀತಿ—ಗೃಹ, ಆಹಾರ, ಉಡುಗೆ, ಸ್ತ್ರೀಯರ ಪದವಿ, ವಿವಾಹ, ವಿನೋದಗಳು, ಹಬ್ಬಗಳು, ದ್ಯೂತ, ಸವರ್ಣರು, ಅವರ್ಣರು. 5. ಧಾರ್ಮಿಕ ರೀತಿ—ದೇವತೆಗಳು, ಯಜ್ಞಗಳು, ತತ್ವವಿಚಾರ, ತಪೋವನ, ಶಾಸ್ತ್ರ ವೃದ್ಧಿ, ಶಿಕ್ಷಣ.

### ಮಹಾಪುರುಷರು

ಆರ್ಯ ಕುಲನಾಯಕರು — ಸಪ್ತರ್ಷಿಗಳು

## ಸಪ್ತಸಿಂಧು

ಆರ್ಯರ ನೆಲೆ

ಧೀರರೂ ಸಾಹಸಿಗಳೂ ಯುದ್ಧಪ್ರಿಯರೂ ಎತ್ತರವಾದ ಆಕೃತಿಯುಳ್ಳವರೂ ಆಗಿದ್ದ ಆರ್ಯರು ದಸ್ಯುಗಳನ್ನು ಸೋಲಿಸಿ ಸಿಂಧು ಮತ್ತು ಅದರ ಉಪನದಿಗಳ ಪ್ರಾಂತವನ್ನು ಆಕ್ರಮಿಸಿದ ಮೊದಲೇ ಅಲ್ಲಿದ್ದವರಲ್ಲಿ ಅನೇಕರು ಆ ಪ್ರಾಂತವನ್ನೇ ಬಿಟ್ಟು ಗಂಗಾನದಿಯ ಬಯಲ ಕಡೆಗೆ ಹೊರಟರು; ಇತರರು ಅಲ್ಲಿಯೇ ಸೋತು ಉಳಿದುಕೊಂಡರು. ಜಯಶಾಲಿಗಳಾದ ಆರ್ಯರು ಅಲ್ಲಿಯೇ ನೆಲೆಸಿದರು. ಆ ನೆಲೆಗೆ ಅವರು ಸಪ್ತಸಿಂಧು ಅಥವಾ ಏಳು ವಿಶಾಲ ನದಿಗಳು ಹರಿಯುವ ಪ್ರದೇಶವೆಂದು ಹೆಸರಿಟ್ಟರು. ಹಿಮವಂತ, ಮಘವಂತ, ತ್ರಿಕೂಟಗಳೆಂಬ ಪರ್ವತಗಳು ಆ ಪ್ರಾಂತದ ಉತ್ತರ ಭಾಗದಲ್ಲಿದ್ದವು. ಬಲಗಡೆ ಕುಭಾ (Kabul), ಗೋಮತಿ

(Gomal), ಸುವಾಸ್ತು (Swat), ಕ್ರುಮು (Krum) ಎಂಬ ಉಪನದಿಗಳನ್ನೂ, ಎಡಗಡೆ ವಿತಸ್ತಾ (Jhelum), ಅಸಿಕ್ನೀ ಅಥವಾ ಚಂದ್ರಭಾಗಾ (Chinab), ಇರಾವತಿ ಅಥವಾ ಪರುಷ್ಣೀ (Ravi), ವೇಪಸೀ (Beas) ಮತ್ತು ಶತದ್ರು (Sutlej) ಗಳೆಂಬ ಉಪನದಿಗಳನ್ನೂ ಪಡೆದು ಗಂಭೀರವಾಗಿ ಹರಿಯುತ್ತಿದ್ದ ಸಿಂಧುನದಿಯಲ್ಲದೆ ಮರುದ್ವೃಧಾ, ಆರ್ಜೀಕೀಯಾ, ಸುಷೋಮಾ, ಸರಸ್ವತೀ, ಧೃಷದ್ವತೀ, ಯಮುನಾ, ಗಂಗಾ ನದಿಗಳು ಆ ಸಪ್ತಸಿಂಧುವಿನಲ್ಲಿ ಪ್ರವಹಿಸುತ್ತಿದ್ದವು. ದೇಶದಲ್ಲಿ ನಿಬಿಡವಾದ ಅರಣ್ಯಗಳು ಅಶ್ವತ್ಥ, ಬಿಲ್ವ, ಶಾಲ್ಮಲಿ, ಖಾದಿರ, ದೇವದಾರು, ಪಲಾಶ, ಉದುಂಬರ ಮುಂತಾದ ವೃಕ್ಷಸಮುದಾಯಗಳಿಂದಲೂ ಹಸ್ತಿ, ಸಿಂಹ, ವರಾಹ, ವೃಷಭ, ಕೃಷ್ಣಸಾರ ಮುಂತಾದ ಮೃಗಗಳಿಂದಲೂ ತುಂಬಿ ಪ್ರಕೃತಿಯ ಗಾಂಭೀರ್ಯವನ್ನೂ ಐಶ್ವರ್ಯವನ್ನೂ ಹೊತ್ತಿದ್ದವು. ನೆಲವು ಫಲವತ್ತಾಗಿತ್ತು; ನೆಲದೊಳಗೆ ಲೋಹರಾಶಿಗಳು ಸಮೃದ್ಧವಾಗಿಯೇ ಅಡಗಿದ್ದವು. ಬೇಟೆಯಲ್ಲಿ ನಿಪುಣರಾಗಿ ಪಶುಪಾಲನೆಯನ್ನೇ ಮುಖ್ಯೋದ್ಯೋಗವನ್ನಾಗಿ ಅವಲಂಬಿಸಿದ್ದ ಆರ್ಯಜನರು ಈ ನದೀ ಪ್ರದೇಶಗಳನ್ನು ಸ್ವಾಧೀನಪಡಿಸಿಕೊಂಡ ತರುವಾಯ ಅನುಕೂಲವಾದ ಮತ್ತು ಸ್ಥಿರವಾದ ಭೂಭಾಗವು ಅವರದಾಯಿತು. ದಸ್ಯುಗಳು ನಿರ್ಮಿಸಿದ್ದ ಗ್ರಾಮಗಳಲ್ಲಿಯೂ, ದುರ್ಗಗಳಲ್ಲಿಯೂ ಕೆಲವು ನಾಶವಾಗಿದ್ದರೂ ಉಳಿದವು ಆರ್ಯರಿಗೆ ಸ್ವಾಧೀನವಾದವು. ದಸ್ಯುಗಳೊಡನೆ ಹೋರಾಡುವಾಗ ಆರ್ಯಜನರು ಕುಲಮುಖ್ಯರ ನಾಯಕತ್ವದಲ್ಲಿದ್ದುಕೊಂಡು ದೇಶವು ತಮ್ಮದಾದ ಕೂಡಲೆ ದೇಶದ ಉತ್ತಮ ಭಾಗಗಳಿಗಾಗಿ ತಮ್ಮಲ್ಲಿಯೇ ಜಗಳಗಳನ್ನಾಡಿದರು. ಆರ್ಯ ಕುಲಗಳಲ್ಲಿಯೇ

**ಕುಲಕಲಹಗಳು**

ಪರಸ್ಪರ ಕಲಹಗಳು ಈ ರೀತಿ ತೋರಿಕೊಂಡವು. ಅನ್ಯು, ದ್ರುಹ್ಯು, ಪೂರು, ಭರತ, ತ್ರಿತ್ಸು, ಸೃಂಜಯ ಮುಂತಾದ ಕುಲಗಳವರು ಈ ರೀತಿ ಸ್ವಯೂಥ ಕಲಹಗಳಲ್ಲಿ ತೊಡಗಿದರು. ಇರಾವತೀ ನದಿಯ ಪ್ರದೇಶಕ್ಕಾಗಿ ಹತ್ತು ಕುಲಗಳವರು ಆಸೆಪಟ್ಟು ಜಗಳವಾಡಿದರು; ಆ ಜಗಳದಲ್ಲಿ ತ್ರಿತ್ಸು ಕುಲದ ನಾಯಕನಾಗಿದ್ದ ಸುದಾಸನು ವಸಿಷ್ಠ ಋಷಿಯಿಂದ ಪ್ರೇರಿತನಾಗಿ ಸಾಹಸದಿಂದ

ಯುದ್ಧಮಾಡಿ ಪುರುಕುತ್ಸನೆಂಬ ಶತ್ರುವನ್ನು ಗೆದ್ದನು. ಇದೇ ಕುಲ ಕಲಹಗಳಲ್ಲಿ ಪ್ರಸಿದ್ಧವಾದ ಹತ್ತು ರಾಜರ ಕಾಳಗ. ಈ ಕಲಹಗಳಲ್ಲಿ ಭರತಕುಲದವರು ಅನೇಕ ವೇಳೆಗಳಲ್ಲಿ ಜಯಶಾಲಿಗಳಾಗಿ ದೇಶದಲ್ಲಿ ವ್ಯಾಪಿಸಿದರು. ಕಾಲಾನಂತರದಲ್ಲಿ ಅವರ ಹೆಸರೇ ಸಮಸ್ತ ದೇಶಕ್ಕೂ ಹೆಸರಾಗುವಂತಾಯಿತು.

ಅನಾರ್ಯರು

ಹಿಮವಂತನ ಪಕ್ಕದಿಂದ ನುಗ್ಗಿ ಬಂದ ಆರ್ಯರು ದೇಶವನ್ನು ಆಕ್ರಮಿಸಿದಾಗ ಅಸುರ, ದೈತ್ಯ, ದಸ್ಯು, ನಾಗ ಮುಂತಾದ ಜನರನ್ನು ಸೋಲಿಸಿದ್ದರು. ಆದಾಗ್ಯೂ ಪದೇ ಪದೇ ಅವರಿಂದ ತೊಂದರೆಯು ಸಂಭವಿಸುತ್ತಲೇ ಇತ್ತು. ಈ ಅನಾರ್ಯ ಜನರು ಒಳ್ಳೆ ಆಯುಧಗಳನ್ನು ಉಪಯೋಗಿಸುತ್ತಿದ್ದುದಲ್ಲದೆ ಕುದುರೆಗಳನ್ನೂ ರಥಗಳನ್ನೂ ಯುದ್ಧದಲ್ಲಿ ಉಪಯೋಗಿಸುತ್ತಿದ್ದರು; ಕಲ್ಲಿನಿಂದ ಕೋಟೆಯನ್ನು ಕಟ್ಟಿಕೊಂಡು ಆರ್ಯರನ್ನು ಎದುರಿಸುತ್ತಿದ್ದರು. ನೂರಿನ್ನೂರು ವರ್ಷಕಾಲ ಆರ್ಯರಿಗೂ ಅನಾರ್ಯರಿಗೂ ಪರಸ್ಪರವಿರೋಧವೇ ಇದ್ದು ಸಮಯ ದೊರೆತಂತೆ ಪರಸ್ಪರವಾಗಿ ಹೋರಾಟವು ನಡೆಯುತ್ತಿತ್ತು. ಆರ್ಯಜನರು ದಸ್ಯುಗಳ ಪುರಿಗಳನ್ನು ಆಕ್ರಮಿಸಿಕೊಂಡು ಭದ್ರರಾದ ಮೇಲೆ ನಿಧಾನವಾಗಿ ಇಬ್ಬರಿಗೂ ಶತ್ರುತ್ವವೆನ್ನುವುದು ಕಳೆದುಹೋಗಿ ಮೈತ್ರಿಯು ಹುಟ್ಟಿಕೊಂಡಿತು. ದಸ್ಯುಗಳು ಆರ್ಯರನ್ನು ಸ್ವಾಮಿಗಳೆಂದೊಪ್ಪಿಕೊಂಡು ಅವರ ಸೇವೆಯನ್ನು ಮಾಡಲೊಪ್ಪಿದರು. ಈ ರೀತಿಯಲ್ಲಿ ಪರಸ್ಪರ ಮೈತ್ರಿಯು ತೋರಿಕೊಂಡ ತರುವಾಯ ಆರ್ಯಜನರ ಮತ್ತು ಅನಾರ್ಯಪ್ರಮುಖರಾಗಿದ್ದ ದ್ರಾವಿಡಜನರ ನಾಗರಿಕತೆಗಳು ಒಟ್ಟಿಗೆ ಕಲೆಯಲು ಅನುಕೂಲವಾಯಿತು.

## ರಾಜಕೀಯ ಜೀವನ

ಮಹರ್ಷಿಗಳ ಕಾಲವೆಂದು ಪ್ರಸಿದ್ಧವಾಗಿರುವ ಈ ಕಾಲದಲ್ಲಿ ಆರ್ಯರು ಸದಾ ತಪಸ್ಸಿನಲ್ಲಿಯೋ ಯಜ್ಞಯಾಗಾದಿಗಳಲ್ಲಿಯೋ ನಿರತರಾಗಿ ಲೌಕಿಕ ವ್ಯವಹಾರಗಳಿಗೆ ವಿಮುಖರಾಗಿದ್ದರೆಂದು ಭಾವಿಸಬಾರದು. ಋಕ್ಸಂಹಿತೆಯಲ್ಲಿರುವ ಸ್ತೋತ್ರಗಳಲ್ಲಿ ಆರ್ಯಜನರು ಯುದ್ಧದಲ್ಲಿ

ಜಯಕ್ಕೂ, ಐಶ್ವರ್ಯಕ್ಕೂ, ಸಂತಾನಕ್ಕೂ, ಗೋವುಗಳಿಗೂ, ಅಶ್ವಗಳಿಗೂ ಪದೇ ಪದೇ ಪ್ರಾರ್ಥಿಸುತ್ತಲೇ ಇದ್ದರು. ಇದು ಯುದ್ಧಕಾಲವೇ ಆಗಿತ್ತು. ಆರ್ಯರು ಬೇಟೆಯಲ್ಲಿಯೂ ಯುದ್ಧದಲ್ಲಿಯೂ ಅಪೇಕ್ಷೆಯುಳ್ಳವರಾಗಿ ಧೀರರೂ ಸಾಹಸಿಗಳೂ ಆಗಿದ್ದರು. ಜೀವನವು ವಿಶೇಷವಾದ ಆಡಂಬರ ಅಟ್ಟಹಾಸಗಳಿಲ್ಲದೆ ಸುಲಭವೂ ಸಾಮಾನ್ಯವೂ ಆಗಿದ್ದರೂ ಉಲ್ಲಾಸ ಸಂತೋಷಗಳಿಂದ ತುಂಬಿತ್ತು. ಸುಲಭವಾಗಿ ಆಹಾರಾದಿಗಳನ್ನೊದಗಿ ಸುತ್ತಲೂ ಪ್ರಕೃತಿ ಗಾಂಭೀರ್ಯವನ್ನು ತೋರುತ್ತಲೂ ಇದ್ದ ದೇಶದಲ್ಲಿ ವಾಸಿಸುತ್ತಿದ್ದ ಈ ಆರ್ಯ ಜ್ಯೇಷ್ಠರ ಜೀವನವು ಸುಲಭವೂ ಸರಳವೂ ಆಗಿದ್ದು ಗಂಭೀರವಾಗಿದ್ದಿತು.

ಕುಲ

ಆಚಾರ ವ್ಯವಹಾರಗಳಲ್ಲಿ ಪ್ರತ್ಯೇಕತೆಯನ್ನೂ ವಿರೋಧವನ್ನೂ ತೋರುತ್ತಿದ್ದ ದಸ್ಯುಗಳನ್ನು ಆರ್ಯರು ಮೊದಲು ಶತ್ರುಗಳಂತೆ ಕಂಡು, ಅವರು ಸೋತುಹೋದ ಮೇಲೆ ಗೆದ್ದ ಹೆಮ್ಮೆಯಿಂದ ಅವರನ್ನು ದಾಸ, ಅನಾಸ ಮುಂತಾದ ಹೆಸರುಗಳಿಂದ ಕರೆಯುತ್ತ ಅವರನ್ನು ದೂರ ದೂರವಾಗಿಯೇ ಇಟ್ಟಿದ್ದರು. ಗುಂಪುಗುಂಪಾಗಿ ಸಂಚಾರ ಮಾಡುತ್ತಲಿದ್ದ ಆರ್ಯರು ದೇಶವನ್ನಾಕ್ರಮಿಸಿದಾಗಲೂ ಗುಂಪು ಗುಂಪುಗಳಾಗಿಯೇ ನೆಲೆಸಿದರು. ಪರಸ್ಪರ ಬಾಂಧವ್ಯವಿದ್ದವರು ಸಮೀಪದಲ್ಲಿಯೇ ಇರುತ್ತ ಅಪಾಯ ಕಾಲದಲ್ಲಿ ಒಟ್ಟಾಗಿರುತ್ತಿದ್ದರು. ಒಟ್ಟಿಗೇ ಇರುತ್ತಿದ್ದ ಈ ಗುಂಪುಗಳೇ ಕುಲಗಳು. ಕುಲವೆಂಬುದು ಪರಸ್ಪರಬಾಂಧವ್ಯದಿಂದ ಕೂಡಿದ ಕುಟುಂಬಗಳ ಸಮೂಹ. ಆರ್ಯ ಕುಟುಂಬವು ಪಿತೃ ಪ್ರಧಾನವಾಗಿತ್ತು; ಗೃಹಪತಿಯೇ ಅವರಲ್ಲಿ ಮನೆಗೆ ಯಜಮಾನ. ಒಂದೇ ಕುಲಕ್ಕೆ ಸೇರಿದ ಗೃಹಪತಿಗಳು ತಮ್ಮ ಬಳಗಗಳೊಂದಿಗೆ ಚಲಿಸುತ್ತ ನೆಲೆಸುತ್ತ, ಬೇಟೆಗೆ ಹೊರಟು ಕ್ರೂರ ಮೃಗಗಳನ್ನು ಎದುರಿಸಿದಾಗಲೂ ಯುದ್ಧಕ್ಕೆ ಹೊರಟು ಶತ್ರುಗಳನ್ನು ಎದುರಿಸಿದಾಗಲೂ ತಮ್ಮಲ್ಲಿಯೇ ಧೀರನೂ ಸಾಹಸಿಯೂ ಆದಾತನನ್ನು ಮುಂದಿಟ್ಟುಕೊಂಡು ಆತನ ಮಾತಿನಂತೆ ನಡೆದುಕೊಂಡು ಆತನನ್ನು ಗೌರವಿಸುತ್ತಿದ್ದರು. ಸಭೆಗಳಲ್ಲಿಯೂ ಯಜ್ಞಯಾಗಾದಿಗಳಲ್ಲಿಯೂ ಆತನೇ ಮುಂದಾಳಾಗಿರುತ್ತಿದ್ದನು. ದೇಶದಲ್ಲಿ ನೆಲೆಸಿದಾಗ

ಒಂದೊಂದು ಭಾಗದಲ್ಲಿ ಒಂದೊಂದು ಕುಲವು ನೆಲೆಸಿತಷ್ಟೆ. ಆಗ ಒಟ್ಟು ಆರ್ಯರ ಸಮುದಾಯಕ್ಕೆ ಜನ ಎಂತಲೂ, ಪರಸ್ಪರ ಬಾಂಧವ್ಯವಿದ್ದು ಒಟ್ಟಿಗೇ ವ್ಯವಹರಿಸುತ್ತಿದ್ದ ಗುಂಪಿಗೆ ಕುಲ ಎಂತಲೂ ಹೆಸರು ವಾಡಿಕೆಯಾಯಿತು. ಹೋರಾಟದ ಕಾಲವಾದುದರಿಂದ ಕುಲಗಳಿಗೆ ನಾಯಕರು ಅವಶ್ಯಕವಾಗಿ ಪ್ರತಿ ಕುಲಕ್ಕೂ ಕುಲಮುಖ್ಯನೆಂಬಾತನಿದ್ದೇ ಇರುತ್ತಿದ್ದನು. ಬೇಟೆಯಲ್ಲಿ ಅಗ್ರೇಸರನಾಗಿ ಯುದ್ಧದಲ್ಲಿ ವೀರನಾಗಿ ಬಲಿಷ್ಠನೂ ತೇಜಸ್ವಿಯೂ ಆದವನನ್ನೇ ಇತರರು ನಾಯಕನೆಂದೊಪ್ಪಿಕೊಳ್ಳುತ್ತಿದ್ದರು. ಆತನು ಯುದ್ಧದಲ್ಲಿ ದಳಪತಿ, ಬೇಟೆಯಲ್ಲಿ ನಾಯಕ; ಮತ್ತು ದೇವತೆಗಳನ್ನು ಸ್ತೋತ್ರಮಾಡಿ ಕುಲವೆಲ್ಲಕ್ಕೂ ಮಂಗಳವನ್ನು ನೀಡಬೇಕೆಂದು ಬೇಡಿದಾಗ ಆತನೇ ಕುಲಕ್ಕೆ ಪ್ರತಿನಿಧಿ. ಯುದ್ಧಕಾಲದಲ್ಲಿ ವೀರರಿಗೆ ಸನ್ಮಾನವು ಸಹಜವಲ್ಲವೇ! ಆದ್ದರಿಂದ ಈ ಕಾಲದಲ್ಲಿ ಪ್ರತಿ ಕುಲದಲ್ಲಿಯೂ ಶಕ್ತಿವಂತರಾಗಿಯೂ ಸಮರ್ಥರಾಗಿಯೂ ಇದ್ದವರು ರಾಜನ್ಯರೆಂಬ ಹೆಸರಿಗೆ ಪಾತ್ರರಾದರು. ಮನಸ್ಸನ್ನು ರಂಜಿಸುವ ಆಕೃತಿಯನ್ನು ಪಡೆದವರು ಅವರು. ಆರ್ಯಕುಲಸ್ಥರು ತಮ್ಮ ನಾಯಕರನ್ನು ರಾಜನ್ಯರೆಂದೇ ಕರೆದರು. ಕುಲಸ್ಥರೆಲ್ಲರೂ ಅವರ ಶೌರ್ಯವನ್ನು ಮೆಚ್ಚುತ್ತಿದ್ದರು.

ಕುಲನಾಯಕ

ಗ್ರಾಮಗಳಲ್ಲಿ ನೆಲೆಸಿದಾಗ ಕುಟುಂಬಗಳು ಪಕ್ಕ ಪಕ್ಕದಲ್ಲಿಯೇ ಮನೆ ಮಾಡಿಕೊಂಡು ತಮ್ಮ ಗೃಹಪತಿಗಳ ಯಜಮಾನ್ಯದಲ್ಲಿದ್ದವು. ಈ ಗೃಹಪತಿಗಳು ಬೇಟೆಗೋ ಸಭೆಗೋ ಹೊರಟಾಗ ತಮ್ಮ ನಾಯಕನನ್ನು ಗ್ರಾಮಣಿಯೆಂದು ಕರೆಯುತ್ತ ಮುಂದಿಟ್ಟುಕೊಳ್ಳುತ್ತಿದ್ದರು. ಗೃಹಪತಿಗಳೆಲ್ಲರೂ ಒಟ್ಟುಸೇರಿ ಸಭೆಮಾಡಿ ನಾಯಕನು ಯಾರೆಂದು ನಿರ್ಣಯಿಸುತ್ತಿದ್ದರು. ಹಾಗೆಯೇ ಕುಲಸ್ಥರೆಲ್ಲರೂ ಸಭೆಗೂಡಿ ಕುಲನಾಯಕನನ್ನು ವರಿಸುತ್ತಿದ್ದರು. ಈ ಕುಲನಾಯಕನೇ ರಾಜನ್ಯರಲ್ಲಿ ಮುಖ್ಯನಾದವನು, ಅಥವಾ ರಾಜನ್. ರಾಜನೆಂಬ ಹೆಸರಿದ್ದರೂ ದುರ್ಗವಾಗಲಿ ಅರಮನೆಯಾಗಲಿ ಸಿಂಹಾಸನ ಕಿರೀಟಗಳಾಗಲಿ ಮಂತ್ರಿಗಳಾಗಲಿ ಇರಲಿಲ್ಲ. ಇತರ

ರಾಜನ್

ರಂತೆಯೇ ಆತನೂ ಇರುತ್ತಿದ್ದನು. ಪ್ರಾಯಶಃ ಬೇಟೆಯಲ್ಲಿಯೂ ಯುದ್ಧದ ಕೊಳ್ಳೆಯಲ್ಲಿಯೂ ರಾಜನಿಗೆ ಇತರರಿಗಿಂತ ಒಂದು ಪಾಲು ಹೆಚ್ಚಾಗಿ ಸಲ್ಲುತ್ತಿತ್ತು. ಈ ವಿಧವಾಗಿ ಪ್ರಾರಂಭವಾದ ರಾಜತ್ವವು ಮೊದಲು ವಂಶಪರಂಪರೆಯಾಗಿಯೂ ಇರಲಿಲ್ಲ. ಕುಲಸ್ಥರು ಒಟ್ಟಾಗಿ ಸಮಿತಿಗೂಡಿ ರಾಜನಿವನಾಗಿರತಕ್ಕುದೆಂದು ನಿರ್ಣಯಮಾಡುತ್ತಿದ್ದರು ; ಅಯೋಗ್ಯನೆಂದು ಕಂಡುಬಂದಾಗ ಇದ್ದ ರಾಜನನ್ನು ಬಿಟ್ಟು ಬೇರೊಬ್ಬನನ್ನು ರಾಜನನ್ನಾಗಿ ಆರಿಸಿಕೊಳ್ಳುತ್ತಿದ್ದರು. ಯುದ್ಧ ಸಮಯದಲ್ಲಿ ಸಮಿತಿಯು ನೆರೆದು ಯುದ್ಧವನ್ನು ಮಾಡುವುದೋ ಬಿಡುವುದೋ ನಿಶ್ಚಯವಾಗುತ್ತಿತ್ತು. ರಾಜನೆಂಬ ಹೆಸರನ್ನು ಹೊತ್ತವನೇ ಆ ನಿರ್ಣಯವನ್ನು ಮಾಡುತ್ತಿರಲಿಲ್ಲ. ಸಮಿತಿಯೆಂಬ ಕುಲಸ್ಥರ ಕೂಟವು ಈ ರೀತಿಯಲ್ಲಿ ರಾಜರನ್ನು ನಿರ್ಮಿಸುವ ಸರ್ವಾಧಿಕಾರವನ್ನು ಪಡೆದಿದ್ದ ರಾಜಕೀಯ ಸಭೆಯೇ ಆಗಿತ್ತು. ಇದಲ್ಲದೆ ಕುಲಸ್ಥರು ನೆರೆಯುತಕ್ಕ ಇತರ ಕೂಟಗಳೂ ಇದ್ದವು. ಹಿರಿಯರೂ ಪ್ರಾಜ್ಞರೂ ಆದವರು ಸಭೆ ಸೇರಿ ವ್ಯಾಜ್ಯಗಳನ್ನು ಪರಿಹಾರ ಮಾಡುತ್ತಿದ್ದರು ; ಯಜ್ಞಯಾಗಾದಿಗಳನ್ನು ನೆರವೇರಿಸುವುದಕ್ಕೂ ತತ್ವ ವಿಚಾರವಾದ ವಾದವಿವಾದಗಳನ್ನು ನಡೆಸುವುದಕ್ಕೂ ಸಭೆ ಸೇರುತ್ತಿದ್ದರು. ಈ ಇತರ ಕೂಟಗಳು ಸಭಾ ಮತ್ತು ವಿದಥಾ ಎಂಬ ಹೆಸರುಗಳನ್ನು ಪಡೆದಿದ್ದವು.

ಸಮಿತಿ

ರಾಜನ್ಯನೇ ಕುಲದಲ್ಲಿ ಅಗ್ರಗಣ್ಯನಾಗಿಯೂ ಭೂಷಣನಾಗಿಯೂ ಇದ್ದನು. ಕಾಲಕಳೆಯುತ್ತ ಆತನ ಮುಖ್ಯತೆಯು ಹೆಚ್ಚಿತು. ಕುಲಕಲಹಗಳಲ್ಲಿ ಹಲಕೆಲಕುಲಗಳು ಅನ್ಯೋನ್ಯವಾಗಿ ಕೂಡಿದಾಗ ಒಬ್ಬನೇ ದಳಪತಿಯು ಬೇಕಾಗಿದ್ದು ಕುಲನಾಯಕರಲ್ಲಿ ಒಬ್ಬಾತನು ಮುಖಂಡನಾಗಿ ಇತರರಿಗಿಂತ ಶ್ರೇಷ್ಠನೆನಿಸುತ್ತಿದ್ದನು. ಕಾಲಕ್ರಮದಲ್ಲಿ ಆತನ ಮಗನು ಆತನ ಸ್ಥಾನವನ್ನು ಹೊಂದುವುದು ರೂಢಿಯಾಯಿತು ; ರಾಜತ್ವವು ವಂಶಪರಂಪರೆಯಾದುದು ಈ ರೀತಿಯಲ್ಲಿ. ಪೌರುಷಪರಾಕ್ರಮಗಳಲ್ಲಿ ಅದ್ವಿತೀಯನಾಗಿ ಪುರುಷಸಿಂಹನೆನಿಸಿದ ರಾಜನಿಗೆ ಅಗ್ರಮರ್ಯಾದೆಯಿದ್ದಾಗ್ಗೂ ಶ್ರೇಷ್ಠ ಅಧಿಕಾರವಿರಲಿಲ್ಲ. ನೀಚತ್ವವೋ ಅಯೋಗ್ಯತೆಯೋ ತೋರಿದೊಡನೆಯೇ ಆತನು

ರಾಜತ್ವ

ಸ್ಥಾನ ಭ್ರಷ್ಟನಾಗುತ್ತಿದ್ದನು. ಅಲ್ಲದೆ ಆರ್ಯಜನರಲ್ಲಿ ಎಲ್ಲರ ಗೌರವಕ್ಕೂ ಸದಾ ಪಾತ್ರರಾಗಿದ್ದ ಋಷಿಗಳು ರಾಜರಿಗೂ ರಾಜನ್ಯರಿಗೂ ಉತ್ತಮರೆನಿಸಿದ್ದರು; ಪ್ರತಿ ಕುಲದಲ್ಲಿಯೂ ಪುರೋಹಿತ ಪದವಿಯಲ್ಲಿ ಯಾರಾದರೂ ಋಷಿಯೇ ಇರುತ್ತಿದ್ದನು. ಋಕ್ಕುಗಳನ್ನು ಅಥವಾ ಜ್ಞಾನದ ಹೊಳಪುಗಳನ್ನು ಕಂಡು ಮಂತ್ರರೂಪದಲ್ಲಿ ಬಾಯಿಂದ ಅವುಗಳನ್ನು ವ್ಯಕ್ತಗೊಳಿಸುತ್ತಿದ್ದ ಮಹಾತ್ಮರಾದವರೇ ಋಷಿಗಳೆಂಬ ಹೆಸರಿಗೆ ಅರ್ಹರಾಗಿದ್ದರು.

ಋಷಿಜನ

ಈ ಮಹಾತ್ಮರು ತಮ್ಮ ದಿವ್ಯ ಜ್ಞಾನದಿಂದ ಪವಿತ್ರ ಪುರುಷರಾಗಿ ದೇವತೆಗಳನ್ನು ಮೆಚ್ಚಿಸಿ ತಮ್ಮ ತ್ರಿಕಾಲಜ್ಞಾನಬಲದಿಂದಲೂ ಮಂತ್ರಬಲದಿಂದಲೂ ಜಯವನ್ನೂ ಸೌಭಾಗ್ಯವನ್ನೂ ಕುಲಸ್ಥರಿಗೆ ದೊರಕಿಸತಕ್ಕವರಾಗಿದ್ದರು. ತಮ್ಮ ಅಸಾಧಾರಣಪ್ರಜ್ಞಾಬಲದಿಂದ ಎಲ್ಲರಿಗೂ ಉಪದೇಶ ಮಾಡಲು ಸಮರ್ಥರಾಗಿದ್ದು ತತ್ವಪ್ರಚಾರದಲ್ಲಿ ನಿರತರಾಗಿದ್ದರು. ಋಷಿಗಳು ಈ ರೀತಿಯಲ್ಲಿ ಎಲ್ಲರಿಗೂ ಗುರುಗಳಾಗಿದ್ದರು. ರಾಜನಾದವನು ಬಾಹುಬಲದಿಂದ ತನ್ನ ಪದವಿಯನ್ನು ಪಡೆದಿದ್ದನು; ಋಷಿಯಾದರೋ ಅಪೂರ್ವವಾದ ದೈವದತ್ತವಾದ ಜ್ಞಾನಬಲದಿಂದ ತನ್ನ ಪದವಿಯನ್ನು ಪಡೆದಿದ್ದನು. ಪದೇ ಪದೇ ಯುದ್ಧಗಳು ನಡೆಯುತ್ತಲಿದ್ದರೂ ಋಷಿಗಳ ಗೋಜಿಗೆ ಯಾರೂ ಹೋಗುತ್ತಿರಲಿಲ್ಲ. ರಾಜನೇ ಮೊದಲ್ಗೊಂಡು ಎಲ್ಲರೂ ಋಷಿಗಳಿಗೆ ಹೆದರುತ್ತಿದ್ದರು. ಆರ್ಯ ಸಮೂಹದಲ್ಲಿ ನಿಜವಾದ ಮುಂದಾಳುಗಳು ಋಷಿಗಳೇ ಆಗಿದ್ದುದರಿಂದ ಈ ಕಾಲಕ್ಕೆ ಮಹರ್ಷಿಗಳ ಕಾಲವೆಂಬ ಹೆಸರು ಸಹಜವಾದುದು.

ಕುಲಪುರೋಹಿತರಾದ ಋಷಿಗಳಿಗಿದ್ದ ಗೌರವವು ಮತ್ತಾರಿಗೂ ಇರಲಿಲ್ಲ. ಭರದ್ವಾಜ, ಕಣ್ವ, ಆಂಗಿರಸ, ವಸಿಷ್ಠ, ಗೃತ್ಸಮದ, ವಿಶ್ವಾಮಿತ್ರ, ಅತ್ರಿ ಋಷಿಗಳು ಈ ರೀತಿ ಕುಲಪುರೋಹಿತರಾಗಿದ್ದರು. ಪೌರೋಹಿತ್ಯವೂ ವಂಶಪರಂಪರೆಯಾಗಿ ನೆಲೆಸಿದುದರಿಂದ ಈ ಹೆಸರುಗಳು ವಂಶಗಳಲ್ಲಿ ಸ್ಥಿರವಾದವು. ಗೋತ್ರವೆನ್ನುವುದೂ ಈ ಕಾಲದಲ್ಲಿಯೇ ಋಷಿಗಳ ಸಂತತಿಗಳಲ್ಲಿಯೂ ಶಿಷ್ಯವೃಂದಗಳಲ್ಲಿಯೂ ಪ್ರಾರಂಭವಾಯಿತು. ದಸ್ಯುಗಳೊಡನೆ

ಪ್ರಸಿದ್ಧ ಋಷಿಗಳು

ನಡೆದ ಹೋರಾಟವು ಕೊನೆಗಂಡು ಆರ್ಯಕುಲಗಳು ತಮ್ಮ ಪ್ರದೇಶಗಳಲ್ಲಿ ನೆಲೆಸಿ ಶಾಂತಿಯನ್ನು ಜೀವನದಲ್ಲಿ ಕಂಡಾಗ ಋಷಿಗಳು ಆಗಾಗ್ಗೆ ಗ್ರಾಮಗಳಿಗೆ ಬಂದು ಜನರಿಗೆ ಉಪದೇಶಕೊಡುತ್ತ ಯಜ್ಞಯಾಗಾದಿಗಳನ್ನು ಎಲ್ಲರ ಮಂಗಳಕ್ಕಾಗಿ ನಡೆಸುತ್ತಲಿದ್ದಾಗ್ಯೂ ತಾವು ಆಧ್ಯಾತ್ಮ ವಿದ್ಯೆಯಲ್ಲಿ ನಿರತರಾಗಿ ಅರಣ್ಯ ಮಧ್ಯದಲ್ಲಿ ನಿರಾತಂಕರಾಗಿ ತಪಸ್ಸನ್ನಾಚರಿಸುತ್ತ ತತ್ವವಿಚಾರವನ್ನು ಮುಂದರಿಸುತ್ತಲಿದ್ದರು. ಆಶ್ರಮಗಳೂ ತಪೋವನಗಳೂ ಈ ರೀತಿಯಲ್ಲಿ ಮೊದಲಾಗಿ ಈ ಮಂತ್ರಗಳ ಕಾಲದಲ್ಲಿಯೇ ಸರಸ್ವತೀ ಧೃಷದ್ವತೀ ನದಿಗಳ ನಡುವಣ ಪ್ರದೇಶವು ತಪೋವನಗಳಿಂದಲೇ ತುಂಬಿದವು. ಈ ಕಾಲದಲ್ಲಿ ಮಧುಚ್ಛಂದಸ್, ಗೃತ್ಸಮದ, ವಿಶ್ವಾಮಿತ್ರ, ವಾಮದೇವ, ಅತ್ರಿ, ಭರದ್ವಾಜ, ವಸಿಷ್ಠರೆಂದು ಋಕ್ಸಂಹಿತೆಯಲ್ಲಿ ಹೆಸರಾದ ಋಷಿಗಳು ಪ್ರಖ್ಯಾತರು. ಸಪ್ತರ್ಷಿ ಮಂಡಲದಲ್ಲಿರತಕ್ಕವರೆಂದು ವಿದಿತರಾದ ವಿಶ್ವಾಮಿತ್ರ, ಜಮದಗ್ನಿ, ಭೃಗು, ಗೌತಮ, ಅತ್ರಿ, ವಸಿಷ್ಠ, ಕಾಶ್ಯಪ ಮಹರ್ಷಿಗಳು ಆದಿಯಲ್ಲಿಯೇ ವಿಖ್ಯಾತರಾದವರು.

## ಆರ್ಥಿಕ ರೀತಿ

ವ್ಯವಸಾಯ

ಗ್ರಾಮಜೀವನವೇ ಈ ಕಾಲದಲ್ಲಿ ಸಾಮಾನ್ಯವಾಗಿತ್ತು. ಗ್ರಾಮಸ್ಥರಾದ ಆರ್ಯರು ಮೊದಲಿನಿಂದಲೂ ರೂಢಿಯಾಗಿದ್ದ ಪಶುಪಾಲನೆ ಮತ್ತು ಬೇಟೆಗಳ ಜತೆಗೆ ಕೃಷಿ, ಉದ್ಯೋಗ, ವ್ಯಾಪಾರಗಳನ್ನೂ ಆರಂಭಿಸಿದರು. ಬೇಕಾದಷ್ಟು ಗೋವುಗಳು, ಒಳ್ಳೆಯ ಮನೆ, ಯಥೇಚ್ಛವಾದ ಭೂಮಿಯನ್ನು ಸಾಗುಮಾಡಲು ಸಾಕಾದಷ್ಟು ಬಂಧುಗಳು, ಒಳ್ಳೆ ಮಕ್ಕಳು ಇದ್ದರೆ ನೆಮ್ಮದಿಯಾಗಿತ್ತು. ವ್ಯವಸಾಯ, ಕೈಗಾರಿಕೆ, ವ್ಯಾಪಾರಗಳಲ್ಲಿ ದ್ರಾವಿಡರು ಆರ್ಯರಿಗಿಂತಲೂ ಹೆಚ್ಚಾದ ನೈಪುಣ್ಯವನ್ನು ಪಡೆದಿದ್ದರು; ಆದ್ದರಿಂದ ದ್ರಾವಿಡರ ಸಂಪರ್ಕವು ಆರ್ಯರಿಗೆ ಅನುಕೂಲವಾಯಿತು. ಕಾಡುಹಂದಿ, ಆನೆ, ಸಿಂಹ, ಮುಂತಾದ ಅರಣ್ಯಮೃಗಗಳನ್ನು ಬೇಟೆಯಾಡುತ್ತ ಆರ್ಯರು ನದೀತೀರಗಳಲ್ಲಿ ಗ್ರಾಮಗಳನ್ನು ಕಟ್ಟಿಕೊಂಡು ನದೀ ಜಲದಿಂದ ಸಾಗುವಳಿ ಮಾಡುತ್ತ ಗೋಧಿ, ಭತ್ತಗಳನ್ನು ಬೆಳೆಸುತ್ತಿದ್ದರು. ನದಿಗೆ ದೂರವಾಗಿದ್ದರೆ

ಬಾವಿಗಳನ್ನು ತೋಡಿ ನೀರನ್ನು ಘಟಚಕ್ರವೆಂಬ ವಿಧಾನದಿಂದ ಎತ್ತಿ ಗದ್ದೆಗಳಿಗೆ ಹಾಯಿಸುತ್ತಿದ್ದರು. ನೀರಾವರಿಯು ಈ ಪುರಾತನ ಕಾಲದಲ್ಲಿಯೇ ಮುಖ್ಯವಾದುದಾಯಿತು. ಮಳೆಬಾರದೆ ಹೋದಾಗ ನೀರಾವರಿಯ ಏರ್ಪಾಟು ಇಲ್ಲದಿದ್ದರೆ ಕ್ಷಾಮವೇ ಪರಿಣಾಮ! ಸಂಹಿತೆಗಳ ಕಾಲದಲ್ಲಿಯೂ ಕ್ಷಾಮವು ತಲೆದೋರಿತ್ತು; ಪದೇ ಪದೇ ಪ್ರಾಪ್ತವಾಗುತ್ತಿರಲಿಲ್ಲ. ಅರಣ್ಯಗಳು ನೆಲಸಮವಾದಂತೆಲ್ಲ ಬರಗಾಲಕ್ಕೆ ಬಲ ಬಂದಂತಿರುತ್ತಿತ್ತು. ಉಳುವುದರಲ್ಲಿ ಕುದುರೆಯ ಉಪಯೋಗವು ಕಳೆದು ಎತ್ತುಗಳೇ ಉಪಯುಕ್ತವಾದವು. ಗೋವು ಮನೆಮಕ್ಕಳಿಗೆ ಹಾಲು ಕೊಟ್ಟು ಪೋಷಿಸುವುದರಲ್ಲಿಯೂ ನೆಲವನ್ನು ಉಳುವುದರಲ್ಲಿಯೂ ಅನರ್ಘವಾಗಿ ಪವಿತ್ರವೆನಿಸಿತು. ಗೋಸಮೂಹವೇ ಐಶ್ವರ್ಯ

ಪಶುಪಾಲನೆ

ಲಕ್ಷಣವಾಯಿತು. ಆ ಕಾಲದಿಂದ ಹಾಲು ಮೊಸರುಗಳನ್ನು ಮಾರುವುದು ಪಾಪಕರವೆಂದೆನಿಸಿದೆ; ಗೋವುಗಳನ್ನು ಕದಿಯುವುದು ಇನ್ನೂ ಪಾಪಕರ; ಗೋವಧೆಯನ್ನುವುದು ಮಹಾಪಾತಕ ಕೃತ್ಯ. ಗೋವಧೆಯನ್ನು ಮಾಡತಕ್ಕವರು ಸಮಾಜಕ್ಕೇ ವೈರಿಗಳೆನಿಸಿ ಕೊಲೆಪಾತಕರಿಗಿಂತಲೂ ನೀಚರಾದ ಕೇಡಿಗರೆನಿಸಿದ್ದಾರೆ. ಪಶುಪಾಲನೆಯು ಬಹುಕಾಲ ಆರ್ಯರ ಜೀವನದಲ್ಲಿ ಮುಖ್ಯವಾಗಿತ್ತು. ಆರ್ಯಗೃಹಸ್ಥನಿಗೆ ಮನೆಮಕ್ಕಳು, ಗೋವುಗಳು, ಕುದುರೆಗಳು, ಕುರಿಮೇಕೆಗಳು ಅಭಿವೃದ್ಧಿಪಡೆದಂತೆಲ್ಲ ನೆಮ್ಮದಿಯೂ ಹೆಮ್ಮೆಯೂ ಹೆಚ್ಚುತ್ತಿತ್ತು.

ಸಮಯ ಬಂದಾಗ ಯುದ್ಧಕ್ಕೆ ಹೊರಟು ಹೋರಾಡುವುದು, ಬೇಟೆಯಾಡುವುದು, ಪಶುಪಾಲನೆ, ವ್ಯವಸಾಯಗಳು

ಕಸಬು

ಮುಖ್ಯವೂ ಸಾಮಾನ್ಯವೂ ಆಗಿದ್ದರೂ ಇತರ ಕಸಬುಗಳೂ ಈ ಕಾಲದಲ್ಲಿ ರೂಢಿಯಾಗಿದ್ದವು. ಮನೆಗಳನ್ನು ಕಟ್ಟುವುದು, ದೋಣಿಗಳನ್ನೂ ರಥಗಳನ್ನೂ ನಿರ್ಮಿಸುವುದು, ಆಯುಧಗಳನ್ನು ಸಿದ್ಧಗೊಳಿಸುವುದು, ಚಿನ್ನ ಬೆಳ್ಳಿ ತಾಮ್ರ ಕಬ್ಬಿಣಗಳಲ್ಲಿ ಪಾತ್ರೆಗಳನ್ನೂ ಆಭರಣಗಳನ್ನೂ ರಚಿಸುವುದು, ನೇಯುವುದು ಪ್ರತಿಗ್ರಾಮದಲ್ಲಿಯೂ ಅವಶ್ಯವಾಗಿದ್ದವು. ಬಡಗಿ, ಕಮ್ಮಾರ, ನೆಯ್ಗೆಯವ, ಅಕ್ಕ

ಸಾಲಿಗರು ಈ ರೀತಿಯಲ್ಲಿ ಹುಟ್ಟಿಕೊಂಡರು. ಮೊದಲು ಚರ್ಮ, ತೊಗಟೆ, ಉಣ್ಣೆಗಳೇ ಉಡುಗೆಗೆ ಸಾಮಗ್ರಿಯಾಗಿದ್ದವು; ಕೆಲಕಾಲದ ಮೇಲೆ ಕಾರ್ಪಾಸ ಅಥವಾ ಹತ್ತಿಯ ಉಪಯೋಗವು ಮೊದಲಾಗಿ ಸಾಮಾನ್ಯವಾಯಿತು. ತೊಗಟೆ, ತೊಲೆ, ಸೌದೆಗಳನ್ನೂ, ಅರಗು ಗೋಂದು ಮುಂತಾದವುಗಳನ್ನೂ, ಫಲಪುಷ್ಪಗಳನ್ನೂ ನೀಡಿ ಪಶುಗಳಿಗೂ ನರರಿಗೂ ಜೀವನದಲ್ಲಿ ಪ್ರಯೋಜನಗಳನ್ನು ಕಲ್ಪಿಸಿಕೊಡುತ್ತಿದ್ದ ಸಪ್ತಸಿಂಧು ಪ್ರದೇಶದ ವೃಕ್ಷಗಳು ಆರ್ಯರ ದೃಷ್ಟಿಯಲ್ಲಿ ಪವಿತ್ರವೆನಿಸಿದವು. ದೇವದಾರು, ಖಾದಿರ, ಬಿಲ್ವ, ಅಶ್ವತ್ಥ, ಶಾಲ್ಮಲಿ, ಭೂರ್ಜ ಮುಂತಾದ ಉತ್ತುಂಗವಾದ ಮರಗಳು ಆರ್ಯರ ಆರ್ಥಿಕ ಜೀವನದಲ್ಲಿಯೂ ಸಾಮಾನ್ಯ ಜೀವನದಲ್ಲಿಯೂ ಭಾಗಿಗಳಾದವು. ಅರಣ್ಯ ಮತ್ತು ನದಿಗಳು ಆರ್ಯರ ಜೀವನಕ್ಕೆ ಅಸ್ತಿಭಾರವೂ ಅಲಂಕಾರವೂ ಆಗಿದ್ದವು; ಋಕ್ಕುಗಳಲ್ಲಿ ನದಿಗಳನ್ನೂ ವೃಕ್ಷಗಳನ್ನೂ ಸ್ತುತಿಗೆಯ್ಯುವ ಋಕ್ಕುಗಳು ಅನೇಕವಾಗಿವೆ.

ವ್ಯಾಪಾರ

ವ್ಯಾಪಾರವು ವಿಶೇಷವಾದ ಅಭಿವೃದ್ಧಿಯನ್ನು ಪಡೆದಿರಲಿಲ್ಲ. ನದಿಗಳೇ ಮುಖ್ಯ ಮಾರ್ಗಗಳಾಗಿದ್ದ ಈ ಕಾಲದಲ್ಲಿ ವ್ಯಾಪಾರ ಮಾಡುವವರು ದೂರ ಪ್ರಯಾಣವನ್ನು ದೋಣಿಗಳಲ್ಲಿ ನಡೆಸಬೇಕಾಗಿದ್ದಿತು. ಗ್ರಾಮದಲ್ಲಿ ಅಥವಾ ಅಕ್ಕಪಕ್ಕ ಗ್ರಾಮಗಳಲ್ಲಿ ನಡೆಯುತ್ತಿದ್ದ ವ್ಯಾಪಾರದಲ್ಲಿ ವಸ್ತುವಿನಿಮಯವೇ ಸಾಕಾಗಿತ್ತು; ನಾಣ್ಯಗಳ ಚಲಾವಣೆಯು ವಿಶೇಷವಾಗಿರಲಿಲ್ಲ. ಬೆಲೆ ಕಟ್ಟುವಾಗ ಇಷ್ಟು ಗೋವುಗಳು ಎಂಬುದಾಗಿಯೋ ಇಷ್ಟು ನಿಷ್ಕಗಳು ಎಂಬುದಾಗಿಯೋ ಎಣಿಸುತ್ತಿದ್ದರು. ನಿಷ್ಕವೆಂಬುದು ಚಿನ್ನದಿಂದ ಮಾಡಿದ ನಾಣ್ಯವೂ ಆಗಿತ್ತು, ಆಭರಣವೂ ಆಗಿತ್ತು. ಚಿನ್ನ ಬೆಳ್ಳಿಯ ಆಭರಣಗಳು, ರಥ ಕುದುರೆಗಳು, ಆಯುಧಗಳು, ಚರ್ಮಗಳು ವ್ಯಾಪಾರದ ಸರಕು. ವ್ಯಾಪಾರದಲ್ಲಿ ರಥಗಳಿಗಿಂತ ದೋಣಿಗಳೇ ಹೆಚ್ಚು ಉಪಯೋಗದಲ್ಲಿದ್ದವು. ಕಾಲಕ್ರಮೇಣ ವ್ಯಾಪಾರವು ಅಭಿವೃದ್ಧಿಯಾಯಿತು, ಹಣವು ಸೇರಿತು, ಧನವಂತರೂ ಧನಹೀನರೂ ಎಂಬ ಭೇದವೂ ತೋರಿಕೊಂಡಿತು. ಆಗ ಧನವಂತರಿಂದ ಸಾಲ ತೆಗೆಯುವುದೂ ಬಡ್ಡಿಯನ್ನೆಣಿಸುವುದೂ ಸಹಜವಾಗಿ ರೂಢಿಯಾದವು. ಋಗ್ವೇದ ಭಾಗಗಳಲ್ಲಿ ಸಾಲ

ಗಾರನ ಸಂಕಟವನ್ನು ಪರಿಹಾರಮಾಡಬೇಕೆಂದು ದೇವತೆಗಳನ್ನು ಪ್ರಾರ್ಥಿಸು ವುದುಂಟು. ಕೈಗಾರಿಕೆಗಳಲ್ಲಿಯೂ ವ್ಯಾಪಾರದಲ್ಲಿಯೂ ಆರ್ಯರು ದ್ರಾವಿಡರಿಂದ ಅನೇಕ ಅಂಶಗಳನ್ನು ಕಲಿತಿರಬೇಕು.

## ಸಾಮಾಜಿಕ ನೀತಿ

ಈ ಕಾಲದ ಆರ್ಥಿಕ ಜೀವನದ ವಿವರಕ್ಕಿಂತಲೂ ಸಾಮಾನ್ಯ ಜೀವನ ದಲ್ಲಿ ರೂಢಿಯಾದ ಆಚಾರ ವ್ಯವಹಾರಗಳ ವಿವರವು ಮುಖ್ಯವಾದುದು. ಆರ್ಯ ಋಷಿಗಳ ಗೋತ್ರಜರಾದ ಹಿಂದೂ ಜನರಿಗೆ ಅದು ಬಹು ಮುಖ್ಯ. ಏಕೆಂದರೆ ಇಂದಿಗೂ ಹಿಂದೂ ಜನರ ಪದ್ಧತಿಗಳು ವೇದಗಳ ಕಾಲದಿಂದಲೂ ನಡೆದುಬಂದಿರುವುದಲ್ಲದೆ ಆ ಕಾಲದ ಪರಿಯನ್ನೇ ಆದರ್ಶವೆಂದು ಅವರು ಭಾವಿಸುತ್ತಾರೆ. ಚರಿತ್ರೆಯಲ್ಲಿ ಸಾಮಾನ್ಯ ನಡೆನುಡಿಗಳನ್ನು ಅಥವಾ ರೀತಿ ನೀತಿಗಳನ್ನು ಅಥವಾ ಆಚಾರ ವ್ಯವಹಾರಗಳನ್ನು ಸಾಮಾಜಿಕ ಸ್ಥಿತಿಯೆಂಬ ಹೆಸರಿನಿಂದ ವಿವರಿಸುವುದು ಪದ್ಧತಿ. ಮಹರ್ಷಿಗಳ ಕಾಲದಲ್ಲಿ ಪ್ರಕೃತಿಯು ಅಪ್ರಾರ್ಥಿತವಾಗಿ ಮಾನವ ಜೀವನದಲ್ಲಿ ನೆರವಾಗುತ್ತಿದ್ದುದರಿಂದ ಜೀವನವು ಸುಲಭವೂ ಸರಳವೂ ಆಗಿದ್ದುದಲ್ಲದೆ ಪ್ರಕೃತಿಯಂತೆಯೇ ಶುದ್ಧವೂ ಗಂಭೀರವೂ ಆಗಿತ್ತು; ಶುಚಿಯಾದುದೂ ಪವಿತ್ರವಾದುದೂ ಆಗಿತ್ತು.

ಗೃಹ

ಅನೇಕ ಕುಟುಂಬಗಳು ಸೇರಿ ಗ್ರಾಮವಾಗಿದ್ದ ಸ್ಥಿತಿಯಲ್ಲಿ ಕುಟುಂಬ ಅಥವಾ ಮನೆಯೇ ಮುಖ್ಯವಾಗಿತ್ತು. ಮನೆಗೆ ಯಜಮಾನನಾದವನು ತಂದೆಯೇ. ತಮ್ಮಂದಿರು, ಪುತ್ರರು, ಸಮೀಪ ಬಂಧುಗಳು ಆತನ ಆಜ್ಞಾಬದ್ಧ ರಾಗಿ ಬೇಟೆಯಾಡುವುದರಲ್ಲಿ, ಅರಣ್ಯದಿಂದ ತೃಣಕಾಷ್ಠಗಳನ್ನು ಹೊರುವು ದರಲ್ಲಿ, ಪಶುಗಳನ್ನು ಹೊಡೆದುಕೊಂಡುಹೋಗಿ ಮೇಯಿಸುವುದರಲ್ಲಿ ಭಾಗಿ ಗಳಾಗುತ್ತಿದ್ದರು. ಮನೆಹೊರಗಿನ ಕೆಲಸವನ್ನು ಗಂಡಸರು ನಿರ್ವಹಿಸು ತ್ತಿದ್ದರು; ಮನೆಯೊಳಗೆ ಸ್ತ್ರೀಯರು ಗೃಹಿಣಿಯ ಅಧಿಕಾರಕ್ಕೊಳಗಾಗಿ ಮನೆಯನ್ನು ಚೊಕ್ಕಟವಾಗಿ ಕಾಪಾಡಿ, ಪ್ರತಿಯೊಬ್ಬರ ಸುಖ ಸೌಕರ್ಯ ಗಳಿಗೂ ಗಮನಕೊಟ್ಟು, ಕುರಿಗಳ ಉಣ್ಣೆಯ ಮತ್ತು ಹತ್ತಿಯ ನೂಲನ್ನು ತೆಗೆಯುತ್ತ, ಪಶುಗಳ ಹಾಲು ಕರೆಯುತ್ತ, ಪ್ರಾತಃಕಾಲದ ಮತ್ತು

ಸಾಯಂಕಾಲದ ಅಗ್ನಿಕಾರ್ಯಕ್ಕೆ ಅಣಿಮಾಡುತ್ತ ಇರುತ್ತಿದ್ದರು. ಮಾಂಸ, ಗೋಧಿ, ಹಾಲು, ಬೆಣ್ಣೆ, ತುಪ್ಪಗಳು ಆಹಾರದಲ್ಲಿ ಮುಖ್ಯ ವಸ್ತುಗಳಾಗಿದ್ದವು. ಮೊದಲು ಆರ್ಯರೆಲ್ಲರೂ ಮಾಂಸಾಹಾರಿಗಳಾಗಿಯೇ ಇದ್ದು ಗೋಮಾಂಸವನ್ನೂ ಸೇವಿಸುತ್ತಿದ್ದರು *; ಸಪ್ತಸಿಂಧುವಿನಲ್ಲಿ ನೆಲೆಸಿ ಸ್ಥಿರ ಜೀವನವನ್ನು ಪಡೆದ ಮೇಲೆ ವ್ಯವಸಾಯದಲ್ಲಿಯೂ ಶಿಶುಪಾಲನೆಯಲ್ಲಿಯೂ ಗೋವಿನ ಪ್ರಾಶಸ್ತ್ಯವನ್ನು ತಿಳಿದ ತರುವಾಯ ಗೋಮಾಂಸವು ಎಲ್ಲರಿಗೂ ನಿಷಿದ್ಧವಾಯಿತು. ಗೋಮಾಂಸಭಕ್ಷಣೆಯು ಪಾಪಕರವೆನಿಸಿತು. ಕೆಲಕಾಲದ ಮೇಲೆ ಆರ್ಯರಲ್ಲಿ ಕೆಲವರು ಮಾಂಸಾಹಾರವನ್ನೇ ತ್ಯಜಿಸಿದರು; ಮೊಸರು ತುಪ್ಪಗಳಿಂದ ತೃಪ್ತರಾಗಿ ಶಾಕಾಹಾರವನ್ನೇ ಅವಲಂಬಿಸಿದರು. ಸೋಮಪಾನವು ಈ ಕಾಲದಲ್ಲಿ ಸಾಮಾನ್ಯವಾಗಿತ್ತು; ಸೋಮವೆಂಬುದೇನೆಂದು ಗೊತ್ತಿಲ್ಲ, ಮಾದಕರಸವೆಂದು ಮಾತ್ರ ನಿಶ್ಚಯ. ಸಂತೋಷ ಸಮಯಗಳಲ್ಲಿ ಸೋಮಪಾನವಿಲ್ಲದೆ ನಡೆಯುತ್ತಿರಲಿಲ್ಲ. ಆರ್ಯರು ಸೋಮರಸವನ್ನು ಕಂಡು ಹಿಗ್ಗಿ ದೇವತೆಗಳಿಗೂ ಅದನ್ನು ಅರ್ಪಿಸುತ್ತಿದ್ದರು. ಸಂಹಿತೆಗಳ ಕಾಲದಂತ್ಯದಲ್ಲಿ ಸುರಾ ಎನ್ನುವ ಮದ್ಯವು ಸಾಮಾನ್ಯವಾಗುತ್ತಿತ್ತು.

ಆಹಾರ

ಆರ್ಯಜನರು ರೂಕ್ಷರಾಗಲಿ ಅಸಭ್ಯರಾಗಲಿ ಆಗಿರಲಿಲ್ಲ. ತಮ್ಮ ಉಡಿಗೆ ತೊಡಿಗೆಗಳಲ್ಲಿ ಅವರು ಕೌಶಲವನ್ನೂ ಸೌಂದರ್ಯವನ್ನೂ ತೋರುತ್ತಿದ್ದರು. ಚರ್ಮ, ತೊಗಟೆ, ಊರ್ಣ, ಹತ್ತಿಗಳೇ ವಸ್ತ್ರಸಾಮಗ್ರಿಯಾಗಿದ್ದವು. ಸಾಧಾರಣವಾಗಿ ಅಧೀವಾಸ ಮತ್ತು ನೀವಿಗಳೆಂಬ ಎರಡು ವಸ್ತ್ರಗಳನ್ನೇ ಸೊಂಟಕ್ಕೊಂದನ್ನೂ ಹೆಗಲಿಗೊಂದನ್ನೂ ಉಪಯೋಗಿಸುತ್ತಿದ್ದರು. ಯುದ್ಧಕಾಲದಲ್ಲಿ ಮಾತ್ರ ಚರ್ಮನಿರ್ಮಿತವೋ ಲೋಹನಿರ್ಮಿತವೋ ಆಗಿದ್ದ ಶೀರ್ಷಕ ಕವಚಗಳನ್ನು ಧರಿಸುತ್ತಿದ್ದರು. ಸ್ತ್ರೀಯರು

ಉಡುಗೆ

---

* ಸಂಹಿತೆಗಳ ಕಾಲದಲ್ಲಿ ಆರ್ಯರು ಗೋಮಾಂಸವನ್ನು ಸೇವಿಸುತ್ತಲೇ ಇರಲಿಲ್ಲವೆಂಬುದು ಭಾರತೀಯ ವಿದ್ವಾಂಸರಲ್ಲಿ ಒಂದು ಪಕ್ಷವಾಗಿದೆ. ಗೋಶಬ್ದಕ್ಕೆ ನಾನಾರ್ಥಗಳಾಗುವುದರಿಂದಲೂ, ಋಕ್ಕುಗಳ ಅರ್ಥವು ಕ್ಲಿಷ್ಟವಾಗಿರುವುದರಿಂದಲೂ ಅಭಿಪ್ರಾಯಭೇದಕ್ಕೆ ಅವಕಾಶವಿದೆ.

ಉತ್ತಮವಾದ ವಸ್ತ್ರಗಳನ್ನು ಧರಿಸಿ ಆಭರಣಗಳನ್ನು ತೊಟ್ಟುಕೊಳ್ಳುತ್ತಿದ್ದರು. ಶಿರೋಜಗಳ ಅಲಂಕಾರದಲ್ಲಿ ಅವರಿಗೆ ಹೆಚ್ಚು ದೃಷ್ಟಿಯಿತ್ತು; ಜಡೆ ಹೆಣೆದು ವಿಧವಿಧವಾದ ಗಂಟುಗಳನ್ನು ಕಟ್ಟಿಕೊಳ್ಳುತ್ತಿದ್ದರು. ಪುರುಷರಲ್ಲಿ ಕ್ಷುರಕರ್ಮವು ಆಚಾರವಾಗಿತ್ತು. ಋಷಿಗಳೂ ಋಷಿಶಿಷ್ಯರೂ ಅರಣ್ಯವಾಸಿಗಳೂ ಆದವರು ಜಟಾಧಾರಿಗಳಾಗಿ ಮೃಗಚರ್ಮಗಳನ್ನೋ ವೃಕ್ಷಗಳ ತ್ವಕ್ಕನ್ನೋ ವಸ್ತ್ರವನ್ನಾಗಿ ಧರಿಸುತ್ತಿದ್ದರು; ಅಂತಹವರ ಆಹಾರವೂ ಕೂಡ ಸಾಮಾನ್ಯವೂ ಕಠಿಣವೂ ಆಗಿತ್ತು. ಫಲಮೂಲಗಳನ್ನು ಮಾತ್ರ ತಿಂದು ಜೀವಿಸುತ್ತಿದ್ದುದಲ್ಲದೆ ಅವರಲ್ಲಿ ಕೆಲವರು ವಾತಾಂಬು ಪರ್ಣಾಶನರೆಂಬ ಹೆಸರಿಗೆ ಅರ್ಹರಾಗಿರುತ್ತಿದ್ದರು. ಆರ್ಯ ಸ್ತ್ರೀಪುರುಷರು ಆಕೃತಿಯಲ್ಲಿ ಸಹಜಗಂಭೀರರಾಗಿದ್ದು ತಮ್ಮ ಉಡುಗೆತೊಡಿಗೆಗಳಲ್ಲಿ ಸರಳರಾಗಿ ಲಾವಣ್ಯವನ್ನು ಬೀರುತ್ತಿದ್ದರು.

ಸ್ತ್ರೀಯರ ಪದವಿ

ಸ್ತ್ರೀಯರು ಅಧಮರೆಂದಾಗಲಿ ನೀಚರೆಂದಾಗಲಿ ಈ ಕಾಲದಲ್ಲಿ ಸ್ವಲ್ಪವಾದರೂ ಭಾವನೆಯಿರಲಿಲ್ಲ. ಸ್ತ್ರೀಯರ ಅಧಿಕಾರವು ಪುರುಷರ ಅಧಿಕಾರಕ್ಕೆ ಸಮಾನವಾದುದಾಗಿತ್ತು. ಪುರುಷರಂತೆಯೇ ಅವರೂ ಸುಶಿಕ್ಷಿತರಾಗಿ ಸರ್ವ ವಿಷಯಗಳಲ್ಲಿಯೂ ಸಮಾನಾಧಿಕಾರವನ್ನು ಪಡೆದಿದ್ದರು. ಕುದುರೆಗಳನ್ನೋ ರಥಗಳನ್ನೋ ಏರಿ ಆಯುಧಗಳನ್ನೂ ಅಸ್ತ್ರಗಳನ್ನೂ ಹಿಡಿದು ಅವರು ಸಮಯ ಬಂದಾಗ ಪುರುಷರೊಡನೆ ಯುದ್ಧಕ್ಕೂ ಹೊರಟು ಯುದ್ಧಮಾಡುತ್ತಿದ್ದರು. ಘೋಷಾ ಪದ್ಧತಿಯ ಕಲ್ಪನೆಯೇ ಇರಲಿಲ್ಲ. ವೇದಗಳ ಕಾಲದಲ್ಲಿ ಅನೇಕ ಋಷಿಗಳು ಸ್ತ್ರೀಯರೇ ಆಗಿದ್ದುದರಿಂದ ಸ್ತ್ರೀಯರು ಋಷಿಪದವಿಯನ್ನೂ ಪಡೆಯಬಹುದಾಗಿತ್ತು. ಅವರಲ್ಲಿ ಕೆಲವರು ಅವಿವಾಹಿತರಾಗಿಯೇ ಇದ್ದು ಬ್ರಹ್ಮಚಾರಿಣಿಯರಾಗಿ ತತ್ವವಿಚಾರದಲ್ಲಿಯೂ ಜ್ಞಾನಾರ್ಜನೆಯಲ್ಲಿಯೂ ತೊಡಗಿ ಋಷಿಗಳೊಡನೆ ವಾದಿಸುತ್ತಿದ್ದರು. ಬಾಲ್ಯವಿವಾಹವೇ ಇರಲಿಲ್ಲವಾದ ಕಾರಣದಿಂದ ತರುಣ ವಿತಂತುಗಳೇ ಇರಲಿಲ್ಲ. ವಿಧವೆಯರಾದವರು ಪುನರ್ವಿವಾಹವಾಗಲು ಅಡ್ಡಿಯಿರಲಿಲ್ಲ; ಆದರೆ ಅಂತಹ ವಿವಾಹಗಳು ಸಾಮಾನ್ಯವಾಗಿರಲಿಲ್ಲ. ಗೃಹಕಾರ್ಯದಲ್ಲಿಯೇ ಹೆಚ್ಚು ನಿರತರಾಗಿ ಶಿಶುಪಾಲನೆಯನ್ನು ತಮ್ಮ

ಕರ್ತವ್ಯವನ್ನಾಗಿ ಭಾವಿಸಿಕೊಂಡಿದ್ದಾಗ್ಯೂ ಸ್ತ್ರೀಯರು ಈ ಕಾಲದಲ್ಲಿ ಎಂತಹ ದಾಸ್ಯಕ್ಕೂ ಒಳಗಾಗಿರಲಿಲ್ಲ. ಸ್ತ್ರೀಯರಿಗೆ ಅಪೂರ್ವವಾದ ಗೌರವವೂ ಅಧಿಕಾರವೂ ಇತ್ತು.

ವಿವಾಹ

ವಿವಾಹವಿಧಿಯು ಸರಳವೂ ಗಂಭೀರವೂ ಆದ ಸಂಸ್ಕಾರವಾಗಿತ್ತು. ಪ್ರಾಪ್ತವಯಸ್ಕರಿಗೇ ವಿವಾಹವಾಗುತ್ತಿತ್ತು; ವಧುವಿಗಾಗಲಿ ವರನಿಗಾಗಲಿ ಅಯುಕ್ತವಾದ ನಿರ್ಬಂಧವಿರಲಿಲ್ಲ. ಸಪ್ತಪದಿ, ಹೋಮವಿಧಿಗಳೇ ವಿವಾಹ ಕರ್ಮವಾಗಿತ್ತು. ಈ ಕಾಲದಲ್ಲಿ ಆರ್ಯರ ಒಟ್ಟು ಸಂಖ್ಯೆಯು ಅನಾರ್ಯರ ಸಂಖ್ಯೆಗಿಂತ ಕಡಿಮೆಯಾಗಿತ್ತು; ಸಂಖ್ಯೆಯಲ್ಲಿ ಅಲ್ಪರಾಗಿದ್ದ ಆರ್ಯರು ತಮ್ಮ ಸಂತಾನವೃದ್ಧಿಗೆ ಸಹಜವಾಗಿ ಆಸೆಪಟ್ಟರು. ಅನಾರ್ಯ ಗುಂಪುಗಳ ಒತ್ತಿನಲ್ಲಿಯೇ ಜೀವಿಸುತ್ತಿದ್ದುದರಿಂದ ಆಗಾಗ್ಗೆ ಅನಿವಾರ್ಯವಾಗಿ ಇಬ್ಬರಿಗೂ ಸಂಬಂಧಗಳು ಮೊದಲಾದವು. ಆರ್ಯ ವೀರನೊಬ್ಬನು ಅನಾರ್ಯ ನಾಯಕನನ್ನು ಸೋಲಿಸಿ ಆತನ ಕುವರಿಯರನ್ನು ಸೆರೆಹಿಡಿದೋ, ಅನಾರ್ಯ ನಾಯಕನು ಆರ್ಯರ ಮಧ್ಯೆ ನುಗ್ಗಿ ಆರ್ಯಸ್ತ್ರೀಯನ್ನು ಬಲವಂತದಿಂದೆತ್ತಿಕೊಂಡು ಹೋಗಿಯೋ ಶುದ್ಧವಾದ ವೈದಿಕವಾದ ಆರ್ಯ ವಿವಾಹಗಳಲ್ಲದೆ ಅನೇಕ ವಿಧಗಳಲ್ಲಿ ಆರ್ಯರಿಗೂ ಅನಾರ್ಯರಿಗೂ ವಿವಾಹಗಳು ಬೆಳೆಯಲು ಈ ಸಂಹಿತೆಗಳ ಕಾಲದ ಕೊನೆಯಲ್ಲಿ ಪ್ರಾರಂಭವಾಯಿತು. ಇಂತಹ ಮಿಶ್ರ ವಿವಾಹಗಳಿಂದ ಮುಂದೆ ತೊಂದರೆಯಾಯಿತು; ತೊಂದರೆಯನ್ನು ನಿವಾರಿಸಲು ಅನೇಕ ನಿರ್ಬಂಧಗಳೂ ಕಟ್ಟುಗಳೂ ಆಚರಣೆಯಲ್ಲಿ ಹುಟ್ಟಬೇಕಾಯಿತು. ಋಕ್ಕುಗಳ ಕಾಲದಲ್ಲಿ ಅಂತಹ ಕಟ್ಟುಗಳು ತೋರಿಕೊಂಡಿರಲಿಲ್ಲ. ಆಗ ಬಹುವಿವಾಹಕ್ಕೆ ನಿಷೇಧವಿಲ್ಲದೆ ಇದ್ದಾಗ್ಯೂ ಸಾಮಾನ್ಯವಾಗಿ ಏಕ ವಿವಾಹವೇ ಆಚಾರವಾಗಿತ್ತು. ವರ್ಣಸಾಂಕರ್ಯದ ಭಯವಿರಲಿಲ್ಲ. ಹಿಮವಂತನ ಒತ್ತಿನಲ್ಲಿ ವಿಶಾಲನದಿಗಳ ಬಯಲುಗಳಲ್ಲಿ ಧೀರವೂ ಪೂರ್ಣವೂ ಆದ ಪ್ರಕೃತಿಯ ಎದೆಯ ಮೇಲೆ ಜೀವಿಸುತ್ತಿದ್ದ ವೈದಿಕ ಕಾಲದ ಆರ್ಯರು ತೇಜಸ್ವಿಗಳಾಗಿ ಜೀವನದಲ್ಲಿ ಸಂತೋಷಪಡುತ್ತ ಪೌರುಷವನ್ನೂ ಉಲ್ಲಾಸವನ್ನೂ ಬೀರುವಂತಹ ವಿದ್ಯೆಗಳಲ್ಲಿ ಪರಿಣತರಾಗಿ ಆನಂದಪಡುತ್ತಿದ್ದರು. ಪ್ರತಿ ಆರ್ಯನೂ ಧನುರ್ಬಾಣಗಳನ್ನೂ ಗದಾ

ಖಡ್ಗಗಳನ್ನೂ ಉಪಯೋಗಿಸಬಲ್ಲವನಾಗಿದ್ದನು. ಬಾಹುಬಲಕ್ಕೆ ಗೌರವವಿದ್ದ ಕಾಲವಾದುದರಿಂದ ಓಡುವುದು, ಹಾರುವುದು, ಸವಾರಿ ಮಾಡುವುದು, ಈಜುವುದು, ಗುರಿಯಿಟ್ಟೆಸೆಯುವುದು, ಕುಸ್ತಿ ಮಾಡುವುದು ಅವರಲ್ಲಿ ವಿದ್ಯೆಗಳೂ ಆಗಿದ್ದವು, ವಿನೋದಗಳೂ ಆಗಿದ್ದವು. ಕಾಲ ಕಳೆಯುತ್ತ ಧನುರ್ವಿದ್ಯೆಯು ವಿಸ್ತಾರವಾಯಿತು; ಹನ್ನೆರಡು ವರ್ಷಗಳ ಅಭ್ಯಾಸವು ಬೇಕಾಯಿತು; ಆ ವಿದ್ಯೆಯೇ ಒಂದು ಉಪವೇದವೆನ್ನಿಸಿತು. ಗಾನ ನೃತ್ಯಗಳೂ ಅವರಿಗೆ ಪ್ರಿಯವಾಗಿದ್ದವು. ಸಾಮಸಂಹಿತೆಯಲ್ಲಿ ಗಾನವೇ ಪ್ರಧಾನವಾದುದಲ್ಲದೆ ಆ ವಿದ್ಯೆಯು ಗಾಂಧರ್ವವೇದವೆಂಬ ಉಪವೇದವಾಗಿ ಗೌರವ ಪಾತ್ರವಾಯಿತು. ತಂಬೂರಿ, ವೀಣೆ, ವಾಣ, ದುಂದುಭಿಗಳೆಂಬ ವಾದ್ಯಗಳು ಸಂಹಿತೆಗಳ ಕಾಲದಲ್ಲಿಯೇ ಉಪಯೋಗದಲ್ಲಿದ್ದವು. ನೃತ್ಯವೂ ಹಾಗೆಯೇ ವಿಸ್ತಾರವನ್ನು ಪಡೆಯಿತು. ಕಲಾಸಕ್ತರೂ ಪೌರುಷವಂತರೂ ಆದ ಆರ್ಯರು ಮಲ್ಲವಿದ್ಯೆಯಲ್ಲಿ ಅನೇಕವೇಳೆ ಪರೀಕ್ಷೆಗಳನ್ನೂ ಸ್ಪರ್ಧೆಗಳನ್ನೂ ನಡೆಸಿ ವಿನೋದಗೊಳ್ಳುತ್ತಿದ್ದರು. ಯುದ್ಧದಲ್ಲಿ ಜಯಲಾಭವಾದಾಗ ಉತ್ಸವಗಳನ್ನು ನಡೆಸುವುದಕ್ಕಾಗಿ ಸಂತೋಷ ಕೂಟಗಳಲ್ಲಿ ನೆರೆದು ಸೋಮಪಾನ, ದ್ಯೂತ, ಮಲ್ಲವಿದ್ಯೆಗಳಲ್ಲಿ ಆನಂದಪಡುತ್ತಿದ್ದರು. ಜಯ ಪ್ರಾಪ್ತಿಯಾದ ವೇಳೆಗಳಲ್ಲದೆ ಪರ್ವಕಾಲಗಳಲ್ಲಿ ಅಂದರೆ ಪೌರ್ಣಿಮಾ, ಅಮಾವಾಸ್ಯೆ, ವಸಂತ ಸಮಯ, ಸಂಕ್ರಾಂತಿಗಳಲ್ಲಿಯೂ ವಿನೋದಗಳನ್ನನುಭವಿಸುತ್ತಿದ್ದರು. ಕಾಲಕ್ರಮದಲ್ಲಿ ಈ ಹಬ್ಬಗಳ ಜತೆಗೆ ವೀರಪುರುಷರ ಜನ್ಮದಿನಗಳು ಮುಂತಾದವು ಸೇರಿಕೊಂಡು ಹಬ್ಬಗಳು ಸಂಖ್ಯೆಯಲ್ಲಿ ಹೆಚ್ಚಿದವು. ಯಜ್ಞಯಾಗಾದಿಗಳೂ ಅಂತಹ ವಿನೋದಗಳಿಗೆ ಅವಕಾಶ ಕೊಡುತ್ತಿದ್ದವು. ಆರ್ಯರು ಪೂಜಿಸುತ್ತಿದ್ದ ದೇವ ದೇವತೆಗಳು ಉಲ್ಲಾಸಯುಕ್ತರಾದವರೂ ಸಂತೋಷಪ್ರಿಯರೂ ಆಗಿದ್ದು ತಮ್ಮ ಉಪಾಸಕರ ವಿನೋದಸುಖಗಳಲ್ಲಿ ತಾವೂ ಭಾಗಿಗಳಾಗುತ್ತಿದ್ದರು. ಒಂದು ದೊಡ್ಡ ಯುದ್ಧ ನಡೆದ ತರುವಾಯವೋ ಯಜ್ಞಸಮಾಪ್ತಿಯ ವೇಳೆಯಲ್ಲಿಯೋ ಹಬ್ಬದ

ವಿನೋದಗಳು

ಹಬ್ಬಗಳು

ದ್ಯೂತ

ಸಮಯದಲ್ಲಿಯೋ ಆರ್ಯವೀರರಲ್ಲಿ ಕೆಲವರು ಸೋಮಪಾನದಿಂದ ಮತ್ತರಾಗುವುದೂ, ಕೆಲವರು ವೈಮರೆತು ದ್ಯೂತದಲ್ಲಿ ಮಗ್ನರಾಗಿ ತಮ್ಮ ಹೆಂಡತಿ ಮಕ್ಕಳನ್ನೂ ಸ್ವಂತಸ್ವಾತಂತ್ರ್ಯವನ್ನೂ ಪಣವಾಗಿ ತೊಟ್ಟು ವಿವೇಕಪ್ರಾಪ್ತಿಯಾದ ಮೇಲೆ ಪಶ್ಚಾತ್ತಾಪಪಡುವುದೂ ಅಪರೂಪವಾಗಿರಲಿಲ್ಲ. ದ್ಯೂತವೆನ್ನುವುದು ಕಾಲ ಕಳೆಯುತ್ತ ವೀರನ ಲಕ್ಷಣವೆನ್ನಿಸಿತು; ದ್ಯೂತಕ್ಕೆ ಕರೆದಾಗ ಬಾರದಿರುವುದು ಹೇಡಿಯ ಲಕ್ಷಣವೆನ್ನಿಸಿತು.

**ಸವರ್ಣರು**

ಆರ್ಯರು ಎರಡು ಶಾಖೆಗಳಾಗಿ ಪ್ರವೇಶಮಾಡಿದರೆಂದೂ, ಮೊದಲು ಬಂದವರು ದಸ್ಯುಗಳನ್ನು ಗೆದ್ದ ಸ್ವಲ್ಪ ಕಾಲದ ತರುವಾಯ ಎರಡನೆ ಗುಂಪಿನವರು ಬಂದು ಅವರನ್ನು ಗೆದ್ದುದರಿಂದ ಮೊದಲಿನವರು ಸೋತವರಾಗಿ ಉತ್ತಮಸ್ಥಾನಗೌರವಗಳನ್ನು ಬಿಟ್ಟುಕೊಟ್ಟರೆಂದೂ, ಅದನ್ನನುಸರಿಸಿ ಜಯಶಾಲಿಗಳಾದವರು ಬ್ರಹ್ಮಕ್ಷತ್ರಿಯ ವರ್ಗಗಳಾಗಿಯೂ ಇತರರೆಲ್ಲರೂ ವೈಶ್ಯರಾಗಿಯೂ ಪರಿಣಮಿಸಿದರೆಂದೂ, ಕೆಲವರು ಪಂಡಿತರು ಅಭಿಪ್ರಾಯಪಟ್ಟರು. ಇತ್ತೀಚೆಗೆ ಎರಡು ಶಾಖೆಗಳ ವಾದವನ್ನು ಗೌರವಿಸುವುದಿಲ್ಲ. ಆರ್ಯಜನರಲ್ಲಿ ಸಾಮಾನ್ಯರೆಲ್ಲರೂ ವಿಶ್ ಎಂಬ ಹೆಸರನ್ನು ತಾಳಿ ವೈಶ್ಯರ ಮೂಲವಾದರು. ಬಲಿಷ್ಠರೂ ಯೋಧರೂ ಆದವರು ರಾಜನ್ಯ ಅಥವಾ ಕ್ಷತ್ರಿಯರೆನ್ನಿಸಿದರು. ತತ್ವವಿಚಾರದಲ್ಲಿ ನಿರತರಾದವರೂ ಜ್ಞಾನಾರ್ಜನೆಯಲ್ಲಿ ತೊಡಗಿ ಸಾಮಾನ್ಯರಿಗಿಂತ ಹೆಚ್ಚಾದ ಬುದ್ಧಿಬಲವನ್ನು ಪಡೆದಿದ್ದವರು ವಿಪ್ರರೆನಿಸುತ್ತಿದ್ದರು. ವಿಪ್ರ ಕ್ಷತ್ರಿಯ ಶಬ್ದಗಳು ಗುಣಸೂಚಕವಾಗಿದ್ದವೇ ವಿನಾ ಪ್ರತ್ಯೇಕತೆಯನ್ನು ತಾಳಿದ ವರ್ಗಗಳ ಅಥವಾ ಜಾತಿಗಳ ಹೆಸರಾಗಿರಲಿಲ್ಲ. ಸಂಹಿತೆಗಳ ಕಾಲದಲ್ಲಿ ಇದ್ದುದು ಎರಡೇ ವರ್ಣ, ಆರ್ಯ ಮತ್ತು ಅನಾರ್ಯ, ಅಥವಾ ಸವರ್ಣ ಮತ್ತು ಅವರ್ಣ.

**ಅವರ್ಣರು**

ಈ ಭೇದವೊಂದು ವಿನಾ ಬೇರಾವ ಭೇದವೂ ಈ ಕಾಲದಲ್ಲಿರಲಿಲ್ಲ. ಆರ್ಯರಲ್ಲಿ ಅಥವಾ ಸವರ್ಣರಲ್ಲಿ ವಿವಾಹಸಂಬಂಧಕ್ಕಾಗಲಿ ಸಹಭೋಜನಕ್ಕಾಗಲಿ ಯಾವ ಅಡ್ಡಿಯೂ ಇರಲಿಲ್ಲ. ಅನಾರ್ಯರೊಡನೆ ಸಂಬಂಧಕ್ಕೆ ಅಡ್ಡಿಯಿತ್ತು. ಗೆದ್ದವರಾಗಿ ವಿಶಿಷ್ಟವೆನಿಸಿದ ರೀತಿನೀತಿಗಳನ್ನುಳ್ಳ ಆರ್ಯರು ಸಹಜವಾಗಿ ತಮ್ಮ

ಪ್ರತ್ಯೇಕತೆಯನ್ನು ಕಾಪಾಡಿಕೊಳ್ಳಲು ಸಿದ್ಧರಾದರು. ಇತರ ದೇಶಗಳಲ್ಲಿ ಬೇರೆ ಬೇರೆ ಕಾಲಗಳಲ್ಲಿ ಇಂತಹ ಸಂದರ್ಭಗಳಲ್ಲಿ ಜಯಶಾಲಿಗಳಾದವರು ಪರಾಜಿತ ರಾದವರನ್ನು ದಾಸ್ಯಕ್ಕೆ ಗುರಿಮಾಡಿಯೋ ಸರ್ವನಾಶಕ್ಕೆ ಗುರಿಮಾಡಿಯೋ ತಮ್ಮ ಪ್ರತ್ಯೇಕತೆಯನ್ನು ರಕ್ಷಿಸಿಕೊಂಡರು. ಅಲ್ಪಸಂಖ್ಯಾಕರಾಗಿದ್ದಾಗ್ಯೂ ಆರ್ಯರು ಅಂತಹ ಕ್ರೂರನೀತಿಯನ್ನವಲಂಬಿಸದಿದ್ದುದು ಅವರ ಶಾಂತ ಸ್ವಭಾವವನ್ನು ಸೂಚಿಸುತ್ತದೆ. ಪ್ರಕೃತಿಯು ಸಮೃದ್ಧಿಯನ್ನೊಡ್ಡಿ ಜೀವನ ಸೌಲಭ್ಯವನ್ನು ನೀಡಿದ ದೇಶದಲ್ಲಿ ಶಾಂತಿಯೇ ಸಾಧನವಾದುದು ಸಹಜ.

## ಧಾರ್ಮಿಕ ರೀತಿ

**ದೇವತೆಗಳು**

ಕ್ರೂರದೇವತೆಗಳನ್ನು ಪೂಜಿಸಿ ರಕ್ತಬಲಿಯನ್ನು ಅರ್ಪಿಸುತ್ತಿದ್ದುದೇ ಅನಾರ್ಯಜನರಲ್ಲಿ ಆರ್ಯರಿಗೆ ನಿಂದ್ಯವಾಗಿ ಕಂಡಿತು. ಸಂಹಿತೆಗಳ ಕಾಲದ ಆರ್ಯರು ಗಂಭೀರ ವಾದ ಪ್ರಕೃತಿಯ ಮಧ್ಯೆ ಜೀವಿಸುತ್ತ ಎಳೆಮಕ್ಕಳು ಚಂದ್ರನನ್ನು ಕಂಡು ಆನಂದಿಸಿದಂತೆಯೇ ಸೃಷ್ಟಿಯ ಅದ್ಭುತವ್ಯಾಪಾರ ಗಳನ್ನು ಕಂಡು ಅಚ್ಚರಿಯನ್ನು ಪಟ್ಟರು. ಉತ್ತುಂಗಶೈಲಗಳೂ, ವಿಶಾಲ ವಾದ ನದಿಗಳೂ, ಮಹದರಣ್ಯಗಳೂ ಅವರ ಮನಸ್ಸುಗಳಲ್ಲಿ ಅದ್ಭುತವನ್ನೂ ಶಾಂತಿಯನ್ನೂ ತುಂಬಿದವು. ಪೃಥಿವಿ ಆಕಾಶಗಳು, ಅಗ್ನಿ ಸೂರ್ಯರು, ಸಿಡಿಲು ಗುಡುಗು ಮಳೆಗಳು, ಮಾರುತ ಮತ್ತು ಕತ್ತಲೆ ತುಂಬಿದ ಕಾನನ ಗಳು ಎಲ್ಲವೂ ಕರುಣೆಯಿಂದಲೂ ಶಕ್ತಿಯಿಂದಲೂ ಕೂಡಿದ ದೇವತೆಗಳಾಗಿ ಕಂಡುಬಂದವು; ಆರ್ಯರು ಆ ದೇವತೆಗಳಲ್ಲಿ ಪ್ರೀತಿಯನ್ನಿಟ್ಟು, ಕೃತಜ್ಞತೆಯಿಂದ ಆಹುತಿಗಳನ್ನು ಮಂತ್ರಸಹಿತವಾಗಿ ಹೋಮಮಾಡಿ ಅರ್ಪಿಸುತ್ತಿದ್ದರು. ದ್ಯಾವಾಪೃಥಿವೀ, ವರುಣ, ಮಿತ್ರ, ಉಷಸ್, ಅಗ್ನಿ, ಇಂದ್ರ ಮೊದಲಾದ ದೇವತೆಗಳನ್ನೇ ಅವರು ಮೊದಮೊದಲು ಕರೆದು ಸ್ತುತಿಸುತ್ತಿದ್ದರು. ಆಕಾಶಕ್ಕೆ ಪತಿಯಾದ ವರುಣನೂ ಜಯಕ್ಕೆ ದೇವತೆಯಾದ ಇಂದ್ರನೂ ಅವರಿಗೆ ಪ್ರೀತಿಪಾತ್ರರು. ಕಾಲ ಕಳೆಯುತ್ತ ಪೂಷನ್, ಪರ್ಜನ್ಯ, ತ್ವಷ್ಟೃ, ಅಶ್ವಿನೀದೇವತೆಗಳು, ಬೃಹ್ಮನಸ್ಪತಿ ಮುಂತಾದ ಇತರ ದೇವತೆಗಳನ್ನೂ ಕರೆದು ಸ್ತೋತ್ರಮಾಡಿದರು. ಈ ದೇವತೆಗಳ

ಆರಾಧನೆಯಲ್ಲಿ ದೇವಸ್ಥಾನಗಳಾಗಲಿ ಮೂರ್ತಿಪೂಜೆಯಾಗಲಿ ಇರಲೇ ಇಲ್ಲ. ಅನಾರ್ಯರು ದೇವಾಲಯಗಳಲ್ಲಿ ಮೂರ್ತಿಗಳನ್ನು ಪೂಜಿಸುತ್ತಿದ್ದರು; ಆರ್ಯರಲ್ಲ. ಅಂತರಿಕ್ಷವೇ ಆರ್ಯದೇವತೆಗಳ ಲೀಲಾಕ್ಷೇತ್ರವಾಗಿತ್ತು. ಮನುಷ್ಯರಂತೆಯೇ ಆಸೆಗಳೂ, ಇಷ್ಟಾನಿಷ್ಟಗಳೂ ದೇವತೆಗಳಿಗೂ ಉಂಟೆಂದು ಆರ್ಯರು ಭಾವಿಸಿದಾಗ್ಯೂ ಮೂರ್ತಿಪೂಜೆ ಮಾಡುತ್ತಿರಲಿಲ್ಲ. ಯಜ್ಞಗಳನ್ನು ಮಾಡಿಯೇ ದೇವತೆಗಳನ್ನು ಸಂತೋಷಗೊಳಿಸಲು



7. ಹಿಮವತ್ಪರ್ವತ ಪ್ರಾಂತ

ಯತ್ನಿಸುತ್ತಿದ್ದರು. ಈ ಆಚರಣೆಯನ್ನನುಸರಿಸಿದ್ದುದರಲ್ಲಿ ಆರ್ಯರು ಮುಗ್ಧರಂತೆ ಕಂಡರೂ ಗಂಭೀರವಾದ ವಿಚಾರಗಳು ಅವರಲ್ಲಿ ಸಾಮಾನ್ಯವಾದವು. ಯಜ್ಞಗಳು ವಿವಿಧವಾಗಿ ಹೆಚ್ಚಿದವು; ಹೆಚ್ಚುತ್ತ ಒಬ್ಬನೇ ಪುರೋಹಿತನು ಎಲ್ಲ ಯಜ್ಞಗಳನ್ನೂ ನಡೆಸಲು ಅಶಕ್ತನಾದನು. ಪುರೋಹಿತ

ಯಜ್ಞಗಳು

ರಲ್ಲಿಯೇ ಯಜ್ಞಕ್ರಿಯೆಯ ಜ್ಞಾನವು ವಿಸ್ತಾರವಾಗಿ ಯಾವುದೋ ಕೆಲವು ಯಜ್ಞವಿಧಿಗಳನ್ನು ಮಾತ್ರ ತಿಳಿಯಲು ಒಬ್ಬಾತನಿಗೆ ಸಾಧ್ಯವಾಯಿತು. ಅದೇ ಕಾಲದಲ್ಲಿಯೇ ಆಲೋಚನಾಪರರಾದವರು ಗಂಭೀರವಾದ ತತ್ವವಿಚಾರದಲ್ಲಿ ತೊಡಗಿದರು. ಮಾನವನೆಲ್ಲಿಂದ ಬರುವನು? ಮೃತಪಟ್ಟಮೇಲೆ ಎಲ್ಲಿಗೆ ಹೋಗುವನು? ಮೃತಿಯೆನ್ನುವುದೇನು? ಸೃಷ್ಟಿ ಪ್ರಕೃತಿಗಳೆಂಬುದೇನು? ಸೃಷ್ಟಿ ಹೇಗೆ ನಡೆಯಿತು? ಇತ್ಯಾದಿ ವಿಚಾರಗಳಲ್ಲಿ ಲೀನರಾದವರು ಅರಣ್ಯಗಳ ಮಧ್ಯೆ ಚಿಂತಿಸಿ ದಿವ್ಯದೃಷ್ಟಿಯನ್ನು ಪಡೆಯುವ ಸಾಧನೆಗಳಲ್ಲಿ ನಿರತರಾಗುತ್ತಿದ್ದರು. ಅಂತಹವರು ಸಭೆಗಳಲ್ಲಿ ನೆರೆದಾಗ ತತ್ವವಿಚಾರವನ್ನು ಹೂಡುತ್ತ ಜ್ಞಾನ ಸಾಧನೆ ಮಾಡುತ್ತಿದ್ದರು.

ತತ್ವವಿಚಾರ

ಆರ್ಯಜನರು ಮುಗ್ಧರಾಗಿದ್ದರೂ ಅಜ್ಞರಾಗಿರಲಿಲ್ಲ. ಅನೇಕ ದೇವತೆಗಳನ್ನು ಏಕಕಾಲದಲ್ಲಿ ಸ್ತುತಿಗೈಯುವಲ್ಲಿ ಉತ್ಕೃಷ್ಟ ಕಾವ್ಯವನ್ನು ನಿರ್ಮಿಸಿದರು. ಅನೇಕ ದೇವತೆಗಳನ್ನು ಸ್ಮರಿಸುತ್ತಿದ್ದಾಗ್ಯೂ ಎಲ್ಲರೂ ಒಬ್ಬನೇ ದೇವರ ವಿಧವಿಧರೂಪಗಳೆಂಬುದಾಗಿ ತಿಳಿದಿದ್ದರು. ಮರಣದ ತರುವಾಯ ಜೀವನಿರುವನೆಂದು ತಿಳಿದು ಆತ್ಮನ ಅಮರತ್ವವೆಂಬ ತತ್ವವನ್ನು ಅಂಗೀಕರಿಸಿದರು. ಪಿತೃಗಳಿಗೆ ಪಿತೃಯಜ್ಞವನ್ನು ಮಾಡಲುಪಕ್ರಮಿಸಿದರು. ಸೃಷ್ಟಿಯ ಮರ್ಮಗಳನ್ನು ತಿಳಿಯುವುದರಲ್ಲಿ ಅವರ ಉತ್ಸಾಹವು ಬರಬರುತ್ತ ಹೆಚ್ಚಿತು. ಸಾಮಾನ್ಯ ಜನರು ಯಜ್ಞಯಾಗಾದಿಗಳನ್ನು ನೆರವೇರಿಸುತ್ತ, ಮೃತದೇಹಗಳನ್ನು ದಹನಮಾಡುತ್ತ, ಪಿತೃಗಳಿಗೆ ಪಿಂಡಪ್ರದಾನವನ್ನು ಮಾಡುತ್ತಿದ್ದಲ್ಲಿ, ವಿಪ್ರರೆನಿಸಿದವರು ಅರಣ್ಯಗಳ ಮಧ್ಯೆ ತಪೋವನಗಳಲ್ಲಿ ಧ್ಯಾನನಿರತರಾಗಿ ದಿವ್ಯದೃಕ್ಕನ್ನು ಪಡೆದು ಅಮೋಘವಾದ ತತ್ವಗಳನ್ನು ಸಾಧಿಸುತ್ತಲೂ

ತಪೋವನ

ಆಗಾಗ್ಗೆ ಗ್ರಾಮಸ್ಥರಲ್ಲಿ ಕಾಣಿಸಿಕೊಂಡು ಅವರಿಗೆ ಹಿತವಾದವನ್ನು ಹೇಳುತ್ತಲೂ ಇರುತ್ತಿದ್ದರು. ಈ ಅರಣ್ಯವಾಸಿಗಳ ಸಾಧನೆಯೇ ಆರ್ಯರ ಸರ್ವಸ್ವಕ್ಕೂ ಮೂಲವಾದುದು. ಆರ್ಯರ ಸಂಸ್ಕೃತಿಯೆಲ್ಲಕ್ಕೂ ಅವರ ಸಾಧನೆಯೇ ತಿರುಳು. ಆ ಕಾರಣದಿಂದಲೇ ಈ ಕಾಲವನ್ನು ಋಷಿಗಳ ಕಾಲವೆಂಬುದಾಗಿ ಕರೆಯ ತಕ್ಕದ್ದು.

ಶಾಸ್ತ್ರ ವೃದ್ಧಿ

ಕೆಲವು ನೂರು ವರ್ಷಗಳ ಅನಂತರ ಸಾಹಸ ಪ್ರೀತಿಯಿಂದಲೂ, ರಾಜರ ಆಕಾಂಕ್ಷೆಯಿಂದಲೂ, ಸಂಖ್ಯಾವೃದ್ಧಿಯಿಂದಲೂ ಪ್ರೇರಿತರಾಗಿ ಆರ್ಯಜನರು ಸಿಂಧುನದಿಯ ಪ್ರದೇಶದಿಂದಲೇ ತೃಪ್ತರಾಗಿರದೆ ಪೂರ್ವದಿಕ್ಕಿನಲ್ಲಿ ಮುಂದುಮುಂದಕ್ಕೆ ಸಾಗುತ್ತ ಯಮುನಾ ಗಂಗಾ ನದಿಗಳ ಬಯಲುಗಳಲ್ಲಿ ನೆಲೆಗಳನ್ನೂ ರಾಜ್ಯಗಳನ್ನೂ ಕಟ್ಟಲು ತೊಡಗಿದರು. ಆ ಕಾಲದಲ್ಲಿ ಶತದ್ರು ಮತ್ತು ಯಮುನಾ ನದಿಗಳ ಮಧ್ಯೆ ಪ್ರಾಯಕವಾಗಿ ಪ್ರವಹಿಸು ತ್ತಿದ್ದ ಸರಸ್ವತೀ ಧೃಷದ್ವತೀ ನದಿಗಳ ಪ್ರದೇಶವು ಋಷಿಗಳ ಭೂಮಿ ಯಾಗಿತ್ತು. ಅಲ್ಲಿಯ ಆಶ್ರಮಗಳಲ್ಲಿ ನೆಲೆಸಿದ್ದ ಋಷಿಗಳು ತತ್ವವಿಚಾರದಲ್ಲಿ ಮಾತ್ರವೇ ಮಗ್ನರಾಗದೆ ಶಾಸ್ತ್ರವಿಚಾರದಲ್ಲಿಯೂ ದತ್ತಮನಸ್ಕರಾಗಿ ಜ್ಯೋತಿಷ, ಆಯುರ್ವೇದ, ಚಿಕಿತ್ಸಾ ಶಾಸ್ತ್ರಗಳನ್ನು ಸಾವಧಾನವಾಗಿ ಅಭ್ಯಾಸಮಾಡುತ್ತಿದ್ದರು. ಶುಲ್ವಸೂತ್ರಗಳೆಂಬ ಗ್ರಂಥವು ಆಗಲೇ ಹುಟ್ಟಿ ಶಾಸ್ತ್ರಗಳಿಗೂ ಕಲೆಗಳಿಗೂ ಸಹಾಯಕವಾಗಿತ್ತು. ಅಹೋರಾತ್ರಿ, ಶುಕ್ಲ ಕೃಷ್ಣ ಪಕ್ಷಗಳು, ಋತುಗಳು, ಸೂರ್ಯ ಚಂದ್ರ ನಕ್ಷತ್ರಗಳ ಗತಿಗಳು ಜ್ಯೋತಿಶ್ಶಾಸ್ತ್ರದ ಜ್ಞಾನಕ್ಕೆ ಮೊದಲು ಪ್ರೇರಕವಾದವು. ಕಾಲ ನಿರ್ಣಯವು ಯಜ್ಞಗಳ ಆಚರಣೆಯಲ್ಲಿ ಅವಶ್ಯವಾಗಿ ಶಾಸ್ತ್ರವು ಇನ್ನೂ ಮುಂದೆ ಸಾಗಿತು. ಅದೇ ಸಮಯದಲ್ಲಿಯೇ ವೇದಿಕೆಗಳ ರಚನೆಯಲ್ಲಿ ವೃತ್ತ ತ್ರಿಭುಜ ಚತುರ್ಭುಜಗಳ ಆಕೃತಿಗಳ ಪರಸ್ಪರಗುಣವಿಶೇಷಗಳ ಜ್ಞಾನವೂ ಉಂಟಾಗಿ ಜ್ಯಾಮಿತಿ ಶಾಸ್ತ್ರವೂ ಗಣಿತ ಶಾಸ್ತ್ರವೂ ಅಭಿವೃದ್ಧಿ ಯಾದವು. ಯುದ್ಧ ಸಮಯದಲ್ಲಿಯೇ ಶಸ್ತ್ರ ಚಿಕಿತ್ಸೆಯು ಆರಂಭವಾಯಿತು; ಅರಣ್ಯವಾಸಿಗಳಾದ ಋಷಿಗಳು ವನಸ್ಪತಿಗಳ ಪರಿಚಯವನ್ನು ಪಡೆದುದಲ್ಲದೆ ಅವುಗಳ ಗುಣಾವಗುಣಗಳನ್ನೂ ಪರೀಕ್ಷೆಯಿಂದ ನಿರ್ಧರಿಸಿ, ವನಸ್ಪತಿ ಶಾಸ್ತ್ರವನ್ನೂ ವೈದ್ಯಶಾಸ್ತ್ರವನ್ನೂ ಪೋಷಿಸಿದರು. ಅಗ್ನಿವೇಶನೆಂಬ ಮಹರ್ಷಿಯು ಆಯುರ್ವೇದ ಶಾಸ್ತ್ರವನ್ನು ಸಾಧಿಸಿ ಅನೇಕರ ಕೃತಜ್ಞತೆಗೆ ಪಾತ್ರನಾದನು. ಇಂದಿಗೂ ಆಯುರ್ವೇದ ಪಂಡಿತರು ಅಶ್ವಿನೀದೇವತೆಗಳನ್ನೂ ಅಗ್ನಿವೇಶನನ್ನೂ ಸ್ಮರಿಸುತ್ತಲೇ ಇರುವರು. ಅಗ್ನಿವೇಶನಂತೆಯೇ ಅನೇಕ ಋಷಿಗಳಿದ್ದರು. ಪ್ರತಿ ಋಷಿಯೂ ತನ್ನ ಸಾಧನೆಯನ್ನು ತನ್ನ

ಶಿಷ್ಯರಿಗೆ ಹೇಳಿಕೊಟ್ಟು ಅವರು ಅದನ್ನು ಇತರರಿಗೆರೆದು ಗುರು ಋಣವನ್ನು ತೀರಿಸಬೇಕೆಂದು ಬೋಧಿಸುತ್ತಿದ್ದನು.

ಶಿಕ್ಷಣ

ತಪೋವನಗಳಲ್ಲಿಯೇ ಶಿಕ್ಷಣವು ನಡೆಯುತ್ತಿತ್ತು. ಶಿಕ್ಷಾರ್ಥಿಯು ತಾನು ಪಡೆದ ಗುರುವನ್ನು ಹಿಂಬಾಲಿಸಿ ಆತನ ಆಶ್ರಮದಲ್ಲಿಯೇ ವಾಸಿಸುತ್ತ ಗುರು ಶುಶ್ರೂಷೆ ಮಾಡಿ ಆತನು ಇಷ್ಟಪಟ್ಟು ಉಪದೇಶಮಾಡಿದಾಗ ಶ್ರದ್ಧಾ ಭಕ್ತಿ ವಿನಯಗಳಿಂದ ಗ್ರಹಿಸುತ್ತ ಕಾಲಾನಂತರದಲ್ಲಿ ತಾನೂ ಗುರುವೆನಿಸುತ್ತಿದ್ದನು. ತಂದೆತಾಯಿಗಳು ತಮ್ಮ ಕುಲದಲ್ಲಿ ಹೆಸರು ಪಡೆದಿದ್ದ ಋಷಿಯೊಬ್ಬನ ಬಳಿಗೆ ತಮ್ಮ ಮಕ್ಕಳನ್ನು ಕರೆದುಕೊಂಡು ಹೋಗಿ ಒಪ್ಪಿಸುವುದು ಈ ಕಾಲದಲ್ಲಿಯೇ ಪದ್ಧತಿಯಾಗಿ ಬಳೆದು ಅನಂತರ ಉಪನಯನವಿಧಿಯೆಂಬ ಹೆಸರನ್ನು ಪಡೆಯಿತು. ಮೂರು ವೇದಗಳು, ನಾಲ್ಕು ಉಪವೇದಗಳು, ಆರು ಅಂಗಗಳು ಅಲ್ಲದೆ ಶಾಸ್ತ್ರಗಳೂ ಕಲೆಗಳೂ ಶಿಕ್ಷಣದ ರಾಶಿಯಾಗಿದ್ದವು. ಷಡಂಗಗಳೆಂಬವು ಈ ಕಾಲದ ಕಡೆ ಕಡೆಯಲ್ಲಿ ರಚಿತವಾದವುಗಳು. ವ್ಯಾಕರಣ, ಛಂದಸ್, ನಿರುಕ್ತ ಮುಂತಾದ ಶಾಸ್ತ್ರಗಳ ವ್ಯಾಸಂಗದಿಂದ ಆರ್ಯಭಾಷೆಯು ಪರಿಷ್ಕೃತವಾಗಿ ಸಂಸ್ಕೃತವೆಂಬ ಹೆಸರಿಗೆ ಯೋಗ್ಯವಾಯಿತು. ಇಷ್ಟು ವಿದ್ಯಾರಾಶಿಯೂ ಸಂಹಿತೆಗಳ ರೀತಿಯಲ್ಲಿಯೇ ಬಾಯಿಂದ ಬಾಯಿಗೆ ಅಭ್ಯಾಸವಾಗುತ್ತಿದ್ದಿತೇ ವಿನಾ ಲಿಖಿತವಾಗಿ ಪ್ರಚಾರವಾಗಲಿಲ್ಲ. ಲಿಪಿಯು ಈ ಕಾಲದ ಆರ್ಯರಿಗೆ ರೂಢಿಯಲ್ಲಿದ್ದಿತೇ ಇಲ್ಲವೇ ಎನ್ನುವುದು ವಾದಗ್ರಸ್ತವಾಗಿಯೇ ಇದೆ.

ಮಹರ್ಷಿಗಳ ಕಾಲವೆಂಬ ಈ ಕಾಲದ ಅವಧಿಯು ಎಲ್ಲಿಂದ ಎಲ್ಲಿಯವರೆಗೆ ಎಂಬುದು ನಿಶ್ಚಿತವಾದುದಲ್ಲ. ಕ್ರಿ. ಪೂ. 5000 ದಿಂದ 4000ದ ವರೆಗೆಂದಾದರೂ ಭಾವಿಸಿಕೊಳ್ಳಬಹುದು; ಕ್ರಿ. ಪೂ. 4500 ರಿಂದ 3500ರ ವರೆಗೆಂದಾದರೂ ಭಾವಿಸಬಹುದು. ಮೊಹೆಂಜೊದಾರೋ, ಹರಪ್ಪ ನಗರಗಳ ವಿವರವು ಆದ್ಯಂತವಾಗಿ ಪ್ರಕಾಶವಾದರೆ ಈ ಪ್ರಶ್ನೆಗೆ ಸಮರ್ಪಕವಾದ ಸಮಾಧಾನವನ್ನು ಒದಗಿಸಲು ಸಹಾಯವಾಗಬಹುದು.

# ಬ್ರಹ್ಮರ್ಷಿ ಸಾರ್ವಭೌಮರ ಕಾಲ

[ಅಥವಾ ಬ್ರಾಹ್ಮಣಗಳ ಕಾಲ, ಮಹಾಕಾವ್ಯ ಕಾಲ, ಅಥವಾ ಆರ್ಯಾವರ್ತವು ಭರತವರ್ಷವಾಗಿ ವಿಸ್ತಾರಪಡೆದ ಕಾಲ.]

(ಕ್ರಿ. ಪೂ. ಸುಮಾರು 3500ರಿಂದ 1200ರವರೆಗೆ.)

1. ಆರ್ಯಾವರ್ತ ವಿಸ್ತಾರ, ಏಕರಾಷ್ಟ್ರ ಸಾಧನೆ, ಯುದ್ಧನೀತಿ, ಸಾರ್ವಭೌಮರು. 2. ರಾಷ್ಟ್ರನೀತಿ, ರಾಜತ್ವ, ಪ್ರಜಾಧಿಕಾರ. 3. ಉದ್ಯೋಗ ವ್ಯಾಪಾರಗಳು. 4. ವರ್ಣ ಸಂಘರ್ಷಣ, ವೃತ್ತಿ ಪಾರಂಪರ್ಯ, ವರ್ಣಭೇದ, ಸ್ತ್ರೀಯರ ಪದವಿ. 5. ಋಷಿಜನರು, ತಪೋವನಗಳು, ತತ್ವ—ಶಾಸ್ತ್ರ—ಕಲೆಗಳ ವೃದ್ಧಿ, ಪರಿಷ್ಕಾರ ದಾರಿದ್ರ್ಯ. 6. ಮೋಕ್ಷ ಮಾರ್ಗಗಳು.

## ಮಹಾಪುರುಷರು

ಸಾರ್ವಭೌಮರು, ರಾಜರ್ಷಿಗಳು, ಬ್ರಹ್ಮರ್ಷಿಗಳು, ಆದಿಕವಿಗಳು, ಸೂರ್ಯಚಂದ್ರ ವಂಶಜರು : ಜನಕ, ಯಾಜ್ಞವಲ್ಕ್ಯ, ಶ್ರೀಕೃಷ್ಣ, ಇತ್ಯಾದಿ ; ವಾಲ್ಮೀಕಿ, ವ್ಯಾಸರು; ಕ್ಷತ್ರಿಯ ದೇವಿಯರು ಮತ್ತು ಋಷಿಪತ್ನಿಯರು.

## ಆರ್ಯಾವರ್ತ ವಿಸ್ತಾರ

ಋಷಿಗಳೂ ಋಷಿಕುಮಾರರೂ ತಪೋವನನಿವಾಸಿಗಳಾಗಿ ಆಕಾಲಕ್ಕೇ ಪುರಾತನವೆನಿಸಿದ್ದ ಸಂಹಿತೆಗಳನ್ನು ಸಂಗ್ರಹಿಸುತ್ತಲೂ, ಸಂಸ್ಕೃತ ಭಾಷೆಯನ್ನು ಕ್ರಮಗೊಳಿಸುತ್ತಲೂ, ತತ್ವರಾಶಿಯನ್ನು ಸ್ವಾಧೀನಪಡಿಸಿಕೊಳ್ಳುತ್ತಲೂ ಇದ್ದಾಗ ಪ್ರತಿ ಕುಲದ ರಾಜನ್ಯರೂ ಸಾಹಸದಿಂದ ಪ್ರೇರಿತರಾಗಿ ಇನ್ನೂ ವಿಸ್ತಾರವಾಗಿ ನೆಲೆಸಿ ರಾಜ್ಯಕಟ್ಟಲು ಉದ್ಯುಕ್ತರಾಗುತ್ತಿದ್ದರು. ಪೂರ್ವ ದಿಕ್ಕಿನಲ್ಲಿ ಅವರು ಯಮುನಾ ಗಂಗಾ ನದಿಗಳನ್ನು ದಾಟಿ ಅಲ್ಲಿ ನೆಲೆಸಿದ್ದ ದ್ರಾವಿಡ ಜನರನ್ನು ಗೆದ್ದು, ಇನ್ನೂ ಮುಂದೆ ಸದಾನೀರಾ (ಗಂಡಕೀ), ಕರತೋಯಾ, ಹಿರಣ್ಯಬಾಹಾ (ಶೋಣಾ), ಸರಯೂ

ನದಿಗಳ ಪ್ರದೇಶಗಳನ್ನು ಆಕ್ರಮಿಸಿ ಬ್ರಹ್ಮಪುತ್ರಾ ನದಿಯವರೆಗೂ ನುಗ್ಗಿ, ಅಲ್ಲಲ್ಲಿ ರಾಜ್ಯಗಳನ್ನು ಸ್ಥಾಪಿಸಿಕೊಂಡರು. ದೇಶವು ಸಮತಟವೇ ಆದ ಮೈದಾನವಾದುದರಿಂದ ತಡೆಯೇ ಇಲ್ಲದೆ ಈ ರೀತಿ ಆರ್ಯಕುಲಗಳು ಸಂಚರಿಸುತ್ತ ಪ್ರತಿ ಕುಲವೂ ಒಂದೊಂದು ರಾಜ್ಯವನ್ನು ಪಡೆಯುವಂತಾಯಿತು. ಕಾಂಬೋಜ ಸಿಂಧು ದೇಶಗಳಿಂದ ಪ್ರಾಗ್ಜ್ಯೋತಿಷ ಕಾಮರೂಪಗಳವರೆಗೆ ಹಿಮಾಲಯ ವಿಂಧ್ಯಪರ್ವತಗಳ ನಡುವಣ ಪ್ರದೇಶದಲ್ಲಿ ಫಲವತ್ತಾದ ಬಯಲಿನ ಭಾಗಗಳೆಲ್ಲವೂ ಆರ್ಯಕುಲಗಳ ಸ್ವಾಧೀನವಾಗಿ ಆರ್ಯ ರಾಷ್ಟ್ರಗಳು ಸಿದ್ಧವಾದವು. ಕುಲವು ನೆಲೆಸಿದ ಪ್ರದೇಶಕ್ಕೆ ಆ ಕುಲದ ಹೆಸರೇ ಒದಗಿತು; ರಾಜ್ಯಗಳ ಹೆಸರುಗಳು ಕುಲಗಳ ಹೆಸರುಗಳೇ. ಈ ರೀತಿಯಲ್ಲಿ ಆರ್ಯಾವರ್ತವೆಂಬ ಹೆಸರು ಸಪ್ತಸಿಂಧುವಿಗೆ ಮಾತ್ರ ಒಪ್ಪದೆ ಉತ್ತರಭಾಗವೆಲ್ಲಕ್ಕೂ ಒಪ್ಪಿ ವಿಸ್ತಾರವಾಯಿತು. ವಿಂಧ್ಯಪರ್ವತಕ್ಕೆ ದಕ್ಷಿಣದಲ್ಲಿ ದಟ್ಟವಾದ ಅರಣ್ಯಗಳಿಂದಲೂ ಅನಾರ್ಯ ಜನರಿಂದಲೂ ಕೂಡಿದ್ದ ಪರ್ಯಾಯದ್ವೀಪಭಾಗವು ಈ ಕಾಲದಲ್ಲಿ **ದಕ್ಷಿಣಾಪಥ** ಎಂದೆನಿಸಿತ್ತು; ಸಿವಾಲಿಕ್ ಬೆಟ್ಟಗಳ ಉತ್ತರದಲ್ಲಿ ಪರ್ವತಸಾನುಗಳಿಂದಲೂ ಪರ್ವತೀಯ ಜನರಿಂದಲೂ ಕೂಡಿದ ಭಾಗವು **ಉತ್ತರಾಪಥ** ಎಂದೆನಿಸಿತ್ತು. ಈ ಎರಡು ಭಾಗಗಳಲ್ಲಿ ಹಲಕೆಲವರು ಋಷಿಗಳೂ, ಹಲಕೆಲವರು ಕ್ಷತ್ರಿಯರೂ ನೆಲೆಸಲು ಪ್ರಯತ್ನಪಡುತ್ತಿದ್ದರು. ಆರ್ಯಾವರ್ತ ಪ್ರದೇಶದಲ್ಲಿ ಗಂಗಾಯಮುನಾ ತೀರಗಳ ಮಧ್ಯಭಾಗವು **ಮಧ್ಯದೇಶ**ವೆನಿಸಿತು; ಅಲ್ಲಿಯ ಕ್ಷತ್ರಿಯರು ಕಾರಣಾಂತರಗಳಿಂದ ತಾವೇ ಹದಿನಾರಾಣೆ ಆರ್ಯರೆಂದು ಹೆಮ್ಮೆಗೊಳ್ಳುತ್ತಿದ್ದರು. ಈ ಮಧ್ಯದೇಶದ ವಾಯುವ್ಯದಲ್ಲಿ ಸರಸ್ವತೀ ದೃಷದ್ವತೀ ನದಿಗಳ ನಡುವೆ ಇದ್ದ ತಪೋವನಗಳ ಪ್ರದೇಶವು ಅತಿಪವಿತ್ರವೆನಿಸಿ **ಬ್ರಹ್ಮಾವರ್ತ**ವೆಂಬ ಹೆಸರನ್ನು ಪಡೆದಿತ್ತು.

## ಏಕರಾಷ್ಟ್ರ ಸಾಧನೆ

ನಿರಾತಂಕವಾದ ಮೈದಾನಪ್ರದೇಶದಲ್ಲಿ ರಾಜ್ಯ ಕಟ್ಟಿಕೊಳ್ಳುವ ಸಂಭ್ರಮದಲ್ಲಿ ಮೊದಲು ಅನಾರ್ಯ ಜನರೊಡನೆ ಹೋರಾಟವೂ ತರುವಾಯ ಕುಲಕಲಹಗಳೂ ಸಹಜವಾದವು. ಫಲವತ್ತಾದ ಭಾಗಗಳನ್ನಾಕ್ರಮಿ

ಸಲು ನಾವು ತಾವೆಂದು ಕುಲಗಳು ಮುಂದಾಗಿ, ಮೊದಲು ನೆಲೆಸಿದ ಕುಲದವರನ್ನು ಅಲ್ಲಿಂದ ಓಡಿಸಲು ನೆರೆಹೊರೆಯ ಕುಲಗಳು ಪ್ರಯತ್ನಿಸುತ್ತಿದ್ದವು. ರಾಜ್ಯಗಳಿಗೆ ನಿಷ್ಕೃಷ್ಟವಾದ ಮೇರೆಗಳನ್ನು ಗೊತ್ತುಮಾಡುವುದು ಮೈದಾನಪ್ರದೇಶದಲ್ಲಿ ಕಷ್ಟ; ಗೊತ್ತಾದ ಮೇರೆಯನ್ನು ಅತಿಕ್ರಮಿಸುವುದು ಅತಿಸುಲಭ. ರಾಜ್ಯಗಳು ಸಿದ್ಧವಾದಮೇಲೆ ಪ್ರತಿ ರಾಜನೂ ಅಕ್ಕಪಕ್ಕದಲ್ಲಿ ತನ್ನ ಎಲ್ಲೆಯನ್ನು ವಿಸ್ತಾರಗೊಳಿಸಲು ಉದ್ಯುಕ್ತನಾಗುತ್ತಿದ್ದುದು ಸ್ವಭಾವವಾಗಿದ್ದಿತು; ಪ್ರತಿರಾಜನೂ ತನ್ನನ್ನು ನೆರೆ ರಾಜರು ಆಕ್ರಮಿಸುವುದಕ್ಕೆ ಮೊದಲು ತಾನೇ ಅವರನ್ನು ಆಕ್ರಮಿಸಿ ಅವರಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಲು ಪ್ರಯತ್ನಪಡಬೇಕಾಯಿತು. ಯುದ್ಧಕ್ಕೆ ಸದಾ ಸಿದ್ಧತೆಯು ರಾಜರಿಗೆ ಅನಿವಾರ್ಯವಾಯಿತು; ಯುದ್ಧವಿದ್ಯೆಯು ವಿಸ್ತಾರವೂ ಆಯಿತು. ಆಗ ಕುಲಮುಖ್ಯರು ತಮ್ಮ ಯೋಧರೊಡನೆ ಯುದ್ಧವನ್ನೇ ಇದಿರುನೋಡುತ್ತ ಯುದ್ಧವೇ ತಮ್ಮ ಕರ್ತವ್ಯವೆಂದುಕೊಂಡು ಅದರಲ್ಲಿಯೇ ಪರಿಣತಿಯನ್ನು ಪಡೆದರು. ಕ್ಷತ್ರಿಯರಿಗೆ ಇದು ಕಾಲವಾಗಿತ್ತು. ಪ್ರತಿ ರಾಜನಿಗೂ ರಾಜರಾಜನಾಗಬೇಕೆಂಬ ಆಸೆಯು ಕರ್ತವ್ಯವಾಗಿ ಪರಿಣಮಿಸಿತು. ರಾಜರಿಗೆ ಈಗ ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ, ಬಲ ಮುಂತಾದ ಅಂಗಗಳು ಅವಶ್ಯಕವಾದವು. ಆರ್ಯಾವರ್ತವೆಲ್ಲಕ್ಕೂ ತಾನೇ ಶ್ರೇಷ್ಠ ರಾಜನೆನಿಸಬೇಕೆಂಬ ಆಸೆಯು ಬಲವಾಯಿತು. ಆದ್ದರಿಂದಲೇ ಈ ಕಾಲದಲ್ಲಿ ಪ್ರತಿ ರಾಜನೂ ಪಟ್ಟಾಭಿಷಿಕ್ತನಾದ ಕೂಡಲೆ ದಿಗ್ವಿಜಯ ಮಾಡತಕ್ಕುದೂ, ಶ್ರೇಷ್ಠತೆಯನ್ನು ನೆಲೆಗೊಳಿಸಿದ ರಾಜನು ಅತಿವೈಭವವನ್ನು ತೋರಿ ಏಕರಾಟ್ ಅಥವಾ ಸಾರ್ವಭೌಮನೆಂಬ ಬಿರುದನ್ನು ಧರಿಸುವುದೂ ಪದ್ಧತಿಗಳಾದವು. **ಆಸಮುದ್ರಕ್ಷಿತೀಶ**ರಾಗಲು ನಡೆಯುತ್ತಿದ್ದ ಪ್ರಯತ್ನವೇ ಆರ್ಯಾವರ್ತದ ರಾಜಕೀಯ ಘಟನೆಗಳಲ್ಲಿ ಮುಖ್ಯ ಸಂಗತಿ. ಅಂತಹ ಸಾರ್ವಭೌಮರು ತಮ್ಮ ಪದವಿಯನ್ನು ಭದ್ರಗೊಳಿಸಿದ ಕೂಡಲೆ ರಾಜಸೂಯಾಶ್ವಮೇಧಾದಿ ಮಹಾಯಾಗಗಳನ್ನು

ದಿಗ್ವಿಜಯ

ರಾಜ್ಯಾಂಗ

ಮಹಾಯಜ್ಞ

ನಡೆಸಿ ತಮ್ಮ ಅಧಿಕಾರವನ್ನು ಪ್ರಕಟಿಸುತ್ತಿದ್ದರು. ರಾಜಸೂಯದಲ್ಲಿ ಇತರ ರಾಜರು ಅಧೀನರಾಗಿ ಯಜ್ಞಶಾಲೆಯಲ್ಲಿ ಸೇವೆ ಮಾಡಬೇಕಾಗಿತ್ತು; ಅಶ್ವಮೇಧದಲ್ಲಿ ಮೊದಲಿನಲ್ಲಿಯೇ ಇತರ ರಾಜರು ವಶ್ಯತೆಯನ್ನು ಒಪ್ಪಿಕೊಂಡು ಕಪ್ಪಕಾಣಿಕೆಗಳನ್ನು ಸಮರ್ಪಿಸಬೇಕಾಗಿತ್ತು.

## ಯುದ್ಧ ನೀತಿ

**ಅವಧ್ಯರು**

ಈ ರೀತಿಯಲ್ಲಿ ಆರ್ಯಾವರ್ತ ವಿಸ್ತಾರದಲ್ಲಿ ಕುಲಕಲಹಗಳೂ ಸಾಮ್ರಾಜ್ಯ ಪ್ರಯತ್ನವೂ ಅನಿವಾರ್ಯವೆನಿಸಿ ಕ್ಷತ್ರಿಯರಿಗೆ ಪ್ರಾಶಸ್ತ್ಯವೊದಗಿತು. ಕ್ಷತ್ರಿಯರಿಗೆ ಯುದ್ಧವೇ ಸರ್ವಸ್ವವಾಯಿತು. ಏಕಚ್ಛತ್ರಾಧೀಶ್ವರರಾಗಬೇಕೆಂಬ ಉದ್ದೇಶದಿಂದ ಹೊಡೆದಾಡುವುದರಲ್ಲಿ ರಾಜರಿಗೂ ರಾಜರಿಗೂ ಅಥವಾ ಕ್ಷತ್ರಿಯರಿಗೂ ಕ್ಷತ್ರಿಯರಿಗೂ ಮಾತ್ರವೇ ಕದನಗಳು ನಡೆಯುತ್ತಿದ್ದವು. ಸಾಮಾನ್ಯ ಜನರಾದ ವೈಶ್ಯರಿಗೂ ಇತರರಿಗೂ ತೊಂದರೆ ಇರಲಿಲ್ಲ. ಕೃಷೀವಲರು, ವ್ಯಾಪಾರಗಾರರು, ಕಸಬುದಾರರು ತಮ್ಮ ವ್ಯಾಪಾರೋದ್ಯೋಗಗಳನ್ನು ನಿರಾತಂಕರಾಗಿ ಅವಲಂಬಿಸುತ್ತಿದ್ದರು. ಕ್ಷತ್ರಿಯನಾದವನು ಇತರರಿಗೆ ರಕ್ಷಣೆಯನ್ನು ನೀಡಬೇಕೇ ವಿನಾ ತೊಂದರೆಯನ್ನು ಕೊಡಕೂಡದೆಂಬುದು ನಿಯಮವಾಯಿತು; ನಿಯಮವನ್ನುಲ್ಲಂಘಿಸಿದ ಕ್ಷತ್ರಿಯನು ಅಯೋಗ್ಯನೆನಿಸಿ ಮಾನವನ್ನೇ ಕಳೆದುಕೊಳ್ಳುತ್ತಿದ್ದನು. ದೇಶದಲ್ಲಿ ನಿರಂತರವಾಗಿ ಯುದ್ಧಗಳು ನಡೆಯುತ್ತಿದ್ದಾಗ್ಯೂ ಈ ಕಾರಣದಿಂದ ಜನಜೀವನಕ್ಕೆ ಲೇಶವಾದರೂ ಕುಂದಕವಿಲ್ಲದಿತ್ತು. ಇನ್ನು ಋಷಿಗಳನ್ನೂ ವಿದ್ಯಾವಂತರನ್ನೂ ವಿಪ್ರರನ್ನೂ ಕಂಡಾಗ ಕ್ಷತ್ರಿಯರು ಅವರನ್ನು ಗುರುಗಳಂತೆಯೇ ಭಾವಿಸಿ ನಮ್ರತೆಯನ್ನು ತೋರಬೇಕಾಗಿತ್ತು. ಯಾರಾದರೂ ಋಷಿಯು ರಾಜಾಸ್ಥಾನಕ್ಕೆ ಬಂದಾಗ ರಾಜನು ತನ್ನ ಪತ್ನೀಪುತ್ರರೊಡನೆಯೂ ಮಂತ್ರಿ ದಳಪತಿಗಳೊಡನೆಯೂ ಮಣಿದು ಗೌರವಿಸಬೇಕಾಗಿತ್ತು. ತಪೋವನ ಪ್ರಾಂತದಲ್ಲಿ ಕ್ಷತ್ರಿಯರು ಕಾಲಿಟ್ಟಾಗ ದರ್ಪವನ್ನು ತೋರುವ ಉಡುಪನ್ನು ಕಳಚಿ ಭಕ್ತಿವಿನಯಗಳಿಂದ ಪ್ರವೇಶಮಾಡಬೇಕಾಗಿತ್ತು. ಇತರ ಜನರಿಗೆ ಸ್ವಲ್ಪವಾದರೂ ತೊಂದರೆಯಿಲ್ಲದಿದ್ದುದೇ ಅಲ್ಲದೆ ಈ ಕಾಲದ

ಯುದ್ಧಗಳಲ್ಲಿ ಮತ್ತೊಂದು ಲಕ್ಷಣವು ಮುಖ್ಯವಾಗಿತ್ತು. *ಯುದ್ಧವೆನ್ನುವುದು ಒಂದೇ ಕದನದಲ್ಲಿ ಮುಗಿದುಹೋಗುತ್ತಿತ್ತು; ಅನೇಕ ಮಲ್ಲರು ಎದುರಾಗಿ ನಿಂತು ನೀತಿಯನ್ನು ಬಿಡದೆ ಪರಸ್ಪರವಾಗಿ ಸ್ಪರ್ಧಿಸುತ್ತಿದ್ದರು. ಜಯವನ್ನೋ ಅಪಜಯವನ್ನೋ ಒಪ್ಪಿಕೊಳ್ಳುತ್ತಿದ್ದರು. ಒಂದೇ ಉದ್ದೇಶಕ್ಕೆ ಐದಾರು ಕದನಗಳು ನಡೆಯಬೇಕಾಗಿರಲಿಲ್ಲ. ಆದ್ದರಿಂದ ಈ ಕಾಲದ ಕದನಗಳನ್ನು ಮೇಲಾಟ (Tournament) ವೆಂದೇ ಕರೆಯಬಹುದು. ಯುದ್ಧದಲ್ಲಿ ವಿಶೇಷವಾದ ನೀತಿಯು ಹುಟ್ಟಿ ವಿಸ್ತಾರವಾಯಿತು. ಯುದ್ಧದಲ್ಲಿ ಮೋಸವು ನೀತಿಬಾಹಿರವೆನಿಸಿತ್ತು. ಈ ಬಗೆಯ ಕ್ಷಾತ್ರ ಯುದ್ಧಗಳಲ್ಲಿಯೇ ಕ್ಷತ್ರಿಯರು ತಮ್ಮ ಕೀರ್ತಿಯನ್ನು ಅರಸುತ್ತಿದ್ದರು.

## ಸಾರ್ವಭೌಮರು

ಪ್ರಸಿದ್ಧ ಸಾರ್ವಭೌಮರು

ಈ ರೀತಿಯಲ್ಲಿ ಹುಟ್ಟಿಕೊಂಡ ರಾಜ್ಯಗಳಲ್ಲಿ ಆಳಿದ ಮುಖ್ಯರಾಜರ ಮತ್ತು ಸಾರ್ವಭೌಮರ ವೃತ್ತಾಂತಗಳು ಪುರಾಣಗಳಲ್ಲಿ ರಕ್ಷಿತವಾಗಿವೆ. ಸುಪ್ರಸಿದ್ಧ ರಾಜವಂಶಗಳಲ್ಲಿ ಮೊದಲು ಏಕಚ್ಛತ್ರಾಧೀಶ್ವರರಾದವರು **ಸೂರ್ಯವಂಶ**ದವರು. ಅಯೋಧ್ಯೆಯಲ್ಲಿಯೂ ವಿದೇಹದಲ್ಲಿಯೂ ಈ ವಂಶದವರು ಆಳಿದರು. ಅಯೋಧ್ಯೆಯಲ್ಲಿ ಆಳಿದ ಮಾನ್ಧಾತ, ಇಕ್ಷ್ವಾಕು, ಪುರುಕುತ್ಸ, ತ್ರಿಶಂಕು, ಸಗರ, ಭಗೀರಥರೂ ವಿದೇಹದಲ್ಲಿ ಆಳಿದ ನಿಮಿ, ಶೀರಧ್ವಜರೂ ಪ್ರಖ್ಯಾತರು. ದಶರಥ, ಶ್ರೀರಾಮ, ಜನಕರಾಜರುಗಳ ವೃತ್ತಾಂತವು ರಾಮಾಯಣದಲ್ಲಿ ವಿಸ್ತಾರವಾಗಿ ಲಿಖಿತವಾಗಿದೆ. ಆರ್ಯರು ದಕ್ಷಿಣಾಪಥದಲ್ಲಿ ಪ್ರವೇಶಿಸಿ ಸಮಸ್ತ ದೇಶವನ್ನೂ ತಮ್ಮ ವಶಪಡಿಸಿಕೊಂಡ ವಿವರವು ಆ ಮಹಾಕಾವ್ಯದಲ್ಲಿ ಸೂಚಿತವಾಗಿದೆ. ರಾಮಾಯಣ ಮತ್ತು ಪುರಾಣಗಳಿಗಿಂತಲೂ ಪ್ರಾಚೀನವೆಂದು ನಿಶ್ಚಿತವಾದ ಐತರೇಯ ಶತಪಥ ಬ್ರಾಹ್ಮಣಗಳಲ್ಲಿ ಅಶ್ವಮೇಧ ರಾಜಸೂಯ ಕ್ರತುಗಳನ್ನು ಮಾಡಿ ಸಾರ್ವಭೌಮರೆನಿಸಿದ

---

* War ಎಂಬ ಇಂಗ್ಲೀಷ್ ಶಬ್ದಕ್ಕೆ ಸರಿಯಾದ ಮಾತೇ ನಮ್ಮಲ್ಲಿ ರೂಢವಾಗಿಲ್ಲ. ನಮ್ಮ ದೇಶದ ಚರಿತ್ರೆಯಲ್ಲಿ "There are no wars but only battles" ಎಂಬುದು ವಾಸ್ತವವಾದುದು.

ಅನೇಕರ ಹೆಸರುಗಳು ದೊರಕುತ್ತವೆ. ಮಹಾಭಾರತದಲ್ಲಿ ಮರುತ್ತ, ಸುಹೋತ್ರ, ಬೃಹದ್ರಥ, ಶಿಬಿ, ಭರತ, ರಾಮ, ಭಗೀರಥ, ದಿಲೀಪ, ಮಾನ್ಧಾತ, ಯಯಾತಿ, ಅಂಬರೀಷ, ಶಶಬಿಂದು, ಗಯ, ರಂತಿದೇವ,



೮. ಶ್ರವಣಕುಮಾರ

ಸಗರ, ಪೃಥು ಮಹಾರಾಜರುಗಳು ಅಂತಹ ಸಾರ್ವಭೌಮರಲ್ಲಿ ಗಣ್ಯರಾಗಿದ್ದಾರೆ. ಸೂರ್ಯವಂಶದವರ ಕಾಲವಾದಮೇಲೆ **ಚಂದ್ರವಂಶದವರು** ಆರ್ಯಾವರ್ತದಲ್ಲಿ ಅನೇಕ ಶಾಖೆಗಳಾಗಿ ಇಂದ್ರಪ್ರಸ್ಥ, ಕಾಂಪಿಲ್ಯ, ಕನ್ಯಾ

ಕುಬ್ಜ, ಕಾಶಿ, ಮಾಹಿಷ್ಮತಿ, ಮಧುರಾ ನಗರಗಳಲ್ಲಿ ರಾಜ್ಯಭಾರ ಮಾಡುತ್ತಿದ್ದರು. ರಾಮಾಯಣದಲ್ಲಿ ವರ್ಣಿತವಾದ ಘಟನಾವಳಿಗಳು ಕ್ರಿ.ಪೂ. ಸು. 2370ರಲ್ಲಿ ನಡೆದವೆಂದು ಪಂಡಿತರು ಅಭಿಪ್ರಾಯಪಟ್ಟಿರುತ್ತಾರೆ. ಆ ತರುವಾಯ ಆರ್ಯಾವರ್ತದಲ್ಲಿ ಗಾಂಧಾರ, ಕಾಂಬೋಜ, ಕಾಶ್ಮೀರ, ಮತ್ಸ್ಯ, ಮದ್ರ, ಶೌರಸೇನ, ಸಿಂಧು, ಸೌವೀರ, ಕುರು, ಪಾಂಚಾಲ, ಹೈಹಯ, ಚೇದಿ, ನಿಷಧ, ವಿದರ್ಭ, ಮಗಧ, ಅಂಗ, ಕೋಸಲ, ವಿದೇಹ, ನೇಪಾಳ, ಪ್ರಾಗ್ಜ್ಯೋತಿಷ ರಾಷ್ಟ್ರಗಳು ಮುಖ್ಯವಾಗಿ ಮಹಾಭಾರತ ಕಾಲದಲ್ಲಿ ಪ್ರಸಿದ್ಧವಾದವು. ಅವುಗಳಲ್ಲಿ ಕುರುಪಾಂಚಾಲರ ಪರಸ್ಪರ ವಿರೋಧವು ಬಲವತ್ತರವಾಗಿ ಮಹಾಭಾರತದಲ್ಲಿ ವರ್ಣಿತವಾಗಿರುವ ಕುರುಕ್ಷೇತ್ರದ ಮಹಾಯುದ್ಧದಲ್ಲಿ ಪರ್ಯವಸಾನವಾಯಿತು.

ಪ್ರಸಿದ್ಧ ರಾಷ್ಟ್ರಗಳು

ಕುರುಕ್ಷೇತ್ರದ ಯುದ್ಧವು ಕ್ರಿ. ಪೂ. ಸುಮಾರು 1430ರಲ್ಲಿ ನಡೆದುದಾಗಿ ಕೆಲವು ಪಂಡಿತರ ಅಭಿಪ್ರಾಯವಾಗಿರುವುದು. ಆ ಯುದ್ಧದ ವೇಳೆಗೆ ಉತ್ತಮ ಕ್ಷತ್ರಿಯರ ಶಾಖೆಗಳೇ ನಿರ್ನಾಮವಾಗಿದ್ದವು. 1430ನೇ ಇಸವಿಯು ಅಂಗೀಕೃತವಾದರೆ ಈ ಸೂರ್ಯ ಚಂದ್ರವಂಶಜರ ಕಾಲವು ಸುಮಾರು ಎರಡು ಸಾವಿರ ವರ್ಷಗಳಷ್ಟು ದೀರ್ಘವಾಗಿತ್ತೆಂದು ದೃಢವಾಗುವುದು. ಆ ಕಾಲವು ಅಸಮುದ್ರಕ್ಷಿತೀಶರಿಂದಲೂ, ವೀರಾದಿವೀರರಿಂದಲೂ, ಉತ್ತುಂಗ ಆದರ್ಶಗಳಿಂದಲೂ, ಜ್ಞಾನ ವಿಜ್ಞಾನ ರಾಶಿಗಳಲ್ಲಿ ಅದ್ಭುತವಾದ ಸಾಧನೆಗಳಿಂದಲೂ ರಂಜಿಸತಕ್ಕದ್ದು; ಆರ್ಯವಂಶಜರೆಲ್ಲರೂ ಹೆಮ್ಮೆಯಿಂದ ಸ್ಮರಿಸತಕ್ಕ ಕಾಲವೇ ಅದು. ಭಗವದಂಶಸಂಭೂತರೆಂದು ಅನಂತರ ನಡೆದ ಕಾಲದಲ್ಲಿ ಪೂಜೆಗೆ ಪಾತ್ರರಾದ ಶ್ರೀರಾಮಚಂದ್ರ ಶ್ರೀಕೃಷ್ಣರುಗಳಿದ್ದ ಕಾಲ, ಶುದ್ಧ ಕ್ಷಾತ್ರಧರ್ಮದ ಕಾಲ. ಮಹಾಭಾರತ ಯುದ್ಧದಲ್ಲಿ ಭೀಷ್ಮನೊಬ್ಬಾತನೇ ಪವಿತ್ರ ಕ್ಷತ್ರಿಯನೆನಿಸಿದಾತನು; ಆ ಯುದ್ಧದ ತರುವಾಯ ಪಟ್ಟವನ್ನೇರಿದವರು ಹಿಂದಿನ ಸಾರ್ವಭೌಮರನ್ನು ಆದರ್ಶವಾಗಿ ನೆನೆಸಿ ಅವರನ್ನು ಯಥಾಶಕ್ತಿ ಅನುಕರಣಮಾಡಲು ಪ್ರಯತ್ನಿಸಿದರು. ಪ್ರಯತ್ನ ಭಗೀರಥ, ಸತ್ಯಹರಿಶ್ಚಂದ್ರ, ದಾನಕರ್ಣ, ಶಾಂತಯುಧಿಷ್ಠಿರ, ಶಲ್ಯ

ಆದರ್ಶ ಕಾಲ

ಸಾರಥ್ಯ, ನಕ್ಷತ್ರಕಹಿಂಸೆ, ಕುಂಭಕರ್ಣನಿದ್ರೆ ಮುಂತಾದ ನಿದರ್ಶನಗಳು ಅಂದಿನಿಂದ ಬಳಕೆಯಲ್ಲಿವೆ.



9. ದ್ರೋಣಾಚಾರ್ಯ

ಮಹಾಯಜ್ಞಗಳೂ ಕ್ಷಾತ್ರಯುದ್ಧಗಳೂ ಮುಖ್ಯ ಲಕ್ಷಣಗಳಾಗಿದ್ದ ಈ ಕಾಲದಲ್ಲಿ ರಾಜತ್ವ, ರಾಜ್ಯಭಾರ, ರಾಜ್ಯನೀತಿಗಳು ಸಂಹಿತೆಗಳ ಕಾಲದಲ್ಲಿದ್ದುದಕ್ಕಿಂತ ವಿಸ್ತಾರಪಡೆದವು. ಕ್ಷತ್ರಿಯನಾದ ರಾಜನು ಶೂರನಾಗಿದ್ದು ಹಸ್ತ್ಯಶ್ವ ರಥ ಪದಾತಿಗಳೆಂಬ **ಚತುರಂಗಬಲ** ಸಹಿತ

ನಾಗಿರುತ್ತಿದ್ದನು. ಚತುರಂಗಗಳು ಸೇರಿದ ಸೈನ್ಯರಾಶಿಯಲ್ಲಿ ಮಹಾಭಾರತ ಕಾಲದಲ್ಲಿ 21,870 ಗಜ, 21,870 ರಥ, 65,610 ಅಶ್ವ ಮತ್ತು 1,09,350 ಪದಾತಿ ಸಂಖ್ಯೆಯುಳ್ಳ ಸೇನಾವಿಭಾಗಕ್ಕೆ ಅಕ್ಷೋಹಿಣಿಯೆಂಬ ಹೆಸರಿತ್ತು. ಧನುರ್ಬಾಣಗಳು, ಕತ್ತಿ, ಭರ್ಜಿ, ಗದೆ, ಚಕ್ರ, ಶಕ್ತಿಗಳು ಮುಖ್ಯ ಆಯುಧಗಳಾಗಿದ್ದವು; ಅವುಗಳಲ್ಲಿ ಪ್ರತಿಯೊಂದಕ್ಕೂ ವಿಶೇಷವಾದ ಶಿಕ್ಷಣವು ಅವಶ್ಯವಾಗಿತ್ತು. ಧನುರ್ವಿದ್ಯೆಯು ಅಮೋಘವಾಗಿತ್ತು; ಅದ್ಭುತವೆನಿಸಿತ್ತು. ಯುದ್ಧಭೂಮಿಯಲ್ಲಿ ಸೈನ್ಯವನ್ನು ನಿಲ್ಲಿಸುವುದರಲ್ಲಿ ವಿಧ ವಿಧವಾದ **ವ್ಯೂಹ**ಗಳನ್ನು ರಚಿಸುತ್ತಿದ್ದರು. *ಶಸ್ತ್ರಾಸ್ತ್ರವಿದ್ಯೆಯೂ, ವ್ಯೂಹ ರಚನೆಯೂ, ದುರ್ಗ ನಿರ್ಮಾಣವೂ, ಆಕ್ರಮಣ ಪ್ರತಿರೋಧಗಳೂ ವಿಪುಲವಾಗಿ ಬೆಳೆದು ಅಸಾಧಾರಣವಾದ ಶಿಕ್ಷಣವನ್ನೇ ಬಯಸುವಂತಿದ್ದವು. ಯುದ್ಧವೆನ್ನುವುದು ಸಾಮಾನ್ಯರ ಯುದ್ಧವಾಗಿರಲಿಲ್ಲ; ರಣಪಂಡಿತರ ಯುದ್ಧವಾಗಿತ್ತು. ಈ ಪಾಂಡಿತ್ಯದೊಂದಿಗೆ ಯುದ್ಧದಲ್ಲಿ ಕಡುತರವಾದ ಧರ್ಮನಿಯಮಗಳೂ ಇದ್ದವು. ಕರ್ಣಾರ್ಜುನ ಸಂಗ್ರಾಮದ ವಿವರದಲ್ಲಿ **ಧರ್ಮಯುದ್ಧದ** ಪರಿಯನ್ನು ಅರ್ಜುನನು ತಕ್ಕಮಟ್ಟಿಗೆ ವಿವರಿಸಿದ್ದಾನೆ.

ಯುದ್ಧ ವಿದ್ಯೆ

ಸ್ವಕುಲಸ್ಥರ ಸಹಾಯವನ್ನು ಪಡೆದು ಅವರ ಅಧೀನವಾದ ಸೈನ್ಯಬಲದಿಂದ ರಾಜಪದವಿಯನ್ನು ಅನುಭವಿಸುತ್ತಿದ್ದವರು ಸ್ವರಾಜ್ಯ ರಕ್ಷಣಕ್ಕೂ ಪರರಾಜ್ಯಗಳ ಆಕ್ರಮಣಕ್ಕೂ ಸದಾ ಸಿದ್ಧರಾಗಿರಬೇಕಾಗಿತ್ತು. ಅನೇಕ ರಾಜ್ಯಗಳಿದ್ದ ಆರ್ಯಾವರ್ತದಲ್ಲಿ ರಾಜರ ಪರಸ್ಪರ ಸಂಬಂಧ ವ್ಯವಹಾರಗಳೂ ಆಡಳಿತದ ರೀತಿ ನೀತಿಗಳೂ ಶಾಸ್ತ್ರವೆನಿಸಿತು. ಮಹಾಶೂರನಾದ ರಾಜ

ರಾಜತ್ವ

---

* ಶಸ್ತ್ರಾಸ್ತ್ರಗಳನ್ನು ಯಂತ್ರಮುಕ್ತ, ಹಸ್ತಮುಕ್ತ, ಮುಕ್ತಾಮುಕ್ತ ಎಂಬುದಾಗಿ ವಿಂಗಡಿಸಿತ್ತು. ಭಿಂಡಿವಾಳ, ತೋಮರ, ನಾರಾಚ, ಪಟ್ಟಿಶ, ಕೃಪಾಣ, ಕ್ಷೇಪಣಿ, ಪಾಶ ಮುಂತಾದ ಆಯುಧ ವಿಶೇಷಗಳೂ, ಭೇರಿ, ನಗಾರಿ, ದುಂದುಭಿ, ಶೃಂಗ, ಶಂಖ ಮುಂತಾದ ರಣವಾದ್ಯಗಳೂ ಮಹಾಭಾರತವನ್ನು ಓದಿದವರಿಗೆಲ್ಲ ಪರಿಚಯವಾಗುತ್ತವೆ. ಶತಘ್ನಿ, ಶಕ್ತಿ ಮುಂತಾದವು ಈಗಿನ ಫಿರಂಗಿ, ಸಿಡಿಮದ್ದುಗಳಂತೆ ಇದ್ದವು.

ವ್ಯೂಹಗಳಲ್ಲಿ ಮಧ್ಯಭೇದಿ, ಅಂತರ್ಭೇದಿ, ಮಕರ, ಶಕಟ, ಶ್ಯೇನ, ಅರ್ಧಚಂದ್ರ, ಪದ್ಮ, ಚಕ್ರ, ಗೋಮೂತ್ರಿಕಾ, ಸರ್ವತೋಭದ್ರ ಮುಂತಾಗಿ ಅನೇಕ ಬಗೆಗಳಿದ್ದವು.

ನಿದ್ದ ವೇಳೆಗಳಲ್ಲಿ ಆತನು ಇತರ ರಾಜರನ್ನು ಅಧೀನಮಾಡಿಕೊಂಡು ಏಕ ಚಕ್ರಾಧೀಶ್ವರನೆನಿಸುತ್ತಿದ್ದನು. ಅಂತಹ ಮಹಾಶೂರನೂ ಚಕ್ರವರ್ತಿಯೂ ಇಲ್ಲದಿದ್ದ ವೇಳೆಗಳಲ್ಲಿ ರಾಜರು ಪರಸ್ಪರ ಸ್ನೇಹ ಸಂಬಂಧಗಳಿಂದ ತಮ್ಮ ಪದವಿಗಳಿಗೂ ರಾಜ್ಯಗಳಿಗೂ ಲೋಪಬಾರದಂತೆ ಕಾಪಾಡಬೇಕಾಗಿದ್ದಿತು. ಸಾಮ ದಾನ ಭೇದ ದಂಡಗಳೆಂಬ **ಚತುರುಪಾಯ**ಗಳು ಈ ಕಾಲದಲ್ಲಿ ಅನುಸರಣೀಯವಾಗಿ ರಾಜ್ಯನೀತಿಯಲ್ಲಿ ಪ್ರಾಮುಖ್ಯವನ್ನು ಪಡೆದವು. ರಾಜರೆಲ್ಲರೂ ಏಕರೀತಿಯಾದ ಅಧಿಕಾರವನ್ನು ಪಡೆದಿರಲಿಲ್ಲ. ಕೆಲವರಲ್ಲಿ ರಾಜತ್ವವು ವಂಶಪರಂಪರೆಯಾಗಿ ನಡೆಯುತ್ತಿತ್ತು; ಮತ್ತೆ ಕೆಲವರಲ್ಲಿ ರಾಜತ್ವವು ಒಂದು ಕುಲದಲ್ಲಿ ನಡೆಯುತ್ತಿತ್ತು; ಇನ್ನೂ ಕೆಲವರಲ್ಲಿ ರಾಜತ್ವವು ಸ್ವಲ್ಪ ಕಾಲಕ್ಕೆ ಮಾತ್ರ ಕ್ಲಪ್ತವಾಗಿತ್ತು. ಅಂಧಕ, ಕುಕುರ, ಭೋಜ, ವೃಷ್ಣಿ ಕುಲಗಳು ಒಟ್ಟುಗೂಡಿ ಶೌರಸೇನ ರಾಷ್ಟ್ರದ ರಾಜತ್ವಕ್ಕೆ ನಡೆಸುತ್ತಿದ್ದ ಏರ್ಪಾಟುಗಳು ಭೌಜ್ಯವೆಂಬ ರಾಷ್ಟ್ರಕ್ಕೆ ಉತ್ತಮ ದೃಷ್ಟಾಂತವಾಗಿರುತ್ತದೆ.

ರಾಷ್ಟ್ರನೀತಿ

ರಾಜಕುಮಾರರ ಶಿಕ್ಷಣವು ಕಷ್ಟವಾಗಿತ್ತು. ಒಂದು ಕಡೆ ಸಕಲ ಶಸ್ತ್ರಾಸ್ತ್ರಗಳನ್ನು ಅಭ್ಯಾಸಮಾಡಿ ಯುದ್ಧವಿದ್ಯೆಯಲ್ಲಿಯೂ ಮತ್ತೊಂದು ಕಡೆ ಧರ್ಮಿಷ್ಠನಾಗಲು ರಾಷ್ಟ್ರನೀತಿಯಲ್ಲಿಯೂ ಪರಿಣತರಾಗಬೇಕಾಗಿತ್ತು. ರಾಷ್ಟ್ರನೀತಿ ಶಾಸ್ತ್ರದಲ್ಲಿ ಅನೇಕ ತತ್ವಜ್ಞರು ಈ ಕಾಲದಲ್ಲಿಯೇ ಪ್ರೌಢಿಮೆಯನ್ನು ತೋರಿ ಅಸ್ತಿಭಾರವನ್ನೂ ಶಿಖರವನ್ನೂ ಕಟ್ಟಿದರು. ಉಶನಸ್, ಬೃಹಸ್ಪತಿ, ಮನು, ಶುಕ್ರ ಮುಂತಾದವರು ರಾಜನೀತಿಯನ್ನು ವಿವರಿಸಿ ರಾಜಪುರುಷರು ಅವಲಂಬಿಸಬೇಕಾದ ನೀತಿಯನ್ನೂ ವಿಧಾನಗಳನ್ನೂ ವಿವರಿಸಿದರು. ರಾಷ್ಟ್ರಕ್ಕೆ ಭೂಷಣನಾದ ರಾಜನು ಆ ಶಾಸ್ತ್ರದ ಪ್ರಕಾರ ರಾಷ್ಟ್ರಸೇವಕರಲ್ಲಿ ಅಗ್ರಗಣ್ಯನಾದನು. ಮೊದಮೊದಲು ಕೆಲವರು ರಾಜರು ದುಷ್ಟರಾಗಿ ರಾಷ್ಟ್ರಕಂಟಕರಾದುದರ ಪರಿಣಾಮವೇ ಅದು. ಆದುದರಿಂದ ಈ ಕಾಲದ ರಾಜತ್ವವನ್ನು ನಿರಂಕುಶ ಪ್ರವರ್ತನೆಗೂ ಸ್ವೇಚ್ಛಾವಿಹಾರಕ್ಕೂ ನಿರಾತಂಕವಾದ ಅವಕಾಶವನ್ನು ಕೊಟ್ಟ ಸಂಸ್ಥೆಯೆಂದು ಭಾವಿಸುವುದು ತಪ್ಪಾಗುವುದು. ರಾಜ್ಯವನ್ನು

ಪರರಾಯರ ಭಯವಿಲ್ಲದಂತೆ ರಕ್ಷಿಸುವುದು ರಾಜರ ಪ್ರಥಮ ಕರ್ತವ್ಯವಾಗಿತ್ತು. ಶಾಂತಿ ಸಮಾಧಾನ ಸ್ಥಿತಿಯೇ ಮೊದಲನೆ ಲಕ್ಷ್ಯ. ನ್ಯಾಯ ರಕ್ಷಣೆಯು ಎರಡನೆಯ ಲಕ್ಷ್ಯ. **ದುಷ್ಟಶಿಕ್ಷಣ ಶಿಷ್ಟಪಾಲನ**ಗಳೆಂಬವು ಈ ರೀತಿಯಲ್ಲಿ ಸಾಮಾನ್ಯವಾಗಿ ಎಲ್ಲೆಲ್ಲಿಯೂ ರೂಢಿಯಾಗಿ ರಾಜರ ಅನಿವಾರ್ಯ ಕರ್ತವ್ಯಗಳಾದವು. ಈ ಕರ್ತವ್ಯಗಳನ್ನು ದಕ್ಷತೆಯಿಂದ ಪಾಲಿಸಿದ ರಾಜನು ಯಜ್ಞಯಾಗಾದಿಗಳನ್ನು ನೆರವೇರಿಸುತ್ತಲೂ ವಿದ್ವಾಂಸರಿಗೆ ಆಶ್ರಯ ಪೋಷಣಗಳನ್ನು ನೀಡುತ್ತಲೂ ಇರಬೇಕಾಗಿದ್ದಿತು.

ಸೈನ್ಯ ಪಾಲನೆಯಲ್ಲಿ ರಾಜನಿಗೆ ಸಹಾಯಕರಾಗಿ ದಳಪತಿಗಳೂ, ನ್ಯಾಯ ರಕ್ಷಣೆಯಲ್ಲಿ ಅಮಾತ್ಯನೂ, ಆಯ ವ್ಯಯ ವ್ಯವಸ್ಥೆಯಲ್ಲಿ ಸಚಿವನೂ, ನೆರೆಹೊರೆಯ ರಾಜರೊಡನೆ ಸ್ನೇಹ ಸಂಬಂಧಗಳನ್ನೋ ವಿಗ್ರಹವನ್ನೋ ಸಾಧಿಸುವುದರಲ್ಲಿ ಮಂತ್ರಿಯೂ ಸಹಾಯಕರಾಗಿದ್ದರು. ಇವರೆಲ್ಲರಿಗೂ ಶ್ರೇಷ್ಠನೆನಿಸಿ ರಾಜನಿಗೆ ಗುರುಸ್ಥಾನದಲ್ಲಿದ್ದು ಕುಲ ಪುರೋಹಿತನಾಗಿದ್ದ ಋಷಿಯು ಎಲ್ಲರಿಂದಲೂ ಮಾನ್ಯನಾಗಿದ್ದು ಹಿತವನ್ನೂ ಉಚಿತವನ್ನೂ ಹೇಳುತ್ತಿದ್ದನು. ರಾಜ್ಯಾದಾಯವು **ಷಡ್ಭಾಗ**ವೆಂದು ಗೊತ್ತಾದ ನೆಲಗಂದಾಯದಿಂದಲೂ ಪೊಗದಿ, ನಿಕ್ಷೇಪ, ಶುಲ್ಕ, ದಂಡ ಮತ್ತು ಗಣಿಗಳ ರಾಯಮಾನಗಳಿಂದಲೂ ಉತ್ಪತ್ತಿಯಾಗುತ್ತಿತ್ತು. ರಾಜನ ಮಂತ್ರಾಲೋಚನ ಸಭೆಯಲ್ಲಿ ಅಷ್ಟಮಂತ್ರಿಗಳಲ್ಲದೆ 4 ವಿಪ್ರರೂ, 8 ಕ್ಷತ್ರಿಯರೂ, 21 ವೈಶ್ಯರೂ, 3 ಶೂದ್ರರೂ ಇರುತ್ತಿದ್ದರು. ರಾಜನು ರಾಷ್ಟ್ರದಲ್ಲಿ ಪ್ರಮುಖ ಗೋಪಾಲಕನಾಗಿಯೂ ಇದ್ದನು. ಪರ ರಾಜ್ಯವನ್ನು ಆಕ್ರಮಿಸುವಾಗ ಗೋಗ್ರಹಣವೇ ಮೊದಲಿನ ಕೆಲಸವಾಗಿತ್ತು. ಗೋಷ್ಠಿ, ಗೋಪ, ಮಹಿಷಿ, ದುಹಿತೃ ಮುಂತಾದ ಶಬ್ದಗಳ ಉಪಯೋಗವು ಅದನ್ನೇ ಸೂಚಿಸುತ್ತದೆ. ಗೋಗ್ರಹಣದಲ್ಲಿ ಗೋವಧೆಯಿರಲಿಲ್ಲ; ಯುದ್ಧ ಪ್ರಾರಂಭಕ್ಕೆ ಅದು ನಿಮಿತ್ತ ಅಥವಾ ಸೂಚನೆ ಮಾತ್ರವಾಗಿತ್ತು. ಈ ರೀತಿಯಲ್ಲಿ ರಾಜ್ಯಪಾಲನೆ ಮಾಡುತ್ತಿದ್ದ ರಾಜನು ಅಟ್ಟಹಾಸದಿಂದ ಇರುತ್ತ ರಾಜ್ಯದ ವೈಭವ ಗೌರವಗಳ ಮೂರ್ತಿಯಾಗಿದ್ದು ತನ್ನ ಸುಖ ವಿನೋದಗಳನ್ನೂ ಅನುಭವಿಸುತ್ತಿದ್ದನು. ಬೇಟೆ ಮತ್ತು ದ್ಯೂತಗಳು ರಾಜರ ವಿನೋದಗಳಲ್ಲಿ ಮುಖ್ಯವೆನಿಸಿದ್ದವು. ಸಾಧಾರಣ

ವಾಗಿ ರಾಜರ ಬೆಂಗಾವಲಿಗೂ ಇತಿಹಾಸ ವಿವರಕ್ಕೂ ಅಧಿಕಾರಿಯಾಗಿದ್ದ ಸೂತನೆಂಬಾತನು ರಾಜನ ಸಾರಥಿಯಾಗಿ ಆಪ್ತಸೇವಕರಲ್ಲಿ ಪ್ರಮುಖ ನಾಗಿರುತ್ತಿದ್ದನು.

ಪ್ರಜಾಧಿಕಾರ

ರಕ್ಷಕರೂ ಶಿಕ್ಷಕರೂ ಆಗಿದ್ದ ರಾಜರು ಜನಜೀವನದಲ್ಲಿ ಅಧಿಕಾರ ಮಾಡುತ್ತಿರಲಿಲ್ಲ. ದುಷ್ಟರೂ ನೀಚರೂ ಆದ ರಾಜರು ನೆರೆರಾಜರಿಂದಲೋ, ಅರಮನೆಯ ಪಿತೂರಿ ಯಿಂದಲೋ, ಜನತೆಯ ರೋಷದಿಂದಲೋ ಪದಚ್ಯುತರೋ ಹತರೋ ಆಗುತ್ತಿದ್ದರು. ರಾಜಧಾನಿಯಲ್ಲಿ ರಾಜನು ಅಟ್ಟಹಾಸದಿಂದ ಓಲಗಗೊಡುತ್ತಿದ್ದಾಗಲೂ ಕೂಡ **ನಗರ**ಗಳ ವ್ಯವಸ್ಥೆಯು ನಗರಮುಖ್ಯ ಅಥವಾ ಪುರಮುಖ್ಯರೆಂಬ ವರ್ತಕಶ್ರೇಷ್ಠರ ಅಧಿಕಾರ ದಲ್ಲಿತ್ತು. ವರ್ತಕರಲ್ಲಿ ಮುಖ್ಯನಾಗಿದ್ದವನೇ **ಶ್ರೇಷ್ಠಿ**ಯೆನಿಸಿದ್ದನು. ವ್ಯಾಪಾರದ ಆಡಳಿತವು ವರ್ತಕ ಜನರಲ್ಲಿಯೇ ಇತ್ತು; ನಗರ ರಕ್ಷಣೆಯು ನಗರಪಾಲಕ ಅಥವಾ **ನಗರಕ**ನೆಂಬ ಅಧಿಕಾರಿಯು ಕರ್ತವ್ಯವಾಗಿತ್ತು. ಗ್ರಾಮಗಳಲ್ಲಿ ಗ್ರಾಮಸ್ಥರು ಯಾರಹಂಗೂ ಇಲ್ಲದೆ ಗ್ರಾಮದಲ್ಲಿ ನೈರ್ಮಲ್ಯ, ನ್ಯಾಯ, ಶಿಕ್ಷಣ, ವಿನೋದ, ದಾನ ಧರ್ಮ ರಕ್ಷಣೆಗಳನ್ನು ತಾವೇ ನಿರ್ವಹಿಸಿ ಕೊಳ್ಳುತ್ತಿದ್ದರು. ರಾಜಾದಾಯವನ್ನು ಬರಮಾಡಿಕೊಳ್ಳುವುದಕ್ಕೆ ಗ್ರಾಮ ಗಳು ನೂರು, ಸಾವಿರಗಳಂತೆ ವಿಂಗಡವಾಗಿ ವಿಭಾಗಕ್ಕೆ ತಕ್ಕಂತೆ ನಿಯತ ನಾದ ರಾಜಾಧಿಕಾರಿಯು ಕಂದಾಯವನ್ನು ಧಾನ್ಯ ರೂಪವಾಗಿಯೋ ನಾಣ್ಯರೂಪವಾಗಿಯೋ ಗ್ರಹಿಸು ತ್ತಿದ್ದನು. ಧಾನ್ಯರೂಪವಾಗಿ ಬಂದುದು ಅಲ್ಲಲ್ಲಿ ಉಗ್ರಾಣಗಳಲ್ಲಿ ರಾಶೀಕೃತವಾಗಿ ಸೈನ್ಯಪೋಷಣೆಗೂ ಕ್ಷಾಮನಿವಾರಣೆಗೂ ಉಪಯುಕ್ತವಾಗುತ್ತಿತ್ತು.

ಗ್ರಾಮ ನೀತಿ

## ಉದ್ಯೋಗ ವ್ಯಾಪಾರಗಳು

ಕ್ಷತ್ರಿಯರಾದವರು ನಿರಂತರ ಯುದ್ಧಗಳನ್ನು ನಡೆಸುತ್ತಲಿದ್ದಾಗ ಸಾಮಾನ್ಯ ಜನರಿಗೆ ತೊಂದರೆಯೇನೂ ಇರಲಿಲ್ಲವಾದುದರಿಂದ ವ್ಯಾಪಾರ, ಉದ್ಯೋಗ, ಕೈಗಾರಿಕೆಗಳು ಅಭಿವೃದ್ಧಿಯಾಗುತ್ತಲೇ ಇದ್ದವು. ವ್ಯವಸಾಯ

ದಲ್ಲಿ ಈ ಕಾಲದಲ್ಲಿ ಹದಿನೆಂಟು ಬಗೆಯ ಧಾನ್ಯಗಳನ್ನು ಬೆಳೆಸುತ್ತಿದ್ದರು. ಪಶುಪಾಲನೆಯು ವ್ಯವಸಾಯಕ್ಕೆ ಮಾತ್ರ ಎರಡನೆಯದಾಗಿತ್ತು; ಪಶು ಪರೀಕ್ಷಾ ಚಿಕಿತ್ಸೆಗಳು ಶಾಸ್ತ್ರಗಳಾಗಿ ಬೆಳೆದವು. ಅರಣ್ಯವಾಸಿಗಳು ಮೃಗ ಚರ್ಮಗಳನ್ನು ಉಪಯೋಗಿಸುತ್ತಿದ್ದಾಗ್ಯೂ ಹತ್ತಿಯ ಉಪಯೋಗವು ಹೆಚ್ಚಿತು. ಚೀನಾ ದೇಶದ ಕಡೆಯಿಂದ ಬಂದ ಚೀನಾಂಬರ ಅಥವಾ ರೇಷ್ಮೆ ವಸ್ತ್ರಗಳು ಧನವಂತರಲ್ಲಿ ಸಾಮಾನ್ಯವಾದವು. ಆಯುಧಗಳ, ಪಾತ್ರೆಗಳ ಮತ್ತು ರಥಗಳ ನಿರ್ಮಾಣದಲ್ಲಿ ಕೌಶಲವು ಅಭಿವೃದ್ಧಿಯಾಗಿ ಲೋಹಕರ್ಮ, ದಾರುಕರ್ಮಗಳಲ್ಲಿ ಜನರು ಅತಿಪ್ರವೀಣರಾಗಿದ್ದರು. ಆಭರಣಗಳೂ ಅಲಂಕಾರಗಳೂ ಹೆಚ್ಚಿ ಖಚನಚಾತುರ್ಯವು ಪ್ರೌಢವಾಯಿತು. ಅನೇಕ ರತ್ನಗಳು ಉಪಯೋಗದಲ್ಲಿದ್ದುದಲ್ಲದೆ ಪಾತ್ರೆಗಳೂ ಆಯುಧಗಳೂ ರತ್ನಖಚಿತ ಗಳಾಗಿ ಅನರ್ಘವೆನಿಸಿದ್ದವು. ಗಾತ್ರದಲ್ಲಿ ಕಿರಿದೂ ಮೌಲ್ಯದಲ್ಲಿ ಹಿರಿದೂ ಆದ ಇಂತಹ ಸಾಮಗ್ರಿಯನ್ನೇ ಸಾಗಿಸಿಕೊಂಡು ಸಾರ್ಥವಾಹಕರು ದೇಶದಿಂದ ದೇಶಕ್ಕೆ ಪ್ರಯಾಣಮಾಡಿ ವ್ಯಾಪಾರ ಮಾಡುತ್ತಿದ್ದರು. ರಸ್ತೆಗಳು ಹೆಚ್ಚಾಗಿರಲಿಲ್ಲ; ದೇಶದಲ್ಲಿ ಅರಣ್ಯಗಳೇ ಹೆಚ್ಚಾಗಿದ್ದವು. ಆದ್ದರಿಂದ ಸಾರ್ಥವಾಹ ಕರೂ ಪ್ರಯಾಣಿಕರೂ ರಕ್ಷಕಭಟರನ್ನೂ ಮಾರ್ಗದರ್ಶಕರನ್ನೂ ಕರೆದು ಕೊಂಡು ಸಂಚರಿಸುತ್ತಿದ್ದರು. ಹೀಗಿದ್ದರೂ ವ್ಯಾಪಾರವು ಮುಖ್ಯ ಪಟ್ಟಣ ಗಳಲ್ಲಿ ವಿಶೇಷವಾಗಿಯೇ ನಡೆಯುತ್ತಿತ್ತು. ಸಿಂಧುದೇಶದ ಕುದುರೆಗಳು, ದಶಾರ್ಣದ ಖಡ್ಗಗಳು, ನೇಪಾಳದ ಕಸ್ತೂರಿ, ಕಾಶ್ಮೀರದ ಕೇಸರಿ, ಮಲಯ ಪರ್ವತದ ಚಂದನ ಮುಂತಾದ ವಾಸನಾದ್ರವ್ಯಗಳು ಪ್ರಸಿದ್ಧಿಪಡೆದಿದ್ದವು.

## ವರ್ಣ ಸಂಘರ್ಷಣ

ಅಷ್ಟ ವಿವಾಹ

ಆರ್ಯಾವರ್ತವು ವಿಸ್ತಾರವನ್ನು ಹೊಂದಿ ಬ್ರಹ್ಮಪುತ್ರಾನದೀ ಪ್ರಾಂತವನ್ನು ಆರ್ಯರು ಆಕ್ರಮಿಸಿದ ತರುವಾಯ ಸಮಾಜದಲ್ಲಿ ಅನೇಕ ವ್ಯತ್ಯಾಸಗಳು ತೋರಿ ಕೊಂಡವು. ಆರ್ಯರಿಗೂ ಅನಾರ್ಯರಿಗೂ ವಿರೋಧವು ಸ್ಥಿರವಾಗಿ ನಿಲ್ಲದೆ ಕಾಲಕ್ರಮದಲ್ಲಿ ಮೈತ್ರಿಯೂ ಪರಸ್ಪರವಾದ ಸಹನೆಯೂ ಪ್ರಬಲವಾದವು. ಆರ್ಯಕನ್ಯೆಯರನ್ನು ಅನಾರ್ಯರು

ಸಾಧಿಸಿ ವಿವಾಹ ಮಾಡಿಕೊಳ್ಳುವುದೂ, ರಾಜಕೀಯ ಕಾರಣಗಳಿಂದ ಆರ್ಯ ರಾಜಪುರುಷರು ಅನಾರ್ಯ ಸ್ತ್ರೀಯರನ್ನು ವಿವಾಹವಾಗುವುದೂ ಸಾಮಾನ್ಯವಾಯಿತು. ಈ ವಿವಾಹಗಳೇ **ಅನುಲೋಮ ಪ್ರತಿಲೋಮ** ಗಳೆಂದು ಹೆಸರು ಪಡೆದಿರತಕ್ಕವು. ಅನಾರ್ಯರೆದುರಿನಲ್ಲಿ ಸಂಖ್ಯಾದುರ್ಬಲ ರಾಗಿದ್ದ ಆರ್ಯರು ಸ್ವಸಂಖ್ಯಾವೃದ್ಧಿಗಾಸೆಪಡುವುದು ಸಹಜವಾಗಿತ್ತು; ಆರ್ಯರಲ್ಲಿ ಈ ಕಾಲದಲ್ಲಿ ಎಂಟು ವಿಧವಾದ ವಿವಾಹಗಳು ಆಚರಣೆಯಲ್ಲಿದ್ದವು. ಈ ಪರಸ್ಪರ ವಿವಾಹಗಳಿಂದ ಆರ್ಯರ ಸಂಖ್ಯೆಯು ಹೆಚ್ಚಿ ಎರಡು ವರ್ಣ ಗಳಿಗೂ ಇದ್ದ ವೈಷಮ್ಯವು ಮಿಶ್ರಜಾತರಿಂದ ತಗ್ಗುತ್ತಿದ್ದಿತು; ಆದಾಗ್ಯೂ ಆಚರಣೆಯಲ್ಲಿ ನೀತಿನಿಯಮಗಳಿಗೆ ಲೋಪ ಬರುವ ರೀತಿಯಲ್ಲಿ ಸ್ತ್ರೀಪುರುಷ ರಿಬ್ಬರಿಗೂ ಬಹುವಿವಾಹಗಳು ರೂಢಿಯಾಗಿದ್ದವು. ಸವರ್ಣರೆಂದು ಹೆಮ್ಮೆ ಗೊಳ್ಳುತ್ತಿದ್ದ ಆರ್ಯರಿಗೆ ಮಿಶ್ರ ವಿವಾಹಗಳು ಸಹಜವಾಗಿ ರುಚಿಸದಾದವು; ಆರ್ಯಜನರಲ್ಲಿ ಕಾಲಜ್ಞರಾಗಿದ್ದವರಿಗೆ ನೀತಿಲೋಪದ ಶಂಕೆಯು ಬಲವಾ ಯಿತು. ಆದ್ದರಿಂದ ಆರ್ಯರ ಸಮೂಹಕ್ಕೆ ಗುರುಗಳಾಗಿದ್ದ ಋಷಿಜನರು ಮಿಶ್ರ ವಿವಾಹಗಳನ್ನು ನಿಲ್ಲಿಸುವ ಪ್ರಯತ್ನಮಾಡಿದರು. ಸಮಾಜ ಶುದ್ಧಿಗೂ ಸಮಾಜ ರಕ್ಷಣೆಗೂ ವಿಧಾನಗಳನ್ನೂ ಶುದ್ಧವಾದ ಆಚಾರಗಳನ್ನೂ ಅವರು ಚಿಂತಿಸಿ ಉಪದೇಶಮಾಡಿ ನೆಲೆಗೊಳಿಸಿದರು. ಆರ್ಯ ಭಾಷೆಯನ್ನೂ ಆಚಾರ ವ್ಯವಹಾರಗಳನ್ನೂ ಒಪ್ಪಿಕೊಂಡು ಸಹವಾಸಿಗಳಾಗಿದ್ದ ಅನಾರ್ಯಜನರನ್ನು ತಿರಸ್ಕರಿಸದೆ ಅವರಿಗೆ ಸಮಾಜದಲ್ಲಿ ಸ್ಥಾನವನ್ನೂ ಗೌರವವನ್ನೂ ನಿಷ್ಕರ್ಷೆ ಮಾಡಿದರು. ಅಂತಹವರಲ್ಲಿ ಬಹುಭಾಗದವರು ಕೃಷೀವಲರಾಗಿಯೂ ಕೆಲವರು ಸಾಮಂತನಾಯಕರಾಗಿಯೂ ಇನ್ನು ಕೆಲವರು ಶಿಲ್ಪಚತುರರಾಗಿಯೂ ಇರುತ್ತಿದ್ದರು. ಆರ್ಯರಲ್ಲಿ ವಿರೋಧವನ್ನೇ ತೋರುತ್ತಿದ್ದ ಅನಾರ್ಯರೂ, ಗಿರಿಕಂದರ ಪ್ರಾಂತಗಳಲ್ಲಿದ್ದುಕೊಂಡು ಅಸಭ್ಯರಾಗಿಯೇ ಇರುತ್ತಿದ್ದ ಅನಾರ್ಯರೂ ಸಮಾಜಬಾಹಿರರಂತೆಯೇ ಎಣಿಕೆಯಾಗುತ್ತಿದ್ದರು.

## ವೃತ್ತಿಪಾರಂಪರ್ಯ

ವರ್ಣಸಂಕರದ ಅಪಾಯದೆದುರಿನಲ್ಲಿ ಆರ್ಯರ ದೃಷ್ಟಿಯು ವರ್ಣಶುದ್ಧಿಯಲ್ಲಿ ಹೆಚ್ಚುಹೆಚ್ಚಾಗಿ ಲಗ್ನವಾಗುತ್ತಿದ್ದ ಕಾಲದಲ್ಲಿಯೇ

ಸಮಾಜದಲ್ಲಿ ಬೇರೊಂದು ಪ್ರಬಲವಾದ ಗತಿಯು ಕಾಣಿಸಿಕೊಂಡಿತು.

ಶಿಕ್ಷಣದ ಅಗತ್ಯ

ಜ್ಞಾನಾರ್ಜನೆಯು ಮುಂದರಿದಂತೆಲ್ಲ ವಿದ್ಯಾರಾಶಿಯೂ ವೃದ್ಧಿಹೊಂದುತ್ತಿತ್ತು. ಪ್ರತಿಯೊಂದೂ ವಿದ್ಯೆಯಾಗಿ ಪರಿಣಮಿಸಿ ನೈಪುಣ್ಯವನ್ನು ಪಡೆಯಲು ದೀರ್ಘಕಾಲದ ಶಿಕ್ಷಣವು ಆವಶ್ಯಕವಾಯಿತು. ಯುದ್ಧವಿದ್ಯೆಗಳಲ್ಲಿ, ವ್ಯವಸಾಯದಲ್ಲಿ, ವ್ಯಾಪಾರದಲ್ಲಿ, ಶಿಲ್ಪ ಮುಂತಾದ ಕಲೆಗಳಲ್ಲಿ ಶಿಕ್ಷಣವಿಲ್ಲದೆ ಕರ್ಮವು ನಡೆಯದಾಯಿತು. ಶಿಕ್ಷಣವು ಅವಶ್ಯಕವಾದಾಗಿನಿಂದ ಕಸಬನ್ನು ಬದಲಾಯಿಸುವುದು ಕಷ್ಟವಾದಂತೆಯೇ ಒಬ್ಬನೇ ಸಕಲವಿದ್ಯೆಗಳಲ್ಲಿಯೂ ಪಾರಂಗತನಾಗುವುದೂ ಅತಿಸಾಹಸವೆನ್ನಿಸಿತು. ಈ ರೀತಿಯಲ್ಲಿ ವೃತ್ತಿಗಳು ಪ್ರತ್ಯೇಕತೆಯನ್ನು ಹೊಂದಿ ದೀರ್ಘಕಾಲದ ಶಿಕ್ಷಣವನ್ನು ಬಯಸಿದಾಗ ತಂದೆಯ ವೃತ್ತಿಯನ್ನೇ ಮಗನಾದವನು ಅವಲಂಬಿಸುವುದು ಅತಿ ಸಹಜವಾಯಿತು; ಏಕೆಂದರೆ ತಂದೆಯು ಅವಲಂಬಿಸಿದ ವೃತ್ತಿಯಲ್ಲಿ ಮಕ್ಕಳಿಗೆ ಅಪ್ರಾರ್ಥಿತವಾಗಿಯೇ ಶಿಕ್ಷಣವು ದೊರಕುವುದು.

ಸುಲಭ ಶಿಕ್ಷಣ

ತಂದೆಯ ಕರ್ಮವನ್ನು ತ್ಯಜಿಸಿ ಇತರ ಕರ್ಮವನ್ನು ಸಾಧಿಸತಕ್ಕವರು ಅಲ್ಪಮಂದಿಯೇ. ಈ ಸ್ವಾಭಾವಿಕ ಕಾರಣದಿಂದ ವೃತ್ತಿಗಳು ವಂಶ ಪರಂಪರೆಯಾದವು. ವಿವಾಹಗಳು ಕೂಡ ವೃತ್ತಿಯ ಪೋಷಣಕ್ಕನುಸಾರವಾಗಿ ಬೆಳೆಯಬೇಕಾಯಿತು. ಸಂಹಿತೆಗಳ ಕಾಲದಲ್ಲಾದರೆ ತಾನೇ ಯೋಧ, ತಾನೇ ಗೋಪಾಲಕ, ತಾನೇ ಕೃಷಿವಲನಾಗಿರಬಹುದಾಗಿತ್ತು; ಆರ್ಥಿಕ ಜೀವನವು ಅಭಿವೃದ್ಧಿಪಡೆದ ಮೇಲೆ ಆ ಸ್ಥಿತಿಯು ಕಷ್ಟವಾಯಿತು. ವರ್ಣಶುದ್ಧಿಯ ಹೆಮ್ಮೆಯೂ ವೃತ್ತಿಪಾರಂಪರ್ಯವೂ ಈ ಎರಡು ರೀತಿಗಳಲ್ಲಿ ಊರ್ಜಿತವಾಗಿ ಆರ್ಯರಲ್ಲಿ ಪ್ರಬಲಗೊಂಡವು. ಬ್ರಹ್ಮಾವರ್ತದ ವಿಪ್ರರೂ ಮಧ್ಯದೇಶದ ಕ್ಷತ್ರಿಯರೂ ಈ ಕಾಲದಲ್ಲಿ ವರ್ಣಶುದ್ಧರೆಂದು ದರ್ಪಿಷ್ಠರಾಗಿದ್ದರು.

## ವರ್ಣಭೇದ

ಕಾಲಗತಿಯಲ್ಲಿ ಆರ್ಯರೂ ಅನಾರ್ಯರೂ ಒಂದೇ ಸಮಾಜದವರಾದರು. ದೂರವಾಗಿಯೂ ಸಂಪರ್ಕ ಸಂಬಂಧಗಳಿಲ್ಲದೆಯೂ ಇದ್ದ

ಅನಾರ್ಯಜನರನ್ನು ಬಿಟ್ಟು ಉಳಿದವರೆಲ್ಲರೂ ಆರ್ಯಭಾಷೆ, ಆರ್ಯ ಸಂಸ್ಕೃತಿ, ಆರ್ಯ ಆಚಾರ ವ್ಯವಹಾರಗಳನ್ನವಲಂಬಿಸಿದ್ದರು. ಆರ್ಯರಲ್ಲಿ ಅಥವಾ ಸವರ್ಣರಲ್ಲಿ ವೃತ್ತಿ ಭೇದಗಳು **ವಿಪ್ರ, ಕ್ಷತ್ರಿಯ, ವೈಶ್ಯ**ರೆಂಬ ಮೂರು ವಿಭಾಗಗಳಾಗಿ ತೋರಿಕೊಂಡು ವಂಶಸ್ಥವಾಗುತ್ತಿದ್ದವು. ಅವರಲ್ಲಿ ಪರಸ್ಪರ ಸಂಬಂಧಗಳಿಗೆ ಬೇರೆ ಅಡ್ಡಿಯಿಲ್ಲದಿದ್ದರೂ ವೃತ್ತಿಯು ಅಡ್ಡಿಯಾಗಿತ್ತು. ಅನುಲೋಮ ಪ್ರತಿಲೋಮ ವಿವಾಹಗಳು ಮೊದಲು ಸಾಮಾನ್ಯವಾಗಿದ್ದು ಕ್ರಮೇಣ ತಗ್ಗಿದವು. ಅಂತಹ ವಿವಾಹಗಳು ಆರ್ಯರಿಗೂ ಒಪ್ಪದಾದುವು; ಶೂದ್ರ ಪದವಿಯನ್ನು ಸ್ವೀಕರಿಸಿದ ಅನಾರ್ಯರಿಗೂ ಒಪ್ಪದಾದವು. ಈ ರೀತಿಯ ವ್ಯವಸ್ಥೆಯಿಂದ ಸವರ್ಣರೂ ಅವರ್ಣರೂ ತಮ್ಮ ತಮ್ಮ ವಿಶಿಷ್ಟಾಚಾರಗಳನ್ನು ಕಾಪಾಡಿಕೊಂಡು ಪರಸ್ಪರ ಸೌಹಾರ್ದದಿಂದ ಬದುಕಿ ಬಾಳುವ ಅನುಕೂಲತೆಯು ಸಿದ್ಧವಾಯಿತು.

ದ್ವಿಜರು

ಸ್ತ್ರೀಯರಿಗೆ ಮಾನ ಮರ್ಯಾದೆಗಳೂ ಅಧಿಕಾರವೂ ಹಿಂದಿನಂತೆಯೇ ಇದ್ದವು. ವಿಪ್ರ ಕ್ಷತ್ರಿಯರಲ್ಲಿ ಪುರುಷರಂತೆಯೇ ಸ್ತ್ರೀಯರೂ ವಿದ್ಯಾವತಿಯರಾಗಿದ್ದರು. ಕ್ಷತ್ರಿಯರಲ್ಲಿ **ಸ್ವಯಂವರ** ಪದ್ಧತಿಯಿತ್ತು. ಆ ಪದ್ಧತಿಯಲ್ಲಿ ಕನ್ಯೆಗೆ ಸರ್ವ ಸ್ವಾತಂತ್ರ್ಯವಿದ್ದಿತೆಂದು ಭಾವಿಸಬಾರದು; ಆ ಪದ್ಧತಿಯಲ್ಲಿ ಮುಖ್ಯವಾದ ಅಂಶವು ಶೌರ್ಯಪರೀಕ್ಷೆ. ಯುದ್ಧವನ್ನೇ ಸರ್ವಸ್ವವೆಂದು ಸ್ವೀಕರಿಸಿದ ಕ್ಷತ್ರಿಯರಲ್ಲಿ ವಿವಾಹವೂ ಕೂಡ ವೀರ ಪರೀಕ್ಷೆಗೆ ಸಮಯವಾಗಿ ಪರಿಣಮಿಸಿತು. ಸ್ತ್ರೀಯರು ಮಾನಧನರಾಗಿಯೇ ಇದ್ದು ಸ್ವಾತಂತ್ರ್ಯವನ್ನು ಪಡೆದು ರಾಜ್ಯಾಡಳಿತದಲ್ಲಿಯೂ ಯುದ್ಧಗಳಲ್ಲಿಯೂ ಭಾಗಿಗಳಾಗುತ್ತಿದ್ದರು. ಆದಾಗ್ಯೂ ಈ ಕಾಲದಲ್ಲಿ ಕಾರಣಾಂತರಗಳಿಂದ ಸ್ತ್ರೀಯರ ಸ್ವಾತಂತ್ರ್ಯಕ್ಕೆ ಸ್ವಲ್ಪ ಮಾತ್ರ ಅಡ್ಡಿಯು ಅಲ್ಲಲ್ಲಿ ತೋರಿಕೊಂಡಿತು. ಸೋತುಹೋದ ಜನರ ಸ್ತ್ರೀಯರನ್ನು ದಾಸಿಯರೆಂದು ಭಾವಿಸುತ್ತಿದ್ದುದಲ್ಲದೆ ಋಣದ ತೀರ್ಪಿಗಾಗಿ ಹೆಂಗಸರನ್ನು ದಾಸ್ಯದಲ್ಲಿಡುವುದೂ, ಇತರ ಕಾರಣಗಳಿಗಾಗಿ ಬಾಲ್ಯದಲ್ಲಿಯೇ ವಿವಾಹಮಾಡುವುದೂ ಅಲ್ಲಲ್ಲಿ ತೋರಿಕೊಂಡಿತು. ಒಟ್ಟಿನಲ್ಲಿ ಈ ಕಾಲದ ಆರ್ಯ ಮಹಿಳೆಯರು

ಸ್ತ್ರೀಯರ ಪದವಿ

ಆದರ್ಶಪ್ರಾಯರಾಗಿದ್ದರು. ಸಾವಿತ್ರಿ, ದಮಯಂತಿ, ಸೀತಾ, ದ್ರೌಪದಿ ಮುಂತಾದ **ಕ್ಷತ್ರಿಯ ದೇವಿಯರೂ**, ಅಹಲ್ಯಾ, ಅರುಂಧತಿ, ಲೋಪಾಮುದ್ರೆ, ಮೈತ್ರೇಯಿ ಮುಂತಾದ **ಋಷಿಪತ್ನಿಯರೂ** ಈ ಕಾಲದವರು.


10. ತಪೋವನ ಪ್ರದೇಶ

ಚಕ್ರಾಧಿಪತ್ಯಸ್ಥಾಪನೆಗೂ ಮಹಾಯಜ್ಞಗಳಿಗೂ ನಾನು ತಾನೆಂದು ಸ್ಪರ್ಧಿಸುತ್ತಿದ್ದ ಪ್ರಭುಗಳ ಕಾಲವು ವೀರಯುಗವೆನ್ನಿಸಿ ನಿತ್ಯಸ್ಮರಣೀಯವಾಯಿತು. ಜನಜೀವನವು ಶಾಂತಿ ಸೌಖ್ಯಗಳಿಂದ ತುಂಬಿತ್ತು.

ಅಂತಹ ಕಾಲದಲ್ಲಿ ಜ್ಞಾನ ವಿಜ್ಞಾನ ಸಾಧನೆಯೂ ಅತ್ಯುನ್ನತಿಯನ್ನು ಪಡೆಯಿತು. ಸಪ್ತ ಸಿಂಧುವಿನಲ್ಲಿದ್ದಾಗಲೇ ಪ್ರಕೃತಿಯ ಗಾಂಭೀರ್ಯವನ್ನೂ ಸಮೃದ್ಧಿಯನ್ನೂ ಅನುಭವಿಸಿ ಸೃಷ್ಟಿಯ ರಹಸ್ಯಗಳನ್ನು ತಿಳಿಯಲು ಆರ್ಯ ಋಷಿಗಳು ಸಾಹಸಪಟ್ಟಿದ್ದರು. ಆರ್ಯಾವರ್ತವು ವಿಸ್ತಾರವಾಗಿ ಉತ್ತರದಲ್ಲಿ ಸಾವಿರಾರು ಮೈಲಿಗಳಷ್ಟು ವಿಶಾಲವಾದ ಅತಿಫಲವತ್ತಾದ ಮೈದಾನವನ್ನೊಳಗೊಂಡಾಗ ಆರ್ಯ ಜನ ಸಮೂಹದಲ್ಲಿ ಜೀವನ ಸೌಲಭ್ಯವೂ ಸೌಭಾಗ್ಯವೂ ಹೆಚ್ಚಿ ಅನೇಕರಿಗೆ ವಿರಾಮಜೀವನವು ಪ್ರಾಪ್ತಿಯಾಯಿತು. ಶಾಂತಿಯನ್ನೇ ಧ್ಯೇಯವಾಗಿಟ್ಟುಕೊಂಡು ಜೀವನವನ್ನು ಬೆಳೆಸಿದುದಲ್ಲದೆ ಈ ಕಾಲದಲ್ಲಿ ಆರ್ಯರು ತತ್ವ ಸಾಧನೆಯಲ್ಲಿ ಅಮೋಘವಾದ ರಾಶಿಯನ್ನೂ ವಶಪಡಿಸಿಕೊಂಡರು. ಋಷ್ಯಾಶ್ರಮಗಳೂ ತಪೋವನಗಳೂ ಬ್ರಹ್ಮಾವರ್ತ ಪ್ರಾಂತದಲ್ಲಿ ಹೆಚ್ಚಿದವು. ರಾಜಪುರುಷರು ಋಷಿಜನಗಳ ರಕ್ಷಣೆಯನ್ನು ಪ್ರಥಮ ಕರ್ತವ್ಯವಾಗಿ ಎಣಿಸಿದರು. **ಬ್ರಹ್ಮಾವರ್ತ**ವೆನ್ನುವುದು ಮಹದರಣ್ಯಗಳನ್ನೊಳಗೊಂಡು ಹೋಮಕುಂಡಗಳಿಂದ ತುಂಬಿತ್ತು. ತಪೋವನ ಪ್ರದೇಶವು ಹೇಗಿದ್ದಿತೆಂಬುದನ್ನು ಕಾಳಿದಾಸ, ಬಾಣ ಮುಂತಾದ ಕವಿಶೇಖರರ ಕಾವ್ಯಗಳಲ್ಲಿ ಓದಿ ಮನಸ್ಸಿನಲ್ಲಿ ಚಿತ್ರಿಸಿಕೊಳ್ಳಬೇಕು. ಹತ್ತು ಸಾವಿರ ಬ್ರಹ್ಮಚಾರಿಗಳು ತಮ್ಮ ಗುರುಗಳ ಸಹಿತವಾಗಿ ಅರಣ್ಯ ಪ್ರದೇಶದಲ್ಲಿ ತಪೋವನವನ್ನು ನಿರ್ಮಿಸಿಕೊಂಡು ಅಧ್ಯಯನ ಮಾಡುತ್ತಿದ್ದುದು ಅಪರೂಪವಾಗಿರಲಿಲ್ಲ. ಅಂತಹ ತಪೋವನಕ್ಕೆ ಅಧ್ಯಕ್ಷನಾಗಿದ್ದ ಮಹರ್ಷಿಯು **ಕುಲಪತಿ**ಯೆನಿಸುತ್ತಿದ್ದನು. ಈ ಕಾಲದ ಋಷಿಗಳಲ್ಲಿ ಬ್ರಹ್ಮರ್ಷಿಗಳು ಪ್ರಸಿದ್ಧರು; ಏಕೆಂದರೆ ತಪೋನಿರತರಾಗಿ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವುದು ಅನೇಕರ ಧ್ಯೇಯವಾಗಿತ್ತು. ಬ್ರಾಹ್ಮಣಗಳೆಂಬ ಗ್ರಂಥ ವಿಭಾಗಗಳು ಯಜ್ಞ ಯಾಗಾದಿ ಕರ್ಮ ಕಾಂಡವನ್ನೂ, ಆರಣ್ಯಕ ಮತ್ತು ಉಪನಿಷತ್ತುಗಳೆಂಬ ವಿಭಾಗಗಳು ತಪೋಭಾಗ ಅಥವಾ ಜ್ಞಾನ ಕಾಂಡವನ್ನೂ ವಿವರಿಸತಕ್ಕವು. ಈ ಮಹಾತತ್ವ ಸಾಧನೆಯಲ್ಲಿ ವಿಪ್ರರೂ ಕ್ಷತ್ರಿಯರೂ ಮುಂದಾಳುಗಳಾಗಿದ್ದರು. ರಾಜನಾ

ಋಷಿಜನರು

ಬ್ರಹ್ಮಾವರ್ತ

ದಾತನು ಋಷಿಪದವಿಯನ್ನು ಪಡೆದು **ರಾಜರ್ಷಿ**ಯೆನಿಸುತ್ತಿದ್ದನು. ಬ್ರಹ್ಮಸಾಧನೆಯನ್ನು ಗೈದಾತನು **ಬ್ರಹ್ಮರ್ಷಿ**ಯೆನಿಸುತ್ತಿದ್ದನು. ತಪೋವನಗಳಲ್ಲಿಯೇ ಅಲ್ಲದೆ ಪ್ರತಿ ಆರ್ಯರಾಜನ ಆಸ್ಥಾನದಲ್ಲಿಯೂ ಕುಲ



11. ತಪೋವನ ಪ್ರದೇಶ

ಪುರೋಹಿತನೆನಿಸಿದ ಋಷಿಯು ಇದ್ದೇ ಇರುತ್ತಿದ್ದನು. ಬ್ರಾಹ್ಮಣಗಳ ಕಾಲದಲ್ಲಿ ಐತರೇಯ, ಶಾಂಡಿಲ್ಯ, ಪಿಪ್ಪಲಾದ ಮುಂತಾದ ಋಷಿಗಳು ಪ್ರಸಿದ್ಧರಾದವರು; ಅವರು ಯಜ್ಞಕರ್ಮವನ್ನು ವಿಸ್ತಾರಗೊಳಿಸಿದರು.

ಜನಕ, ಯಾಜ್ಞವಲ್ಕ್ಯ, ಸನತ್ಕುಮಾರ, ಅಗಸ್ತ್ಯ, ಕಪಿಲ ಋಷಿಗಳು ಬ್ರಹ್ಮರ್ಷಿಗಳಲ್ಲಿ ಪ್ರಸಿದ್ಧರು. ರಾಮಾಯಣ ಮಹಾಭಾರತಗಳೆಂಬ ಮಹಾಕಾವ್ಯಗಳನ್ನು ಮೊಟ್ಟಮೊದಲು ರಚಿಸಿದ **ವಾಲ್ಮೀಕಿ, ವ್ಯಾಸ** ಮಹರ್ಷಿಗಳೂ ಈ ಕಾಲದವರೇ. ತತ್ವಸಂಬಂಧವಾದ ಜ್ಞಾನರಾಶಿ ಗಳಲ್ಲಿಯೇ ಅಲ್ಲದೆ ಲೌಕಿಕ ವಿದ್ಯೆಗಳಲ್ಲಿಯೂ ಲಲಿತ ಕಲೆಗಳಲ್ಲಿಯೂ ಋಷಿ ಜನರೇ ಸ್ಥಾಪಕರು, ಮೂಲವನ್ನೂ ಶಿಖರವನ್ನೂ ತೋರಿಕೊಟ್ಟ ಮಹಾ ಜ್ಞಾನಿಗಳು. ಯುದ್ಧ ವಿದ್ಯೆಯಲ್ಲಿ ಕೂಡ ಅವರೇ ಆಚಾರ್ಯರಾಗಿದ್ದರು.

## ಹಿಮವತ್ಪ್ರದೇಶಗಳು

ತತ್ವ ವಿಸ್ತಾರ

ಪವಿತ್ರ ಭೂಮಿಯೆನಿಸಿ ಹೋಮಕುಂಡಗಳಿಂದ ಎದ್ದ ಹೊಗೆಯು ಮೇಘರೂಪದಿಂದ ಅಂತರಿಕ್ಷದಲ್ಲಿ ಕವಿದುಕೊಂಡಿದ್ದ ಬ್ರಹ್ಮಾವರ್ತದ ಅರಣ್ಯಗಳಲ್ಲಿ ಸ್ವೇಚ್ಛೆಯಾಗಿರುವ ದುಷ್ಟ ಕ್ರೂರ ಮೃಗಗಳೂ ಕೂಡ ತಪಸ್ವಿಗಳ ದಿವ್ಯ ಪ್ರಭಾವದಿಂದ ಶಾಂತವಾಗಿದ್ದವಂತೆ. ಅಂತಹ ಬ್ರಹ್ಮಾವರ್ತ ಅಥವಾ ಬ್ರಹ್ಮರ್ಷಿದೇಶವೂ ಕೂಡ ಈ ಕಾಲದ ಋಷಿಜನರಿಗೆ ಮೊದಲನೆ ಆಶ್ರಯ ವಾಗಿರಲಿಲ್ಲ. ಹಿಮವಂತನಲ್ಲಿರುವ ಘೋರಾರಣ್ಯಗಳೂ ಭಯಂಕರ ಕಂದರ ಗಹ್ವರಗಳೂ ಈ ಋಷಿಗಳಿಗೆ ಮೊದಲು ಆಶ್ರಯಗಳಾಗಿದ್ದವು. ಹಿಮವತ್ಪ ರ್ವತ ಪ್ರದೇಶಗಳಲ್ಲಿ ಸಂಚಾರಮಾಡುವುದು ಪ್ರತಿ ವಿದ್ಯಾರ್ಥಿಯ ಶಿಕ್ಷಣ ಭಾಗವಾಗಿತ್ತು; ಅಲ್ಲಿ ತಪಸ್ಸು ಮಾಡುವುದು ಪ್ರತಿ ಋಷಿಯ ಆಶಯವಾ ಗಿತ್ತು. ಈ ರೀತಿಯಲ್ಲಿ ಹಿಮವಂತನಿಂದ ಪ್ರೇರಿತರಾದ ಋಷಿಗಳ ಮನೋ ಬಲವು ಹಿಮವಂತನಷ್ಟೇ ದೃಢವಾಗಿ ಹಿಮವಂತನ ಶಿಖರಗಳಷ್ಟು ಉನ್ನತಿ ಗೇರಿತು. ಬ್ರಹ್ಮರ್ಷಿದೇಶವು ಅನೇಕ ಶಿಕ್ಷಣನಿಲಯಗಳಿಗೂ, ವಿದ್ಯಾಪೀಠ ಗಳಿಗೂ ನೆಲೆಯಾದ ಪ್ರದೇಶವಾಗಿದ್ದಾಗ ಹಿಮವತ್ಪ್ರಾಂತವು ಸೃಷ್ಟಿಯ ರಹಸ್ಯ ಭೇದನೆಗೂ ಜ್ಞಾನರಾಶಿಯ ಅಮೇಯ ಭಾಗಗಳ ಸಾಧನೆಗೂ ಪರಿಶೋಧನೆಗೂ ಕ್ಷೇತ್ರವಾಯಿತು. ಬುದ್ಧಿವಿಚಾರ ಶಕ್ತಿಗಳ ಸಾಹಸವು ಈ ಕಾಲದಲ್ಲಿಯೇ ಪರಮಾವಧಿಯನ್ನು **ಉಪನಿಷತ್ತು**ಗಳೆಂಬ ಭಾಗಗಳಲ್ಲಿ ಸೇರಿತು. ಬ್ರಹ್ಮರ್ಷಿದೇಶದ ತಪೋವನಗಳಲ್ಲಿಯೂ, ಇತರೆಡೆಗಳಲ್ಲಿದ್ದ

ಋಷ್ಯಾಶ್ರಮಗಳಲ್ಲಿಯೂ, ಕಾಶಿ ಮುಂತಾದ ವಿದ್ಯಾಪೀಠಗಳಲ್ಲಿಯೂ ಸಂಹಿತೆಗಳು, ಉಪವೇದಗಳು, ಷಡಂಗಗಳು ಅಭ್ಯಸ್ತ

ಶಾಸ್ತ್ರವೃದ್ಧಿ

ವಾಗುತ್ತಿದ್ದವು. ಯುದ್ಧ ಸಂಬಂಧವಾದ ಶಾಸ್ತ್ರಗಳೂ ರಾಜ್ಯ ನೀತಿ ಸಮಾಜ ನೀತಿ ಶಾಸ್ತ್ರಗಳೂ ಅಲ್ಲದೆ ಜ್ಯೋತಿಷ, ಗಣಿತ, ಆಯುರ್ವೇದ, ರಸಾಯನ, ವನಸ್ಪತಿಶಾಸ್ತ್ರ,



12. ಯಮ-ನಚಿಕೇತಸ್

ಪಶುವೈದ್ಯ ಶಾಸ್ತ್ರಗಳೂ ಅಭಿವೃದ್ಧಿಯಾದವು. ಆಯುರ್ವೇದವನ್ನು ಬೇರೆ ಬೇರೆ ಭಾಗಗಳಾಗಿ ವಿಂಗಡಿಸಿ ವಿಸ್ತಾರಗೊಳಿಸಿದ **ಧನ್ವಂತರಿ**ಯು ಸೂರ್ಯ ವಂಶದ ಕ್ಷತ್ರಿಯ ಕುಮಾರನಾಗಿದ್ದನು. ಶಾಸ್ತ್ರಗಳಲ್ಲದೆ ಸಾಹಿತ್ಯ, ಸಂಗೀತ, ವಾಸ್ತು, ಶಿಲ್ಪ, ಚಿತ್ರ, ನಾಟ್ಯ, ಅಭಿನಯ ಕಲೆಗಳೂ ಪುಷ್ಟಿಪಡೆದವು. ಅತ್ತ

ಕಲಾಪುಷ್ಟಿ

ಹಿಮವತ್ಪ್ರದೇಶಗಳಂತಹ ಗಂಭೀರವಾದ ನಿರ್ಜನ ಪ್ರದೇಶಗಳಲ್ಲಿ ಧ್ಯಾನಯೋಗಾಸಕ್ತರಾದ ಋಷಿಗಳು ಬ್ರಹ್ಮಜ್ಞಾನವನ್ನು ಪಡೆದು ಉಪನಿಷತ್ತುಗಳಲ್ಲಿ ತಮ್ಮ ಮಹಿಮೆಯನ್ನು ತೋರಿದರು. ಯಮಧರ್ಮರಾಜನನ್ನು ಕಂಡು ವರಗಳನ್ನು ಬೇಡಿದ ನಚಿಕೇತನು ಈ ಕಾಲದವನು. ಉಪನಿಷತ್ತುಗಳಲ್ಲಿ ಪ್ರಾಚೀನವೆನಿಸಿದವು ಈ ಕಾಲದವು. ಆ ಉಪನಿಷತ್ತುಗಳನ್ನೇ ವೇದಾಂತವೆನ್ನುವುದು; ಅದನ್ನು ತಿಳಿದುಕೊಳ್ಳುವುದಕ್ಕೆ ಆ ಕಾಲದ ತರುವಾಯ ಹುಟ್ಟಿದ ಜ್ಞಾನಿಗಳೆಲ್ಲರೂ ಪ್ರಯತ್ನಶೀಲರಾಗಿ ಬಹು ಪಾಲು ಸೋತೇ ಇದ್ದಾರೆ. ಅವುಗಳ ಸಾಧನೆಯಲ್ಲಿ **ಷಡ್ದರ್ಶನ**ಗಳೆಂದು ತರುವಾಯದ ಕಾಲದಲ್ಲಿ ಗ್ರಂಥರೂಪವನ್ನು ತಾಳಿದ ತತ್ತ್ವಭಾಗಗಳು ಮೂಲ ರೂಪದಲ್ಲಿ ಈ ಬ್ರಹ್ಮರ್ಷಿಗಳ ಕಾಲದಲ್ಲಿಯೇ ಸಿದ್ಧವಾದವು. ಇಂತಹ ಬೌದ್ಧಿಕ ಸಾಧನೆಯು ಶಾಂತಿ ಸಮೃದ್ಧಿಯಿಂದಲೂ ಮಹಾಪರಾಕ್ರಮಿಗಳಾಗಿದ್ದ ಅರಸರಿಂದಲೂ ಕೂಡಿದ್ದ ಕಾಲದಲ್ಲಿ ಸಾಧ್ಯವಾಗದೆ ಮತ್ತಾವ ಕಾಲದಲ್ಲಿ ಸಾಧ್ಯವಾದೀತು? ಆದ್ದರಿಂದ ಈ ಕಾಲವು ಆಸಮುದ್ರಕ್ಷಿತೀಶರೆನಿಸಿದ ಸೂರ್ಯಚಂದ್ರವಂಶಜ ಸಾರ್ವಭೌಮರ ಕಾಲವೆಂಬ ಹೆಸರನ್ನು ಹೇಗೆ ತಾಳುವುದೋ ಹಾಗೆಯೇ ಬ್ರಹ್ಮರ್ಷಿಗಳ ಕಾಲವೆಂಬ ಹೆಸರನ್ನೂ ತಾಳುವುದು.

ವರಿಷ್ಠ ದಾರಿದ್ರ್ಯ

ಪಾರಲೌಕಿಕಗಳಾದ ಆಧ್ಯಾತ್ಮಿಕ ವಿದ್ಯೆಗಳಲ್ಲಿ ಶಿಕ್ಷಣವು **ತಪೋವನ**ಗಳಲ್ಲಿಯೇ ನಡೆಯುತ್ತಿತ್ತು; ಐಹಿಕ ವಿದ್ಯೆಗಳಲ್ಲಿ ಶಿಕ್ಷಣವು ನಗರಗಳಲ್ಲಿಯೂ ಗ್ರಾಮಗಳಲ್ಲಿಯೂ ನಡೆಯುತ್ತಿತ್ತು. ಆಮುಷ್ಮಿಕ ವಿದ್ಯೆಗಳಿಗೆ ಪ್ರಕೃತಿಯ ವಾತಾವರಣವು ಅವಶ್ಯವಾಗಿ ಭೋಗವೈಭವಗಳಿಗೆ ದೂರವಾದ ಕ್ಷೇತ್ರವು ಬೇಕಾಗಿತ್ತು. ತಪಸ್ವಿಗಳು ಆಗಾಗ್ಗೆ ದೇಶ ಸಂಚಾರಿಗಳಾಗಿ ರಾಜಾಸ್ಥಾನ

ಗಳಲ್ಲಿಯೂ ಗ್ರಾಮಗಳಲ್ಲಿಯೂ ಇತರ ಜನರಿಗೆ ಉಪದೇಶಕೊಡುತ್ತ **ಪರಿವ್ರಾಜಕ**ರೆನಿಸಿದ್ದರು. ರಾಜರು **ಪರಿಷತ್ತು**ಗಳನ್ನು ನೆರೆಯಿಸಿದಾಗ ಅಥವಾ ಯಜ್ಞಗಳನ್ನು ನಡೆಸಿದಾಗ ಋಷಿಗಳೂ ವಿದ್ವಾಂಸರೂ ಸಭೆ ಸೇರಿ ವಾದ ವಿವಾದಗಳನ್ನೂ ಚರ್ಚೆಗಳನ್ನೂ ಬೆಳೆಸುತ್ತಿದ್ದರು. ವಿದ್ವಾಂಸರಿಗೂ ಋಷಿಕುಲಗಳಿಗೂ ಅನುಕೂಲವನ್ನು ಕಲ್ಪಿಸಿಕೊಡುವುದು ರಾಜನ ಕರ್ತವ್ಯ ವಾಗಿತ್ತು. ರಾಜಪುರುಷರೂ ಶ್ರೀಮಂತ ಸಾಮಂತರೂ ದಾನಮಾಡಿ ದುದೇ ಗುರುಜನರಿಗೆ ಜೀವನಸಾಧಕವಾಗಿತ್ತು. ವಿದ್ವಾಂಸರು ಬಡತನ ದಲ್ಲಿಯೇ ಇರಬೇಕೆನ್ನುವುದು ಆದರ್ಶವಾಗಿತ್ತು. ಬುದ್ಧಿಬಲವು ದಾರಿದ್ರ್ಯ ವನ್ನು ತಾನಾಗಿ ಆರಿಸಿಕೊಳ್ಳುವುದು ಆರ್ಯಜನತೆಯ ಮುಖ್ಯಲಕ್ಷಣ ವಾಯಿತು.

ಕ್ಷತ್ರಿಯ ಪತನ

ಯಜ್ಞಯಾಗಾದಿಗಳು ಬ್ರಾಹ್ಮಣಗಳ ಕಾಲದಲ್ಲಿ ವಿಸ್ತಾರವನ್ನು ಪಡೆದವು. ರಾಜರಾದವರೂ ಇತರರೂ ಯಜ್ಞ ಗಳನ್ನು ಮಾಡಿಯೇ ತೀರಬೇಕಾಗಿತ್ತು; ಯಜ್ಞ ಗಳು ವಿಧವಿಧವಾದುದರಿಂದ **ಪೌರೋಹಿತ್ಯ** ವೆನ್ನುವುದೂ ವಿಸ್ತಾರವಾದ ವಿದ್ಯೆಯಾಯಿತು. ಯಜ್ಞಗಳನ್ನು ಇತರ ಜನರು ಮಾಡಿದಷ್ಟೂ ಪುರೋಹಿತ ಜನರಿಗೆ ಲಾಭಕರವಾಗಿದ್ದುದರಿಂದ ಪುರೋಹಿತರಲ್ಲಿ ದುರಾಸೆಗೆ ಮನಸೋತವರು ಭೂರಿದಕ್ಷಿಣೆಗಳ ಆಸೆಯಿಂದ ಯಜ್ಞವಿಧಿಯನ್ನು ಬಲವಂತಪಡಿಸುವುದರಲ್ಲಿ ಆಸಕ್ತರಾದರು; ಇನ್ನು ಕೆಲವರು ರಾಜಾಧಿಕಾರವನ್ನೂ ಬಯಸಿದರು. ಅಂತಹ ಸ್ಥಿತಿಯಲ್ಲಿ ಪುರೋಹಿತರಾದ ವಿಪ್ರರಿಗೂ ರಾಜಕೀಯ ಶಕ್ತಿಯುಕ್ತರಾಗಿದ್ದ ಕ್ಷತ್ರಿಯ ರಿಗೂ ಪರಸ್ಪರ ಸ್ಪರ್ಧೆಯೂ ವಿರೋಧವೂ ಸಹಜವಾಗಿ ತೋರಿಕೊಂಡು ಪ್ರಬಲವಾಯಿತು. ದೇವತೆಗಳನ್ನೊಲಿಸುವ ಶಕ್ತಿಯುಳ್ಳ ಪುರೋಹಿತ ಜನರಿಗೂ ಬಾಹುಶಕ್ತಿಯನ್ನು ಪಡೆದಿದ್ದ ಕ್ಷತ್ರಿಯರಿಗೂ ವಿರೋಧವು ನಾನಾ ರೂಪಗಳನ್ನು ತಾಳಿತು. ಕ್ಷತ್ರಿಯರು ಬೌದ್ಧಿಕ ವ್ಯವಸಾಯವನ್ನೂ ಮಾಡಿ ಋಷಿಗಳಾಗಿ ತತ್ವಜ್ಞರಾಗಿ ಯಜ್ಞವಿಧಿಯನ್ನು ಖಂಡಿಸುವ ಅಥವಾ ನಿವಾರಿ ಸುವ ಬೇರೆ ಮಾರ್ಗಗಳನ್ನು ಸಿದ್ಧಗೊಳಿಸುವವರಾದರು. ವಿಪ್ರರಲ್ಲಿ ಅನೇಕರು ಅಂತಹವರಿಗೆ ಶಿಷ್ಯರಾಗಿ ತಾವೂ ಬೇರೆ ಮಾರ್ಗಗಳನ್ನು ಹುಡುಕಿದರು.

ಕ್ಷತ್ರಿಯರಲ್ಲಿ ದುಷ್ಟರಿದ್ದಂತೆ ವಿಪ್ರರಲ್ಲಿ ಸ್ವಾರ್ಥಸಾಧಕರೂ ಇದ್ದರು. ಯುದ್ಧವಿದ್ಯೆಯಲ್ಲಿ ಪಾರಂಗತರಾದ ವಿಪ್ರರಿದ್ದಂತೆಯೇ ಬ್ರಹ್ಮವಿದ್ಯೆಯಲ್ಲಿ ಪರಿಣತರಾದ ಕ್ಷತ್ರಿಯರೂ ಇದ್ದರು. ಪರಶುರಾಮ, ದ್ರೋಣಾಚಾರ್ಯ, ವಿಶ್ವಾಮಿತ್ರ, ಜನಕ, ಯಾಜ್ಞವಲ್ಕ್ಯರು ಈ ಆಂದೋಲನಗಳಿಗೆ ನಿದರ್ಶನ ಪ್ರಾಯರಾದವರು. ಬುದ್ಧಿಬಲಕ್ಕೂ ಬಾಹುಬಲಕ್ಕೂ ನಡೆದ ಪೋಟಾ ಪೋಟಿಯಲ್ಲಿ ಬಾಹುಬಲಕ್ಕೆ ಪರಾಜಯವುಂಟಾಯಿತು. ಮಂತ್ರಶಕ್ತಿಯುತ ರಾಗಿ ತಪೋಧನರಾಗಿದ್ದವರೆದುರಿಗೆ ಕ್ಷತ್ರಿಯರು ಬಹುಕಾಲ ನಿಲ್ಲದಾದರು. ತಮ್ಮಲ್ಲಿಯೇ ಬೆಳೆದಿದ್ದ ಪರಸ್ಪರ ವೈಷಮ್ಯಗಳಿಂದಲೂ ಭೋಗಾಭ್ಯಾಸ ಗಳಿಂದಲೂ ಕ್ಷತ್ರಿಯರು ದುರ್ಬಲರಾಗಿ ತಮ್ಮ ಪದವಿಯನ್ನು ನೀಗಿದರು. ಕ್ಷತ್ರಿಯರ ಪತನವು ಈ ಕಾಲದ ಘಟನೆಗಳಲ್ಲಿ ಮುಖ್ಯವಾದುದು.

## ಮೋಕ್ಷಮಾರ್ಗ

ಸಂಹಿತೆಗಳ ಕಾಲದ ಮೊದಲಿನ ಮತಾಚಾರ ವಿಚಾರಗಳಲ್ಲಿ ನೆಲೆಸಿದ್ದ ಸರಲತೆಯು ಬದಲಾಗಿ ಯಜ್ಞಕರ್ಮದಲ್ಲಿಯೂ ತಪಸ್ಸಂಚಯದಲ್ಲಿಯೂ ವಿಶೇಷವಾದ ಆಸಕ್ತಿಯು ಜನಿಸಿತ್ತು. ಕರ್ಮ, ಭಕ್ತಿ, ಜ್ಞಾನಮಾರ್ಗಗಳು ವಿಸ್ತಾರವಾದ ಶೋಧನೆಗೂ ಪರೀಕ್ಷೆಗೂ ಗುರಿಯಾದವು. ಈ ಮಾರ್ಗ ಗಳ ಪರಸ್ಪರ ಘರ್ಷಣ ಮಧ್ಯದಲ್ಲಿ ಬ್ರಾಹ್ಮಣ ಕ್ಷತ್ರಿಯರ ವಿರೋಧವೂ ತೋರಿಕೊಂಡು ಆರ್ಯಾವರ್ತದಲ್ಲಿ ಮತವಿಚಾರವು ಮಹದರಣ್ಯದಂತೆ ಘೋರವಾಗಿಯೂ ಗಂಭೀರವಾಗಿಯೂ ವಿಸ್ತಾರವಾಗಿ ಸಾಮಾನ್ಯ ಜನರಲ್ಲಿ ತಳಮಳವನ್ನುಂಟುಮಾಡುವಂತಿತ್ತು. ಅಂತಹ ವೇಳೆಯಲ್ಲಿ ಪ್ರಾಚೀನ ವೈದಿಕ ತತ್ತ್ವಗಳನ್ನು ಪ್ರತಿಪಾದಿಸಿ ಮೋಕ್ಷಸಾಧನೆಗೆ ಸಾಧಕಗಳೆನಿಸಿದ್ದ ಎಲ್ಲ ಮಾರ್ಗಗಳ ವಿಚಾರವನ್ನೂ ಸುಲಭಗೊಳಿಸಿ ವೃಷ್ಣಿಕುಲದ **ಶ್ರೀಕೃಷ್ಣ**ನು **ಗೀತಾಚಾರ್ಯ**ನಾಗಿ ಯುಗಪರಿವರ್ತಕನೆನಿಸಿದನು. ಮಧುರೆಯಲ್ಲಿ ಜನಿಸಿ, ಬೃಂದಾವನದಲ್ಲಿ ಬಾಲ್ಯವನ್ನು ಕಳೆದು, ಕಾಶಿಯಲ್ಲಿ ಸಾಂದೀಪಿನೀ ಋಷಿಯ ಶಿಷ್ಯನಾಗಿ ವಿದ್ಯಾವಂತನಾಗಿ, ಹಿಮವತ್ಪರ್ವತ ಪ್ರಾಂತದಲ್ಲಿ ತಪಸ್ಸನ್ನು ಮಾಡಿ, ಬ್ರಹ್ಮಚಾರಿಯಾಗಿಯೇ ಇದ್ದು ಋಷಿಜನರಿಂದ ಯೋಗಿ ರಾಜನೆಂಬ ಗೌರವಕ್ಕೆ ಪಾತ್ರನಾದ ಆತನು ಯಾದವರ ಉದ್ಧಾರ ಪ್ರಯತ್ನ

ಮಾಡಿ ತರುವಾಯ ಕುರುಪಾಂಚಾಲರಿಗೆ ಕುರುಕ್ಷೇತ್ರದಲ್ಲಿ ನಡೆದ ಮಹಾ ಯುದ್ಧವನ್ನು ತಡೆಯಲು ಸಾಹಸಪಟ್ಟನು. ಆತನೇ **ಭಗವದ್ಗೀತೆ** ಯೆಂಬ ಅಮೂಲ್ಯ ಗ್ರಂಥದಲ್ಲಿರುವ ತತ್ವಗಳನ್ನು ಬೋಧಿಸಿದಾತನು. ಆದರ್ಶಪುರುಷನೂ ಪರಮಜ್ಞಾನಿಯೂ ಆದ ಆತನು ಒಂದು ಯುಗವು ಕಳೆದು ಮತ್ತೊಂದು ಯುಗವು ಪ್ರಾರಂಭವಾಗುವುದಕ್ಕೆ ಕಾರಣನಾದನು. ಕೆಲಕಾಲದಲ್ಲಿಯೇ ಆತನನ್ನು ದೇವರೆಂದೆಲ್ಲರೂ ಒಪ್ಪಿದರು; ಭಗವಂತನೇ ಶ್ರೀ ಕೃಷ್ಣನಾಗಿ ಅವತಾರವನ್ನೆತ್ತಿ ಲೋಕೋದ್ಧಾರಮಾಡಿದನೆಂದು ಇಂದಿಗೂ ಹಿಂದೂ ಜನರು ಆತನಲ್ಲಿ ಪೂರ್ಣಭಕ್ತಿಯನ್ನಿಟ್ಟು ಪೂಜಿಸುತ್ತಾರೆ.

ಆರ್ಯರ ಇತಿಹಾಸ ವಿವರದಲ್ಲಿ ಮೊದಲನೆಯದಾದ ಮಂತ್ರಗಳ ಕಾಲ ವನ್ನು ಮಹರ್ಷಿಗಳ ಕಾಲವೆಂದು ಕರೆದಂತೆ ಈ ಎರಡನೆಯ ಕಾಲವನ್ನು **ಸಾರ್ವಭೌಮರ** ಮತ್ತು **ಬ್ರಹ್ಮರ್ಷಿ**ಗಳ ಕಾಲವೆಂದು ಕರೆಯಬೇಕಾಗಿದೆ.

# ಮಹಾಕಾವ್ಯಗಳ ವಿಚಾರ

ಸಾಮಾನ್ಯ ವ್ಯವಹಾರದಲ್ಲಿ ಮಹಾಕಾವ್ಯಗಳೆಂದರೆ ರಾಮಾಯಣ ಮಹಾಭಾರತಗಳೆಂದೇ ಭಾವಿಸಬೇಕು. ಗ್ರೀಕರಿಗೆ ಇಲಿಯಡ್ (Iliad), ಆಡಿಸ್ಸಿ (Odyssey) ಗಳಂತೆಯೂ, ರೋಮಕರಿಗೆ ಈನೀಡ್ (Æneid) ಎಂಬ ಗ್ರಂಥದಂತೆಯೂ ಹಿಂದೂ ಜನರಿಗೆ ಈ ಎರಡು ಗ್ರಂಥಗಳು ಮಹಾಕಾವ್ಯಗಳು. ಈ ಕಾವ್ಯಗಳ ಕರ್ತೃಗಳಾದ ವಾಲ್ಮೀಕಿ ಮತ್ತು ವ್ಯಾಸ ಮಹರ್ಷಿಗಳು ಶ್ರೀರಾಮಚಂದ್ರನ ಮತ್ತು ಕೌರವ ಪಾಂಡವರ ಸಮಕಾಲಿಕರು; ಅವರ ವಿವರವು ಪ್ರತ್ಯಕ್ಷದರ್ಶಿಗಳ ವಿವರ. ಮಹಾಕಾವ್ಯಗಳ ಕಾಲವೆಂದರೆ ಅವುಗಳಲ್ಲಿ ವರ್ಣಿತವಾಗಿರುವ ಸಂಗತಿಗಳು ಸಂಭವಿಸಿದ ಕಾಲ.

ಇವುಗಳ ರಚನೆಯಾದಮೇಲೆ ಅನೇಕ ಕಾಲ ಅವುಗಳನ್ನು ಬಾಯಿಂದಲೇ ಪಾಠಮಾಡಿ ಸೂತರೂ ಪೌರಾಣಿಕರೂ ಒಪ್ಪಿಸುತ್ತಿದ್ದರು. ತಲೆತಲಾಂತರವಾಗಿ ಹೀಗೆಯೇ ನಡೆದು ಸರ್ವಕಾಲಗಳಲ್ಲಿಯೂ ಜನರ ಪ್ರೀತಿಗೆ ಪಾತ್ರವಾಗಿದ್ದುದರಿಂದ ಹಿರಿಯರಾದವರು ಅವುಗಳ ಮಧ್ಯೆ ನೀತಿಬೋಧೆಯ ಮತ್ತು ತತ್ವವಿಚಾರಗಳ ವಿವರವನ್ನೂ ಅದಕ್ಕೆ ಸಹಾಯಕವಾದ ಉಪಕಥೆಗಳನ್ನೂ ಸೇರಿಸಿದರು. ಅವುಗಳಲ್ಲಿನ ಆದರ್ಶಪುರುಷರಲ್ಲಿ ದೇವಾಂಶವನ್ನು ಕಂಡಮೇಲೆ ಅತಿಮಾನುಷವ್ಯಾಪಾರಗಳ ವಿವರವು ಅವುಗಳಲ್ಲಿ ತೋರಿಕೊಂಡಿತು. ಹೀಗಾಗಿ ಮೂಲಗ್ರಂಥಗಳು ಅತಿವಿಸ್ತಾರವನ್ನು ಪಡೆದುವು. ಪಂಡಿತವರ್ಯರ ಪರೀಕ್ಷೆಯಲ್ಲಿ ಮೂಲವಾವುದು, ಪ್ರಕ್ಷಿಪ್ತವಾವುದು ಎನ್ನುವ ಭೇದವು ಸ್ಪಷ್ಟವಾಗುವುದು.

ಗ್ರೀಕರ ಮಹಾಕಾವ್ಯಗಳನ್ನನುಕರಿಸಿ ಇವುಗಳನ್ನು ರಚಿಸಿದರೆಂಬ ಮೂಢ ನಿಶ್ಚಯವು ಮೊದಲು ಎದ್ದು ಹೊರಟಿದ್ದಂತೆಯೇ ಎರಡರಲ್ಲಿ ಮೊದಲು ನಡೆದುದು ಯಾವುದು ಎಂಬ ವಿಚಾರವೂ ಹುಟ್ಟಿ ಭಿನ್ನಾಭಿಪ್ರಾಯಗಳು ತೋರಿದ್ದವು. ಈಚೆಗೆ ಈ ವಿಚಾರಗಳಿಗೆ ಬಲವಿಲ್ಲ. ಹಿಂದೂಗಳು ಸಾವಿರಾರು ವರ್ಷಕಾಲ ಭಾವಿಸಿದಂತೆ ರಾಮಾಯಣವೇ ಮೊದಲೆಂದು ಸಾಮಾನ್ಯವಾಗಿ ಎಲ್ಲರೂ ಒಪ್ಪಿದ್ದಾರೆ.

ಕಾಲನಿಶ್ಚಯದಲ್ಲಿ ಸಾಮಾನ್ಯವಾಗಿ ಶ್ರೀಕೃಷ್ಣಾವಸಾನದಿಂದ ಕಲಿಯುಗ ಪ್ರಾರಂಭವಾಯಿತೆಂದೂ, ಕಲಿಯುಗವು ಕ್ರಿ. ಪೂ. 3102ರಲ್ಲಿ ಮೊದಲಾಯಿತೆಂದೂ ನಂಬಿಕೆಯುಂಟು. ಪರೀಕ್ಷೆಯಲ್ಲಿ ಇದು ವ್ಯತ್ಯಸ್ತವಾಗುವುದು; ಭೀಷ್ಮಾಚಾರ್ಯರು ಉತ್ತರಾಯಣ ಸಂಕ್ರಾಂತಿಗಾಗಿ ಮಾಘಮಾಸದವರೆಗೂ ಕಾದಿದ್ದರೆಂಬ ಅಂಶವನ್ನು ಪರೀಕ್ಷಿಸಿದಲ್ಲಿ ಕ್ರಿ. ಪೂ. 1430 ಎಂದು ನಿಶ್ಚಯವಾಗುವುದು. ಕ್ರಿ. ಪೂ. 3102 ಎಂಬುದನ್ನು ಪುರಾಣಗಳೂ ದೃಢಪಡಿಸುವುದಿಲ್ಲ. ರಾಜತರಂಗಿಣಿಯೂ ಭದ್ರಪಡಿಸುವುದಿಲ್ಲ.

---

# ಸೂತ್ರಕಾರರ ಕಾಲ

[ಪರೀಕ್ಷಿತ್ಕಾಲದಿಂದ ಬುದ್ಧ ಜನ್ಮದವರೆಗೆ]

(ಕ್ರಿ. ಪೂ. ೧೦೦೦ ದಿಂದ ಕ್ರಿ. ಪೂ. ೬ನೆ ಶತಮಾನದವರೆಗೆ)

1. ದಕ್ಷಿಣಾಪಥ, ದ್ರಾವಿಡ ಸ್ರಾಬಲ್ಯ.
2. ಮುಖ್ಯ ರಾಷ್ಟ್ರಗಳು.
3. ಅರ್ಥವೃದ್ಧಿ, ದೂರ ವ್ಯಾಪಾರ.
4. ಸ್ಮೃತಿ, ಸೂತ್ರ, ಶಾಸ್ತ್ರಗಳು.
5. ಚಾತುರ್ವರ್ಣ್ಯ ಸಿದ್ಧಿ.
6. ನೂತನ ಮತಗಳು.

## ಪ್ರಸಿದ್ಧ ಪುರುಷರು

ಗೌತಮ. ಆಪಸ್ತಂಬ. ಬೋಧಾಯನ.
ಆಶ್ವಲಾಯನ. ಪರಾಶರ. ಬೃಹಸ್ಪತಿ.
ಗೋಭಿಲ. ಕಪಿಲ. ಜೈಮಿನಿ.
ಪಾಣಿನಿ, ಇತ್ಯಾದಿ.

## ದಕ್ಷಿಣಾಪಥ

ಮಹಾಕಾವ್ಯಗಳ ಕಾಲದಲ್ಲಿಯೇ ಆರ್ಯರು ವಿಂಧ್ಯಪರ್ವತವನ್ನು ದಾಟಿ ದಕ್ಷಿಣಾಪಥವನ್ನು ಪ್ರವೇಶಿಸಿದ್ದರು. ಕೆಲಕಾಲ ಮಾತ್ರ ವಿಂಧ್ಯ ಪರ್ವತವು ಅವರಿಗೆ ಅಡ್ಡಿಯಾಗಿ ಪಾರಿಯಾತ್ರವೆಂಬ ಹೆಸರನ್ನು ಪಡೆದಿತ್ತು; ಸಾಹಸಿಗಳಾದ ಆರ್ಯರು ಆ ಅಡ್ಡಿಯನ್ನು ಬಹುಕಾಲ ಲಕ್ಷ್ಯಮಾಡಲಿಲ್ಲ. ರಾಮಾಯಣದ ಕಾಲಕ್ಕೆ ಮೊದಲೇ ಆರ್ಯರು ವಿಂಧ್ಯವನ್ನು ದಾಟಿ ದಕ್ಷಿಣಾಪಥದಲ್ಲಿ ವಿಸ್ತಾರವಾಗಿಯೂ ಘೋರವಾಗಿಯೂ ಬೆಳೆದಿದ್ದ ದಂಡಕಾರಣ್ಯದಲ್ಲಿ ಅಲ್ಲಲ್ಲಿ ನೆಲೆಸಮಾಡಿಕೊಂಡಿದ್ದರು. ಅಗಸ್ತ್ಯ ವಿಶ್ವಾಮಿತ್ರ ಗೋತ್ರಗಳವರು ವಿಂಧ್ಯಪರ್ವತವನ್ನು ಮೊದಲು ದಾಟಿದವರು; ಶ್ರೀರಾಮ ಚಂದ್ರನು ದಂಡಕಾರಣ್ಯದಲ್ಲಿ ಸಂಚರಿಸಿದಾಗ ಅನೇಕ ಋಷಿಗಳು ಅಲ್ಲಿ ಕಂಡುಬಂದರು. ಋಷಿಗಳು ಅರಣ್ಯಗಳನ್ನರಸಿಕೊಂಡು ದಂಡಕಾರಣ್ಯ ವನ್ನು ಪ್ರವೇಶಿಸಿದುದೂ, ಅವರ ರಕ್ಷಣೆಗಾಗಿಯೂ ರಾಜ್ಯ ಸಂಪಾದನೆ ಗಾಗಿಯೂ ಕ್ಷತ್ರಿಯರು ಬಂದು ಅನಾರ್ಯಕುಲದವರನ್ನು ಗೆದ್ದು

ರಾಜ್ಯಸ್ಥಾಪನೆ ಮಾಡಿದುದೂ ಸಹಜಗತಿಯೇ ಆಗಿತ್ತು. ಶ್ರೀರಾಮ ಚಂದ್ರನ ತರುವಾಯ ಅರ್ಜುನ ಸಹದೇವರು ದಕ್ಷಿಣಾಪಥದಲ್ಲಿ ದಿಗ್ವಿಜಯ ಮಾಡಿದರೆಂಬುದು ಮಹಾಕಾವ್ಯಗಳ ಕಥನದಿಂದ ತಿಳಿಯುತ್ತದೆ. ಆರ್ಯ ಭಾಷೆಯೂ ಆರ್ಯರ ಆಚಾರ ವ್ಯವಹಾರಗಳೂ ಈ ರೀತಿಯಲ್ಲಿ ಋಷಿಗಳಿಂದಲೂ ಕ್ಷತ್ರಿಯರಿಂದಲೂ ದಕ್ಷಿಣಾಪಥದಲ್ಲಿ ಪ್ರಚಾರವಾದವು. ಮಹಾಕಾವ್ಯಗಳ ಕಾಲದಲ್ಲಿಯೇ ಸಮಸ್ತ ದೇಶದ ಪರಿಚಯವೂ ಆರ್ಯರಿಗುಂಟಾಗಿ ಸ್ವಲ್ಪ ಕಾಲದಲ್ಲಿಯೇ ಆರ್ಯಾವರ್ತವು ಇನ್ನೂ ವಿಸ್ತಾರವಾಗಿ ಒಟ್ಟು ದೇಶಕ್ಕೆ **ಭರತವರ್ಷ** ಅಥವಾ **ಭರತಖಂಡ**ವೆಂಬ ಹೆಸರಾಗಿತ್ತು.

ದ್ರಾವಿಡ ಪ್ರಾಬಲ್ಯ

ದಕ್ಷಿಣ ಭಾಗದಲ್ಲಿ ನದಿಗಳ ಬಯಲುಗಳೇ ಮೊದಲು ಜನಭರಿತವಾದ ಪ್ರದೇಶಗಳು. ಇತರ ಪ್ರದೇಶಗಳಲ್ಲಿ ಸೋತುಹೋದರೂ ಸ್ವಾತಂತ್ರ್ಯವನ್ನು ಬಿಡಲೊಲ್ಲದ ಅನಾರ್ಯರು ನೆಲೆಸಿದರು. ಪೂರ್ವತೀರದಲ್ಲಿಯೂ ದಕ್ಷಿಣಾಗ್ರದಲ್ಲಿಯೂ ಚೋಳ ಪಾಂಡ್ಯ ಕೇರಲಗಳೆಂಬ ರಾಜ್ಯಗಳು ಪ್ರಾಚೀನಕಾಲದಲ್ಲಿಯೇ ಪ್ರಾಬಲ್ಯವನ್ನು ಪಡೆದವು. ಪೂರ್ವತೀರದಲ್ಲಿ ಕಳಿಂಗರಾಜ್ಯವು ಸ್ಥಾಪಿತವಾಗಿತ್ತು. ಪ್ರಸ್ಥಭೂಮಿಯ ಭಾಗದಲ್ಲಿ ಶಬರ, ಪುಂಡ್ರ, ಪುಳಿಂದ, ನಿಷಾದ ಮುಂತಾದ ಜನರು ಪ್ರಬಲರಾಗಿದ್ದರು. ಸಹ್ಯಾದ್ರಿಮಲಯ ಪರ್ವತಗಳ ಒತ್ತಿನಲ್ಲಿ ಕೊಂಕಣವೆಂಬ ರಾಷ್ಟ್ರವು ಪ್ರಾಚೀನ ಕಾಲದಲ್ಲಿ ನಿರ್ಮಿತವಾದುದು. ಒಟ್ಟಿನಮೇಲೆ ದಕ್ಷಿಣ ವಿಭಾಗದಲ್ಲಿ ಅನಾರ್ಯ ಜನರೇ ಪ್ರಬಲರಾಗಿದ್ದು, ಆರ್ಯರಿಂದ ಪರಾಜಿತರಾಗಿ ಆರ್ಯರನ್ನು ಅನುಕರಿಸಿದಮೇಲೆಯೂ ಸಂಖ್ಯಾ ಪ್ರಬಲರಾಗಿಯೇ ಇದ್ದರು. ದ್ರಾವಿಡರ ಭಾಷೆಯೂ ಕೌಶಲವೂ ಆಚಾರ ಸಂಪ್ರದಾಯಗಳೂ ದಖನ್ನಿನಲ್ಲಿಯೇ ಪರಂಪರೆಯಾಗಿ ನಡೆದುಬರುವಂತೆ ನೆಲೆಸಿದವು. ವಿಂಧ್ಯಪರ್ವತದ ಮೂಡಲಲ್ಲಿ ಗೋಂಡಾರಣ್ಯವು ಇತರ ಅನಾರ್ಯಜನರಿಗೆ ಆವಾಸಸ್ಥಾನವಾಯಿತು.

## ಮುಖ್ಯ ರಾಷ್ಟ್ರಗಳು

ಕುರುಕ್ಷೇತ್ರದಲ್ಲಿ ಸು. 1430ರಲ್ಲಿ ನಡೆದ ಮಹಾಯುದ್ಧದಲ್ಲಿ ಆರ್ಯಾವರ್ತದ ರಾಜಪುರುಷರೆಲ್ಲರೂ ಹತರಾದರು. ಆ ತರುವಾಯ ಕುರುಭೂಮಿ

ಯಲ್ಲಿ ಆಳಿದ ಪರೀಕ್ಷಿತ್ ಜನಮೇಜಯರ ಕಾಲ ಕಳೆದಮೇಲೆ ದುರ್ಬಲರಾದ ರಾಜರೇ ಎಲ್ಲೆಡೆಗಳಲ್ಲಿಯೂ ತೋರಿಕೊಂಡರು.* ಕೆಲವು ರಾಷ್ಟ್ರಗಳಲ್ಲಿ ಕ್ಷತ್ರಿಯ ಕುಲಗಳು ಹೊಸ ರಾಜರನ್ನು ನಿರ್ಮಿಸಿಕೊಂಡರು; ಮತ್ತೆ ಕೆಲವು ರಾಷ್ಟ್ರಗಳಲ್ಲಿ ಅಲ್ಲಿಯ ಕುಲಮುಖ್ಯರು ರಾಜತ್ವವನ್ನೇ ಬದಲಾಯಿಸಿಕೊಂಡು, ಯಾದವರೂ ಸಾತ್ವತರೂ ನಿರ್ಮಿಸಿಕೊಂಡಿದ್ದ ರಾಷ್ಟ್ರರೀತಿಯನ್ನು ಬೆಳೆಸಿಕೊಂಡು **ಗಣರಾಜ್ಯ**ಗಳೆಂಬ ರಾಷ್ಟ್ರಗಳನ್ನು ನಿರ್ಮಿಸಿಕೊಂಡರು. ಈ ರೀತಿಯಲ್ಲಿ ಪ್ರಸಿದ್ಧ ರಾಜವಂಶಗಳು ನಷ್ಟವಾಗಿ ಮಿಶ್ರಕ್ಷತ್ರಿಯ ವಂಶಗಳೂ ಗಣರಾಜ್ಯಗಳೂ ವಳಿಗೆಯಾದವು. ಸಾಮಾನ್ಯವಾಗಿ ವಾಯುವ್ಯ ಮತ್ತು ಈಶಾನ್ಯ ಭಾಗಗಳಲ್ಲಿ ಗಣರಾಜ್ಯಗಳೂ ಮಧ್ಯಭಾಗದಲ್ಲಿ ರಾಜ್ಯಗಳೂ ಕುರುಕ್ಷೇತ್ರ ಯುದ್ಧದ ಅನಂತರ ಅಭಿವೃದ್ಧಿಯಾದವೆಂದು ಭಾವಿಸಬಹುದು. ಆ ರಾಷ್ಟ್ರಗಳಲ್ಲಿ ಮುಖ್ಯವಾದುವು ಯಾವುವೆಂದರೆ: ಪುಷ್ಕರಾವತಿಯೆಂಬ ರಾಜಧಾನಿಯುಳ್ಳ ಕಾಂಬೋಜರು, ತಕ್ಷಶಿಲೆಯೆಂಬ ರಾಜಧಾನಿಯುಳ್ಳ ಗಾಂಧಾರರು ಸಿಂಧುನದಿಯ ಪಶ್ಚಿಮಕ್ಕೆ; ಕಾಶ್ಮೀರ ರಾಜ್ಯವು ಉತ್ತರದ ಮೂಲೆಯಲ್ಲಿ; ಸಿಂಧು ಶತದ್ರು ನದಿಗಳ ಮಧ್ಯೆ ಶಾಕಲವೆಂಬ ರಾಜಧಾನಿಯುಳ್ಳ ಮತ್ಸ್ಯರು; ಸಿಂಧುನದಿಯ ದಕ್ಷಿಣ ಭಾಗದ ಪ್ರದೇಶದಲ್ಲಿ ಪತ್ತಲನಗರವನ್ನುಳ್ಳ ಸೈಂಧವರು; ಮತ್ಸ್ಯ ಸಿಂಧು ರಾಷ್ಟ್ರಗಳ ಮಧ್ಯೆ ಅನೇಕ ಗಣರಾಷ್ಟ್ರಗಳು; ಯಮುನಾ ಗಂಗಾ ನದಿಗಳ ಮೇಲ್ಭಾಗದಲ್ಲಿ ಇಂದ್ರಪ್ರಸ್ಥ ಹಸ್ತಿನಾವತಿ ನಗರಗಳನ್ನುಳ್ಳ ಕುರುರಾಷ್ಟ್ರ, ಅಹಿಚ್ಛತ್ರ ಕಾಂಪಿಲ್ಯ ನಗರಗಳನ್ನುಳ್ಳ ಪಾಂಚಾಲರಾಷ್ಟ್ರ; ಯಮುನಾ ನದಿಗೆ ದಕ್ಷಿಣದಲ್ಲಿ ಮಧುರಾ ನಗರವನ್ನುಳ್ಳ ಶೌರಸೇನರಾಷ್ಟ್ರ; ಇದಕ್ಕೆ ಮೂಡಲಲ್ಲಿ ಸತ್ಯವತೀನಗರವನ್ನುಳ್ಳ ಚೇದಿರಾಷ್ಟ್ರ, ವಾರಣಾಸಿಯನ್ನುಳ್ಳ ಕಾಶೀರಾಷ್ಟ್ರ, ಅಯೋಧ್ಯಾ ಸಾಕೇತ ನಗರಗಳನ್ನುಳ್ಳ ಕೋಸಲ ರಾಷ್ಟ್ರ,

---

* ತುರ್ವಶ ಕುಲದವರೂ ಯಾದವ ಕುಲದವರೂ ದೇಶವನ್ನು ಬಿಟ್ಟು ತುರಾನ್ ಮತ್ತು ಸಬೂಲಿಸ್ತಾನ್ ಎಂಬ ಭಾಗಗಳಲ್ಲಿ ನೆಲೆಸಿದರೆಂದು ಕೆಲವರ ಊಹೆಯುಂಟು. ತುರ್ವಶ ಕುಲಜಾತರೇ ತುರುಷ್ಕರಾದರೆಂದು ಅವರು ಹೇಳುತ್ತಾರೆ. ಜೈಸಲ್ಮೇರ್ ರಾಷ್ಟ್ರದ ಜಾದೋನ್ ಕುಲದ ರಾಜಪುತ್ರರು ಯಾದವ ವಂಶದವರೇ ಆಗಿದ್ದು ಆಕ್ಸಸ್‌ನದಿಯ ಪ್ರಾಂತದಲ್ಲಿ ನೆಲೆಸಿದ್ದು ಕ್ರಿ. ಶ. 5–6ನೇ ಶತಮಾನಗಳ ಕಾಲದಲ್ಲಿ ಪುನಃ ಭರತವರ್ಷ ಪ್ರವೇಶ ಮಾಡಿದರೆಂಬ ವೃತ್ತಾಂತವು ಅದಕ್ಕೆ ಪುಷ್ಟಿಕಾರಕವಾಗಿದೆ.

ಕೋಸಲರಿಗೆ ಮೂಡಲಲ್ಲಿ ಮಿಥಿಲಾ ನಗರವನ್ನುಳ್ಳ ವಿದೇಹರಾಷ್ಟ್ರ. ವಿದೇಹರು ರಾಜತ್ವವನ್ನು ಕೊನೆಮಾಡಿ ಗಣರಾಜ್ಯವನ್ನು ಸ್ಥಾಪಿಸಿಕೊಂಡು, ತಮ್ಮ ಬಡಗಲಲ್ಲಿಯೂ ಮೂಡಲಲ್ಲಿಯೂ ಇದ್ದ ಇತರ ಗಣರಾಜ್ಯಗಳೊಂದಿಗೆ ಸಂಬಂಧಗಳನ್ನು ಬೆಳೆಸಿಕೊಂಡರು. ಹಿಮಾಲಯದ ಸಾನುಪ್ರದೇಶದಲ್ಲಿ ಕಾಶ್ಮೀರದಿಂದ ಮೊದಲ್ಗೊಂಡು ಬ್ರಹ್ಮಪುತ್ರಾ ನದಿಯವರೆಗಿದ್ದ ರಾಷ್ಟ್ರಗಳಲ್ಲಿ ಮುಖ್ಯವಾದವು ಉತ್ತರಕುರು, ನೇಪಾಲ ದೇಶಗಳು ಮತ್ತು ಶಾಕ್ಯ, ಮಲ್ಲ, ವಜ್ಜಿ, ಲಿಚ್ಛವಿಗಳೆಂಬ ಪ್ರಬಲ ಕುಲಗಳಿಂದ ನಿರ್ಮಿತವಾದ ಗಣಗಳು. ವಿದೇಹರು ಇವರ ಸಂಬಂಧವನ್ನೇ ಬಲಪಡಿಸಿಕೊಂಡರು. ವಿದೇಹರಾಷ್ಟ್ರಕ್ಕೆ ದಕ್ಷಿಣದಲ್ಲಿ ಗಿರಿವ್ರಜವು ರಾಜಧಾನಿಯಾದ ಮಗಧ, ಚಂಪಾನಗರವನ್ನುಳ್ಳ ಅಂಗ, ಮತ್ತು ಅವುಗಳಿಗೆ ಪೂರ್ವಕ್ಕೆ ಪ್ರಾಗ್ಜ್ಯೋತಿಷ ನಗರ ಮತ್ತು ಕಾಮರೂಪದೇಶಗಳು ಇದ್ದವು. ವಿಂಧ್ಯಪರ್ವತ ಪ್ರಾಂತಕ್ಕೆ ಉತ್ತರದಲ್ಲಿ ಸಿಂಧುನದೀಮುಖದಿಂದ ಪ್ರಾರಂಭಿಸಿ ಪಶ್ಚಿಮ ಪೂರ್ವವಾಗಿ ಸೌವೀರ, ಆನರ್ತ, ಲಾಟ, ಅವಂತೀ, ವತ್ಸರಾಷ್ಟ್ರಗಳೂ, ಅವುಗಳಿಗೆ ತೆಂಕಲಾಗಿ ಮಧ್ಯಭಾಗದಲ್ಲಿ ಅಶ್ಮಕ, ವಿದರ್ಭ, ಮುಳಕರಾಷ್ಟ್ರಗಳೂ ಇದ್ದವು. ಆ ಪ್ರಾಂತದಲ್ಲಿ ರೋರುಕ, ದ್ವಾರಕ, ಭೃಗುಕಚ್ಛ, ಸೊಪಾರಕ, ಉಜ್ಜಯಿನಿ, ದಶಾರ್ಣ, ನಿಷಧ, ಕೌಶಾಂಬಿ ನಗರಗಳು ಹೆಸರುವಾಸಿಯಾಗಿದ್ದವು. ಈ ಮುಖ್ಯ ವಿಭಾಗಗಳು ನಕ್ಷೆಯಲ್ಲಿ ವಿಶದವಾಗುವುವು. ದೇಶಗಳೂ ನಗರಗಳೂ ಯಥೇಚ್ಛವಾಗಿದ್ದವು; ಆಳಿದ ಕುಲಮುಖ್ಯರಲ್ಲಿ ಸಾರ್ವಭೌಮ ಪದವಿಯನ್ನು ಪಡೆಯಲು ಸಾಹಸ ಸಾಮರ್ಥ್ಯಗಳುಳ್ಳವರು ಇಲ್ಲದಾದರು. ಆದ್ದರಿಂದ ಆರ್ಯಾವರ್ತವು ವಿಸ್ತಾರವಾಗಿದ್ದರೂ ಶತಚ್ಛಿದ್ರಗಳಾಗಿ ರಾಜಕೀಯ ರೀತಿಯಲ್ಲಿ ವ್ಯೂಹಬಂಧವೇ ಇಲ್ಲದೆ ಇತ್ತು.

## ಅರ್ಥವೃದ್ಧಿ

ರಾಜಕೀಯ ಘಟನೆಗಳು ಉದ್ಯೋಗ ವ್ಯಾಪಾರಗಳ ಅಭಿವೃದ್ಧಿಗಳಿಗೆ ಕುಂದನ್ನುಂಟುಮಾಡಲಿಲ್ಲವಾದ್ದ ಕಾರಣದಿಂದ ಜನಜೀವನದಲ್ಲಿ ಲೋಪವಿಲ್ಲದಂತೆ ಕಾಲವು ಮುಂದೆ ನಡೆಯಿತು. ನದಿಗಳೆಲ್ಲವೂ ಆಮೂಲವಾಗಿ ಶೋಧಿತವಾಗಿ ಹೆದ್ದಾರಿಗಳಾಗಿದ್ದವು; ಮುಖ್ಯ ನಗರಗಳು ಸಿದ್ಧ ಮಾರ್ಗ

# ಆರ್ಯಾವರ್ತ

(ವೇದ ಭೂಮಿ ಮತ್ತು ಮಹಾಕಾವ್ಯಗಳ ಕ್ಷೇತ್ರಗಳು)

ಗಾಂಧಾರ
ಕಾಂಬೋಜ
ಸುವಾಸ್ತು
ಕ್ರುಮು
ಗೋಮತಿ
ಉತ್ತರಾಪಥ
ವಿತಸ್ತಾ
ಮದ್ರ
ಇರಾವತೀ
ಕೇಕಯ
ಶತದ್ರು
ವೇಪಸೀ
ಬಾಹ್ಲಿಕ
ಸುಮೇರು
ಕೈಲಾಸ
ಮಾನಸ
ಕಾಮ್ಯಕವನ
ಸರಸ್ವತಿ
ಖಾಂಡವ
ಇಂದ್ರಪ್ರಸ್ಥ
ಹಸ್ತಿನಪುರ
ಪಾಂಚಾಲ
ಬ್ರಹ್ಮಪುತ್ರಾ
ಸಿಂಧು
ಸೌವೀರ
ಮಥುರಾ
ಯಮುನಾ
ಗಂಗಾ
ಕನ್ಯಾಕುಬ್ಜ
ಅಯೋಧ್ಯ
ಕೋಸಲ
ಮಿಥಿಲ
ವೈಶಾಲಿ
ಶೃಂಗಬೇರ
ಕಾಮರೂಪ
ಪ್ರಯಾಗ
ಕಾಶಿ
ಮಗಧ
ಅಂಗ
ನಿಷಧ
ಆನರ್ತ
ಭೋಜ
ಅವನ್ತಿ
ದಶಾರ್ಣ
ದ್ವಾರಕಾ
ಸೌರಾಷ್ಟ್ರ
ಪ್ರಭಾಸ
ರೇವಾ
ವಿಂಧ್ಯಪರ್ವತ
ತಪತೀ
ಮಹಾನದಿ
ಮಾಲ್ಯವಂತ
ಗೋದಾವರಿ
ಕಳಿಂಗ
ಕುಂತಲ
ಕೃಷ್ಣಾ
ಕಿಷ್ಕಿಂಧ
ಕಾವೇರಿ
ಕನ್ಯಾ
ಸಿಂಹಳ

## ಸಪ್ತಸಿಂಧವಃ

ಕುಭಾ — ಕಾಬೂಲ್

ಸುವಾಸ್ತು — ಸ್ವಾತ್

ಕ್ರುಮು — ಕ್ರುಂ

ಗೋಮತಿ — ಗೋಮಾಲ್

ವಿತಸ್ತಾ — ಝೀಲಂ

ಅಸಿಕ್ನೀ / ಚಂದ್ರಭಾಗಾ } ಚೀನಾಬ್

ಪರುಷ್ಣೀ / ಇರಾವತಿ } ರಾವಿ

ವಿಪಾಶ್ / ವೇಪಸೀ } ಬಿಯಾಸ್

ಶತದ್ರು — ಸತಲೆಜ್

ರಾಜಗೋಪಾಲ್ ಫೋಟೊ ಜಿಂಕೊ ಆಫೀಸ್, ಬೆಂಗಳೂರು ಸಿಟಿ

ಗಳನ್ನೂ ವೀಥಿಗಳನ್ನೂ ಪಡೆದು ವ್ಯಾಪಾರಕ್ಕೆ ಮುಖ್ಯ ಸ್ಥಳಗಳಾಗಿದ್ದವು: ಪತ್ತ್ರಲ, ಭೃಗುಕಚ್ಛ, ಸೊಪಾರಕಗಳು ಪ್ರಸಿದ್ಧ ರೇವುಗಳಾಗಿ ಹೊರಗಿನ ವ್ಯಾಪಾರದಲ್ಲಿ ಪ್ರಸಿದ್ಧಿಯಾಗಿದ್ದವು. ತಕ್ಷಶಿಲ, ಉಜ್ಜಯಿನಿ, ಸತ್ಯವತೀ, ದಶಾರ್ಣ, ಮಾಹಿಷ್ಮತಿ, ದಂತಪುರ, ಕೌಶಾಂಬಿ, ಶ್ರಾವಸ್ತಿ, ವೈಶಾಲಿ, ಪ್ರತಿಷ್ಠಾನ ನಗರಗಳು ಒಳಗಿನ ವ್ಯಾಪಾರಕ್ಕೆ ಕೇಂದ್ರಸ್ಥಾನಗಳಾಗಿದ್ದವು. ವರ್ತಕರು ಧನಿಕರಾಗಿ ತಮ್ಮ ಅಂಗರಕ್ಷಕ ದಳಗಳನ್ನು ತಾವೇ ಪೋಷಿಸುತ್ತಿದ್ದುದಲ್ಲದೆ ನಗರಗಳ ಆಡಳಿತವನ್ನು ತಾವೇ ವಹಿಸಿ ನಡೆಸುತ್ತಿದ್ದರು. ವ್ಯವಸಾಯ, ಉದ್ಯೋಗ, ವ್ಯಾಪಾರಗಳು ಅಭಿವೃದ್ಧಿಯಾಗುತ್ತಿರಲು ಇತರ ಭೂಭಾಗಗಳ ಪರಿಚಯ ಸಂಬಂಧಗಳು ವೃದ್ಧಿಯಾದವು.

ದೇಶಾಂತರ ಗಮನ

ಭರತವರ್ಷದಲ್ಲಿ ರಾಜ್ಯಸಾಮ್ರಾಜ್ಯಗಳೂ ನಗರಗಳೂ ಋಷಿಕುಲಗಳೂ ವೈಭವದಲ್ಲಿಯೂ ತತ್ವಸಾಧನೆಯಲ್ಲಿಯೂ ಉನ್ನತಿಯನ್ನು ಪಡೆದು ರಂಜಿಸುತ್ತಿದ್ದಾಗ ನೆರೆಹೊರೆಯ ರಾಷ್ಟ್ರಗಳಲ್ಲಿ ಸಭ್ಯತೆಯೆಂಬುದೇ ಇಲ್ಲದಿತ್ತು. ಪ್ರಕೃತಿ ಸಮೃದ್ಧ ಕ್ಷೇತ್ರಗಳಲ್ಲಿ ಸಭ್ಯತೆಯು ಹುಟ್ಟಿ ಬೆಳೆಯುವ ನ್ಯಾಯಕ್ಕನುಸಾರವಾಗಿ ಹೊಯಾಂಗ್ಹೊ, ಯಾಂಗ್ಟಿಸಿಕಿಯಾಂಗ್ ನದಿಗಳ ಪಾರ್ಶ್ವಗಳಲ್ಲಿಯೂ ಯೂಫ್ರೆಟೀಸ್ ಮತ್ತು ಟೈಗ್ರಿಸ್ ನದಿಗಳಿಂದ ಪೋಷಿತವಾದ ಮೈದಾನ ಪ್ರದೇಶದಲ್ಲಿಯೂ ನೀಲನದೀ ಪಾರ್ಶ್ವದಲ್ಲಿಯೂ ಪ್ರಾಚೀನ ಕಾಲದಲ್ಲಿ ನಾಗರಿಕತೆಯು ಹುಟ್ಟಿತು. ಇರಾನ್ ಪ್ರಸ್ಥಭೂಮಿಯಲ್ಲಿ ನೆಲೆಸಿದ ಆರ್ಯ ಶಾಖೆಯವರು ಅಲ್ಲಿ ವೈಭವವನ್ನು ಪಡೆಯಲಿಲ್ಲ; ಅವರ ಒಂದು ಶಾಖೆಯು ಮೆಸೊಪೊಟೇಮಿಯ ಪ್ರಾಂತದಲ್ಲಿ ನುಗ್ಗಿದುದನ್ನು ಆಗಲೇ ಕಂಡೆವು. ಇವರೊಡನೆಯೂ ಇವರ ಮೂಲಕ ಆ ಭೂಭಾಗಗಳಲ್ಲಿ ನೆಲೆಸಿದ್ದ ಇತರ ಜನರೊಡನೆಯೂ ಭಾರತೀಯ ಸಂಪರ್ಕವು ಈ ಕಾಲಕ್ಕೆ ಮೊದಲೇ ತೋರುವುದು; ಯಾವ ಕಾಲದಲ್ಲಿ ಮೊದಲಾಯಿತೆಂಬುದು ನಿಶ್ಚಿತವಾಗಿಲ್ಲ. ಕ್ರಿ. ಪೂ. 3000 ದಲ್ಲಿಯೇ ಯೂಫ್ರೆಟೀಸ್ ಜಲಪೋಷಿತ ಕ್ಷೇತ್ರದಲ್ಲಿಯೂ ನೀಲನದಿಯ ಪಾರ್ಶ್ವದಲ್ಲಿ ಸಿದ್ಧವಾದ ಮಿಶ್ರದೇಶದವರೊಡನೆಯೂ ವ್ಯಾಪಾರ ಸಂಬಂಧವಿದ್ದಂತೆ ಸೂಚನೆಗಳು ತೋರಿವೆ. ಆ ತರುವಾಯ ಆ ಪ್ರದೇಶಗಳಲ್ಲಿ ಪ್ರಾಬಲ್ಯವನ್ನು ಪಡೆದ ಗ್ರೀಕರು,

ಯೆಹೂದೀ ಜನರು, ಬವೇರು (Babylon) ನಗರದ ಜನರು, ಮುಂತಾದವರಿಗೆ ಭರತವರ್ಷದ ವಸ್ತುಗಳು ನಿತ್ಯೋಪಯುಕ್ತಗಳಾಗಿದ್ದವು. ಚಿನ್ನ ಬೆಳ್ಳಿಗಳ

**ದೂರವ್ಯಾಪಾರ**

ಆಭರಣಗಳು, ರತ್ನಗಳು, ಮುತ್ತುಗಳು, ದಂತ, ಹತ್ತಿಬಟ್ಟೆಗಳು, ಆಯುಧಗಳು, ತೇಗದಮರ, ಆ ದೇಶಗಳಲ್ಲಿ ಅಪರೂಪವಾಗಿದ್ದ ಮೃಗ ಪಕ್ಷಿಗಳು, ಮತ್ತು ವಾಸನಾದ್ರವ್ಯಗಳು ವ್ಯಾಪಾರದ ಸರಕುಗಳಾಗಿದ್ದವು. ಮಿಶ್ರದೇಶ (Egypt), ಯೆಹೂದೀ ರಾಷ್ಟ್ರ (Judaea) ಮತ್ತು ಬವೇರು ದೇಶಗಳಲ್ಲಿ ಈ ಸರಕುಗಳ ವ್ಯಾಪಾರವು ಬಲವಾಗಿಯೇ ನಡೆಯುತ್ತಿತ್ತು. ಮಿಶ್ರದೇಶದ ಸಮಾಧಿಗಳಲ್ಲಿ ಹತ್ತಿಬಟ್ಟೆಯೂ, ಬವೇರು ಪ್ರಾಂತದಲ್ಲಿ ಭೂಗತವಾಗಿದ್ದ ನಗರಗಳ ಕಟ್ಟಡಗಳಲ್ಲಿ ತೇಗದ ತೊಲೆಗಳೂ ಭಾರತದೇಶದ ಮೃಗಪಕ್ಷಿಗಳ ಚಿತ್ರಗಳೂ, ಹೀಬ್ರೂ ಮತ್ತು ಗ್ರೀಕ್ ಭಾಷೆಗಳಲ್ಲಿ ಸಂಸ್ಕೃತ ಮತ್ತು ತಮಿಳು ಶಬ್ದಗಳೂ* ಈ ವ್ಯಾಪಾರವನ್ನು ಸೂಚಿಸುತ್ತವೆ. ಪಶ್ಚಿಮದಿಕ್ಕಿನ ಈ ವ್ಯಾಪಾರವು ಭೂಮಾರ್ಗವಾಗಿಯೂ ಜಲಮಾರ್ಗವಾಗಿಯೂ ನಡೆಯುತ್ತಿತ್ತು; ಭಾರತೀಯ ವರ್ತಕರು ಸಾಹಸದಿಂದ ಪ್ರಯಾಣಮಾಡಿ ಆ ದೂರದೇಶಗಳಲ್ಲಿ ವ್ಯಾಪಾರ ನಡೆಸುತ್ತಿದ್ದರು. ಭೂಮಾರ್ಗವು ತಕ್ಷಶಿಲಾ ನಗರದಿಂದ ಮೊದಲಾಗಿ ಕಾಂಬೋಜ ದೇಶವನ್ನು ಹಾಯ್ದು ಕಪ್ಪುಸಮುದ್ರದ ಒತ್ತಿನಲ್ಲಿದ್ದ ನಗರಗಳನ್ನು ಸೇರುತ್ತಿತ್ತು. ಭೂಮಾರ್ಗಕ್ಕಿಂತಲೂ ಜಲಮಾರ್ಗವೇ ಸುಲಭವಾಗಿತ್ತು. ಪತ್ತಲ, ಭರುಕಚ್ಛ, ಸೊಪಾರಕ ನಗರಗಳಿಂದ ಹೊರಟವರು ನೌಕೆಗಳಲ್ಲಿ ಸಮುದ್ರ

**ಮಾರ್ಗಗಳು**

ತೀರವನ್ನು ಅನುಸರಿಸಿ ಯಾನಮಾಡುತ್ತ, ಫಾರಸೀ ಕೊಲ್ಲಿಯನ್ನು ಪ್ರವೇಶಿಸಿ ಬವೇರು ಪಟ್ಟಣಕ್ಕೂ, ಕೆಂಪು ಕಡಲನ್ನು ಪ್ರವೇಶಿಸಿ ಮಿಶ್ರದೇಶಕ್ಕೂ ಹೋಗಿ ವ್ಯಾಪಾರಮಾಡುತ್ತಿದ್ದರು. ಜಲಮಾರ್ಗವು ದ್ರಾವಿಡ ಜನರಿಂದಲೇ ಸಾಧಿತವಾಗಿದ್ದರೂ ಇರಬಹುದು. ಉತ್ತರದಲ್ಲಿ ನೇಪಾಲ

---

ಕಪಿ, ತೋಕೈ, ಅರಿಸಿ, ಇಂಜಿವೇರ್, ಚಂದನ ಮುಂತಾದ ಕೆಲವು ಶಬ್ದಗಳು ಹೀಬ್ರೂ ಗ್ರೀಕ ಭಾಷೆಗಳಲ್ಲಿ ಕೋಫ್, ತುಕೀಂ, ಒರುಸ ಮುತಾದ ರೂಪಾಂತರಗಳನ್ನು ಪಡೆದವು.

ಕಾಶ್ಮೀರ ದೇಶಗಳಿಂದ ಒಂದೆರಡು ಮಾರ್ಗಗಳು ಚೀನಾ ದೇಶದ ಕಡೆಗೆ ಹೊರಡುತ್ತಿದ್ದವು. ಚೀನಾಂಬರಗಳ ವ್ಯಾಪಾರವು ಆ ಮಾರ್ಗಗಳ ಮೂಲಕ ನಡೆಯುತ್ತಿತ್ತು. *ಪ್ರಾಚೀನ ಕಾಲದಲ್ಲಿ ನಡೆಯುತ್ತಿದ್ದ ಈ ವ್ಯಾಪಾರದ ವಿವರವು ತೃಪ್ತಿಕರವಾಗುವಂತೆ ಲಬ್ಧವಾಗಿಲ್ಲವಾದರೂ ಕ್ರಿ. ಪೂ. 3000 ದಿಂದ ಭೂಮಧ್ಯಸಮುದ್ರದ ಪೂರ್ವಭಾಗದಲ್ಲಿದ್ದ ರಾಷ್ಟ್ರಗಳ ಜನರು ಭರತವರ್ಷದ ಸರಕಿಗೆ ಆಸೆಪಟ್ಟು ಅವುಗಳನ್ನು ಕೊಂಡುಕೊಳ್ಳುತ್ತಲಿದ್ದುದು ದೃಢವಾದ ಸಂಗತಿಯಾಗಿದೆ.

**ದುರ್ಬಲ ಊಹೆಗಳು**

ಸರ್ವಸ್ವವನ್ನೂ ನೀಡುತ್ತಿದ್ದಂತಹ ದೇಶದ ನಿವಾಸಿಗಳಾಗಿದ್ದ ಆರ್ಯರಿಗೆ ಹೊರಗಿನ ದೇಶಗಳನ್ನು ಆಕ್ರಮಿಸುವ ಪ್ರಯತ್ನ ಮಾಡಲು ಯಾವ ಅವಶ್ಯಕತೆಯೂ ಇರಲಿಲ್ಲ. † ಅಕ್ಕ ಪಕ್ಕ ದೇಶಗಳಲ್ಲಿದ್ದವರೂ ಅಸಭ್ಯಸ್ಥಿತಿಯಲ್ಲಿಯೇ ಇದ್ದುದರಿಂದ ಆರ್ಯರ ತಿರಸ್ಕಾರಕ್ಕೆ ಗುರಿಯಾಗಿ ಅನೇಕ ಕಾಲ ಆರ್ಯರ ಸಂಬಂಧ ಲೇಶವೂ ಇಲ್ಲದೆಯೇ ಇದ್ದರು. ರಾಜ್ಯಾಪೇಕ್ಷೆಯಿಂದ ಕ್ಷತ್ರಿಯರು ದೂರದೇಶಗಳನ್ನು ಸಾಧಿಸಲು ಪ್ರಯತ್ನಿಸಬಹುದಾಗಿದ್ದುದು ನಿಜ. ಪ್ರಾಚೀನ ಕಾಲದಲ್ಲಿ ಭರತವರ್ಷವೇ ಸಭ್ಯತೆಯಲ್ಲಿ ಮುಂದಾಗಿದ್ದುದೂ ನಿಜ. ಈ ಅಂಶಗಳ ಆಧಾರದಮೇಲೆ ಭಾರತೀಯರು ಪೃಥ್ವಿಯನ್ನೇ ಪ್ರದಕ್ಷಿಣಮಾಡಿದರೆಂದೂ ಪೃಥ್ವಿಯ ಬೇರೆ ಬೇರೆ ಭಾಗಗಳಲ್ಲಿ ಆರ್ಯಕ್ಷತ್ರಿಯ ಶಾಖೆಗಳು ನೆಲೆಸಿ ಅಭಿವೃದ್ಧಿಪಡೆದವೆಂದೂ ಕೆಲವರ ಊಹೆ

---

* ವೇದಕಾಲದಲ್ಲಿ ಪಣಿಗಳೆಂಬುವರು ಸಮುದ್ರಯಾನದಲ್ಲಿಯೂ ವ್ಯಾಪಾರದಲ್ಲಿಯೂ ನಿಪುಣರಾಗಿದ್ದರೆಂದು ಪ್ರಸಿದ್ಧ. ಭೂಮಧ್ಯಸಮುದ್ರದ ಮೂಡಲಲ್ಲಿ ಪ್ರಾಚೀನಕಾಲದಲ್ಲಿ ವ್ಯಾಪಾರಪ್ರಸಿದ್ಧರಾಗಿದ್ದ ಫಿನಿಷಿಯನ್ ಜನರು (Phœnicians) ಅವರೇ ಎಂದು ಅನುಮಾನಪಡಲು ಅವಕಾಶವಿದೆ.

† ಗ್ರೀಕರು ಆರ್ಯಶಾಖೆಯವರೆಂದು ಹಿಂದೆಯೇ ಸೂಚಿತವಾಗಿದೆ. ಅವರಲ್ಲಿ ಕೆಲವರು ಭರತವರ್ಷದಲ್ಲಿ ಸಂಚಾರಮಾಡಿದರೆಂದು ಅನುಮಾನಪಡಲು ಆಧಾರವುಂಟು. ಅವರ ಮಹಾಕಾವ್ಯಗಳೂ ದೇವದೇವತಾ ಕಲ್ಪನೆಯೂ ಆ ಅನುಮಾನವನ್ನು ದೃಢಪಡಿಸುವುವು. ಸಿಕಂದರನಿಗೆ ಹಿಂದೆಯೇ ಗ್ರೀಕರು ಭರತವರ್ಷದ ವಾಯುವ್ಯ ಭಾಗಗಳಲ್ಲಿ ನೆಲೆಸಿದ್ದರು.

ಇರಾಸೀ ಜನರ ಪುರೋಹಿತರು ಮಗನೆಂಬ ಋಷಿಯ ಗೋತ್ರದವರೆಂದು ತಿಳಿದು ಬಂದಿದೆ. ಅವರನ್ನೇ Magi ಎಂದು ಪಾಶ್ಚಾತ್ಯರು ಕರೆದು ಅವರನ್ನು ಪರಮ ಜ್ಞಾನಿಗಳೆಂದು ಗೌರವಿಸುತ್ತಿದ್ದರು.

ಯುಂಟು.* ಪೆರು ದೇಶದಲ್ಲಿದ್ದ ಇಂಕಾ ಜನರೂ, ಮೆಕ್ಸಿಕೋ ದೇಶದಲ್ಲಿದ್ದ ಆಸ್ಟೆಕರೂ, ಇನ್ನೂ ಉತ್ತರದಲ್ಲಿದ್ದ ತಾಮ್ರವರ್ಣದವರೂ ಈ ರೀತಿಯಲ್ಲಿ ಭರತವರ್ಷದಿಂದ ಭ್ರಷ್ಟರಾದ ಕ್ಷತ್ರಿಯ ಕುಲಜರೆಂದು ಕೆಲವರು ಸ್ಥಾಪಿಸಲು ಪ್ರಯತ್ನಪಟ್ಟಿದ್ದಾರೆ. ಅಂತಹ ಊಹೆಗಳಿಗೆ ದೃಢವಾದ ಆಧಾರವಿಲ್ಲದೆ ಇದೆ. ಆರ್ಯಜನರು ಸಾಹಸಿಗಳೆಂದು ಹೇಳಲು ಹಿಮವತ್ಪರ್ವತ ಪ್ರಾಂತದಲ್ಲಿ ಅವರು ನಡೆಸಿದ ಪರೀಕ್ಷೆಗಳೇ ಸಾಕಾಗಿವೆ. ವ್ಯಾಪಾರಕ್ಕಾಗಿ ಕ್ರಿ. ಪೂ. ಎರಡು ಮೂರು ಸಾವಿರ ವರ್ಷಗಳ ಕಾಲದಲ್ಲಿಯೇ ಯೂರೋಪ್ ಖಂಡದ ನೈಋತ್ಯದಲ್ಲಿಯೂ ಏಷ್ಯದ ಪಶ್ಚಿಮದಲ್ಲಿಯೂ ಭಾರತೀಯರು ಪ್ರವೇಶಿಸಿದ್ದರೆಂಬುದು ಭದ್ರವಾದ ಸಂಗತಿ. ಈ ವ್ಯಾಪಾರದಲ್ಲಿ ಆಮದಾದ ವಸ್ತುಗಳು ಅತ್ಯಲ್ಪ; ರಫ್ತಾದುವೇ ಹೆಚ್ಚು. ಆದ್ದರಿಂದ ವ್ಯಾಪಾರದ ಪರಿಣಾಮವಾಗಿ ದೇಶದಲ್ಲಿ ಚಿನ್ನ ಬೆಳ್ಳಿಗಳು ಇತರ ದೇಶಗಳಿಂದ ಬಂದು ರಾಶಿಯಾಗುತ್ತಿದ್ದವು.

ಸಂಹಿತೆಗಳ ಕಾಲದಿಂದಲೂ ಆರ್ಯರಿಗೆ ಪರರ ಭಯವು ಇರಲಿಲ್ಲ. ವಾಯುವ್ಯದಲ್ಲಿ ಕಾಂಬೋಜ ದೇಶದ ಹೊರಗಡೆ ಇದ್ದ ಅಸಭ್ಯ ಜನರು ದೇಶದಲ್ಲಿ ನುಗ್ಗಿ ಬರಲು ಪ್ರಯತ್ನಮಾಡಿದಹಾಗೆ ಕಾಣಿಸುವುದಿಲ್ಲ. ಈ ಕಾರಣದಿಂದಲೂ ದೇಶವು ಸಮೃದ್ಧವಾಗಿದ್ದುದರಿಂದಲೂ ಭಾರತೀಯರ ಜೀವನದ ಗತಿಯು ತಡೆಯಿಲ್ಲದೆ ಪೂರ್ಣಕಳೆಯನ್ನು ಹೊಂದಿ ಮಾನವ ಜಾತಿಗೆ ಸಾಧ್ಯವಾದ ಸಾಧನೆಗಳೆಲ್ಲವುಗಳಲ್ಲಿಯೂ ಉನ್ನತಿಯುಂಟಾಯಿತು. ಸಾಮ್ರಾಜ್ಯ ಸ್ಥಾಪನೆಗಾಗಿ ನಡೆಯುತ್ತಿದ್ದ ಪರಸ್ಪರ ಯುದ್ಧಗಳಿಂದ ವ್ಯಾಪಾರೋದ್ಯೋಗಗಳಿಗೆ ಕೇಡು ಸಂಭವಿಸದಿದ್ದ ರೀತಿಯಲ್ಲಿಯೇ ಜ್ಞಾನ ವಿಜ್ಞಾನ ಸಾಧನೆಗೂ ಆತಂಕವಿಲ್ಲದಿತ್ತು. ಮಹಾಭಾರತ ಯುದ್ಧವಾದಮೇಲೆ ಪ್ರಬಲವಾದ ಸಾಮ್ರಾಜ್ಯವಾವುದೂ ಸ್ಥಾಪಿತವಾಗಲಿಲ್ಲವಾದರೂ ವಿದ್ಯಾಪ್ರಚಾರಕ್ಕೂ ಅಭಿವೃದ್ಧಿಗೂ ತಡೆಯಿಲ್ಲದಿತ್ತು. ನಡೆದ ಕಾರ್ಯವನ್ನು ಒಟ್ಟಿಗೆ ಸೂತ್ರ ಗ್ರಂಥಗಳ ರಾಶಿಯೆಂದು ಕರೆಯುವುದು ವಾಡಿಕೆ. ಏಕೆಂದರೆ ಸೂತ್ರ ರೀತಿಯಲ್ಲಿಯೇ ಗ್ರಂಥಗಳು ರಚಿತವಾದವು.

---

* ಅಕ್ಷಯಕುಮಾರ ಮಜುಂದಾರರು ಬರೆದಿರುವ Hindu History ಎಂಬ ಗ್ರಂಥದಲ್ಲಿ ಇಂತಹ ವಿವರಗಳನ್ನು ಯಥೇಷ್ಟವಾಗಿ ಕಾಣಬಹುದು.

ಮಹಾಕಾವ್ಯಗಳ ಕಾಲದಲ್ಲಿಯೇ ವೇದಭಾಷೆಯು ಪುರಾತನವೆನಿಸಿತ್ತು. ಷಡಂಗಗಳ ಸಹಾಯದಿಂದ ಸಂಹಿತೆಗಳ ಅಧ್ಯಯನವು ನಡೆಯುತ್ತಿತ್ತು. ಅದೇ ಕಾಲದಲ್ಲಿಯೇ ನ್ಯಾಯ, ಆಚಾರ, ಧರ್ಮಗಳ ವಿವರವನ್ನು ಕುರಿತ ಸ್ಮೃತಿಗಳೆಂಬ ಗ್ರಂಥಗಳು ರಚಿತವಾದವು.

**ಸ್ಮೃತಿಗಳು**

ಶಾಸ್ತ್ರಗಳೂ ಕಲೆಗಳೂ ಅದೇ ರೀತಿಯಲ್ಲಿಯೇ ಪಠ್ಯಗ್ರಂಥರೂಪದಲ್ಲಿ ಸಿದ್ಧವಾದವು. ಸ್ಮೃತಿಕಾರರಲ್ಲಿ ಪ್ರಸಿದ್ಧರಾದವರು **ಗೌತಮ, ಆಪಸ್ತಂಬ, ಆಶ್ವಲಾಯನ, ಪರಾಶರ, ಬೃಹಸ್ಪತಿ, ನಾರದ, ಗೋಭಿಲ** ಮುಂತಾದವರು. ಇವರು ರಚಿಸಿದ್ದ ಸ್ಮೃತಿಗಳೂ ಕೂಡ ಕುರುಕ್ಷೇತ್ರ ಯುದ್ಧದ ತರುವಾಯ ನಡೆದ ಕಾಲದಲ್ಲಿ ಪ್ರಾಚೀನವೆನಿಸಿದ್ದವು. ಶ್ರುತಿಸ್ಮೃತಿಗಳು ಆ ವೇಳೆಗೆ ವಿಸ್ತಾರವಾಗಿ ಬೆಳೆದಿದ್ದವು; ಸ್ಮರಣ ಶಕ್ತಿಯಿಂದ ಅವುಗಳೆಲ್ಲವನ್ನೂ ಸಾಧಿಸುವುದು ಕಠಿನವಾಯಿತು.

**ಸೂತ್ರಗಳು**

ಆ ಕಾರಣದಿಂದ ಪ್ರಾಚೀನವೂ ಅಮೂಲ್ಯವೂ ಎನಿಸಿದ್ದ ಶ್ರುತಿಸ್ಮೃತಿಗಳನ್ನು ಸ್ಮರಣಶಕ್ತಿಯ ಅನುಕೂಲಕ್ಕಾಗಿ, ಹೆಚ್ಚಾದ ಅರ್ಥವನ್ನು ಹಲಕೆಲವು ಶಬ್ದಗಳಲ್ಲಿಯೇ ಅಡಗಿಸಿ, ಸೂತ್ರಗಳನ್ನು ರಚಿಸುವುದು ಪದ್ಧತಿಯಾಯಿತು. ಶ್ರೌತಸೂತ್ರಗಳು ಶ್ರುತಿಗಳಿಗಾಗಿಯೂ, ಸ್ಮಾರ್ತಸೂತ್ರಗಳು ಸ್ಮೃತಿಗಳಿಗಾಗಿಯೂ ರಚಿತವಾದವು. ಅದೇ ರೀತಿಯಲ್ಲಿಯೇ ವ್ಯಾಕರಣ, ತರ್ಕ, ವೈದ್ಯ (Medicine), ಚಿಕಿತ್ಸಾ (Surgery), ಜ್ಯೋತಿಷ, ಗಣಿತ, ಧರ್ಮ, ರಾಜ್ಯನೀತಿ, ಸಂಗೀತ, ನೃತ್ಯ ಮೊದಲಾದ ಎಲ್ಲ ವಿದ್ಯಾ ಭಾಗಗಳಿಗೂ ಸೂತ್ರರೂಪದ ಪಠ್ಯಗ್ರಂಥಗಳು ಸಿದ್ಧವಾದವು. ಪ್ರಾಚೀನವಾದ ವಿದ್ಯಾರಾಶಿಯು ನಷ್ಟವಾಗದಂತೆ ರಕ್ಷಿತವಾದುದಲ್ಲದೆ ನೂತನವಾದ ವಿದ್ಯಾಭಾಗಗಳೂ ತೋರಿಕೊಳ್ಳುತ್ತ ಸೂತ್ರರೂಪವನ್ನು ತಾಳುತ್ತ ಇದ್ದವು. ಪಾರಲೌಕಿಕ, ಐಹಿಕಗಳೆಂಬ ವಿಭಾಗವೇ ಪರಾಪರವಿದ್ಯೆಗಳೆಂದು ವಿಭಾಗವಾಯಿತು. ಶ್ರುತಿ ಭಾಗವು ಪವಿತ್ರವೆನಿಸಿತ್ತು. ಇತರ ವಿದ್ಯಾ ಭಾಗಗಳು ಶಾಸ್ತ್ರಗಳೆಂಬ ಸಾಮಾನ್ಯ ಹೆಸರನ್ನು ಪಡೆದವು. ಸಮಾಜ ಶಾಸ್ತ್ರಗಳಿಗೆ ಸಂಬಂಧಪಟ್ಟ ನೀತಿಧರ್ಮದ ವಿವರವನ್ನೊಳಗೊಂಡ ಗ್ರಂಥಗಳೇ ಈ ಕಾಲದಲ್ಲಿ ವಿಶೇಷವಾದವು. ಇವಲ್ಲದೆ

ಕಲೆಗಳು ಅರವತ್ತುನಾಲ್ಕರಷ್ಟು ವೈವಿಧ್ಯವನ್ನೂ ವ್ಯವಸಾಯವನ್ನೂ ಪಡೆದವು. ಸಮಾಜಸ್ಥಿತಿ ವ್ಯವಸ್ಥೆಗಳಿಗೆ ಸಂಬಂಧಪಟ್ಟ ಗ್ರಂಥಗಳೇ ಈ ಕಾಲದಲ್ಲಿ ವಿಸ್ತಾರವನ್ನು ಪಡೆಯಲು ಪ್ರಬಲವಾದ ಕಾರಣವೇ ಇತ್ತು.

## ಚಾತುರ್ವರ್ಣ್ಯ ಸಿದ್ಧಿ

ಆರ್ಯಾವರ್ತದ ವಿಸ್ತಾರದಲ್ಲಿ ಅನಾರ್ಯರೊಡನೆ ಸಂಬಂಧಗಳು ವೃದ್ಧಿಯಾದುದೂ, ವೃತ್ತಿ ವಿಭಾಗಗಳು ಸ್ಥಿರವಾಗಿ ವಂಶಪರಂಪರೆಯಾದುದೂ ಹಿಂದೆಯೇ ಸೂಚಿತವಾಯಿತು. ಅನುಲೋಮ ಪ್ರತಿಲೋಮ ವಿವಾಹಗಳ ಪರಿಣಾಮವಾಗಿ ಮಿಶ್ರವರ್ಣಗಳ ವೃದ್ಧಿಯು ಆರ್ಯಜನರಲ್ಲಿ ಚಿಂತೆಯನ್ನುಂಟುಮಾಡಿದ್ದಲ್ಲದೆ ಶುದ್ಧವಾದ ಆರ್ಯಜನ್ಮದಲ್ಲಿ ಸಹಜವಾಗಿ ಆಸೆಯನ್ನೂ ಹೆಚ್ಚಿಸಿತು. ಎಲ್ಲರೂ ಒಂದಾಗಿ ಸಂಕರವಾದಲ್ಲಿ ಆರ್ಯರ ಸಂಸ್ಕೃತಿಯೂ ಅನಾರ್ಯಜನರ ಸಂಸ್ಕೃತಿಯೂ ನಷ್ಟವಾದೀತೆಂಬ ಭಯವು ಸಾಮಾನ್ಯವಾಗಿ ಎಲ್ಲ ಜ್ಞಾನವಂತರಲ್ಲಿಯೂ ತೋರಿತು. ಈ ಚಿಂತಾಭಯಗಳ ಪರಿಣಾಮವಾಗಿ ಭಾರತಯುದ್ಧದ ತರುವಾಯ ಆರ್ಯರಲ್ಲಿ ಹಿರಿಯರೆನಿಸಿದವರು ಸ್ಮೃತಿಗಳಲ್ಲಿಯೂ ಶಾಸ್ತ್ರ ಗ್ರಂಥಗಳಲ್ಲಿಯೂ ಚಾತುರ್ವರ್ಣ್ಯವೆಂಬ ಕ್ರಮವನ್ನು ವಿವರಿಸಿದರು. ಹಿಂದೆ ಇದ್ದುದು ಎರಡೇ ವರ್ಣಗಳು; ಈಗ ನಾಲ್ಕಾದವು. ಸವರ್ಣರಲ್ಲಿ ಬ್ರಹ್ಮ ಕ್ಷತ್ರಿಯ ವೈಶ್ಯರೆಂಬ ಮೂರು ವಿಭಾಗಗಳು ವಂಶ ಪರಂಪರೆಯಾಗಿಯೇ ಸ್ಥಿರವಾಗಿ ನಡೆದುಬಂದಿದ್ದುದು ಸೂತ್ರಕಾರರ ಕ್ರಮದಲ್ಲಿ ಪ್ರಧಾನ ಲಕ್ಷಣವಾಯಿತು. ಈ ಮೂರು ವಿಭಾಗಗಳವರೂ ಆರ್ಯ ಸಂತತಿಯವರಾಗಿ ದ್ವಿಜರೆನಿಸಿದರು. ಅವರ್ಣರಲ್ಲಿ ಆರ್ಯರಿಗೆ ಅನುಕೂಲರಾಗಿ ಆರ್ಯಭಾಷೆಯನ್ನೂ ನೀತ್ಯಾಚಾರಗಳನ್ನೂ ಒಪ್ಪಿದವರು ಶೂದ್ರರೆನಿಸಿ ನಾಲ್ಕನೇ ವಿಭಾಗದವರಾದರು. ಈ ನಾಲ್ಕೂ ಸೇರಿ ಚಾತುರ್ವರ್ಣ್ಯವೆಂಬ ವ್ಯವಸ್ಥೆಯುಂಟಾಯಿತು. ನಾಲ್ಕು ವಿಭಾಗಗಳಿಗೂ ಹೊರಗಾಗಿದ್ದ ಅನಾರ್ಯಜನರು ಪ್ರತ್ಯೇಕರಾಗಿಯೇ ಇದ್ದರು. ಅವರನ್ನು ಭ್ರಷ್ಟರೆಂದೂ ಸಮಾಜ ಬಾಹಿರರೆಂದೂ ಭಾವಿಸಿದರು. ಈ ಕ್ರಮವೇ ಬೇರೂರಿ ಭಾರತೀಯರ ವಿಶೇಷ ಲಕ್ಷಣವಾಗಿ ಬೆಳೆಯಿತು.

ಚಾತುರ್ವರ್ಣ್ಯವೆಂಬುದು ಈ ರೀತಿಯಲ್ಲಿ ವರ್ಣಭೇದದಿಂದಲೂ ವೃತ್ತಿ ಭೇದದಿಂದಲೂ ಕಾಲಗತಿಯಲ್ಲಿ ಭದ್ರವಾಗಿ ಬೆಳೆಯಿತು. ಆರ್ಯಾವರ್ತದಲ್ಲಿ ಇದು ವಿಶೇಷವಾದಂತೆಯೇ ಚಾತುರ್ವರ್ಣ್ಯವೆಂಬ ಸಮಾಜ ವ್ಯವಸ್ಥೆಯಲ್ಲಿ ಆರ್ಯಾವರ್ತಕ್ಕನುಗುಣವಾದ ಲಕ್ಷಣಗಳು ಕಾಲಕ್ರಮವಾಗಿ ಬೆಳೆದು ವೃದ್ಧಿಯಾದವು. ಗೌರವಸ್ಥಾನ ನಿಷ್ಕರ್ಷೆಯಲ್ಲಿ ಸೂತ್ರಕಾರರು ಬ್ರಾಹ್ಮಣರಿಗೆ ಅಗ್ರಸ್ಥಾನವನ್ನಿತ್ತರು. ಕ್ಷತ್ರಿಯರು ತಮ್ಮ ಪ್ರಾಬಲ್ಯವನ್ನು ಕಳೆದುಕೊಂಡುದು ಅದಕ್ಕೆ ಒಂದು ಮುಖ್ಯ ಕಾರಣವಾಗಿದ್ದಾಗ್ಯೂ ಬುದ್ಧಿಬಲಕ್ಕೆ ಮತ್ತು ಪಾರಲೌಕಿಕ ಸಾಧನೆಗೆ ಮೊದಲನೆಯ ಸ್ಥಾನವು ನಿಶ್ಚಿತವಾದುದರಲ್ಲಿ ಆಶ್ಚರ್ಯವೇನೂ ಇಲ್ಲ.

**ಶ್ರೇಷ್ಠತಾ ನಿರ್ಣಯ**

ಬುದ್ಧಿಗೂ ದಾರಿದ್ರ್ಯಕ್ಕೂ ಸಂಬಂಧವನ್ನು ಕಟ್ಟಿದುದು ಆರ್ಯಜನರ ಅಸಾಧಾರಣವಾದ ಆದರ್ಶಗಳನ್ನು ತೋರಿಸತಕ್ಕ ಅಂಶ. ಇತರ ದೇಶಗಳಲ್ಲಾದರೆ ಅಗ್ರಸ್ಥಾನವು ಬಾಹುಬಲಕ್ಕೋ ಐಶ್ವರ್ಯಕ್ಕೋ ದೊರಕಿತು; ಭರತವರ್ಷದಲ್ಲಿ ದರಿದ್ರರಾಗಿ ಭಿಕ್ಷಾಜೀವಿಗಳಾದ ಅಧ್ಯಾತ್ಮ ವಿದ್ಯೆಯ ಉಪಾಸಕರಿಗೆ ದೊರಕಿತು. ಇದು ಚಾತುರ್ವರ್ಣ್ಯದಲ್ಲಿ ಮುಖ್ಯ ಲಕ್ಷಣ. ವಿವಾಹ ನಿಷೇಧ ಮುಂತಾದ ಇತರ ಲಕ್ಷಣಗಳು ಆಚಾರ ಭೇದಗಳನ್ನನುಸರಿಸಿ ಮುಂದಿನ ಕಾಲದಲ್ಲಿ ಬೆಳೆದವು.

**ಧರ್ಮಶಾಸ್ತ್ರಗಳು**

ಆಚಾರಗಳೂ ಸೂತ್ರಕಾರರ ಕಾಲದಲ್ಲಿ ಕ್ರಮವನ್ನೂ ಭದ್ರತೆಯನ್ನೂ ಪಡೆದವು. ವೈದಿಕ ಕಾಲದ ಆಚಾರಗಳು ಜ್ಞಾಪಕದಲ್ಲಿದ್ದರೂ ಅನುಸರಣೆಯಲ್ಲಿ ದೌರ್ಬಲ್ಯವನ್ನು ಪಡೆದಿದ್ದುವಲ್ಲದೆ ಹೊಸ ಆಚಾರಗಳು ತೋರಿಕೊಂಡು ಆಚಾರ ಭೇದಗಳು ವೃದ್ಧಿಯಾಗಿದ್ದುವು. ಆಚಾರಗಳಲ್ಲಿ ಉತ್ತಮವಾದವು ಯಾವುವು, ನೀಚವಾದವು ಯಾವುವು ಎಂಬ ವಿಮರ್ಶೆಯು ಸೂತ್ರಕಾರರಿಂದಲೂ ಶಾಸ್ತ್ರಕಾರರಿಂದಲೂ ನಡೆಯಿತು. ದೀರ್ಘಕಾಲದ ಅನುಭವದ ಮತ್ತು ತಮ್ಮ ವಿಚಾರ ಶಕ್ತಿಯ ಆಧಾರದಮೇಲೆ ವಸಿಷ್ಠ, ಗೌತಮ, ಆಪಸ್ತಂಬ, ಬೋಧಾಯನ ಮುಂತಾದವರು ಆಚಾರ ವ್ಯವಹಾರಗಳನ್ನು ಕ್ರಮಗೊಳಿಸಿದರು. ಅವರು ವಿವರಿಸಿದ ಧರ್ಮಶಾಸ್ತ್ರಗಳೇ ಇಂದಿಗೂ

ಹಿಂದೂ ಜನರ ಆಚಾರ ವ್ಯವಹಾರಗಳಿಗೆ ಆಧಾರಗಳಾಗಿವೆ. ಚತುರಾಶ್ರಮ ಗಳು, ಷೋಡಶ ಸಂಸ್ಕಾರಗಳು ಮತ್ತು ಶಿಕ್ಷಣ ಪದ್ಧತಿಗಳು ಅವರ ಕಾಲದಲ್ಲಿ ನಿಷ್ಕೃಷ್ಟವಾದವುಗಳೇ.

ಷಡ್ದರ್ಶನಗಳು

ಮತಾಚಾರಗಳಲ್ಲಿ ಮಹಾಕಾವ್ಯಗಳ ಕಾಲದಲ್ಲಿ ಯಜ್ಞ, ತಪಸ್ಸುಗಳು ಮುಖ್ಯವಾಗಿದ್ದವು; ತತ್ವ ಶೋಧನೆಯು ಪ್ರಬಲ ವಾಗಿ ನಡೆಯುತ್ತ ಕರ್ಮ, ಪುನರ್ಜನ್ಮ, ಪರ ಮಾತ್ಮ, ಮೋಕ್ಷ ಮುಂತಾದ ಆಧಾರ ತತ್ವಗಳು ದೃಢವೂ ಸಾಮಾನ್ಯವೂ ಆದವು. ಕರ್ಮ ಬಂಧನದಿಂದ ಮುಕ್ತಿ ಪಡೆಯು ವುದೇ ಮುಖ್ಯ ಲಕ್ಷ್ಯವಾಗಿ ಪರಿಣಮಿಸಿತು. ಮೋಕ್ಷಸಾಧನೆಗಾಗಿ ಕರ್ಮ ಮಾರ್ಗ ಜ್ಞಾನಮಾರ್ಗಗಳೆರಡು ವಿಪುಲವಾದ ವಿವರವನ್ನು ಪಡೆದಿದ್ದವು. ಜ್ಞಾನಮಾರ್ಗದ ತಿರುಳನ್ನು ಉಪನಿಷತ್ತುಗಳೊದಗಿಸಿದ್ದವು. ಈ ಪ್ರಯತ್ನದ ಭಾಗವಾಗಿ ವಿಜ್ಞಾನಕ್ಷೇತ್ರದಲ್ಲಿ ಅದ್ಭುತವಾದ ಸಾಧನೆಯು ನಡೆಯಿತು. ದರ್ಶನ ಶಾಸ್ತ್ರಗಳು ಈ ರೀತಿಯಲ್ಲಿ ಪುಷ್ಟಿಪಡೆದು ಸೂತ್ರ ಕಾರರ ಕಾಲದಲ್ಲಿ ಷಡ್ದರ್ಶನಗಳ ರೂಪವನ್ನು ತಾಳಿದವು. ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವಮೀಮಾಂಸ, ಉತ್ತರಮೀಮಾಂಸ ಗಳೆಂಬ ಆ ಆರು ದರ್ಶನಗಳು ಕ್ರಮವಾಗಿ **ಕಪಿಲ, ಪತಂಜಲಿ, ಗೌತಮ, ಕಣಾದ, ಜೈಮಿನಿ** ಮತ್ತು **ವ್ಯಾಸ** ಋಷಿಗಳಿಂದ ವಿಸ್ತೃತವಾದವು. ಇವುಗಳಲ್ಲದೆ ತತ್ವ ಸಂಬಂಧವಾದ ಗ್ರಂಥಗಳು ಈ ಕಾಲ ದಲ್ಲಿ ಅನೇಕವಾಗಿ ವೃದ್ಧಿಪಡೆದವು. ಪಂಡಿತ ಜನರು ಜ್ಞಾನಮಾರ್ಗ ಸಾಧನೆಯಲ್ಲಿ ತೊಡಗಿದ್ದಾಗ ಜನಸಾಮಾನ್ಯರಲ್ಲಿ ಯಜ್ಞವನ್ನು ನೆರವೇರಿಸಿಯೋ ತಪಸ್ಸನ್ನಾಚರಿಸಿಯೋ ಪುಣ್ಯವನ್ನು ಸಂಪಾದಿಸಿ ಆ ಪುಣ್ಯ ಬಲದಿಂದ ಸ್ವರ್ಗವನ್ನು ಪಡೆಯಬಹುದೆಂಬ ನಂಬಿಕೆಯಿತ್ತು. ಯಜ್ಞ ಯಾಗಾದಿಗಳಲ್ಲಿ ಸ್ವಲಾಭವನ್ನು ಪಡೆಯುತ್ತಿದ್ದ ಪುರೋಹಿತರು ಹಿಂದಿನಂತೆ ಋಷಿಗಳಾಗಿರಲಿಲ್ಲ; ಪುರೋಹಿತರ ಗುಂಪು ಪ್ರಬಲವಾಗಿ ಯಾಗಗಳನ್ನೇ ಬಲವಂತಪಡಿಸುತ್ತ ದುರಾಸೆಯನ್ನು ತೋರುತ್ತ ಹಿಂಸಕವೇ ಆಯಿತು. ಯಾಗಗಳನ್ನು ಮಾಡಿಸುವುದು ಧನವಂತರಿಗೆ ಮಾತ್ರವೇ ಸಾಧ್ಯವಾಯಿತು; ಯಜ್ಞಗಳನ್ನು ಮಾಡಿದಷ್ಟೂ ಪುಣ್ಯಲಾಭವಾಗುವುದೆಂಬ ನಂಬಿಕೆಯು

ಬೆಳೆದಿದ್ದುದರಿಂದ ಯಜ್ಞಗಳು ಪೂರ್ವಕಾಲದ ಶುದ್ಧಿಯನ್ನು ಪಡೆಯುವು. ದುಷ್ಟರಿಗೆ ಅವಕಾಶವನ್ನೂ ಅಧಿಕಾರವನ್ನೂ ಕೊಡತಕ್ಕವುಗಳಾಗಿದ್ದವು. ಜ್ಞಾನಮಾರ್ಗ ಸಾಧನೆಯು ಈ ಕಷ್ಟಗಳನ್ನು ನಿವಾರಿಸಿದಾಗ್ಯೂ ಸುಲಭ ಸಾಧ್ಯವಾಗಿರಲಿಲ್ಲ. ತಪಸ್ಸೆಂಬುದು ಅತಿಕಠಿನ ಸಾಧನೆಯಾಗಿತ್ತು.

ನೂತನ ಮತಗಳು

ದರ್ಶನಶಾಸ್ತ್ರಗಳೂ ತತ್ತ್ವವಿಚಾರವೂ ಜ್ಞಾನವಂತರಿಗೆ ಮಾತ್ರವೇ ಲಭ್ಯವಾಗಿತ್ತು. ಇಂತಹ ಸ್ಥಿತಿಗತಿಗಳ ಕಾಲದಲ್ಲಿ ಯಜ್ಞಕರ್ಮದಲ್ಲಿ ನಡೆಯುತ್ತಿದ್ದ ಪಶುಹತ್ಯೆಯನ್ನು ನಿಲ್ಲಿಸಿ, ಸಾಮಾನ್ಯ ಜನರಿಗೆ ಅನುಸರಣೀಯವೂ ಬ್ರಾಹ್ಮಣ ಪುರೋಹಿತರಿಗೆ ವಿರುದ್ಧವೂ ಆದ ಮಾರ್ಗಗಳನ್ನು ಇಬ್ಬರು ಕ್ಷತ್ರಿಯರು ತೋರಿದರು. ಅವೇ ಜೈನ ಬೌದ್ಧ ಮತಗಳು. ಅವುಗಳ ವಿವರವು ಸೂತ್ರಕಾರರ ಕಾಲದಲ್ಲಿಯೇ ಸೇರತಕ್ಕವಾದರೂ ಬೇರೆ ಕೆಲವು ಕಾರಣಗಳಿಂದ ಪ್ರತ್ಯೇಕವಾಗಿಯೇ ಇರುವುದು. ಜೈನ ಬೌದ್ಧ ಮತಗಳ ವೃತ್ತಾಂತದಿಂದ ಬೌದ್ಧಕಾಲವೆಂಬ ಮುಂದಿನ ವಿಭಾಗವು ಪ್ರಾರಂಭವಾಗುವುದು.

ಕ್ರಿ. ಪೂ. 7ನೇ ಶತಮಾನವು ಸೂತ್ರಕಾರರ ಕಾಲಕ್ಕೆ ಕೊನೆಯೆಂದು ಭಾವಿಸಬಹುದು. ಸೂತ್ರ ಗ್ರಂಥಗಳ ಕಾಲವು ಇನ್ನೂ ಮುಂದೆ ನಡೆಯಿತು. ಏಳನೇ ಶತಮಾನದಲ್ಲಿಯೇ ವ್ಯಾಕರಣ ಶಾಸ್ತ್ರದಲ್ಲಿ ಪ್ರಸಿದ್ಧ ಸೂತ್ರಕಾರನಾದ **ಶಾಲಾತುರೀಯ ಪಾಣಿನಿಯು*** ಅಷ್ಟಾಧ್ಯಾಯೀ ಎಂಬ ಗ್ರಂಥವನ್ನು ರಚಿಸಿದನು. ಆತನನ್ನೇ ಸೂತ್ರಕಾರರ ಕಾಲಕ್ಕೆ ಕಡೆಯ ಗುರುತೆಂದು ಭಾವಿಸಬಹುದು.

---

* ಶಾಲಾತುರ ಎಂಬುದು ಪಂಚನದ ಪ್ರಾಂತದ ಒಂದು ಊರು ; ಆ ಊರಿನವನಾಗಿ ಶಾಲಾತುರೀಯನೆನಿಸಿದ ಪಾಣಿನಿಯು ವೈಯ್ಯಾಕರಣಿಗಳಲ್ಲಿ ಅತಿ ಪ್ರಸಿದ್ಧನಾಗಿದ್ದಾನೆ. ಆತನ ಗ್ರಂಥವು ಕಾತ್ಯಾಯನ, ಮತ್ತು ಪತಂಜಲಿಯೆಂಬವರಿಂದ ವಿಸ್ತಾರವಾದ ಪರಿಷ್ಕಾರವನ್ನು ಹೊಂದಿ, ಸಂಸ್ಕೃತ ವ್ಯಾಸಂಗಿಗಳಿಗೆ ಅತ್ಯವಶ್ಯಕವಾಗಿ, ಕೌಮುದೀ ಎಂಬ ಸುಂದರವಾದ ಹೆಸರನ್ನು ಪಡೆಯಿತು. ಪಾಣಿನಿಯ ಬುದ್ಧಿಶಕ್ತಿಯು ಅತಿ ಪ್ರಚಂಡವಾದುದೆಂದು ಜಗತ್ತೇ ಒಪ್ಪಿದೆ.

ಪಾಣಿನಿಯ ಹಿಂದೆ ಕಾಶ್ಯಪ, ಗಾರ್ಗ್ಯ, ಗಾಲವ, ಶಕ್ರವರ್ಮ, ಭಾರದ್ವಾಜ, ಶಾಕಟಾಯನ. ಶಾಕಲ್ಯ, ಸ್ಫೋಟಾಯನ ಮುಂತಾದ ವ್ಯಾಕರಣಜ್ಞರನೇಕರಿದ್ದರು.

## ಸಿಂಹಾವಲೋಕನ

ಈ ರೀತಿಯಲ್ಲಿ ಸಪ್ತಸಿಂಧು ಪ್ರಾಂತದಲ್ಲಿ ನೆಲೆಸಿದ ಆರ್ಯಜನರು ಸಮಸ್ತ ದೇಶದಲ್ಲಿಯೂ ವ್ಯಾಪಿಸಿ ಅಮೋಘವಾದ ಸಾಧನೆಯನ್ನು ಸಕಲ ಕ್ಷೇತ್ರಗಳಲ್ಲಿಯೂ ನಡೆಸಿದರು. ಜ್ಞಾನ ವಿಜ್ಞಾನರಾಶಿಗಳಲ್ಲಿ, ಭೋಗ ವೈಭವಗಳಲ್ಲಿ, ಉದ್ಯೋಗ ವ್ಯಾಪಾರಗಳಲ್ಲಿ, ಶೃಂಗಾರ ಕಲೆಗಳಲ್ಲಿ ಜಗತ್ತನ್ನೇ ರಂಜಿಸುವಂತಹವರಾದರು. ಅವರು ಕಟ್ಟಿದ ನಾಗರಿಕತೆಯಲ್ಲಿ ವರ್ಣ ಭಿನ್ನ ಸಂಸ್ಕಾರ ಭಿನ್ನವಿದ್ದರೂ ಸಮಾಜವು ಭದ್ರವೂ ಶಾಂತಿಪ್ರದವೂ ಆದ ವ್ಯವಸ್ಥೆಯನ್ನು ಪಡೆಯಿತು. ಶುದ್ಧವಾದ ಆಚಾರ ವ್ಯವಹಾರಗಳು ನೆಲೆಸಿದವು. ಜನಸಾಮಾನ್ಯರಲ್ಲಿ **ಔದಾರ್ಯ, ಕೃತಜ್ಞತೆ, ದೈವಭಕ್ತಿ, ಶಾಂತಿ ಪ್ರೇಮ**ಗಳು ಸಹಜ ಗುಣಗಳಾಗಿ ಬೆಳೆದವು. ಪಾರಲೌಕಿಕ ವಿದ್ಯೆಯಲ್ಲಿ ಈ ಪ್ರಾಚೀನ ಕಾಲದ ಸಾಧನೆಯು ಇಂದಿಗೂ ಜಗದಾಶ್ಚರ್ಯಕರವಾಗಿಯೇ ಇದೆ. ಇಷ್ಟಕ್ಕೂ ಮೂಲಕಾರಣರು ಋಷಿಜನರು. ಆರ್ಯ ಸಮೂಹದಲ್ಲಿ ಋಷಿಗಳಿಗೇ ಪರಮ ಗೌರವವು ಇರುವುದು ಆ ಕಾರಣದಿಂದಲೇ. ಋಷಿಗಳ ಗೋತ್ರಜರೆಂಬ ಹೆಮ್ಮೆಯೇ ಹಿಂದೂಜನರಲ್ಲಿ ಅತಿಬಲವಾದುದು.

ಸೂತ್ರಕಾರರ ಕಾಲವಾದಮೇಲೆ ಋಷಿಜನರು ನಮಗೆ ಕಾಣುವುದಿಲ್ಲ. ಕಲಿಯುಗದಲ್ಲಿ ಋಷಿಗಳು ಕಾಣುವುದಿಲ್ಲವೆಂದು ಸಾಮಾನ್ಯವಾಗಿ ಜನರು ಹೇಳಿಕೊಳ್ಳುವುದು ಮೂಢವಾದರೂ ನಿಜಾಂಶವನ್ನುಳ್ಳುದು. ಈ ಭೇದವಲ್ಲದೆ ಬೇರೆ ಭೇದಗಳೂ ಉಂಟು. ಪ್ರಾಕ್ತನ ಪರೀಕ್ಷೆಯ ಸಹಾಯವೂ ಪರದೇಶಗಳ ಗ್ರಂಥರಾಶಿಯ ಸಹಾಯವೂ ಕ್ರಿ. ಪೂ. 7ನೆ ಶತಮಾನದಿಂದೀಚೆಗೆ ಲಭ್ಯವಾಗಿದೆ. ಕಾಲನಿರ್ಣಯವನ್ನು ಮಾಡಲು ಅನುಕೂಲವಿದೆ. ಆ ಕಾರಣದಿಂದ ಬುದ್ಧ ಜನ್ಮಕ್ಕೆ ಹಿಂದಿನ ಕಾಲವೆಲ್ಲವನ್ನೂ ಒಟ್ಟುಗೂಡಿಸಿ ಬುದ್ಧಪೂರ್ವಕಾಲವೆಂದು ಕರೆಯುವುದು ಭಾರತೀಯ ಇತಿಹಾಸದಲ್ಲಿ ಒಂದು ಪದ್ಧತಿಯಾಗಿದೆ.

---

# ದ್ವಿತೀಯ ಕಲ್ಲೋಲ

## ಆರ್ಯನೀತಿ ವಿಸ್ತರಣ

1. ಬೌದ್ಧಮತದೇಳಿಗೆ.
2. ಮೌರ್ಯ ಸಾಮ್ರಾಜ್ಯ.
3. ಬೃಹತ್ತರ ಭಾರತಾರಂಭ.

# ಬೌದ್ಧಮತದೇಳಿಗೆ

(ಕ್ರಿ. ಪೂ. 7ನೆ ಶತಮಾನದಿಂದ ಕ್ರಿ. ಪೂ. 4ನೆ ಶತಮಾನದವರೆಗೆ)

1. ಜೈನ ಬೌದ್ಧ ಮತಗಳು. 2. ಮೌರ್ಯ ಪೂರ್ವ ರಾಜ್ಯಗಳು.
3. ಗ್ರೀಕರ ದಂಡಯಾತ್ರೆ. 4. ಬೌದ್ಧ ಪ್ರಚಾರ ವ್ಯಾಪ್ತಿಗಳು.

## ಪ್ರಸಿದ್ಧ ಪುರುಷರು

| | | |
|---|---|---|
| ಪಾರ್ಶ್ವನಾಥ. | ಬಿಂಬಿಸಾರ. | ಜರದಸ್ತ, ಕಾಂಫೂಷ್. |
| ಮಹಾವೀರ. | ಅಜಾತಶತ್ರು. | ಹಿರೇದಾರಾ. |
| ಬುದ್ಧದೇವ. | ಮಹಾಪದ್ಮ. | ಷೇರ್. |
| | ಪೌರವ. | ಸಿಕಂದರ್. |

## ಜೈನಮತ ಸ್ಥಾಪನೆ

ಈಶಾನ್ಯ ಭಾಗದಲ್ಲಿ ಈಗಿನ ನೇಪಾಲ ದೇಶದ ಮೂಡಲ ಪ್ರದೇಶದಲ್ಲಿ **ವೈಶಾಲೀ**ಯೆಂಬ ನಗರದಲ್ಲಿ ಕ್ಷತ್ರಿಯರಾದ **ಜ್ಞಾತಕುಲ**ದವರು ನೆಲೆಸಿದ್ದರು. ಅವರಲ್ಲಿ ಸಿದ್ಧಾರ್ಥನೆಂಬಾತನಿಗೆ ತ್ರಿಶಲಾ ಎಂಬ ಪತ್ನಿಯ ಹೊಟ್ಟೆಯಲ್ಲಿ ಸುಮಾರು ಕ್ರಿ. ಪೂ. 599ರಲ್ಲಿ **ವರ್ಧಮಾನ**ನೆಂಬಾತನು ಹುಟ್ಟಿದನು. ಕ್ಷತ್ರಿಯರಿಗೆ ಉಚಿತವಾದ ರೀತಿಯಲ್ಲಿ ಆತನಿಗೆ ಬಾಲ್ಯದಲ್ಲಿ ಶಸ್ತ್ರಾಸ್ತ್ರ ವಿದ್ಯೆಗಳಲ್ಲಿಯೂ ಕಲೆಗಳಲ್ಲಿಯೂ ಶಿಕ್ಷಣವು ನೆರವೇರಿತು. ಆದರೆ ವಯಸ್ಸು ತುಂಬಿದಂತೆ ಆತನಿಗೆ ತತ್ತ್ವವಿಚಾರದಲ್ಲಿಯೇ ಆಸಕ್ತಿಯು ಹೆಚ್ಚುತ್ತಿತ್ತು. ಯಶೋದಾ ಎಂಬ ಕ್ಷತ್ರಿಯ ವಧುವನ್ನು ವಿವಾಹವಾಗಿ ಆತನು ಕೆಲಕಾಲ ಗೃಹಸ್ಥನಾಗಿಯೂ ಇದ್ದನು. ಕಾಲ ಕಳೆಯುತ್ತ ಆತನಿಗೆ ಸಂಸಾರದಲ್ಲಿ ವಿರಕ್ತಿಯೂ ತತ್ತ್ವಸಾಧನೆಯಲ್ಲಿ ಆಸಕ್ತಿಯೂ ಬಲವಾಗಿ ಆತನು ಸಂಸಾರವನ್ನು ತ್ಯಾಗಮಾಡಿ ಸಂನ್ಯಾಸವನ್ನು ಸ್ವೀಕಾರ ಮಾಡಿದನು. ಕೀರ್ತಿಗಾಸೆಪಡುವ ಯೋಧನಾಗಲಿ ರಾಜನಾಗಲಿ ಆಗದೆ ಈ ರೀತಿಯಲ್ಲಿ

ಆತನು ವೈಶಾಲಿಗೆ ಸಮೀಪದಲ್ಲಿಯೇ ಇದ್ದ ಪಾರ್ಶ್ವನಾಥಾಶ್ರಮಕ್ಕೆ ಹೊರಟನು. ಕ್ಷತ್ರಿಯನಾಗಿಯೇ ಜನಿಸಿ ವೈರಾಗ್ಯದಿಂದ ಸಂನ್ಯಾಸಿಯಾಗಿದ್ದ ಪಾರ್ಶ್ವನಾಥನೆಂಬಾತನು ಕೆಲಕಾಲದ ಹಿಂದೆ ಆ ಆಶ್ರಮವನ್ನು ಸ್ಥಾಪಿಸಿದ್ದನು. ವರ್ಧಮಾನನು ಎರಡುವರ್ಷಕಾಲ ಆ ಆಶ್ರಮದಲ್ಲಿದ್ದು ಪಾರ್ಶ್ವನಾಥಮುನಿಯು ತೋರಿಕೊಟ್ಟಿದ್ದ ಮಾರ್ಗವನ್ನು ಅನುಸರಿಸಲು ಯತ್ನಿಸಿ, ಅದರಿಂದ ತೃಪ್ತನಾಗದೆ ಅಲ್ಲಿಂದ ಹೊರಟು ಮಗಧ, ಅಂಗ, ವಿದೇಹರಾಷ್ಟ್ರಗಳಲ್ಲಿ ಹನ್ನೆರಡು ವರ್ಷಕಾಲ ಸಂನ್ಯಾಸಿಯ ತೆರದಿಂದ ಸಂಚರಿಸಿದನು. ಈತನಿಗೆ ಆ ಕಾಲದಲ್ಲಿ ಕೆಲವರು ಶಿಷ್ಯರಾಗಿ ತಾವೂ ಸಂನ್ಯಾಸವನ್ನು ಸ್ವೀಕರಿಸಿದರು. ಪ್ರತ್ಯೇಕವಾದ ಮೋಕ್ಷಮಾರ್ಗವನ್ನು ತನ್ನ ಮನಸ್ಸಿನಲ್ಲಿ ಸಿದ್ಧಪಡಿಸಿಕೊಂಡಿದ್ದ ವರ್ಧಮಾನನು ಆ ಯತಿಗಳನ್ನು ಒಟ್ಟು ಸೇರಿಸಿ ವಿಶೇಷವೆನಿಸಿದ ಆಚಾರಗಳನ್ನೂ ನಿಯಮಗಳನ್ನೂ ನೆಲೆಗೊಳಿಸಿ ಅವರನ್ನು ಸಂಘವನ್ನಾಗಿ ಸ್ಥಾಪಿಸಿದನು. ಹೀಗೆ ಪ್ರಸಿದ್ಧವಾದ ಯತಿಗಳ ಕೂಟಕ್ಕೇ ಜೈನರಲ್ಲಿ **ಮೂಲಸಂಘ**ವೆಂಬುದಾಗಿ ಹೆಸರು. ವರ್ಧಮಾನನು ತನ್ನ ತತ್ತ್ವೋಪದೇಶಮಾಡಿ ಪಾಟಲಿಪುರ ಪ್ರಾಂತದಲ್ಲಿ ಸು. 527ರಲ್ಲಿ ಕೈವಲ್ಯವನ್ನು ಪಡೆದನು. ಆ ತರುವಾಯ ಆತನನ್ನು **ಮಹಾವೀರ**ನೆಂದೂ **ಜಿನ**ನೆಂದೂ ಜನರು ಗೌರವಿಸಿದರು.

**ಮತ ತತ್ತ್ವಗಳು**

ಸಂಸಾರ ಬಂಧನಗಳಿಲ್ಲದೆ ನಿರ್ಗ್ರಂಥನಾಗಿದ್ದ ವರ್ಧಮಾನನ ಉಪದೇಶವನ್ನು ಯತಿಗಳೂ ಪಡೆದರು, ಸಾಮಾನ್ಯ ಜನರೂ ಪಡೆದರು. ಸಂನ್ಯಾಸಿಗಳಾದವರಿಗೆ **ನಿರ್ಗ್ರಂಥ**ರೆಂದೂ ಇತರರಿಗೆ **ಉಪಾಸಕ**ರೆಂದೂ ರೂಢಿಯಾದ ಹೆಸರು. ಸಾಂಖ್ಯದರ್ಶನವನ್ನು ಅನುಸರಿಸಿ ವರ್ಧಮಾನನು ಜಗತ್ತು ಸೃಷ್ಟಿಕರ್ತನಾದ ದೇವರೊಬ್ಬನಿಂದ ಸೃಷ್ಟವಾದುದಲ್ಲವೆಂದೂ, ಪ್ರಕೃತಿ ಮತ್ತು ಆತ್ಮಗಳೆಂಬ ಎರಡೇ ಮುಖ್ಯ ತತ್ತ್ವಗಳನ್ನೊಳಗೊಂಡದ್ದೆಂದೂ, ಕರ್ಮಬಲದಿಂದ ಆತ್ಮವು ಪ್ರಕೃತಿಯಲ್ಲಿ ಬಂಧಿತವಾಗಿ ಜನ್ಮಾಂತರಗಳನ್ನು ತಾಳುವುದೆಂದೂ ಬೋಧಿಸಿದನು. ಈ ಬಂಧನದಿಂದ ಪಾರಾಗುವುದೇ ಮೋಕ್ಷ; ಮೋಕ್ಷ ದೊರೆತಕೂಡಲೆ ಆತ್ಮವು ಅಲೋಕಕ್ಕೆ ಸೇರಿ ಕೈವಲ್ಯದಲ್ಲಿರುವುದು. ಎಲ್ಲ ಜೀವಿಗಳೂ ಶುದ್ಧರಾಗಿ ಕೈವಲ್ಯವನ್ನು ಪಡೆಯ

ಬಹುವಾದುದರಿಂದ ಎಲ್ಲರೂ ಶುದ್ಧಿಯನ್ನು ನಿರಂತರವಾಗಿ ಸಾಧಿಸತಕ್ಕದ್ದು. ಹಿಂಸೆಯನ್ನುಂಟುಮಾಡುವುದು ಪಾಪಕರ; ಮಹಾವೀರನ ಮತದಲ್ಲಿ ಚೇತನವುಳ್ಳ ಪ್ರಾಣಗಳೇ ಅಲ್ಲದೆ ಮರಗಿಡಗಳೂ ನೀರೂ ಪ್ರಾಣವುಳ್ಳವು. ಅಹಿಂಸಾ ಧರ್ಮವು ಪರಮ ಶ್ರೇಯಸ್ಕರವಾದುದು. ಕೈವಲ್ಯ ಸಾಧಕನು ನಿಜವಾದ ಜ್ಞಾನವನ್ನು ಪಡೆಯಬೇಕು; ಅದಕ್ಕಾಗಿ ಗುರುಹಿರಿಯರಲ್ಲಿ ಶ್ರದ್ಧಾಭಕ್ತಿಗಳಿಂದಿದ್ದು ಸತ್ಯವನ್ನೆಳ್ಳಷ್ಟೂ ಬಿಡದೆ ವರ್ತಿಸಿ ತಪಸ್ಸನ್ನಾಚರಿಸ ಬೇಕು. ಅಂತಃಕರಣ ಶುದ್ಧಿಗೆ ತಪಸ್ಸು ಆವಶ್ಯಕ. ಈ ತತ್ವಗಳೇ ಜೈನ ಮತದಲ್ಲಿ ಪ್ರಧಾನ. ಆದ್ದರಿಂದ ಜೈನರಲ್ಲಿ ಸಲ್ಲೇಖನ ವ್ರತವೆಂಬುದುಂಟು. ಜೈನ ಯತಿಗಳು ಆ ವ್ರತವನ್ನು ಕೈಕೊಂಡು ಆಹಾರ ಪಾನೀಯಗಳೇ ಇಲ್ಲದೆ ಇದ್ದು ದೇಹವನ್ನರ್ಪಿಸುವುದು ಸಾಮಾನ್ಯ.

ಪ್ರಚಾರ

ಮಹಾವೀರನನ್ನು ಅನುಸರಿಸಿದವರೇ ಜೈನರು. ಅವರಲ್ಲಿ ತಪೋನಿರತ ರಾದ ನಿರ್ಗ್ರಂಥರು ಸಾಮಾನ್ಯ ಜನರಾದ ಇತರರಿಗೆ ಗುರುಗಳು. ಜೈನ ತತ್ವರಾಶಿಯನ್ನು ವರ್ಧಮಾನನು ಹೊಸದಾಗಿ ಕಂಡುದಲ್ಲ; ಆಗಿನ ಕಾಲದಲ್ಲಿ ತತ್ವವಿಚಾರವೂ ವಿಚಾರದಲ್ಲಿ ಭೇದಗಳೂ ಎಷ್ಟೋ ಇದ್ದುವು. ಅವುಗಳಲ್ಲಿ ಪೂರ್ವದಿಂದ ನಡೆದು ಬಂದಿದ್ದ ತತ್ವಗಳನ್ನೇ ವರ್ಧಮಾನನು ಪುನಃ ಸಮರ್ಥಿಸಿ ಬೋಧಿಸಿದನು. ವರ್ಧಮಾನನಿಗೆ ಬಹಳ ಹಿಂದಿನ ಕಾಲದಲ್ಲಿಯೇ ಆದಿನಾಥನೆಂಬ ಗುರುವು ತಮ್ಮ ಮತವನ್ನು ಮೊದಲು ಬೋಧಿಸಿದನೆಂದು ಜೈನರು ನಂಬಿರುತ್ತಾರೆ. ಇಪ್ಪತ್ತನಾಲ್ವರು ಪರಮಗುರುಗಳನ್ನು **ತೀರ್ಥಂಕರ**ರೆಂದು ಜೈನರು ಪೂಜಿಸುತ್ತಾರೆ; ವರ್ಧಮಾನನು ಅವರಲ್ಲಿ ಇಪ್ಪತ್ತನಾಲ್ಕನೆಯಾತನು. ಕೋಸಲ, ವಿದೇಹ, ಮಗಧ, ಅಂಗ ರಾಷ್ಟ್ರ ಗಳಲ್ಲಿ ಸಂಚಾರಮಾಡಿ ವರ್ಧಮಾನನು ಅನೇಕ ಶಿಷ್ಯರನ್ನು ಪಡೆದಿದ್ದನು. ಆ ಪ್ರತ್ಯಕ್ಷ ಶಿಷ್ಯರಿಗೆ ಕೇವಲಿಗಳೆಂದು ಹೆಸರು. ಕೇವಲಿಗಳ ಉಪದೇಶದಿಂದ ಈ ಮತವು ಆ ನಾಲ್ಕು ರಾಷ್ಟ್ರಗಳಲ್ಲಿಯೂ ಹರಡಿತು. ಯಜ್ಞಯಾಗಾದಿ ಗಳ ಆಚರಣೆಯನ್ನೂ ಪಶುಹತ್ಯವನ್ನೂ ಬ್ರಾಹ್ಮಣರ ಔದ್ಧತ್ಯವನ್ನೂ ಖಂಡಿಸಿ ಸರ್ವರಿಗೂ ಮೋಕ್ಷದಾಯಕವಾದ ಮಾರ್ಗವನ್ನೂ ಅಹಿಂಸಾ ತತ್ವವನ್ನೂ ತೋರಿಕೊಟ್ಟ ಈ ಮತವನ್ನು ಅನೇಕರು ಅವಲಂಬಿಸಿದರು. ಅಜಾತಶತ್ರು,

ಮೌರ್ಯ ಚಂದ್ರಗುಪ್ತ ಮುಂತಾದ ಪ್ರಭುಗಳು ಜೈನರಾಗಿದ್ದರೆಂದು ವೃತ್ತಾಂತವಿದೆ. ಅವರ ಸಹಾಯವೂ ಒದಗಿ ಈ ಮತವು ಕಾಲಕ್ರಮದಲ್ಲಿ ದೇಶದಲ್ಲಿ ಹರಡಿತು. ತಪಸ್ಸಿನ ಆಚರಣೆಯು ಅವಶ್ಯಕವಾಗಿದ್ದುದೂ ಆ ಕಾರಣದಿಂದ ನಿರ್ಗ್ರಂಥರಿಗೂ ಉಪಾಸಕರಿಗೂ ಕಾಲಕ್ರಮದಲ್ಲಿ ವ್ಯತ್ಯಾಸಗಳು ಬೆಳೆದುದೂ ಮತವ್ಯಾಪ್ತಿಯು ಶೀಘ್ರವಾಗಿ ನೆರವೇರಲು ಪ್ರಾಯಶಃ ಅಡ್ಡಿಯಾದವು.

ಜೈನ ಸಂಘ ಸ್ಥಾಪನೆಯು ಮತದ ವ್ಯಾಪ್ತಿಗೂ ಶುದ್ಧಿಗೂ ಸಹಾಯಕವಾಗಿತ್ತು. ಬ್ರಾಹ್ಮಣ ಮತಸ್ಥರಿಗೂ ಜೈನರಿಗೂ ಮೊದಮೊದಲು ತೋರಿಕೊಂಡಿದ್ದ ವ್ಯತ್ಯಾಸವು ಕ್ರಮೇಣ ವಿಸ್ತಾರಪಡೆದಂತೆ ಬೌದ್ಧಮತವು ತೋರಿಕೊಂಡ ತರುವಾಯ ಜೈನರಿಗೂ ಬೌದ್ಧರಿಗೂ ವ್ಯತ್ಯಾಸಗಳು ದೃಢವಾದವು. ತತ್ತ್ವೋಪದೇಶದಲ್ಲಿ ಪ್ರಬಲ ವಿರೋಧಗಳಿದ್ದಾಗ್ಯೂ ಮತಭೇದವು ಅನೀತಿಯ ವೃದ್ಧಿಗೂ ಅನಾಹುತಗಳಿಗೂ ಸ್ವಲ್ಪವಾದರೂ ಎಡೆಗೊಡಲಿಲ್ಲ. ಪರಸ್ಪರ ಗೌರವವೇ ಈ ವಿರೋಧಿಗಳಲ್ಲಿ ಸ್ಥಿರವಾದ ಲಕ್ಷಣವಾಗಿತ್ತು. ವಾದವಿವಾದಗಳು ಪದೇ ಪದೇ ನಡೆಯುತ್ತಿದ್ದರೂ ವೈರವನ್ನು ಸಾಧಿಸಿ ಹಿಂಸೆಯನ್ನು ಕೊಡುವುದು ಅಚಿಂತ್ಯವಾಗಿತ್ತು.

ದಕ್ಷಿಣಯಾತ್ರೆ

ಮೌರ್ಯವಂಶದ ಚಂದ್ರಗುಪ್ತ ಚಕ್ರವರ್ತಿಯು ಜೈನಮತವನ್ನು ಅವಲಂಬಿಸಿದನು. ಆತನು ಆಳುತ್ತಿದ್ದಾಗ ಒಂದು ರಾತ್ರಿ ದುಸ್ಸ್ವಪ್ನ ಕಂಡು ಅದರ ಅರ್ಥವನ್ನು ಕೇಳಲು **ಭದ್ರಬಾಹು**ವೆಂಬ ಸುಪ್ರಸಿದ್ಧ ಜೈನ ಯತಿಯು ಮಗಧದೇಶದಲ್ಲಿ ದ್ವಾದಶ ವರ್ಷಕಾಲದ ಘೋರಕ್ಷಾಮ ಬರಲಿರುವುದೆಂದು ವಿವರಿಸಿದನು. ಆಗ ಆ ದೇಶವನ್ನು ಬಿಟ್ಟು ಹೊರಡುವುದೇ ಲೇಸೆಂದು ಭದ್ರಬಾಹುವು ಶಿಷ್ಯರೊಡಗೂಡಿ ದಕ್ಷಿಣ ದಿಕ್ಕಿನಲ್ಲಿ ಪ್ರಯಾಣ ಬೆಳಸಿ, ಅನೇಕ ರಾಜ್ಯಗಳನ್ನೂ ಅರಣ್ಯಗಳನ್ನೂ ಹಾಯ್ದು ಶ್ರವಣ ಬೆಳುಗೊಳದ ಪ್ರದೇಶಕ್ಕೆ ಬಂದನು. ಅಲ್ಲಿಯ ತಟಾಕವನ್ನೂ ಶೀತಲವಾದ ಶಿಲಾಪ್ರದೇಶಗಳನ್ನೂ ಕಂಡು ಭದ್ರಬಾಹುವು ಅಲ್ಲಿಯೇ ನಿಂತು ತಪಸ್ಸು ಮಾಡಲು ನಿಶ್ಚಯಿಸಿದನು. ಶಿಷ್ಯರಲ್ಲಿ ಚಂದ್ರಗುಪ್ತನು ಮಾತ್ರ ಆತನ ಅನುಮತಿಯನ್ನು ಪಡೆದು ಅಲ್ಲಿಯೇ ಆತನ ಶುಶ್ರೂಷೆಗೆ ನಿಂತನು; ಉಳಿದ

ವರು ಪುನ್ನಾಟ, ಚೋಳ, ಪಾಂಡ್ಯದೇಶಗಳಿಗೆ ಹೊರಟು ಅಲ್ಲಿ ಮತಬೋಧೆಯನ್ನು ಮಾಡಿದರು. ಭದ್ರಬಾಹುವೂ ಚಂದ್ರಗುಪ್ತನೂ ಕ್ರಮವಾಗಿ ತಪಸ್ಸನ್ನಾಚರಿಸಿ ಅಲ್ಲಿಯೇ ಜೈನವಿಧಿಗನುಸಾರವಾಗಿ ಕಾಲಗತಿಯನ್ನು ಹೊಂದಿದರು. ಅವರ ತರುವಾಯ ಅನೇಕ ಜೈನ ಯತಿಗಳು ಆಯೆಡೆಗೆ ಬಂದು ತಪಸ್ಸನ್ನೂ ವ್ರತಗಳನ್ನೂ ಆಚರಿಸಿ ಕೈವಲ್ಯ ಹೊಂದಿದರು. ಆ ಸ್ಥಳವು **ಶ್ರವಣಬೆಳುಗೊಳ**ವೆನಿಸಿ ಜೈನರಿಗೆ ಪುಣ್ಯಸ್ಥಳವಾಗಿ ಇಂದಿಗೂ ಪ್ರಸಿದ್ಧ ಯಾತ್ರಾಸ್ಥಳವಾಗಿದೆ. ಅತ್ತ ಉತ್ತರದಲ್ಲಿಯೇ ಉಳಿದ ಜೈನರು ಸ್ಥೂಲಭದ್ರನೆಂಬ ಯತಿಯ ನಾಯಕತ್ವದಲ್ಲಿ ಪಶ್ಚಿಮ ದೇಶಗಳಲ್ಲಿ ಸಂಚರಿಸಿ ಆ ಪ್ರಾಂತಗಳಲ್ಲಿ ಮತ ಪ್ರಚಾರಮಾಡಿದರು. ನೂರಾರು ವರ್ಷಗಳು ಕಳೆದುಹೋದಮೇಲೆ ವಲ್ಲಭೀ ಎಂಬ ನಗರದಲ್ಲಿ ಜೈನರೆಲ್ಲರೂ ನೆರೆದರು.

**ಶಾಖೆಗಳು**

ಆಗ ಔತ್ತರೇಯರಿಗೂ ದಾಕ್ಷಿಣಾತ್ಯರಿಗೂ ಅನೇಕ ಭೇದಗಳು ತೋರಿಕೊಂಡು ಪುಷ್ಟಿಯಾಗಿದ್ದ ಅಂಶವು ಪ್ರತ್ಯಕ್ಷವಾಯಿತು. ಆಚಾರ ಭೇದಗಳನ್ನು ಹಾಗೆಯೇ ರಕ್ಷಿಸತಕ್ಕದ್ದೆಂದು ತೀರ್ಮಾನಿಸಿಕೊಂಡು ಜೈನರು ಎರಡು ಶಾಖೆಗಳಾದರು. ಔತ್ತರೇಯರು **ಶ್ವೇತಾಂಬರ**ರೆಂದೂ ದಾಕ್ಷಿಣಾತ್ಯರು **ದಿಗಂಬರ**ರೆಂದೂ ಹೆಸರುಪಡೆದರು. ದಾಕ್ಷಿಣಾತ್ಯರಿಗೆ ಶ್ರವಣಬೆಳುಗೊಳವು ಪುಣ್ಯ ಕ್ಷೇತ್ರವಾದಂತೆ ಔತ್ತರೇಯರಿಗೆ **ಶತ್ರುಂಜಯ**ಗಿರಿಯೂ **ಅಬೂ** ಶಿಖರವೂ ಪುಣ್ಯಕ್ಷೇತ್ರಗಳಾದವು.

ಜೈನರು ಸಂಸ್ಕೃತ ಭಾಷೆಯನ್ನೇ ಉಪಯೋಗಿಸಿದರು. ಆಗಮ, ಪೂರ್ವ, ಅಂಗಗಳೆಂಬ ಅವರ ಮತ ಗ್ರಂಥಗಳು ಸಂಸ್ಕೃತದಲ್ಲಿಯೇ ಹುಟ್ಟಿದವು. ಬೇರೆ ಬೇರೆ ನಾಡುಗಳಲ್ಲಿ ಮತ ವಿಸ್ತಾರವಾದ ಮೇಲೆ ನಾಡುಗಳ ಭಾಷೆಗಳು ಅವರಿಗೆ ಅನುಸರಣೀಯವಾದವು. ಜೈನರೇ ತಮಿಳು, ಕನ್ನಡ, ತೆಲುಗು ಭಾಷೆಗಳಲ್ಲಿ ಮೊದಲು ವ್ಯಾಸಂಗಮಾಡಿ ಸಾಹಿತ್ಯವನ್ನು ರಚಿಸಿದವರು. ವಾಸ್ತುಶಿಲ್ಪ ಕಲೆಗಳಲ್ಲಿಯೂ ಕೂಡ ಅವರು ಅಸಾಧಾರಣವಾದ ನೈಪುಣ್ಯವನ್ನು ತೋರಿ ಬಸ್ತಿಗಳನ್ನು ನಿರ್ಮಿಸಿರುವರು. ಜೈನಮತವು ಈ ರೀತಿಯಲ್ಲಿ ಸಾಹಿತ್ಯಕ್ಕೂ ಲಲಿತ ಕಲೆಗಳಿಗೂ ಉತ್ಸಾಹ ಕಾರಕವಾದುದು ಸ್ಮರಣೀಯವಾದುದು.

ಜೈನಮತವು ಇತರ ಭಾರತೀಯ ಮತಗಳಿಂದ ಪ್ರತ್ಯೇಕವಾದುದಲ್ಲ. ಅದು ಭಾರತೀಯ ಮತಗಳಲ್ಲೊಂದು. ಆದ್ದರಿಂದ ಸಾಮಾನ್ಯ ವ್ಯವಹಾರದಲ್ಲಿ ಹಿಂದೂಮತವೆಂಬ ಶಬ್ದದಲ್ಲಿ ಜೈನರನ್ನೂ ಎಣಿಕೆ ಮಾಡಬಹುದಾಗಿದೆ.

ಜೈನರಂತೆಯೇ ಯಜ್ಞ ವಿರೋಧವನ್ನೂ ಬ್ರಾಹ್ಮಣ ಪುರೋಹಿತರ ಔದ್ಧತ್ಯ ವಿರೋಧವನ್ನೂ ತೋರಿದ ಇತರ ಮತಸ್ಥರೂ ಇದ್ದರು. ಬ್ರಾಹ್ಮಣರಲ್ಲಿಯೇ ಅನೇಕಾನೇಕ ಮತಭೇದಗಳು ತೋರಿಕೊಂಡಿದ್ದವು. ಭಕ್ತಿಮಾರ್ಗವು ಪುಷ್ಟಿಯನ್ನು ಪಡೆಯುತ್ತ ಬ್ರಹ್ಮಾ ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳ ಪೂಜೆಯೂ ಪುರಾತನ ಕಾಲದ ವೀರಪುರುಷರ ಮತ್ತು ಅವತಾರ ಪುರುಷರ ಸ್ಮರಣೆಯಲ್ಲಿ ಭಕ್ತಿಯೂ ದೃಢವಾಗುತ್ತಿದ್ದವು. ಇಂತಹ ಮತಗಳಲ್ಲೆಲ್ಲ ಅತಿವಿಸ್ತಾರವನ್ನು ಪಡೆದುದು ಬೌದ್ಧಮತ. ಆ ಮತವೂ ಪೂರ್ವಕಾಲದಲ್ಲಿಯೇ ಋಷಿವರ್ಯರಿಂದ ಬೋಧಿತವಾಗಿದ್ದ ತತ್ವಗಳನ್ನೊಳಗೊಂಡ ಭಾರತೀಯ ಮತವೆಂಬುದನ್ನು ಮರೆಯಲಾಗದು.

## ಬೌದ್ಧಮತ ಸ್ಥಾಪನೆ

ಬುದ್ಧದೇವ

ಕಪಿಲ ಋಷಿಯ ಹೆಸರನ್ನು ತಾಳಿದ **ಕಪಿಲವಸ್ತು**ವೆಂಬ ನಗರದಲ್ಲಿ ಪ್ರಬಲರಾಗಿದ್ದ **ಶಾಕ್ಯ ಕುಲದ** ಕ್ಷತ್ರಿಯರಲ್ಲಿ ಶುದ್ಧೋದನ ಮತ್ತು ಮಾಯಾದೇವಿಯೆಂಬ ದಂಪತಿಗಳಿಗೆ ಕ್ರಿ. ಪೂ. 581ರಲ್ಲಿ* ಬೌದ್ಧಮತ ಸ್ಥಾಪಕನಾದ **ಸಿದ್ಧಾರ್ಥ**ನು ಲುಂಬಿನಿ ವನದಲ್ಲಿ ಜನಿಸಿದನು. ತಾಯಿಯನ್ನು ಬೇಗನೆ ಕಳೆದುಕೊಂಡ ಈ ಬಾಲನನ್ನು ಶುದ್ಧೋದನನು ಅಕ್ಕರೆಯಿಂದ ಸಾಕಿ ಕ್ಷತ್ರಿಯೋಚಿತವಾದ ರೀತಿಯಲ್ಲಿ ಶಿಕ್ಷಿತನನ್ನಾಗಿ ಮಾಡಿದನು. ಗೌತಮನೆಂದು ಹೆಸರಾದ ಈ ಬಾಲಕನು ತತ್ವಶಾಸ್ತ್ರಗಳಲ್ಲಿ ಆಸಕ್ತನಾಗಿದ್ದನು; ಭೂತದಯೆಯನ್ನು ಅವ್ಯಾಜವಾಗಿಯೂ ಅಪಾರವಾಗಿಯೂ

---

* ಬುದ್ಧದೇವನ ಕಾಲ ನಿರ್ಣಯ (ಸಾಂಪ್ರದಾಯಿಕ) ದಲ್ಲಿ ಮುಖ್ಯಾಂಶಗಳು :—

ಜನನ—ವೈಶಾಖ ಪೂರ್ಣಿಮಾ ಶುಕ್ರವಾರ—30ನೇ ಮಾರ್ಚಿ ಕ್ರಿ. ಪೂ. 581

ವೈರಾಗ್ಯ—ಆಷಾಢ ಪೂರ್ಣಿಮಾ ಸೋಮವಾರ—18ನೇ ಜೂನ್ ,, 553 (29ನೆ ವರ್ಷ)

ಬುದ್ಧಪದವಿ—ವೈಶಾಖ ಪೂರ್ಣಿಮಾ ಬುಧವಾರ—3ನೇ ಏಪ್ರಿಲ್ ,, 546 (35ನೆ ವರ್ಷ)

ಪರಿನಿರ್ವಾಣ—ವೈಶಾಖ ಪೂರ್ಣಿಮಾ ಮಂಗಳವಾರ—5ನೇ ಏಪ್ರಿಲ್ ,, 501 (80ನೆ ವರ್ಷ)

ತೋರುತ್ತಿದ್ದನು. ವಯಸ್ಸು ಬಂದಮೇಲೆ ಯಶೋಧರೆಯೆಂಬ ಕ್ಷತ್ರಿಯ ವಧುವನ್ನು ಕೈಹಿಡಿದು ಗೃಹಸ್ಥ ಧರ್ಮವನ್ನು ಆಚರಿಸಿದನು. ರಾಹುಲನೆಂಬ ಪುತ್ರನು ಹುಟ್ಟಿ ಆರು ವರ್ಷದವನಾದ ಕಾಲದಲ್ಲಿ ಗೌತಮನು ತತ್ತ್ವಾರ್ಥಿ



13. ಸಿದ್ಧಾರ್ಥನ ರಾಗೋದಯ

ಯಾಗಿ ಸಂಸಾರ ತ್ಯಾಗಮಾಡಿದನು. ಈ ಸಂಗತಿಯು ಪ್ರಾಯಶಃ ಕ್ರಿ. ಪೂ. 553ರಲ್ಲಿ ನಡೆಯಿತು. ರೋಹಿಣೀನದಿಯನ್ನು ದಾಟಿ ಗೌತಮನು

ಸಂನ್ಯಾಸಿಯಾಗಿ ಬ್ರಾಹ್ಮಣ ಗುರುಗಳನ್ನೂ ಅನೇಕ ತಪಸ್ವಿಗಳನ್ನೂ ಆಶ್ರಯಿಸಿ ಉರುವೇಲವೆಂಬ ಕಾನನದಲ್ಲಿ ತಪಸ್ಸಿಗೆ ನಿಂತನು. ಕ್ಷತ್ರಿಯ ಕುಮಾರನಾದವನು ಈ ರೀತಿಯಲ್ಲಿ ವಿರಕ್ತನಾಗಿ ತತ್ತ್ವಾರ್ಥಿಯಾಗಿ ಯೋಗಿ ಜನರನ್ನು ಆಶ್ರಯಮಾಡುವುದು ಆ ಕಾಲದಲ್ಲಿ ಸಾಮಾನ್ಯವಾಗಿಯೇ ಇತ್ತು. ಗೌತಮನು ಅವರ ಉಪದೇಶದಿಂದಲಾಗಲಿ ತಪಸ್ಸಿನ ಆಚರಣೆ ಯಿಂದಲಾಗಲಿ ತೃಪ್ತನಾಗಲಿಲ್ಲ; **ಗಯೆ**ಯ ಬಳಿ ಒಂದಾನೊಂದು ವೃಕ್ಷದ ನೆರಳಿನಲ್ಲಿ ಕುಳಿತು ಕಠಿನ ಧ್ಯಾನನಿರತನಾಗಿದ್ದಾಗ ಅರಸು ತ್ತಿದ್ದ ತತ್ತ್ವವು ಗೋಚರವಾಯಿತು (ಕ್ರಿ. ಪೂ. 546). ಲೋಕದಲ್ಲಿ ಸಾವು, ರೋಗ, ದಾರಿದ್ರ್ಯ ಮುಂತಾದ ದುಃಖದಾಯಕ ವಿಷ ಯಗಳನ್ನು ನಿವಾರಣಮಾಡಲು ಸಾಧಕಗಳಾದ ಮೂಲ ತತ್ತ್ವಗ ಳನ್ನು ಯೋಚಿಸುತ್ತಿದ್ದ ಆತನಿಗೆ ಅಹಂಕಾರ ಮಮತೆಗಳೇ ಮೂಲ ಕಾರಣಗಳೆಂದು ಕಂಡುಬಂದವು. ಕರ್ಮಾನುಸಾರವಾಗಿ ಜನ್ಮ ಜನ್ಮಾಂತರಗಳನ್ನು ಪಡೆಯುವ ಜೀವಿಯು ದುಃಖ ಸಂಕಟಗಳಿಂದ ಪಾರಾಗಲು ಅಹಂಕಾರವನ್ನೂ ಆಸೆಯನ್ನೂ ಅಡಗಿಸಬೇಕೇ ವಿನಾ ಸಂಗಪರಿತ್ಯಾಗ ಮಾಡಿ ಅರಣ್ಯವಾಸಿ ಯಾಗಿ ತಪಸ್ಸನ್ನಾಚರಿಸುವುದಕ್ಕಾಗಿ ದೇಹದಂಡನೆ ಮಾಡಬಾರದೆಂದು ಆತನ ನಿಶ್ಚಯವಾಯಿತು. ದೇಹದಂಡನೆಯಾಗಲಿ ವಿಜೃಂ ಭಣೆಯಿಂದ ಯಜ್ಞಗಳನ್ನು ಮಾಡುವುದಾಗಲಿ ಮೋಕ್ಷ ಸಾಧಕಗಳಾಗವೆಂದು ಆತನು ಬೋಧಿ ಸಿದನು. ಈತನ ತತ್ತ್ವಗಳು ತೀರ ಹೊಸತಲ್ಲವಾಗಿದ್ದರೂ ಪುರೋಹಿತ



14. ಅಕ್ಷಯವಟ—ಗಯೆ

**ಮತ ತತ್ತ್ವಗಳು**

ಜನರ ಆಚಾರಗಳಿಂದ ಮಲಿನವಾಗಿದ್ದವು. ಯಜ್ಞಗಳನ್ನು ಖಂಡಿಸುತ್ತ ಗೌತಮನು ಅಹಿಂಸಾತತ್ವವನ್ನೂ ನೀತಿಪ್ರಧಾನವಾದ ಆಚಾರವನ್ನೂ ಬೋಧಿಸಿದನು. ಸಾಧಾರಣ ಜನರಲ್ಲಿಯೂ ಅಜ್ಞರಲ್ಲಿಯೂ ಕೀಳು ಜನರಲ್ಲಿಯೂ ಅಮಿತವಾದ ದಯೆಯನ್ನಿಟ್ಟ ಈತನು ಅವರಿಗೆ ತಿಳಿಯುವಂತೆ ಸುಲಭರೀತಿಯಲ್ಲಿಯೂ ಪ್ರಾಕೃತ ಭಾಷೆಯಲ್ಲಿಯೂ (ಪಾಳಿ–ಮಗಧ ದೇಶದ ಪ್ರಾಕೃತ) ಉಪದೇಶ ಮಾಡಿದನು.

ಮತ ಪ್ರಚಾರ

ಗಯೆಯಲ್ಲಿ ತತ್ವದರ್ಶನವನ್ನು ಪಡೆದಮೇಲೆ ಗೌತಮನು ಪಂಡಿತರ ಕ್ಷೇತ್ರವಾದ **ವಾರಣಾಸಿ**ಗೆ ಹೊರಟು, ಅಲ್ಲಿ ನಾಸ್ತಿಕ ಮತವನ್ನು ಹಿಡಿದು ದುರ್ನೀತಿಯಿಂದ ನಷ್ಟವಿಲ್ಲವೆಂದು ವಾದಿಸುತ್ತಿದ್ದ ಚಾರ್ವಾಕರನ್ನು ಖಂಡಿಸಿ ಬೌದ್ಧತತ್ವಗಳನ್ನು ಸ್ಥಾಪಿಸಿ, ಅಲ್ಲಿಂದ ರಾಜಗೃಹ, ಕಪಿಲವಸ್ತು, ಶ್ರಾವಸ್ತಿ, ವೈಶಾಲಿ ಮುಂತಾದ ನಗರಗಳಲ್ಲೆಲ್ಲ ಸಂಚಾರಮಾಡಿ ಅನೇಕ ಶಿಷ್ಯರನ್ನು ಪಡೆದನು. ಎಲ್ಲೆಲ್ಲಿಯೂ ಜನರು ಆತನಲ್ಲಿ ಭಕ್ತಿಯನ್ನು ತೋರಿದರು. ಬುದ್ಧನೆಂದು ಪ್ರಸಿದ್ಧನಾದ ಈತನು ತಾನು ಅವತಾರ ಪುರುಷನೆಂದಾಗಲಿ ಹೊಸ ಮತವನ್ನು ಸ್ಥಾಪಿಸಿ ಲೋಕೋದ್ಧಾರ ಮಾಡುತ್ತೇನೆಂದಾಗಲಿ ಹೇಳಿಕೊಳ್ಳಲಿಲ್ಲ. ತನಗೆ ನಿಜವೆಂದು ತೋರಿಬಂದ ತತ್ವಗಳನ್ನು ಬೇಕಾದವರಿಗೆ ಹೇಳಿಕೊಟ್ಟು ದುಃಖಿಗಳ ದುಃಖಗಳನ್ನು ಶಮನಮಾಡುತ್ತ ದೀನ ದರಿದ್ರರಲ್ಲಿ ಕೋಮಲವಾದ ಕರುಣೆಯನ್ನು ತೋರಿದನು. ಕೋಸಲರಾಜನಾಗಿದ್ದ **ಪ್ರಸೇನಜಿದ್ರಾಜ**ನೂ ಮಗಧ ರಾಜ್ಯದ **ಬಿಂಬಿಸಾರ, ಅಜಾತಶತ್ರು** ಪ್ರಭುಗಳೂ ಶ್ರೀಮಂತರೂ ಆತನನ್ನು ಮೆಚ್ಚಿದರು; **ಆನಂದ, ಸಾರಿಪುತ್ರ, ಮೊಗಲ್ಲನ, ಉಪಾಲಿ** ಗಳಂತೆ ದೀನರಾದವರು ಆತನ ಪ್ರಥಮ ಶಿಷ್ಯರಾದರು. ಬ್ರಾಹ್ಮಣರಲ್ಲಿ ಕೆಲವರೂ, ಪಂಡಿತ ಜನರೂ ಆತನ ತತ್ವ ಪ್ರತಿಪಾದನೆಯನ್ನೊಪ್ಪಿ ಅನುಯಾಯಿಗಳಾದರು. ಜಗದ್ರಕ್ಷಕನಾದ ದೇವರೊಬ್ಬನಿರುವನೆಂದು ಬೋಧಿಸದಿದ್ದಾಗ್ಯೂ ಚಾರ್ವಾಕವಾದವನ್ನು ಖಂಡಿಸುತ್ತ ಭಿಕ್ಷುವಾಗಿ ಮಗಧ, ಅಂಗ, ಕೋಸಲ, ವಿದೇಹ ರಾಷ್ಟ್ರಗಳಲ್ಲಿ ಸಂಚಾರಮಾಡಿ ನೀತಿ ಪ್ರಚಾರವನ್ನು ಮಾಡಿ ಅನೇಕರ ದುಃಖವನ್ನು ಶಮನಮಾಡಿ, ಬುದ್ಧನು

ತನ್ನ ಎಂಭತ್ತನೆಯ ವಯಸ್ಸಿನಲ್ಲಿ **ಕುಶೀನಗರ**ದಲ್ಲಿ ಕ್ರಿ. ಪೂ. 501ರಲ್ಲಿ ಪರಿನಿರ್ವಾಣವನ್ನು ಹೊಂದಿದನು. ಹಿಂಬಾಲಿಸಿದ್ದ ಭಿಕ್ಷುಗಳನ್ನು ಆತನೇ ಬೌದ್ಧ ಸಂಘವಾಗಿ ಸ್ಥಾಪಿಸಿ, ಅವರು ಅನುಸರಿಸಬೇಕಾಗಿದ್ದ ನಿಯಮಗಳನ್ನು ನಿಶ್ಚಯಮಾಡಿದ್ದನು. ದೀನರೂ ದರಿದ್ರರೂ ಅಜ್ಞರೂ ಆದ ಜನರ ಸೇವೆ ಮಾಡುವುದೇ ಅವರ ಪರಮ ಕರ್ತವ್ಯವಾಗಿತ್ತು; ಆದ್ದರಿಂದ ಬೌದ್ಧ ಭಿಕ್ಷುಗಳು ಸದಾ ಸಂಚಾರಿಗಳಾಗಿ ದೇಶದಲ್ಲಿ ಬೌದ್ಧ ತತ್ವಗಳನ್ನು ಉಪದೇಶಮಾಡುತ್ತಲೂ ಜನರಿಗೆ ಹಿತವನ್ನೆಸಗುತ್ತಲೂ ತಮ್ಮ ಕರ್ತವ್ಯವನ್ನು ಪಾಲಿಸಲು ಉಪಕ್ರಮಿಸಿದರು.

ಪರಿನಿರ್ವಾಣ

ಬುದ್ಧನು ಗ್ರಂಥ ರಚನೆಯನ್ನು ಕೈಕೊಂಡಿರಲಿಲ್ಲ; ಆದರೂ ನಲವತ್ತೈದು ವರ್ಷಕಾಲ ಎಲ್ಲರಿಗೂ ಉಪದೇಶ ಮಾಡಿದ್ದನು. ಆತನ ಉಪದೇಶಗಳನ್ನೂ ಸಂಭಾಷಣೆಗಳನ್ನೂ ಆತನು ಪರಲೋಕಪ್ರಾಪ್ತನಾದ ಕೂಡಲೆ ಆತನ ಶಿಷ್ಯರು ಸ್ಮರಿಸಿ ಸಂಗ್ರಹಮಾಡಿದರು. ವಾರಣಾಸಿ, ರಾಜಗೃಹ, ಶ್ರಾವಸ್ತಿ, ವೈಶಾಲೀ ಮುಂತಾದ ನಗರಗಳಲ್ಲಿ ಜನರು ಆತನ ಮರಣದಲ್ಲಿ ದುಃಖಿಗೊಂಡು ಆತನ ಸ್ಮಾರಕಕ್ಕಾಗಿ ಸ್ತೂಪಗಳೆಂಬ ಮಂದಿರಗಳನ್ನು ಕಟ್ಟತೊಡಗಿದರು. ಐನೂರು ಮಂದಿ ಭಿಕ್ಷುಗಳು **ರಾಜಗೃಹ**ದಲ್ಲಿ ಸಂಘವನ್ನು ನೆರೆಯಿಸಿ, ತತ್ವ ಪ್ರಚಾರವನ್ನು ಮಾಡುತ್ತ ವರ್ಷಾಕಾಲವೊಂದು ಬಿಟ್ಟು ಉಳಿದ ಕಾಲವನ್ನೆಲ್ಲಾ ಸಂಚಾರದಲ್ಲಿ ಕಳೆಯುತ್ತ ಇರತಕ್ಕದ್ದೆಂದು ನಿಶ್ಚಯಮಾಡಿಕೊಂಡರು. ಇವರು ಹೋದೆಡೆಗಳಲ್ಲೆಲ್ಲ ಜನರ ಭಕ್ತಿ ವಿಶ್ವಾಸಗಳಿಗೆ ಪಾತ್ರರಾದರು. ವರ್ಷಾಕಾಲದಲ್ಲಿ ಪ್ರಯಾಣವು ಕಷ್ಟವಾಗಿ ಒಂದೇ ಸ್ಥಳದಲ್ಲಿರಬೇಕಾದುದರಿಂದ ಪ್ರತಿ ನಗರದ ನಿವಾಸಿಗಳೂ ಭಿಕ್ಷುಗಳ ಉಪಯೋಗಕ್ಕಾಗಿ ಸಂಘಾರಾಮ ಅಥವಾ ವಿಹಾರಗಳೆಂಬ ಕಟ್ಟಡಗಳನ್ನು ಕಟ್ಟಿಸಿದರು. ಭಿಕ್ಷುಗಳು ವಿಹಾರಗಳಲ್ಲಿ ವ್ಯಾಸಂಗವನ್ನು ಮಾಡುತ್ತಲೂ ವಿಶ್ರಾಂತಿಯನ್ನು ಪಡೆಯುತ್ತಲೂ ಇದ್ದು ಶಿಷ್ಯರನ್ನು ಸಂಪಾದಿಸಿ ಅವರನ್ನು ಶಿಕ್ಷಿಸುವುದಕ್ಕೂ ತೊಡಗಿದರು.

ಬೌದ್ಧ ಸಂಘ

**ವ್ಯಾಪ್ತಿ**

ಈ ರೀತಿಯಲ್ಲಿ ಆರಂಭವಾದ ಬೌದ್ಧಮತವು ಕಾಲಕ್ರಮದಲ್ಲಿ ಅತಿ ವಿಸ್ತಾರವಾಗಿ ಹರಡಿತು. ಬುದ್ಧ ಜನ್ಮ ದಿನವು ಇಡೀ ಏಷ್ಯಾಖಂಡದ ಜನಗಳಿಗೇ ಹಬ್ಬವಾಗಿದೆ. ಬೌದ್ಧಮತವನ್ನು ಮಾನವರಾಶಿಯ ಮೂರರಲ್ಲೊಂದು ಪಾಲು ಅವಲಂಬಿಸಿದೆ. ಇಷ್ಟು ವಿಸ್ತಾರವನ್ನು ಹೇಗೆ



15. ಸಾರನಾಥದ ಬುದ್ಧ

ಪಡೆಯಿತೆಂಬುದೂ ಕಾಲಗತಿಯಲ್ಲಿ ಎಂತೆಂತಹ ಬದಲಾವಣೆಗಳನ್ನು ಉಂಟಾಯಿತೆಂಬುದೂ ಮುಂದಿನ ಚರಿತ್ರೆಯ ಮುಖ್ಯ ಭಾಗಗಳಲ್ಲೊಂದು.

ಹಿಂದೂಮತದ ಚರಿತ್ರೆಯಲ್ಲಿಯೂ ನಮ್ಮ ದೇಶದ ಚರಿತ್ರೆಯಲ್ಲಿಯೂ ಮಹರ್ಷಿಗಳೂ ಶ್ರೀಕೃಷ್ಣನೂ ಆದಮೇಲೆ ಬುದ್ಧನೇ ಮಹಾತ್ಮನಾದಾತನು.

## ಮೌರ್ಯ ಪೂರ್ವ ರಾಜ್ಯಗಳು

ಇರಾನೀ ಸಾಮ್ರಾಜ್ಯ

ಕ್ರಿ. ಪೂ. ಏಳನೆ ಮತ್ತು ಆರನೆ ಶತಮಾನಗಳಲ್ಲಿ ಭರತವರ್ಷದಲ್ಲಿಯೇ ಅಲ್ಲದೆ ಇತರ ಭೂಭಾಗಗಳಲ್ಲಿಯೂ ಮಹಾಪುರುಷರು ಜನ್ಮವೆತ್ತಿದ್ದರು. ಏಷ್ಯಾ ಖಂಡದ ಪಡುವಣ ಭಾಗದಲ್ಲಿ ಇರಾನ್ ಪ್ರಾಂತದಲ್ಲಿ ನೆಲೆಸಿದ್ದ ಪ್ರಾಚೀನ ಕಾಲದ ಆರ್ಯ ಶಾಖೆಗಳ ಜನರು ತಮ್ಮಲ್ಲಿಯೇ ಜನ್ಮವೆತ್ತಿದ ಸರದಸ್ತ (Zoroaster) ನೆಂಬ ಮತೋದ್ಧಾರಕನ ಉಪದೇಶದಿಂದ ಉದ್ಧೃತರಾಗಿ, ಐಕ್ಯತೆಯನ್ನೂ ಉತ್ಸಾಹವನ್ನೂ ಪಡೆದು ಸ್ವತಂತ್ರರಾಗಿ, ಇನ್ನೂ ಪಶ್ಚಿಮಕ್ಕಿದ್ದ ರಾಜ್ಯಗಳನ್ನು ಗೆಲ್ಲಲು ಉದ್ಯುಕ್ತರಾದರು. ಮೊದಲು *ಕುರುಷ್ (Cyrus) ಎಂಬಾತನ ನೇತೃತ್ವದಲ್ಲಿಯೂ, ತರುವಾಯ **ದಾರಾಯುವುಷ್** (Darayuvush-Darius) ಎಂಬಾತನ ಪ್ರಭುತ್ವದಲ್ಲಿಯೂ ಅವರು ರಾಜ್ಯ ವಿಸ್ತಾರವನ್ನೂ ಭದ್ರತೆಯನ್ನೂ ಪಡೆದರು. ಗ್ರೀಸ್ ದೇಶದ ನಿವಾಸಿಗಳಾಗಿದ್ದ ಆರ್ಯ ಶಾಖೆಯವರು ಅಥೆನ್ಸ್

---

* ಇರಾನೀ ಶಾಖೆಯವರ ಜೆಂದ್ ಭಾಷೆಯು ಪುರಾತನ ಆರ್ಯ ಭಾಷೆಯೇ. ಇರಾನೀ ಹೆಸರುಗಳು ಸಂಸ್ಕೃತ ಭಾಷೆಗೆ ಸಮೀಪವಾಗಿಯೇ ಇರುತ್ತವೆ. ಆ ಹೆಸರುಗಳನ್ನು ಗ್ರೀಕರು ಅಪಭ್ರಂಶಮಾಡಿಕೊಂಡರು; ಫಾರಸೀ ಭಾಷೆಯು ರೂಪಗೊಂಡ ಮೇಲೆ ಇರಾನೀ ಸಂತತಿಯವರೂ ಅಪಭ್ರಂಶಮಾಡಿಕೊಂಡರು. ಈ ಪುಸ್ತಕದಲ್ಲಿ ಬರುವ ಹೆಸರುಗಳ ರೂಪಗಳು ಈ ರೀತಿ:

(1) ಕುರು ಅಥವಾ ಕುರುಸ್—ಕುರುಷ್ ಅಥವಾ ಕೂರುಷ್—(ಗ್ರೀಕ) ಕೈರಸ್ (Cyrus).

(2) ದಾರಯವಹು—ದಾರಾಯುವುಷ್—(ಗ್ರೀಕ) ದಾರಯುಸ್ (Darius); ಈತನ ತಂದೆ ವಿಷ್ಟಾಸ್ಪ, ಆದ್ದರಿಂದ ದಾರಯುಸ್ ಹಿಸ್ಟಾಸ್ಪೀಸ್.

(3) ಕ್ಷಯಾರ್ಷಾ—ಷೇರ್—(ಗ್ರೀಕ) ಕ್ಸರ್ಕ್ಸೀಸ್ (Xerxes).

(4) ಸರತಷ್ಟ, ಸರದಷ್ಟ, ಸರತುಸ್ತ—ಸರದುಸ್ತ್ (Zaradust, Zarathushtra); (ಗ್ರೀಕ) Zoroaster.

(Athens) ಮತ್ತು ಸ್ಪಾರ್ಟ (Sparta) ಎಂಬ ಭಾಗಗಳಲ್ಲಿ ಪ್ರಾಬಲ್ಯವನ್ನು ಪಡೆದು ಇರಾನೀ ಸಂಪರ್ಕದ ಪ್ರಭಾವದಿಂದ ತತ್ವಶಾಸ್ತ್ರಗಳ ವ್ಯಾಸಂಗದಲ್ಲಿ ಮುಂದರಿದರು. ಕ್ರಿ. ಪೂ. 540ರಲ್ಲಿ ಹುಟ್ಟಿದ ಹಿರಾಕ್ಲೈಟಸ್ (Heraclitus), 570ರಲ್ಲಿ ಹುಟ್ಟಿದ ಪೈಥಾಗೊರಾಸ್ (Pythagoras) ಮುಂತಾದ ಪ್ರಸಿದ್ಧ ತತ್ವಜ್ಞರು ಇರಾನೀ ಸಂಪರ್ಕದ ಪ್ರಭಾವದಿಂದಲೇ ಶಕ್ತಿವಂತರಾದರೆಂದು ನಂಬಲು ಕಾರಣವಿದೆ. ರಾಜಕೀಯ ರಂಗದಲ್ಲಿ ಖುರಾಸಾನ್ ಪ್ರಾಂತದಲ್ಲಿ ಸರದಸ್ತ (Zarathushtra or Zoroaster)ನ ಜನ್ಮಧಾರಣೆಯು ಫಲಪ್ರದವಾಗಿ **ಇರಾನೀ ಸಾಮ್ರಾಜ್ಯ**ವೆಂಬ ವಿಶಾಲ ಸಾಮ್ರಾಜ್ಯ ರೂಪವೆತ್ತಲು ಸಹಾಯಕವಾಯಿತು. ಗ್ರೀಸಿನ ಗ್ರೀಕರಿಗೂ ಇರಾನೀ ಪ್ರಭುಗಳಿಗೂ ಸ್ವಲ್ಪ ಕಾಲದಲ್ಲಿಯೇ ರಾಜಕೀಯವಾದ ವಿರೋಧವು ತೋರಿಕೊಂಡಿತು.

ಚೀನಾ ಸಂಸ್ಕಾರ

ಏಷ್ಯಾ ಖಂಡದ ಪೂರ್ವ ಭಾಗದ ಚೀನಾ ಭಾಗದಲ್ಲಿಯೂ ಕೂಡ ಪ್ರಾಯಶಃ ಇದೇ ಕಾಲದಲ್ಲಿಯೇ **ಕಾಂಫ್ಯೂಷ್** (Confucius) ಮತ್ತು **ಲೇಯೊಟ** (Laotṣe) ಯೆಂಬ ಮಹಾತ್ಮರು ಹುಟ್ಟಿ ನೀತಿಬೋಧೆಯನ್ನು ಮಾಡಿದರು. ಪುರಾತನ ಸಾಮ್ರಾಜ್ಯವಾದ ಚೀನಾ ದೇಶದ ನಿವಾಸಿಗಳು ಅವರುಗಳ ಉಪದೇಶವನ್ನು ಸ್ವೀಕರಿಸಿದರು.

ದಂಡಯಾತ್ರೆ

ಇರಾನೀ ಸಾಮ್ರಾಜ್ಯವು ಸ್ಥಾಪಿತವಾಗುವ ಮೊದಲು ಪಶ್ಚಿಮದಲ್ಲಿ ಯೆಹುದೀ ರಾಜ್ಯವಾಗಿದ್ದ **ಜುಡೇಯ** (Judaea) ಎಂಬುದರೊಡನೆಯೂ, ಪಕ್ಕದಲ್ಲಿದ್ದ **ಅಸ್ಸಿರಿಯ** (Assyria), **ಬಾಬಿಲೋನಿಯಾ** (Babylonia) ರಾಜ್ಯಗಳೊಡನೆಯೂ ಭಾರತೀಯರು ವ್ಯಾಪಾರ ಸಂಬಂಧವನ್ನು ಕಟ್ಟಿಕೊಂಡಿದ್ದರಷ್ಟೆ. ಆ ಪ್ರಾಚೀನ ರಾಜ್ಯಗಳಲ್ಲಿ ಆಳಿದ್ದ **ಸೆಮಿರಾಮಿಸ್** (Semiramis) ಎಂಬ ರಾಣಿಯೊಬ್ಬಾಕೆಯು ಭಾರತ ವರ್ಷವನ್ನು ಜಯಿಸುವ ಉದ್ದೇಶದಿಂದ ದಂಡೆತ್ತಿ ಬಂದು ಭಾರತೀಯರೆದುರಿನಲ್ಲಿ ಸೋತು ಬಹಳ ಅವಮಾನಕ್ಕೆ ಗುರಿಯಾದಳೆಂದು ಒಂದು ಹೇಳಿಕೆಯುಂಟು. ಈ ಸಂಗತಿಯು ನಡೆದುದೆಂದು ಹೇಳಲು ಸಾಕಾದಷ್ಟು

ಆಧಾರವಿಲ್ಲ. ಆದರೆ ಇರಾನೀ ಸಾಮ್ರಾಜ್ಯ ಸ್ಥಾಪನೆಯಾದ ಮೇಲೆ ಹಿರೇ ದಾರಾ ಸಮ್ರಾಟನು ಭಾರತವರ್ಷದ ಜಯಕ್ಕೆ ಪ್ರಯತ್ನಪಟ್ಟದು ದೃಷ್ಟವಾದ ಸಂಗತಿ. ಈ ಸಮ್ರಾಟನು ಕಪ್ಪು ಸಮುದ್ರ ಕ್ಯಾಸ್ಪಿಯನ್ ಸಮುದ್ರಗಳಿಗೆ ದಕ್ಷಿಣದಲ್ಲಿರುವ ಭೂಭಾಗಗಳನ್ನು ಸಾಮ್ರಾಜ್ಯವಾಗಿ ಕಟ್ಟಿದ ತರುವಾಯ ಪಶ್ಚಿಮದಲ್ಲಿ ಗ್ರೀಕರನ್ನೂ, ಪೂರ್ವದಲ್ಲಿ ಭಾರತೀಯರನ್ನೂ ಗೆಲ್ಲಲು ಪ್ರಯತ್ನಿಸಿದನು. ಎರಡು ಪ್ರಯತ್ನಗಳೂ ಆತನ ಆಶಾಪೂರ್ತಿಯನ್ನು ಮಾಡಲಿಲ್ಲ.

**ಇರಾನೀ ಆಕ್ರಮಣ**

ಪುರಾತನ ಕಾಲದಲ್ಲಿ ಸಪ್ತಸಿಂಧುವನ್ನು ಹಪ್ತಹೆಂದೂ (Hapta-Hendu) ಎಂದು ಕರೆಯುತ್ತಿದ್ದ ಆರ್ಯಶಾಖೆಯವರ ಪ್ರವರದವರೇ ಆಗಿದ್ದ ಈ ಇರಾನೀ ಜನಗಳಿಗೆ ಭಾರತೀಯರ ಪರಿಚಯವು ಅಲ್ಪಸ್ವಲ್ಪವಾಗಿತ್ತು. ಮೂಡಲಲ್ಲಿ ವಿಪುಲೈಶ್ವರ್ಯಯುಕ್ತವಾದ ದೇಶವಿದ್ದಿತೆಂದು ವ್ಯಾಪಾರದಿಂದ ತಿಳಿದಿತ್ತು. ದಾರಾ ಸಮ್ರಾಟನು ಸಾಮ್ರಾಜ್ಯವನ್ನು ವಿಸ್ತಾರಗೊಳಿಸುವ ಪ್ರಯತ್ನದಲ್ಲಿ ದರದಸ್ಥಾನ ಕಾಂಬೋಜಗಳನ್ನು ಸಮೀಪಿಸಿದಾಗ್ಯೂ ವರ್ತಕಜನರಿಂದ ಲಭ್ಯವಾದಷ್ಟೇ ವಿವರವನ್ನು ಪಡೆದನು. ಅದರಿಂದ ತೃಪ್ತನಾಗದೆ ಆತನು ತನ್ನ ನೌಕಾಧಿಕಾರಿಗಳಲ್ಲೊಬ್ಬನಾಗಿದ್ದ **ಸ್ಕೈಲಾಕ್ಸೆಂ**ಬಾತನನ್ನು (Skylax) ಸಿಂಧುನದಿಯ ಪ್ರಾಂತದ ಪರಿಚಯವನ್ನು ಸಂಪಾದಿಸಿ ಬರಲು ಕಳುಹಿಸಿಕೊಟ್ಟನು. ಸ್ಕೈಲಾಕ್ಸನು ಸಿಂಧುನದಿಯು ಸಮುದ್ರವನ್ನು ಸೇರುವವರೆಗೂ ಸಂಚಾರಮಾಡಿ, ಸ್ಥಿತಿಗತಿಗಳ ವಿವರವನ್ನು ತಿಳಿದು ಅರಿಕೆಮಾಡಿದನು. ತರುವಾಯ ದಾರಾ ಸಮ್ರಾಟನು ಸೇನೆಗಳನ್ನು ಕಳುಹಿಸಿ ವಾಯುವ್ಯ ಮೂಲೆಯಲ್ಲಿ ಸಿಂಧುನದಿಯ ಪಶ್ಚಿಮಕ್ಕಿರುವ ಪ್ರಾಂತವನ್ನು ಸಾಧಿಸಿ ಸಾಮ್ರಾಜ್ಯದಲ್ಲಿ ಸೇರಿಸಿಕೊಂಡನು. ಕಾಂಬೋಜ ಗಾಂಧಾರ ಮತ್ಸ್ಯ ರಾಷ್ಟ್ರಗಳ ನಾಯಕರು ಯಾವ ರೀತಿಯಲ್ಲಿ ಯುದ್ಧಮಾಡಿ ಹೇಗೆ ಸೋತುಹೋದರೋ ತಿಳಿಯದು. ಪಂಚನದ ಪ್ರಾಂತದಲ್ಲಿ ಆ ಕಾಲದಲ್ಲಿ ಅನೇಕ ರಾಷ್ಟ್ರಗಳಿದ್ದು ನಾನಾ ರೂಪಗಳನ್ನು ಧರಿಸಿ ನಾನಾಮುಖಗಳಾಗಿದ್ದವೇ ವಿನಾ ಹೊರಗಿನಿಂದ ಬಂದ ಶತ್ರುವನ್ನು ನಿರೋಧಿಸಲನುಕೂಲವಾಗುವಂತೆ ಏಕಮುಖವಾಗಿ

ರಲಿಲ್ಲ. ಪರಸ್ಪರ ಕಲಹಗಳಲ್ಲಿ ತೊಡಗಿದ್ದು ಆ ಕುಲ ರಾಷ್ಟ್ರಗಳು ಸಿಂಧು ನದಿಯ ಪಶ್ಚಿಮ ಪಾರ್ಶ್ವವು ದಾರಾ ಸಮ್ರಾಟನ ಹಸ್ತಗತವಾದುದನ್ನು ಲಕ್ಷಿಸದೆ ಇದ್ದುಬಿಟ್ಟವು. ಇರಾನೀ ಸಾಮ್ರಾಜ್ಯ ಭಾಗವಾದ ಸಿಂಧು ನದಿಯ ಪಡುವಣ ಪಾರ್ಶ್ವವು ಆ ಸಾಮ್ರಾಜ್ಯದಲ್ಲಿ **ಇಪ್ಪತ್ತನೆಯ *ಸತ್ರಪಿ** (Satrapy) ಯೆಂಬ ಹೆಸರನ್ನು ಪಡೆದು ಇರಾನೀ ಸತ್ರಪರ ಅಧಿಕಾರಕ್ಕೊಳಗಾಗಿ, ಚಿನ್ನದ ಗಣಿಗಳನ್ನುಳ್ಳ ಪ್ರದೇಶವಾಗಿದ್ದುದರಿಂದ ಸಾಮ್ರಾಜ್ಯದ ಬೊಕ್ಕಸಕ್ಕೆ ಒಂದು ಕೋಟಿ ರೂಪಾಯಿಗೆ ಏರಿದ ಬೆಲೆಯುಳ್ಳ ಚಿನ್ನದ ಪುಡಿಯನ್ನು ಒದಗಿಸುತ್ತಿತ್ತು. ಈ ಸಂಗತಿಯ ಪರಿಣಾಮವಾಗಿ ವ್ಯಾಪಾರ ಸಂಬಂಧಗಳು ಹೆಚ್ಚಿದ್ದೇ ಅಲ್ಲದೆ, ಭಾರತೀಯರು ಇರಾನೀ ಸಾಮ್ರಾಜ್ಯದಲ್ಲಿ ಉದ್ಯೋಗಗಳನ್ನು ಪಡೆಯುವಂತಾಯಿತು. ಧನುರ್ವಿದ್ಯೆಯಲ್ಲಿ ಅದ್ವಿತೀಯರಾಗಿದ್ದ ಭಾರತೀಯ ಬಿಲ್ಗಾರರನ್ನು ಸಮ್ರಾಟನು ತನ್ನ ಸೇನೆಯ ಅಂಗವನ್ನಾಗಿ ಮಾಡಿಕೊಂಡನು. ಸಿಂಧು ನದೀ ಪ್ರಾಂತದಲ್ಲಿ ಇರಾನೀ ಅಧಿಕಾರವು ನೂರೈವತ್ತುವರ್ಷಗಳೊಳಗಾಗಿ ಕೊನೆಗಂಡಿತು. ಹಿರೇದಾರನ ತರುವಾಯ ಪ್ರಸಿದ್ಧ ಸಮ್ರಾಟನಾದ **ಕ್ಷಯಾರ್ಷಾ** ಅಥವಾ **ಷೇರನು** (Xerxes) ಗ್ರೀಸ್ ದೇಶವನ್ನು ಗೆಲ್ಲಲು ಮಾಡಿದ ಪ್ರಯತ್ನವು ಭಂಗವಾಗಿ ಸಾಮ್ರಾಜ್ಯಕ್ಕೆ ದೌರ್ಬಲ್ಯವನ್ನುಂಟುಮಾಡಿತು. ಷೇರನು ಗ್ರೀಸ್ ದೇಶದಲ್ಲಿ ದಂಡೆತ್ತಿ ಹೋದಾಗ **ಪ್ಲಟೀಯ** (Platæa) ಎಂಬೆಡೆಯಲ್ಲಿ ನಡೆದ ಕದನದಲ್ಲಿ ಭಾರತೀಯ ಬಿಲ್ಗಾರರ ಚಾತುರ್ಯವನ್ನು ಕಂಡು ಗ್ರೀಕರು ಅಚ್ಚರಿಯನ್ನೂ ಅಂಜಿಕೆಯನ್ನೂ ಪಟ್ಟರೆಂಬುದು ಜ್ಞಾಪಕಾರ್ಹವಾದ ಸಂಗತಿ.

**ಪರಿಣಾಮ**

ಇದನ್ನು ಭಾರತದೇಶದ ವಿಜಯವೆಂದು ಹೇಳಲಾಗುವುದಿಲ್ಲ. ವಾಯುವ್ಯದ ಮೂಲೆಯು ಮಾತ್ರ ಕೆಲ ಕಾಲ ಇರಾನೀ ಸಮ್ರಾಟರ ಸ್ವಾಧೀನವಾಗಿತ್ತು. ರಾಜಕೀಯವಾಗಿ ಈ ಸಂಗತಿಯಿಂದ ವಿಶೇಷವೆನಿಸಿದ ಪರಿಣಾಮಗಳಾವುವೂ ನಡೆಯಲಿಲ್ಲ. ತಕ್ಷಶಿಲೆಯಿಂದ ಪಶ್ಚಿಮಕ್ಕೆ ಹೊರಟ

---

* ಸಂಸ್ಕೃತ ಕ್ಷೇತ್ರಪಾಲ ಶಬ್ದವು ಇರಾನೀ ಭಾಷೆಯಲ್ಲಿ ರೂಪಾಂತರದಿಂದ ಕ್ಷತ್ರಪ ಅಥವಾ ಸತ್ರಪ ಎಂದಾಗಿ, ಸತ್ರಪಿ ಎಂಬುದೂ ಸಿದ್ಧವಾಯಿತು.

ಭೂಮಾರ್ಗಗಳೂ, ಪತ್ತಲದಿಂದ ಪ್ರಾರಂಭವಾದ ಜಲಮಾರ್ಗಗಳೂ ಹೆಚ್ಚಾಗಿ ರೂಢಿಯಾದವು. ವ್ಯಾಪಾರವು ಹೆಚ್ಚಾಯಿತು. ಪ್ರಯಾಣವು ಸುಕರವಾಯಿತು. ಭಾರತದೇಶದ ವಿವರವು ಭೂಮಧ್ಯ ಸಮುದ್ರದ ಪ್ರದೇಶದಲ್ಲಿ ಇನ್ನೂ ಹೆಚ್ಚಾಗಿ ಹರಡಲು ಅನುಕೂಲವಾಯಿತು. ಭಾರತೀಯ ಐಶ್ವರ್ಯದ ಸುದ್ದಿಯೂ ಹರಡಿತು. ಭಾರತದೇಶದಲ್ಲಿ ಇರಾನೀ ಜನರಿಂದ ಖರೋಷ್ಠಿಯೆಂಬ ಲಿಪಿಯೂ ಪ್ರಚಾರವಾಗಿದ್ದರೂ ಆಗಿರಬಹುದು. ಇಷ್ಟೇ ಇರಾನೀ ಜಯದ ಪರಿಣಾಮಗಳು.

**ಪರಿಚಿತ ರಾಷ್ಟ್ರಗಳು**

ಇದೇ ಕಾಲದಲ್ಲಿ ಭರತವರ್ಷದ ಇತರ ಭಾಗಗಳಲ್ಲಿದ್ದ ರಾಷ್ಟ್ರಗಳ ವಿವರವು ತಿಳಿದಿಲ್ಲ; ಪೂರ್ವಭಾಗದ ರಾಷ್ಟ್ರಗಳಲ್ಲಿ ನಡೆದ ಕೆಲವು ಸಂಗತಿಗಳು ಮಾತ್ರ ದೊರೆತಿವೆ. ವಿಂಧ್ಯಪರ್ವತಕ್ಕೆ ಉತ್ತರದಲ್ಲಿದ್ದ ಅವಂತೀ ಮತ್ತು ವತ್ಸ ರಾಷ್ಟ್ರಗಳಲ್ಲಿ **ಮಹಾಸೇನ ಪ್ರದ್ಯೋತ**ನೆಂಬ ರಾಜನೂ, ಕಲಾಸಕ್ತನೂ ರಸಜ್ಞನೂ ಎನಿಸಿ ಮೂರು ಪ್ರಸಿದ್ಧ ನಾಟಕಗಳಿಗೆ* ನಾಯಕನಾದ **ಉದಯನ** ರಾಜನೂ ಆಳುತ್ತ ಪರಸ್ಪರ ವಿರೋಧವನ್ನು ಸಾಧಿಸುತ್ತಿದ್ದರು. ಕೋಸಲ ರಾಜನಾದ ಮಹಾಕೋಸಲ ರಾಜನು ಕಾಶಿಯನ್ನು ಜಯಿಸಿ ರಾಜ್ಯ ವಿಸ್ತಾರಮಾಡಿಕೊಂಡನು; ತರುವಾಯ ತನ್ನ ಮಗಳನ್ನು ಮಗಧ ರಾಜನಾಗಿದ್ದ ಬಿಂಬಿಸಾರನಿಗೆ ಮದುವೆ ಮಾಡಿಕೊಟ್ಟು ಆತನ ಸ್ನೇಹವನ್ನು ಸಂಪಾದಿಸಿದನು. ಮಗಧದಲ್ಲಿ ಕ್ರಿ. ಪೂ. 642ರಲ್ಲಿ **ಶಿಶುನಾಗ**ನಿಂದ ಸ್ಥಾಪಿತವಾಗಿದ್ದ ವಂಶದಲ್ಲಿ ಹುಟ್ಟಿದ **ಬಿಂಬಿಸಾರ**ನು ಅಂಗ ರಾಜ್ಯವನ್ನು ಗೆದ್ದು ತನ್ನ ರಾಜ್ಯದಲ್ಲಿ ಸೇರಿಸಿಕೊಂಡನು. ಈ ರೀತಿಯಲ್ಲಿ ಕಾಶಿ ಮತ್ತು ಅಂಗ ರಾಜ್ಯಗಳು ಸ್ವಾತಂತ್ರ್ಯವನ್ನು ಕಳೆದುಕೊಂಡವು. ಈ ರಾಜ್ಯಗಳ ಉತ್ತರಕ್ಕೆ ಶಾಕ್ಯರು, ಮಲ್ಲರು, ಕೋಲಿಗಳು, ವಿದೇಹರು, ವಜ್ಜಿಗಳು ಮುಂತಾದ ಕ್ಷತ್ರಿಯ ಕುಲಗಳು ತಮ್ಮ ರಾಷ್ಟ್ರಗಳನ್ನು ಗಣರಾಜ್ಯಗಳನ್ನಾಗಿ ಮಾಡಿಕೊಂಡಿದ್ದು **ಲಿಚ್ಛವಿ**ಗಳೆಂಬ ಮತ್ತೊಂದು ಕ್ಷತ್ರಿಯ ಕುಲದವರೊಡನೆ ಸೇರಿಕೊಂಡು, ವೈಶಾಲಿಯನ್ನು ರಾಜಧಾನಿಯಾಗಿ ನಿರ್ಮಿಸಿಕೊಂಡು, **ಗಣಸಮುದಾಯದ** ರಾಷ್ಟ್ರ ನೀತಿಯನ್ನು

* ಸ್ವಪ್ನ ವಾಸವದತ್ತಾ, ಪ್ರತಿಜ್ಞಾ ಯೌಗಂಧರಾಯಣ ಮತ್ತು ರತ್ನಾವಲೀ ನಾಟಕಗಳು.

ಅವಲಂಬಿಸಿದ್ದರು. ವೈಶಾಲಿಯಲ್ಲಿ ಕುಲಮುಖ್ಯರು **ಸಂಸ್ಥಾಗಾರ**ವೆಂಬ ಸಭಾಮಂದಿರದಲ್ಲಿ ನೆರೆದು ರಾಜ, ಸೇನಾಪತಿ ಮತ್ತು ಭಾಂಡಾಗಾರಿಕರನ್ನು ಕಾಲಕಾಲಕ್ಕೆ ತಾವೇ ವರಿಸಿಕೊಳ್ಳುತ್ತಿದ್ದರು. ಅಧ್ಯಕ್ಷ ಪದವಿಯನ್ನು ಪಡೆದು ರಾಜನೆಂಬ ಹೆಸರನ್ನು ಪಡೆದಾತನು ಅಧಿಕಾರವನ್ನು ಪಡೆದಾಗ ಅಭಿಷಿಕ್ತನಾಗುತ್ತಿದ್ದನು. ಆ ಅಭಿಷೇಕಕ್ಕಾಗಿಯೇ ಒಂದಾನೊಂದು ಪುಷ್ಕರಿಣಿಯು* ಪ್ರತ್ಯೇಕವಾಗಿದ್ದು ಬೀಗ ಮುದ್ರೆಗೊಳಗಾಗಿದ್ದಿತು. ವೈಶಾಲಿಯನ್ನು ಕಂಡುಬಂದ ಕೆಲವು ವರ್ತಕ ಜನರು ಆ ಪಟ್ಟಣದಲ್ಲಿ ಏಳುನೂರು ಪ್ರಮುಖರು 'ನಾನು ರಾಜ ತಾನು ರಾಜನೆಂದಿರುತ್ತಾರೆ' ಎಂದು ವಿವರಿಸಿ ವಿಸ್ಮಯವನ್ನುಂಟುಮಾಡಿದ ಸಂಗತಿಯು ಬೌದ್ಧ ಗ್ರಂಥವೊಂದರಲ್ಲಿ ದೊರಕುತ್ತದೆ. ಅಂತೂ ಲಿಚ್ಛವಿ ಜನರು ಬಹು ಪ್ರಬಲರಾಗಿದ್ದುದರಿಂದ ಅವರ ಸ್ನೇಹ ಬೆಂಬಲಗಳನ್ನು ನೆರೆಹೊರೆಯ ರಾಜರು ಆಶಿಸುತ್ತಿದ್ದರು.

**ಶೈಶುನಾಗ ರಾಜರು**

ಕುರುಕ್ಷೇತ್ರ ಯುದ್ಧಕ್ಕೆ ಪೂರ್ವದಲ್ಲಿಯೇ ಮಗಧ ರಾಜ್ಯವು ಜರಾಸಂಧನ ಪ್ರತಾಪದಿಂದ ಪ್ರಬಲವಾಗಿತ್ತು. ಆತನ ಸಂತತಿಯು ಕೊನೆಗಂಡು ಮಗಧ ರಾಜ್ಯವು ಪ್ರದ್ಯೋತ ವಂಶದವರಲ್ಲಿ ಕೆಲಕಾಲವಿದ್ದು ಕ್ರಿ. ಪೂ. 642ರಲ್ಲಿ ಶಿಶುನಾಗನೆಂಬ ರಾಜನ ಸ್ವಾಧೀನವಾಯಿತು. ಶೈಶುನಾಗ ಸಂತತಿಯಲ್ಲಿ ಹುಟ್ಟಿದ **ಬಿಂಬಿಸಾರ ರಾಜ**ನು ಬುದ್ಧನ ಸಮಕಾಲಿಕನಾಗಿ ರಾಜ್ಯವನ್ನಾಳುತ್ತಿದ್ದನು. ಆತನು ಅಂಗ ರಾಜ್ಯವನ್ನು ಜಯಿಸಿ, ಕೋಸಲ ರಾಜಪುತ್ರಿಯನ್ನೂ ಲಿಚ್ಛವಿ ಕುಲದ ಕುಮಾರಿಯೊಬ್ಬಾಕೆಯನ್ನೂ ಮದುವೆಯಾಗಿ ಇನ್ನೂ ಪ್ರಬಲನಾದನು. ಪೂರ್ವದ ಗಿರಿವ್ರಜವನ್ನು ಬಿಟ್ಟು ಈತನು **ರಾಜಗೃಹ**ವೆಂಬ ಪಟ್ಟಣವನ್ನೇ ರಾಜಧಾನಿಯಾಗಿ ಮಾಡಿಕೊಂಡನು. ಲಿಚ್ಛವಿ ಕುಮಾರಿಯಾದ ಚೆಲ್ಲನಾದೇವಿಯ ಹೊಟ್ಟೆಯಲ್ಲಿ ಹುಟ್ಟಿದ **ಅಜಾತಶತ್ರು**ವು ದುಷ್ಟನೂ ಸಮರ್ಥನೂ ಆಗಿದ್ದನು; ಬುದ್ಧನಲ್ಲಿ ವೈರವನ್ನು ಕ್ಷುದ್ರಬುದ್ಧಿಯಿಂದ ಬೆಳೆಸಿಕೊಂಡಿದ್ದ ದೇವದತ್ತನೆಂಬ

* ಆ ಕೊಳವು "ಅಭಿಸೇಕಮಂಗಲ ಪೊಕ್ಖರಣಿ"=ಅಭಿಷೇಕಮಂಗಲ ಪುಷ್ಕರಿಣಿ ಎಂಬ ಹೆಸರನ್ನು ಪಡೆದಿತ್ತು.

ನೀಚ ಪುರುಷನು ಅಜಾತಶತ್ರುವಿಗೆ ಆಪ್ತನಾದನಂತೆ. ಅಜಾತಶತ್ರುವು ದುರಾಸೆಗೊಳಗಾಗಿ ಬಿಂಬಿಸಾರನನ್ನು ತಂತ್ರದಿಂದ ಸೆರೆಯಲ್ಲಿಡಿಸಿ ಆಹಾರಾದಿಗಳಿಲ್ಲದಂತೆ ಮಾಡಿ ಮೃತ್ಯುವಿನ ಪಾಲುಮಾಡಿದನು; ಆಗ ಮಲತಾಯಿ ಕೋಸಲದೇವಿಯೂ ದುಃಖದಿಂದಲೂ ರೋಷದಿಂದಲೂ ಕೂಡಿ ಅಣ್ಣನೂ ಕೋಸಲ ರಾಜನೂ ಆಗಿದ್ದ ಪ್ರಸೇನಜಿದ್ರಾಜನ ಬಳಿಗೆ ಹೋಗಿ ವಿವರವನ್ನು ತಿಳಿಸಲು, ಆ ರಾಜನು ಅಜಾತಶತ್ರುವನ್ನು ಶಿಕ್ಷಿಸಬೇಕೆಂದು ನೆನೆದನು. ಅಜಾತಶತ್ರುವು ಸಮರ್ಥನಾಗಿದ್ದುದಲ್ಲದೆ ಲಿಚ್ಛವಿಕುಲಸ್ಥರ ಸಂಬಂಧವನ್ನು ಪಡೆದು ಪ್ರಬಲನಾಗಿದ್ದನು. ನಡೆದ ಯುದ್ಧದಲ್ಲಿ ಪ್ರಸೇನಜಿದ್ರಾಜನು ಸೋತುಹೋಗಿ ಕಾಶೀರಾಜ್ಯವನ್ನು ಬಿಟ್ಟುಕೊಟ್ಟುದಲ್ಲದೆ ಅವಮಾನವನ್ನು ಕಟ್ಟಿಕೊಂಡು, ಅಜಾತಶತ್ರುವಿಗೆ ವಜಿರಾದೇವಿ (ವಜ್ರಾದೇವಿ) ಎಂಬ ತನ್ನ ಮಗಳನ್ನು ಮದುವೆಮಾಡಿಕೊಟ್ಟನು. ತರುವಾಯ ತಾನೂ ಲಿಚ್ಛವಿ ಜನರ ಸಂಬಂಧವನ್ನು ಕಟ್ಟುವುದೇ ಲೇಸೆಂದು ಯೋಚಿಸಿ, ತನ್ನ ಮಗ ವಿರೂಧಕನೆಂಬಾತನಿಗೆ ಕನ್ಯೆಯನ್ನು ಕೇಳಲು ಆ ಗರ್ವಿಷ್ಠ ಕುಲಸ್ಥರು ಕೀಳುಜಾತಿಯ ಕನ್ಯೆಯನ್ನು ಮದುವೆಯಲ್ಲಿ ಕೊಟ್ಟು ಕೋಸಲ ರಾಜವಂಶವನ್ನು ಇನ್ನೂ ಅವಮಾನಕ್ಕೆ ಗುರಿಮಾಡಿದರು. ಆಗ ವಿರೂಧಕನು ಕೋಪಗೊಂಡು ಸೈನ್ಯದೊಡನೆ ಹೊರಟು, ಲಿಚ್ಛವಿ ಸಮುದಾಯದಲ್ಲಿ ಸೇರಿದ್ದ ಕಪಿಲವಸ್ತುವಿನ ಶಾಕ್ಯರನ್ನು ಧ್ವಂಸಮಾಡಿ, ಆ ಪಟ್ಟಣವನ್ನು ನೆಲಸಮಮಾಡಿದನು. ಬುದ್ಧನ ಜನ್ಮಸ್ಥಾನವು ಈ ರೀತಿ ಹಾಳಾಯಿತು. ಆದರೆ ಸ್ವಲ್ಪಕಾಲದಲ್ಲಿಯೇ ಕೋಸಲರ ಸ್ವಾತಂತ್ರ್ಯವೇ ನಷ್ಟವಾಗುವ ಸ್ಥಿತಿ ಬಂತು.

ನಂದವಂಶ

ಅಜಾತಶತ್ರುವು ನೀಚಕೃತ್ಯಗಳಿಗೆ ಹೇಸದೆ ಇದ್ದರೂ ರಾಜ್ಯಭಾರದಲ್ಲಿ ದಕ್ಷನಾಗಿದ್ದನು. ಲಿಚ್ಛವಿ ಕುಲಸ್ಥರ ಸ್ನೇಹ ವಿದ್ದಾಗ್ಯೂ ಅವರ ಪ್ರಾಬಲ್ಯವು ಮೇರೆಯನ್ನತಿಕ್ರಮಿಸಬಹುದೆಂದು ಯೋಚಿಸಿ ತನ್ನ ರಾಜ್ಯದ ಉತ್ತರದ ಎಲ್ಲೆಯಲ್ಲಿ ಗಂಗಾ ಶೋಣಾ ನದಿಗಳ ಸಂಗಮಸ್ಥಾನದಲ್ಲಿ ಪಾಟಲಿಗ್ರಾಮವೆಂಬುದನ್ನು ಉತ್ತಮ ದುರ್ಗವನ್ನಾಗಿ ರಚಿಸಿದನು. ಮಗಧರಾಜ್ಯದ ವಿಸ್ತಾರವನ್ನು ಸಾಧಿಸಿದ ಈ ರಾಜನು ದೀರ್ಘಕಾಲ ರಾಜ್ಯವನ್ನಾಳಿ

ವಯಸ್ಸು ಕಳೆಯುತ್ತ ತನ್ನ ಪಾಪಕೃತ್ಯಗಳಿಗಾಗಿ ಪಶ್ಚಾತ್ತಾಪಪಟ್ಟನು. ಮುಪ್ಪಿನಲ್ಲಿದ್ದ ಬುದ್ಧದೇವನನ್ನು ಹುಡುಕಿಕೊಂಡು ಹೋಗಿ ತನ್ನ ತಾಪವನ್ನು ಹೇಳಿಕೊಂಡು ಆತನು ಹೇಳಿದ ಕೆಲವು ಮಾತುಗಳಿಂದ ಸಮಾಧಾನವನ್ನು ಪಡೆದನು. ಅಜಾತಶತ್ರುವಿನ ತರುವಾಯ ಆಳಿದವರಲ್ಲಿ **ಉದಯು**ನೆಂಬ ರಾಜನು ರಾಜಗೃಹವನ್ನು ಬಿಟ್ಟು **ಪಾಟಲಿಪುತ್ರ**ವನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡನು. ಶೈಶುನಾಗ ಸಂತತಿಯ ರಾಜರು ಈ ರೀತಿಯಲ್ಲಿ ಮಗಧರಾಜ್ಯವನ್ನು ಹಿರಿದಾಗಿಮಾಡಿ ಮುಂದೆ ಸಾಮ್ರಾಜ್ಯವಾಗಲು ಅಸ್ತಿಭಾರವನ್ನು ನಿರ್ಮಿಸಿದರು. ಸು. ಕ್ರಿ. ಪೂ. 413ರಲ್ಲಿ ಶೈಶುನಾಗ ಸಂತತಿಯ ರಾಜನನ್ನು ಆತನ ಅಧಿಕಾರಿಯೇ ಆಗಿದ್ದ **ಮಹಾಪದ್ಮ**ನೆಂಬಾತನು ಕೊನೆಗಾಣಿಸಿ ರಾಜ್ಯವನ್ನು ಅಪಹರಿಸಿ ತನ್ನ ಸಂತತಿಯನ್ನು ಸ್ಥಾಪಿಸಿದನು. ಹೀಗೆ ರಾಜ್ಯಲಾಭವನ್ನು ಪಡೆದ ನಂದವಂಶವು ನೀಚಕುಲವಾಗಿದ್ದಿತೆಂದು ವೃತ್ತಾಂತವಿದೆ; ಉತ್ತಮ ಕ್ಷತ್ರಿಯ ಕುಲದಲ್ಲಿ ನಂದರು ಎಣಿಕೆಯಾಗಲಿಲ್ಲ. ಮಹಾಪದ್ಮನೂ ಆತನ ತರುವಾಯ ಆಳಿ ನವನಂದರೆಂದು ಹೆಸರಾದ ಆತನ ಮಕ್ಕಳೂ ಗರ್ವಿಷ್ಠರಾಗಿಯೂ ಉದ್ಧತರಾಗಿಯೂ ಇದ್ದು ಪ್ರಜೆಗಳನ್ನು ಹಿಂಸಿಸುತ್ತಲೂ ನೆರೆಹೊರೆಯವರನ್ನು ದಂಡಿಸುತ್ತಲೂ ರಾಜ್ಯವನ್ನೂ ಸೈನ್ಯವನ್ನೂ* ಬಲಪಡಿಸಿದರು. ಧೂರ್ತರಾಗಿದ್ದ ನಂದ ರಾಜರನ್ನು ಕಂಡು ಪ್ರಜೆಗಳು ಹೆದರುತ್ತಿದ್ದರೇ ವಿನಾ ಭಕ್ತಿ ಪ್ರೀತಿಗಳನ್ನು ತೋರುತ್ತಿರಲಿಲ್ಲ. ನಂದರಾಜರೇನೋ ಐಶ್ವರ್ಯದಲ್ಲಿಯೂ ಬಲದಲ್ಲಿಯೂ ಅಧಿಕರಾಗುತ್ತಿದ್ದರು. ಹೀಗಿರಲು ಕ್ರಿ. ಪೂ. 322ರಲ್ಲಿ ಮೌರ್ಯ ಚಂದ್ರಗುಪ್ತನು ಪಂಚನದ ಪ್ರಾಂತವನ್ನು ಸ್ವಾಧೀನಪಡಿಸಿಕೊಂಡು ಪ್ರಸಿದ್ಧ ಚಾಣಕ್ಯನ ಸಹಾಯದಿಂದ ನಂದರಮೇಲೆ ದಂಡೆತ್ತಿ

**ಮೌರ್ಯಚಂದ್ರಗುಪ್ತ**

ಅವರ ಬಲವನ್ನು ಮುರಿದು ಅವರ ವಂಶವನ್ನೇ ನಿರ್ಮೂಲ ಮಾಡಿದನು. ಚಂದ್ರಗುಪ್ತನು ಈ ರೀತಿಯಲ್ಲಿ ಮಗಧರಾಜ್ಯವನ್ನು ಗೆದ್ದ ಕಾಲದಿಂದ ಮೌರ್ಯ ವಂಶದವರ ಸಾಮ್ರಾಜ್ಯದ ವೃತ್ತಾಂತವು ಪ್ರಾರಂಭವಾಗುವುದು. ಇದೇ ಕಾಲದಲ್ಲಿ

* ನಂದ ಸೈನ್ಯವು 3,000 ಹಸ್ತಿಗಳನ್ನೂ, 2,000 ರಥಗಳನ್ನೂ, 20,000 ಅಶ್ವಗಳನ್ನೂ, 2,00,000 ಪದಾತಿಗಳನ್ನೂ ಉಂಟಾಗಿ ಅಜೇಯವೆನಿಸಿತ್ತು.

ಸಂಭವಿಸಿದ ಸಿಕಂದರನ ದಂಡಯಾತ್ರೆಯೆಂಬುದು ಚಂದ್ರಗುಪ್ತನಿಗೆ ಒಂದು ಬಗೆಯಲ್ಲಿ ಅನುಕೂಲವನ್ನು ಕಲ್ಪಿಸಿಕೊಟ್ಟಿತು.

## ಗ್ರೀಕರ ದಂಡಯಾತ್ರೆ*

**ಸಿಕಂದರ** (Alexander)ನು ಗ್ರೀಸ್ ದೇಶದ ಉತ್ತರಕ್ಕಿದ್ದ **ಮ್ಯಾಸಿಡೊನಿಯಾ** ಎಂಬ ರಾಜ್ಯಕ್ಕೆ ರಾಜನಾಗಿದ್ದನು. ಜಗತ್ತಿನ ಕದನ ಪ್ರಚಂಡರಲ್ಲಿ ಅವನೊಬ್ಬನು. ಆಗ ತಿಳಿದಷ್ಟುಮಟ್ಟಿಗೆ ಪೃಥ್ವಿಯೆಲ್ಲವನ್ನೂ ಜಯಿಸಬೇಕೆಂಬ ಕೀರ್ತಿಮೋಹವು ಆತನಲ್ಲಿ ಉಜ್ವಲವಾಗಿತ್ತು. ಗ್ರೀಸ್ ದೇಶವೆಲ್ಲಕ್ಕೂ ಒಡೆಯನಾದ ಕೂಡಲೆ ಆತನು ಪ್ರತಿಕ್ರಿಯಾ ವ್ಯಾಜದಿಂದ ಇರಾನೀ ಸಾಮ್ರಾಜ್ಯದ ಮೇಲೆ ದಂಡೆತ್ತಿ ಅಲ್ಲಿಯ ಪ್ರಭುವಾಗಿದ್ದ **ಮುಮ್ಮಡಿ ದಾರಾ** ಸಮ್ರಾಟನನ್ನು ಪದೇ ಪದೇ ಸೋಲಿಸಿ, ಏಷ್ಯಾಖಂಡದ ಪಶ್ಚಿಮ ಭಾಗವನ್ನು ಅಂದರೆ ಇರಾನೀ ಸಾಮ್ರಾಜ್ಯವೆಲ್ಲವನ್ನೂ ಜಯಿಸಿದನು. ಆ ಸಂದರ್ಭದಲ್ಲಿಯೇ ನಮ್ಮ ದೇಶದ ವಾಯುವ್ಯ ಮೇರೆಯ ಸಮೀಪಕ್ಕೆ ಬಂದನು. ಆಗ ಪ್ರಸಿದ್ಧವಾಗಿದ್ದ ಭರತವರ್ಷವನ್ನು ಜಯಿಸುವ ಆಸೆಯೂ ಆತನ ಮನಸ್ಸಿನಲ್ಲಿ ಹುಟ್ಟಿತು.

ಗ್ರೀಕರ ಮುಗ್ಧತೆ

ವ್ಯಾಪಾರದ ಸಂಬಂಧವು ಪೂರ್ವದಿಂದಲೂ ಗ್ರೀಕರಿಗೂ ನಮ್ಮ ದೇಶಕ್ಕೂ ಇದ್ದಿತು. ಅತುಲ್ಯೈಶ್ವರ್ಯವು ಈ ದೇಶದಲ್ಲಿರುವುದೆಂದು ಅವರಿಗೆ ದೂರ ಸಮಾಚಾರವು ತಲುಪಿ, ಆ ವಿಚಾರವಾಗಿ ಗ್ರೀಕರು ಈಗ ಮೂಢವೆಂದು ತೋರುವ ಕಥೆಗಳನ್ನು ಕಟ್ಟಿಕೊಂಡಿದ್ದರು. ನಾಯಿಗಳಷ್ಟು ಗಾತ್ರವುಳ್ಳ ಇರುವೆಗಳ ಸೈನ್ಯಗಳನ್ನು ಭಾರತದೇಶದ ರಾಜರು ಸಾಕಿಕೊಂಡಿದ್ದರೆಂದೂ, ಆ ಇರುವೆಗಳು ಅತಿಜಾಣತನದಿಂದ ನೆಲದಲ್ಲಿ ಚಿನ್ನವು ಅಡಗಿದ್ದ ಸ್ಥಳಗಳನ್ನು ಶೋಧಿಸಿ ಅಲ್ಲಿದ್ದ ಚಿನ್ನವನ್ನು ತೋಡಿ ತಮ್ಮ ರಾಜರಿಗೆ ತಂದೊಪ್ಪಿಸುತ್ತಿದ್ದವೆಂದೂ, ಆ ಕಾರಣದಿಂದ ಭಾರತೀಯ ರಾಜರಲ್ಲಿ

* ಸಿಕಂದರನ ದಂಡಯಾತ್ರೆಯ ವಿಸ್ತಾರ ವೃತ್ತಾಂತವು ದೇಶೀಯ ವಿದ್ಯಾಶಾಲಾ ಪತ್ರಿಕೆಯ 1932-33ರ ಸಂಪುಟನಲ್ಲಿ ಬರೆದಿದೆ. ಇಲ್ಲಿ ಕೊಟ್ಟಿರುವ ವೃತ್ತಾಂತವು ಈ ಪುಸ್ತಕಕ್ಕೆ ಹೆಚ್ಚಾದ ವಿವರಗಳನ್ನೇ ಪಡೆದಿರುವುದು ಆಗಿನ ಭಾರತೀಯರು ಗ್ರೀಕರಿಗೆ ಪ್ರತಿಯಾಗಿ ನಡೆಸಿದ ಹೋರಾಟದ ವಿವರಕ್ಕಾಗಿ.

ಅಸಮಾನವಾದ ಐಶ್ವರ್ಯವು ನೆಲೆಸಿತ್ತೆಂದೂ ಅವರು ನಂಬಿದ್ದರು. ಹತ್ತಿಯು ಬೆಳೆಯುವುದು ಕೂಡ ಅವರಿಗೆ ಅದ್ಭುತವಾಗಿ ತೋರಿಬಂದು ಹತ್ತಿಯ ಗಿಡವನ್ನು ಊರ್ಣಭರಿತವೃಕ್ಷಗಳೆಂದು ಕರೆಯುತ್ತ ಆ ಅದ್ಭುತವಾದ ಗಿಡವು ಭಾರತದೇಶದಲ್ಲಿ ಬೆಳೆಯುವುದೆಂದು ಹೇಳಿಕೊಳ್ಳುತ್ತಿದ್ದರು. ಹಿಂದೆ ಪ್ಲಟೀಯ ಕದನದಲ್ಲಿ ತಮ್ಮ ಪೂರ್ವಜರನ್ನು ಇದುರಿಸಿ ಬಿಲ್ಲುವಿದ್ಯೆಯಲ್ಲಿ ಭಯಂಕರರೆನಿಸಿದ್ದ ಬಿಲ್ಗಾರರ ಸಂಗತಿಯೂ ಅವರ ಸ್ಮರಣೆಯಲ್ಲಿತ್ತು. ಭಾರತೀಯ ರಾಜರ ಮೇಲೆ ಯುದ್ಧವನ್ನು ಕಟ್ಟುವುದಕ್ಕೆ ಯಶಃಕಾಮಿಯಾಗಿದ್ದ ಸಿಕಂದರನ ಮನಸ್ಸಿನಲ್ಲಿ ಯಾವ

**ನೆಪ**

ನೆಪವೂ ಬೇಕಾಗಿರಲಿಲ್ಲ; ಇರಾನೀ ಸಾಮ್ರಾಜ್ಯದ ಭಾಗವಾಗಿದ್ದ ಸಿಂಧು ನದೀ ಪಾರ್ಶ್ವವು ಈಗ ತನಗೆ ಸೇರಿದ್ದೆಂದೂ ಅದನ್ನು ವಶಪಡಿಸಿಕೊಳ್ಳಬೇಕೆಂದೂ ಪ್ರಕಟಪಡಿಸಿದನು. ನಿಜವಾದ ಕಾರಣವು ಆತನ ಹೆಬ್ಬಾಸೆಯೇ. ಆ ಆಸೆಗೆ ಪೋಷಕವಾಗಿ ಆ ವಾಯುವ್ಯ ಪ್ರಾಂತಗಳ ಬಳಿ ಇರಾನೀ ಸಾಮ್ರಾಜ್ಯದಧಿಕಾರಿಯಾಗಿದ್ದ **ಶಶಿಗುಪ್ತ**ನೆಂಬ ಭಾರತೀಯನೊಬ್ಬನು ಕಾಣಿಸಿಕೊಂಡು, ಮಾರ್ಗವನ್ನು ತೋರಿಸಿ ಸಹಾಯಮಾಡಲು ತಾನು ಸಿದ್ಧನೆಂದು ತಿಳಿಸಿದನು. ಈ ಶಶಿಗುಪ್ತನ ಸಹಾಯದಿಂದ ಸಿಕಂದರನು ಆ ಬೆಟ್ಟಗುಡ್ಡಗಳ ಸೀಮೆಯಲ್ಲಿ ಸಂಚರಿಸಿ ಸಿಂಧು ನದಿಯ ಕಡೆಗೆ ಪ್ರಯಾಣಮಾಡಲು ಶಕ್ತನಾದನು.

**ಅಂಭಿಯ ಅಭಿಸಂಧಿ**

ಈಗ ನಾವು ಅಫ್‌ಘಾನಸ್ಥಾನವೆಂದು ಕರೆಯುವ ದೇಶವು ಭಾರತೀಯರದೇ ಆಗಿತ್ತು. ಕುಭಾ (Kabul), ಸುವಾಸ್ತು (Swat), ಕುನಾರ್ (Kunar), ಪಂಜಕೋರಾ (Panjkora) ನದಿಗಳ ಪಾರ್ಶ್ವಗಳಲ್ಲಿ ಧೀರರೂ ಸ್ವತಂತ್ರಪ್ರಿಯರೂ ಆದ ಕುಲಸ್ಥರು ನೆಲೆಯಾಗಿದ್ದರು; ಅವರಲ್ಲಿ ಐಕ್ಯತೆಯಿರಲಿಲ್ಲ. ಸಿಕಂದರನು ಹಿಂದೂಕುಷ್ ಪರ್ವತವನ್ನು ಇಳಿದಕೂಡಲೆ ತನ್ನ ಸೈನ್ಯವನ್ನು ಎರಡು ಭಾಗಗಳಾಗಿ ಮಾಡಿ ಒಂದು ಭಾಗವು ನೇರವಾಗಿ ಸಿಂಧು ನದೀತೀರಕ್ಕೆ ಪ್ರಯಾಣಮಾಡಿ ಅನುಕೂಲವಾದೆಡೆಯಲ್ಲಿ ನದಿಯನ್ನು ದಾಟಲು ಸನ್ನಾಹಗೊಳಿಸುವಂತೆ ಏರ್ಪಡಿಸಿದನು. ಆ ಭಾಗವು ಹೊರಟು ಮಾರ್ಗದಲ್ಲಿ **ಹಸ್ತಿ** ಎಂಬೊಬ್ಬ ರಾಜನೊಡನೆ ಯುದ್ಧಮಾಡಿ ಅವನನ್ನು

ಸೋಲಿಸಿ ಮತ್ತಾವ ಪ್ರಬಲ ವಿರೋಧಿಗಳನ್ನೂ ಕಾಣದೆ ಸಿಂಧು ನದಿಯನ್ನು ಸಮೀಪಿಸಿ, **ಉದಭಾಣ್ಡ** (ವಹಿಂದ್)ವೆಂಬೆಡೆಯಲ್ಲಿ ದಾಟಬೇಕೆಂದು ಸಿದ್ಧವಾಗುತ್ತಿದ್ದಿತು. ಆವೇಳೆಗೆ ಅಲ್ಲಿಗೆ ತಕ್ಷಶಿಲೆಯ ರಾಜನಾದ **ಅಂಭಿ**ಯೆಂಬಾತನು ಬಂದು ಅವರಿಗೆ ತಾನು ಸಹಾಯಮಾಡುವುದಾಗಿ ಹೇಳಿದನು. ಈ ಅಂಭಿಗೆ ಪರ್ವತಪ್ರದೇಶದಲ್ಲಿ ರಾಜನಾಗಿದ್ದ **ಅಭಿಸಾರ**ನೆಂಬ ರಾಜನೂ ಸಿಂಧು ವಿತಸ್ತಾ ನದಿಗಳ ಮಧ್ಯೆ ರಾಜ್ಯವನ್ನಾಳುತ್ತಿದ್ದ **ಪೌರವ** ರಾಜನೂ ಪ್ರಬಲ ಶತ್ರುಗಳಾಗಿದ್ದರು. ಅವರನ್ನು ಯುದ್ಧದಲ್ಲಿ ಎದುರುಗೊಂಡು ಸೋಲಿಸಲು ಅಶಕ್ತನಾಗಿ ಅಂಭಿಯು ಅವರ ನಿಗ್ರಹಕ್ಕೆ ಈ ಗ್ರೀಕರ ದಳವನ್ನು ಉಪಯೋಗಿಸಿಕೊಳ್ಳುವ ಯೋಚನೆಮಾಡಿ ಗ್ರೀಕರಿಗೆ ಸಹಾಯಮಾಡಲು ಸಿದ್ಧನಾದನು. ಉದಭಾಣ್ಡದಲ್ಲಿ ಒಂದು ಭಾಗದವರು ನದಿಯನ್ನು ದಾಟುವ ಸನ್ನಾಹ ಮಾಡತೊಡಗಿದರು.

**ಪುಷ್ಕರಾವತಿ ಕ್ಷೇತ್ರ**

ಹಿಂದೆ ಶತ್ರುತ್ವವನ್ನು ಸಾಧಿಸಬಹುದಾದ ಜನರನ್ನು ಬಿಟ್ಟುಕೊಂಡು ಮುಂದೆ ಅಜ್ಞಾತದೇಶದಲ್ಲಿ ಸೈನ್ಯವನ್ನು ನಡೆಸಿಕೊಂಡು ನುಗ್ಗುವುದು ಹೆಡ್ಡತನವೆಂದು ಸಿಕಂದರನಿಗೆ ತಿಳಿದಿತ್ತು. ಸಿಂಧು ನದಿಯನ್ನು ದಾಟುವ ಮೊದಲು ನದಿಯ ಬಲಗಡೆಯಲ್ಲಿ ಪ್ರಬಲರಾಗಿದ್ದವರನ್ನು ವಶಪಡಿಸಿಕೊಳ್ಳಲು ಸಿಕಂದರನು ಮತ್ತೊಂದು ಸೈನ್ಯ ಭಾಗವನ್ನು ನಡೆಸಿಕೊಂಡು ಕುನಾರ ನದಿಯ ಪ್ರಾಂತದಲ್ಲಿ ನುಗ್ಗಿ, ಧೀರರಾಗಿ ಯುದ್ಧಮಾಡಿದ **ಅಸ್ಪೇಷಿಯರ್** (Aspasians) ಕುಲದವರನ್ನು ಸೋಲಿಸಿದನು. ಸುವಾಸ್ತು ನದಿಯ ಪ್ರಾಂತದಲ್ಲಿ **ಅಸ್ಸಕ** (Assakanoi)ರೆಂಬ ಕುಲದವರು ಎದುರಾದರು; ಸೋತರೂ ಅವರು ತಮ್ಮ ರಾಜಧಾನಿಯಾದ **ಮಂಗಲವತಿ** (Massaga or Manglawar) ದುರ್ಗವನ್ನು ರಕ್ಷಿಸಲು ಯತ್ನಿಸಿ ಸಿಕಂದರನಿಗೇ ಗಾಯವನ್ನುಂಟು ಮಾಡಿದರು. ಜಯವು ಸಿಕಂದರನನ್ನೇ ಸೇರಿತು. ಆದರೂ ಅವರ ರಣ ಸಾಹಸಕ್ಕೆ ಮೆಚ್ಚಿ ಸಿಕಂದರನು ಸೆರೆಯಾಳುಗಳಾಗಿದ್ದವರನ್ನು ತನ್ನ ಸೈನ್ಯದಲ್ಲಿ ಸೇರಿಸುವ ಪ್ರಯತ್ನಮಾಡಿದನು; ಅವರೊಪ್ಪದಿರಲು ಅವರೆಲ್ಲರನ್ನೂ ವಧೆಮಾಡಿಸಿದನು. ಈ ಜನರು ಸೋತು ಅಪ್ರತಿಭರಂತಾದರು. ಇನ್ನೂ ಮುಂದೆ ಹೊರಟು ಸಿಕಂದರನು ಸಾಹಸದಿಂದ **ಅಯುರ್ನೊ**ಸೆಂಬ (Aornos)

ಕೋಟೆಯನ್ನು ಸಾಧಿಸಿದನು. ಈ ಪ್ರಾಂತದಲ್ಲಿದ್ದಾಗಲೇ **ನೈಸ** (Nysa) ಎಂಬೆಡೆಯಲ್ಲಿ ಈ ಗ್ರೀಕರು ತಮ್ಮ ಕುಲಸ್ಥರಾದ ಗ್ರೀಕರ ನೆಲೆಯನ್ನು ಕಂಡು ಅಚ್ಚರಿಗೊಂಡು, ಅವರೊಡನೆ ಮೈತ್ರಿಯಿಂದ ಕೆಲಕಾಲ ಕಳೆದರು. ಸಿಕಂದರನಿಗೆ ಮೊದಲೇ ಗ್ರೀಕರು ಈ ಪ್ರಾಂತದಲ್ಲಿ ನೆಲೆಯಾಗಿದ್ದುದರಲ್ಲಿ ಆಶ್ಚರ್ಯವಿಲ್ಲ; ಇರಾನೀ ಸಮ್ರಾಟರು ಅದಕ್ಕೆ ಕಾರಣರಾಗಿದ್ದಿರಬಹುದು. ಅಂತು ಸಿಕಂದರನು ಸಿಂಧು ನದಿಯ ಬಲಗಡೆಯಲ್ಲಿ ಪರ್ವತನಿವಾಸಿಗಳಾಗಿ ಧೀರರಾಗಿದ್ದ ಕುಲಗಳನ್ನು ಪ್ರತ್ಯೇಕವಾಗಿ ಎದುರಿಸಿ, ತನ್ನ ವೇಗ ಗಮನದಿಂದ ಅವರಿಗೆ ಹೆಚ್ಚು ಅವಕಾಶಕೊಡದೆ ಸೋಲಿಸಿ, ಆ ಪ್ರಾಂತವನ್ನು ತಕ್ಕಷ್ಟು ಮಟ್ಟಿಗೆ ಸ್ವಾಧೀನಪಡಿಸಿಕೊಂಡು ಉದಭಾಂಡಕ್ಕೆ ಬಂದು ಅಂಭಿಯ ಸ್ನೇಹವನ್ನೊಪ್ಪಿಕೊಂಡು ಆತನ ರಾಜಧಾನಿಯಾದ ತಕ್ಷಶಿಲಾ ನಗರಿಗೆ ಸೈನ್ಯದೊಡನೆ ಹೊರಟನು.

ತಕ್ಷಶಿಲೆ

ದೂರದೇಶದಿಂದ ಬಂದಿದ್ದ ಈ ಶೂರನ ಸಹಾಯದಿಂದ ತನ್ನ ವೈರಿಗಳನ್ನಡಗಿಸಲು ಯೋಚಿಸಿ ತಾನು ಮಾಡುವುದು ದ್ರೋಹವೆಂಬ ಚಿಂತೆಯಿಲ್ಲದಿದ್ದ ಅಂಭಿರಾಜನು ತಕ್ಷಶಿಲೆಯಲ್ಲಿ ಇವರಿಗೆ ಒಂದು ತಿಂಗಳಕಾಲ ಔತಣಗಳನ್ನೂ ವಿನೋದಗಳನ್ನೂ ನಡೆಸಿದನು. ಸಿಕಂದರನು ಆತನಿಗೆ ಅಮೂಲ್ಯ ವಸ್ತುಗಳನ್ನೊಪ್ಪಿಸಿ ಸ್ನೇಹ ಕಟ್ಟಿದನು. ಈ ವಿವರವನ್ನು ತಿಳಿದೊಡನೆಯೇ ಅಭಿಸಾರರಾಜನು ವಶ್ಯತೆಯನ್ನೊಪ್ಪಿಕೊಂಡನು. ಪೌರವ*(Porus)ನು ಆ ಮಾತನ್ನು ಒಪ್ಪದೆ ಯುದ್ಧಸನ್ನದ್ಧನಾಗಿ ಸಿಕಂದರನಿಗೆ 'ಯುದ್ಧಭೂಮಿಯಲ್ಲಿ ನಿನ್ನನ್ನು ಎದುರುಗೊಳ್ಳುವೆ' ಎಂದು ಗಂಭೀರವಾದ ಮಾತು ಹೇಳಿಕಳುಹಿಸಿದನು. ತನ್ನ ಚತುರಂಗಬಲವನ್ನು ಸನ್ನಾಹಪಡಿಸಿಕೊಂಡು ವಿತಸ್ತಾ ನದಿಯನ್ನು ಶತ್ರುವು ದಾಟಲಾಗದಂತೆ ರೇವಿನ ಎಡೆಗೆ ಎದುರಾಗಿ ವ್ಯೂಹವನ್ನು ರಚಿಸಿ ಪೌರವನು ಯುದ್ಧಸಿದ್ಧನಾದನು. ಅಲ್ಲಿಗೆ ಬಂದ ಸಿಕಂದರನು ಆ ಸೈನ್ಯದೆದುರಿನಲ್ಲಿ ನದಿಯನ್ನು ದಾಟಲಾರದೆ ಕೆಲವು ವಾರಗಳನ್ನು ಕಳೆದು, ಕಡೆಗೆ 16 ಮೈಲಿ ದೂರದಲ್ಲಿ ಬೇರೆ ರೇವನ್ನು ಹುಡುಕಿ ನದಿಯನ್ನು ಗೋಪ್ಯ

* ಈ ಶಬ್ದವು ಪುರುಷ ಅಥವಾ ಪ್ರಧಾನ ಪುರುಷನಾದ ಗಣಾಧ್ಯಕ್ಷನಿಗೆ ಅನ್ವಯವಾಗತಕ್ಕದ್ದೆಂದೂ ವಿತಸ್ತಾ ತೀರದಲ್ಲಿಯೂ ಗಣರಾಜ್ಯವಿದ್ದಿತೆಂದೂ ಕೆಲವರ ಮತವುಂಟು.

ವಾಗಿ ರಾತ್ರಿ ವೇಳೆಯಲ್ಲಿ ದಾಟಿದನು. ಮೋಸಹೋದ ಪೌರವನು ತನ್ನ ಸೈನ್ಯವನ್ನಲ್ಲಿಂದ ಎತ್ತಿ ಈಗ ಕಾರಿ ಎಂದು ಹೆಸರಾಗಿರುವ ಮೈದಾನದ ಕಡೆ ಹೊರಟನು. ಅಲ್ಲಿ ಮಳೆಯಿಂದ ನೆಲವೆಲ್ಲ ಕೆಸರಾಗಿತ್ತು. ಅಲ್ಲಿಯೇ ಯುದ್ಧವು ನಡೆಯಿತು. ಪೌರವನ ಸೈನ್ಯದ ಧನುರ್ಧಾರಿಗಳಿಗೆ ತಮ್ಮ ಬಿಲ್ಲುಗಳನ್ನು ನೆಲದಲ್ಲಿ ಊರುವುದಕ್ಕೇ ಆಗದೆ ಬಿಲ್ಗಾರರ ಪಡೆಯು ನಿರುಪಯುಕ್ತವಾಯಿತು; ರಥಿಕರಿಗೂ ಅದೇ ವಿಧದ ತೊಂದರೆಯುಂಟಾಯಿತು. ಸಮರ್ಥ ದಳಪತಿಯಾದ ಸಿಕಂದರನು ತನ್ನ ಅಶ್ವಾರೋಹಿ ದಳವನ್ನು ಚಾತುರ್ಯದಿಂದ ಉಪಯೋಗಿಸಿದನು. ಗ್ರೀಕರು ವ್ಯೂಹಬಂಧವನ್ನು ಬಿಡದೆ ಯುದ್ಧಮಾಡಿದರು. ಪೌರವನ ಸೈನ್ಯವು ಬೇಗನೆ ವ್ಯೂಹಗೆಟ್ಟಿತು; ಸಿಕಂದರನು ನಿಯೋಗಿಸಿದಂತೆ ಒಂದು ಗ್ರೀಕ್ ದಳವು ಹಿಂದುಗಡೆಯಿಂದ ಪೌರವನ ಸೇನೆಯನ್ನಾಕ್ರಮಿಸಿತು. ಹಿಂದೆಯೂ ಮುಂದೆಯೂ ಶತ್ರುಗಳನ್ನು ಕಂಡು ಪೌರವನ ಕಡೆಯವರು ಭ್ರಾಂತರಾದರು. ಆನೆಗಳು ಮತಿಗೆಟ್ಟವು. ಎಲ್ಲರ ಮಧ್ಯೆ ಉತ್ತುಂಗವಾದ ಆನೆಯ ಮೇಲೆ ಕುಳಿತು ಯುದ್ಧಮಾಡುತ್ತಿದ್ದ ಪೌರವ ರಾಜನಿಗೆ ಒಂದು ಬಾಣವು ಭುಜದಲ್ಲಿ ನಾಟಿ ರಕ್ತಸ್ರಾವವಾಗಿ ಮೂರ್ಛೆಬರಲು, ಭ್ರಾಂತರಾಗಿದ್ದ ಸೈನಿಕರು ರಾಜನೇ ಸೋತನೆಂದುಕೊಂಡು ಪಲಾಯನಪರರಾದರು. ಪೌರವನ ಮಾವುತನು ಪ್ರಾಣವನ್ನೊಪ್ಪಿಸಿದನು; ಪ್ರಜ್ಞೆತಪ್ಪಿದ್ದ ಮಹಾರಾಜನನ್ನು ಎತ್ತಿಕೊಂಡು ಆ ಆನೆಯು ಭದ್ರವಾಗಿ ನಿಂತಲ್ಲಿಯೇ ನಿಂತು ಶತ್ರುಗಳಿಗೆ ಆಸ್ಪದಕೊಡದೆ ಸಮೀಪಿಸಿದವರನ್ನು ತುಳಿಯುತ್ತ, ಶತ್ರುಗಳೆಸೆದ ಬಾಣ ಭರ್ಜಿಗಳನ್ನು ಸೊಂಡಿಲದಿಂದ ಹಿಡಿದು ಬಿಸಾಡುತ್ತ, ಶತ್ರುಗಳು ಭಯದಿಂದಲೂ ಆಶ್ಚರ್ಯದಿಂದಲೂ ದೂರದಲ್ಲಿ ಸುತ್ತುಗಟ್ಟಿಕೊಂಡಿದ್ದಾಗ ಸೊಂಡಿಲವನ್ನು ಮೇಲಕ್ಕೆತ್ತಿ ಅಂಬಾರಿಯಲ್ಲಿದ್ದ ಮಹಾರಾಜನ ಭುಜದಲ್ಲಿ ನಾಟಿದ್ದ ಅಲಗನ್ನು ಕಿತ್ತೆಳೆದು ಆತನಿಗೆ ಪ್ರಜ್ಞೆಬರುವಂತೆ ಮಾಡಿತು. ಈ ಅದ್ಭುತ ಸಂಗತಿಯನ್ನೂ ಆನೆಯ ಸ್ವಾಮಿಭಕ್ತಿಯ ವಿವರವನ್ನೂ ದೂತರಿಂದ ಕೇಳಿದ ಸಿಕಂದರನು "ಆನೆಯನ್ನು ಕೊಲ್ಲಬೇಡಿ. ಅಂಬಾರಿಯಲ್ಲಿರುವಾತನು

ವಿತಸ್ತಾ ಕದನ
ಕ್ರಿ. ಪೂ. 326

ಭದ್ರಗಜ

ಯಾರೋ ಪ್ರಮುಖನಾಗಿರಬೇಕು. ಆತನನ್ನು ಸೆರೆಮಾಡಿ" ಎಂದಾಜ್ಞೆ ಕೊಟ್ಟನು. ಚೇತರಿಸಿಕೊಂಡಮೇಲೆ ಪೌರವನು ಯುದ್ಧಭೂಮಿಯಿಂದ ತನ್ನವರು ಕಾಲ್ದೆಗೆದಿದ್ದುದನ್ನು ಕಂಡು ಸೋತೆನೆಂದು ನಿಶ್ಚಯಮಾಡಿಕೊಂಡು ಸೌಮ್ಯನಾಗಿ ಆನೆಯಿಂದಿಳಿದು, ಕತ್ತಿಯನ್ನೊಪ್ಪಿಸಲು ಗಂಭೀರನಾಗಿ ಮುಂದೆ ನಡೆದು ಬಂದನು. ಆ ವೇಳೆಗೆ ಸಿಕಂದರನೂ ಬಂದು ಸಿದ್ಧನಾದನು. ಆರೂವರೆ ಅಡಿ ಎತ್ತರವುಳ್ಳವನಾಗಿದ್ದ ಮಹಾರಾಜನ ಗಂಭೀರಾಕೃತಿಯನ್ನೂ ಆತನ ದರ್ಪದ ಮಾತುಗಳನ್ನೂ ಕೇಳಿ ಗ್ರೀಕರು ವಿಸ್ಮಿತರಾದರು. ಈತನೊಡನೆ ಮತ್ತೊಮ್ಮೆ ಯುದ್ಧವು ಬೇಡವೆಂದು ಹೇಳುತ್ತಿದ್ದ ತನ್ನ ಸೈನಿಕರ ಮಾತನ್ನು ಕೇಳಿ, ಸಿಕಂದರನು ಔದಾರ್ಯವನ್ನು ತೋರಿ ಪೌರವನೊಡನೆ ಮೈತ್ರಿಯನ್ನು ಕಟ್ಟಿದನು. ಮುಂದಕ್ಕೆ ಹೊರಡಲು ಸಹಾಯವನ್ನಪೇಕ್ಷಿಸಿ, ಪೌರವನ ರಾಜ್ಯಕ್ಕೆ ಕುಂದೆಸಗುವುದಿಲ್ಲವೆಂದು ವಚನವಿತ್ತು ಕಾಣಿಕೆಯನ್ನು ಸ್ವೀಕರಿಸಿ ಸಿಕಂದರನು ಮುಂದಕ್ಕೆ ಪ್ರಯಾಣ ಮಾಡಿದನು. ವಿತಸ್ತಾತೀರದ ಕದನದ ವಿವರವು ಗ್ರೀಕರ ಗ್ರಂಥಗಳಲ್ಲಿಯೇ ವರ್ಣಿತವಾಗಿದೆ.

ಗೌರವ ಸಂಧಿ

ಪೌರವನ ಸಹಾಯದಿಂದ ಮುಂದೆ ಹೊರಟ ಸಿಕಂದರನನ್ನು ಎದುರಿಸಲಾರದೆ ಪೌರವನೆಂಬ ಹೆಸರನ್ನೇ ಪಡೆದಿದ್ದ ಒಬ್ಬ ಹೇಡಿ ರಾಜನು ಚಂದ್ರಭಾಗಾಪಾರ್ಶ್ವದ ತನ್ನ ರಾಜ್ಯವನ್ನು ಬಿಟ್ಟು ಓಡಿಹೋದನು. **ಸೌಭೂತಿ**ಯೆಂಬ ರಾಜನು ಯುದ್ಧಮಾಡಿ ಸೋತು ಅಧೀನನಾದನು. ಚಂದ್ರಭಾಗಾ ಇರಾವತೀ ನದಿಗಳನ್ನು ದಾಟುವುದರಲ್ಲಿ ***ಕಠರೆಂಬ** ರಣಪ್ರಿಯ ಕುಲಸ್ಥರು ಅಲ್ಪಸಂಖ್ಯಾಕರಾಗಿದ್ದರೂ ಸಾಹಸದಿಂದ ಯುದ್ಧಮಾಡಿ ಕಡೆಗೆ ವಶರಾದರು. ಇವರು ತೋರಿದ ಯುದ್ಧನೈಪುಣ್ಯವನ್ನು ಕಂಡು ಗ್ರೀಕರಿಗೆ ಭಯವೇ ಉಂಟಾಯಿತು. ಸಿಕಂದರನು ಇನ್ನೂ ಮುಂದಕ್ಕೆ ಹೊರಟು ವೇಪಸೀ ತೀರವನ್ನು ಸಮೀಪಿಸಿದನು. ಆ ನದಿಯು ಎಡಗಡೆಯಲ್ಲಿದ್ದ

ರಣಪಂಡಿತ ಕುಲಗಳು

* ಈ ಕಠರೆಂಬ ಕುಲದವರಲ್ಲಿಯೇ ಕಠೋಪನಿಷತ್ತೆಂಬುದು ರಕ್ಷಿತವಾಗಿತ್ತು. ಯಮನ ಅತಿಥಿಯಾಗಿದ್ದ ನಚಿಕೇತನು ಈ ಕುಲಸ್ಥ ಬಾಲಕನಾಗಿದ್ದನು.

**ಯೌಧೇಯ**ರೆಂಬ ಕುಲದವರ ಶೌರ್ಯ ಸಾಹಸಗಳೂ ರಣ ಶಿಕ್ಷಣ ವಿವರವೂ ಗ್ರೀಕರ ಕಿವಿಯಲ್ಲಿ ಆಗ ಬಿದ್ದು ಅವರ ಮನಸ್ಸುಗಳಲ್ಲಿ ಭಯವು ಹುಟ್ಟಿತು. ಪೌರವನೊಡನೆ ಕಾದಿದುದೇ ಸಾಕೆಂದಿದ್ದ ಸಿಕಂದರನ ಭಟರು ಈ ಭಯದಿಂದ ಎದೆಗೆಟ್ಟು ಚಿಕ್ಕ ಚಿಕ್ಕ ಸಭೆಗಳನ್ನು ನಡೆಸಿಕೊಂಡು ಮುಂದೆ ಹೊರಡುವುದಿಲ್ಲವೆಂದು ಮುಷ್ಕರ ಹಿಡಿದರು. ಇವರ ಬಲವಂತಕ್ಕೊಳಗಾಗಿ ಸಿಕಂದರನು ಆ ನದಿಯನ್ನು ದಾಟದೆ ಅಲ್ಲಿಂದ ಹಿಂತಿರುಗಿದನು. ಅಂಭಿ ಪೌರವ ರಾಜರು ತನ್ನ ಅಧೀನರಾಗಿ ಸಿಂಧು ವೇಪಸೀ ನದಿಗಳ ಮಧ್ಯೆ ಇರುವ ಪ್ರದೇಶವೆಲ್ಲವನ್ನೂ ಆಳತಕ್ಕದೆಂದು ವ್ಯವಸ್ಥೆಮಾಡಿ, ಸಿಕಂದರನು ನದಿಗಳ ಗತಿಯನ್ನೇ ಅನುಸರಿಸಿ **ಪತ್ತಲ** ಪಟ್ಟಣದ ಕಡೆ ಹೊರಟನು. * **ಶಿಬಿ**ಕುಲದವರೂ **ಮಾಳವ**ರೂ **ಕ್ಷುದ್ರಕ**ರೂ ಬ್ರಾಹ್ಮಣ ಜನರಿಂದ ಪ್ರೇರಿತರಾಗಿ ಈತನೊಡನೆ ಯುದ್ಧ ಪ್ರಯತ್ನಮಾಡಿ ಗ್ರೀಕರ ಹೃದಯಗಳಲ್ಲಿ ಭಯವನ್ನುಂಟುಮಾಡಿದರು. ಮ್ಯಾಸಿಡೋನಿಯಾ ದೇಶದ ಭಟರು ಎದೆಗೆಟ್ಟು ಭಯಜರ್ಜರಿತರಾಗಿ ರಾಜದ್ರೋಹ ಸೂಚಕವಾದ ಮಾತುಗಳನ್ನಾಡುತ್ತಾ ರಾಜನಾದ ಸಿಕಂದರನನ್ನು ಬಯ್ಯಲು ತೊಡಗಿದರು. ಸಿಕಂದರನು ಯುಕ್ತಿಯಿಂದ ಅವರನ್ನು ಸಮಾಧಾನಪಡಿಸಿ ಹುರಿಗೊಳಿಸಿ ತಾನೇ ಮುಂದಾಗಿ ಸಾಹಸಪಟ್ಟನು. ನಡೆದ ಯುದ್ಧಗಳು ಭಯಂಕರವಾಗಿದ್ದವು. ಒಂದು ಪಟ್ಟಣದಲ್ಲಿ ಅಲ್ಲಿಯ ನಿವಾಸಿಗಳು ಮುಷ್ಕರಹಿಡಿದು ಹೋರಾಡಿ ಗ್ರೀಕರಲ್ಲನೇಕರನ್ನು ಕೊಂದು, ತಮಗೆ ಜಯದೊರಕಲಾರದೆಂದು ತಿಳಿದೊಡನೆ ತಮ್ಮ ನಗರಕ್ಕೇ ಬೆಂಕಿಯನ್ನು ತಗುಲಿಸಿ ಅದರಲ್ಲಿಯೇ ತಾವೂ ಸುಟ್ಟು ಭಸ್ಮವಾದರು. ಮಾಳವ ಕುಲದವರೊಡನೆ ನಡೆದ ಹೋರಾಟದಲ್ಲಿ ಸಿಕಂದರನಿಗೇ ಗಾಯವಾಗಿ ಪ್ರಜ್ಞೆತಪ್ಪಿತು. ಈ ಕುಲಗಳು ಸುಸನ್ನದ್ಧವಾಗಿ ಒಟ್ಟು ಕೂಡಿದ್ದರೆ ಸಿಕಂದರನ ಸೈನ್ಯವು ಸುಲಭವಾಗಿ ನಾಶವಾಗುತ್ತಿತ್ತು. ಪರಸ್ಪರ ಮಾತ್ಸರ್ಯಗಳನ್ನೂ ವೈಷಮ್ಯಗಳನ್ನೂ ಬೆಳೆಸಿಕೊಂಡಿದ್ದ

---

* ಪ್ರಾಚೀನಕಾಲದಲ್ಲಿದ್ದ ಗಣರಾಷ್ಟ್ರಗಳ ರಾಷ್ಟ್ರ ವ್ಯವಸ್ಥೆಯ ವಿವರವನ್ನು 'ದೇಶೀಯ ವಿದ್ಯಾಶಾಲಾ ಪತ್ರಿಕೆ'ಯ ನಾಲ್ಕನೆಯ (1926) ಸಂಪುಟದ ಒಂದು ಲೇಖನದಲ್ಲಿಯೂ, 'ಜಯ ಕರ್ನಾಟಕ ಗ್ರಂಥಮಾಲೆ'ಯಲ್ಲಿ ಶ್ರೀ॥ ವಿಷ್ಣು ಹರಿವಡೇರರು ಬರೆದಿರುವ ಪ್ರಾಚೀನ ರಾಷ್ಟ್ರ ಪದ್ಧತಿಗಳು ಎಂಬ ಪುಸ್ತಕದಲ್ಲಿಯೂ ಕಾಣಬಹುದು.

ಈ ಕುಲಗಳು ಒಟ್ಟುಸೇರದೆ ಪ್ರತ್ಯೇಕವಾಗಿ ಯುದ್ಧಮಾಡಲು ಉಪಕ್ರಮಿಸಿದವು. ಸಿಕಂದರನು ಅವರ ಯುದ್ಧ ಪಾಂಡಿತ್ಯವನ್ನು ತಿಳಿದವನಾಗಿ ವೇಗವೇಗವಾಗಿಯೂ ಅನಿರೀಕ್ಷ್ಯವಾದ ಮಾರ್ಗಗಳಲ್ಲಿಯೂ ಸಂಚರಿಸುತ್ತ, ಅಲ್ಲಲ್ಲಿ ಕಠೋರ ವರ್ತನೆಯಿಂದ ನಿವಾಸಿಗಳ ಮನಸ್ಸುಗಳಲ್ಲಿ ಭಯವನ್ನುಂಟುಮಾಡುತ್ತ ಮಾರ್ಗವನ್ನು ಕಳೆದನು. ಶಿಬಿ, ಮಾಳವ, ಕ್ಷುದ್ರಕ ಮುಂತಾದ ಕುಲಸ್ಥರ ಆಕೃತಿ ವ್ಯವಸ್ಥೆಗಳನ್ನೂ ಐಶ್ವರ್ಯ ಗಾಂಭೀರ್ಯಗಳನ್ನೂ ಕಂಡು ಗ್ರೀಕರು ಅಚ್ಚರಿಗೊಂಡರು. ಸಿಂಧುದೇಶದ ಸಮೀಪದಲ್ಲಿದ್ದ **ಮುಚುಕುಂದ**ರೂ ಇದೇ ರೀತಿಯಲ್ಲಿಯೇ ಅಸಾಮಾನ್ಯ ಪೌರುಷವನ್ನು ತೋರಿ ಸಿಕಂದರನ ವೇಗದಿಂದ ಪರಾಜಿತರಾದರು. ಪತ್ತಲ ನಗರವನ್ನು ತಲಪಿದ ಕೂಡಲೇ ಸಿಕಂದರನು ತನ್ನ ಸೈನ್ಯವನ್ನು ಮೂರು ಭಾಗಗಳಾಗಿಮಾಡಿ, ಹಿಂತಿರುಗಿ ಬವೇರು ಪಟ್ಟಣಕ್ಕೆ ಪ್ರಯಾಣ ಮಾಡುವುದಕ್ಕೂ ತಾನು ಗೆದ್ದಿದ್ದ ಪ್ರದೇಶಗಳಲ್ಲಿ ತನ್ನಧಿಕಾರವು ನೆಲೆಗೊಳ್ಳುವುದಕ್ಕೂ ತಕ್ಕ ವ್ಯವಸ್ಥೆಗಳನ್ನು ಮಾಡಿದನು. ಸೈನ್ಯದೊಂದು ಭಾಗವು ಬಂದ ದಾರಿಯನ್ನೇ ಹಿಡಿಯಿತು; ಮತ್ತೊಂದು ಭಾಗವು ಸಮುದ್ರದ ಮೇಲೆ ಪ್ರಯಾಣ ಮಾಡಿತು; ಇನ್ನೊಂದು ಭಾಗವನ್ನು ಸಿಕಂದರನೇ ಕರೆದುಕೊಂಡು

**ಗಮನ**

**ವರಾಹಮೂಲ** (Baramula) ವೆಂಬ ಕಣಿವೆಯ ಮಾರ್ಗವಾಗಿ ಹೊರಟನು. ಆತನ ಬೆನ್ನುಕಂಡ ಕೂಡಲೇ ಕ್ಷತ್ರಿಯ ಕುಲಗಳವರು ಸ್ವತಂತ್ರರಾದರು. ಬಾಬಿಲನ್ ಪಟ್ಟಣವನ್ನು ತಲಪಿದ ಕೆಲದಿನಗಳಲ್ಲಿಯೇ ಸಿಕಂದರನು ಮೃತನಾಗಲು, ಪಂಜಸದ ಸಿಂಧು ಪ್ರಾಂತಗಳಲ್ಲಿ ಆತನು ನಿಯಮಿಸಿದ್ದ ಅಧಿಕಾರಿಗಳು ಹತರೋ ಭ್ರಷ್ಟರೋ ಆದರು. ದೇಶವು ಹಿಂದಿನಂತೆಯೇ ಸ್ವತಂತ್ರವಾಯಿತು. ಸಿಕಂದರನ ಜಯವು ಕ್ಷಣಿಕವಾದುದೆನಿಸಿತು.

**ಪರಿಣಾಮ**

ಸಿಕಂದರನ ದಂಡಯಾತ್ರೆಯ ವಿವರವು ಗ್ರೀಕ ಗ್ರಂಥಗಳಲ್ಲಿ ಲಬ್ಧವಾಗಿದೆ. ಆ ವಿವರದಿಂದ ಭಾರತೀಯರು ಪೌರುಷದಿಂದಲೂ ಸಾಹಸದಿಂದಲೂ ಯುದ್ಧಮಾಡಿದರೆಂಬುದು ಸ್ಪಷ್ಟವಾಗುತ್ತದೆ. ಕುಲಕಲಹಗಳಿದ್ದ ಕಾರಣದಿಂದಲೂ, ಕೆಲವರು ಹೇಡಿಗಳೂ ದ್ರೋಹಿಗಳೂ ಆಗಿದ್ದ ಕಾರಣ

ದಿಂದಲೂ ಸಿಕಂದರನಿಗೆ ಕ್ಷಣಿಕವಾದ ಜಯವು ಲಭಿಸಿತು. ಭೂಮಧ್ಯ ಸಮುದ್ರ ಪ್ರದೇಶದಿಂದ ನುಗ್ಗಿಬಂದು ಎದುರಾದವರೆಲ್ಲರನ್ನೂ ಸೋಲಿಸಿ ಅಜೇಯನೆನಿಸಿದ್ದ ಸಿಕಂದರನು ಭಾರತೀಯ ಕ್ಷತ್ರಿಯ ಕುಲಗಳೆದುರಿನಲ್ಲಿ ಅತಿಸಾಹಸವನ್ನೂ ಯುಕ್ತಿಯನ್ನೂ ತೋರಬೇಕಾಯಿತು. ಈ ಕುಲಗಳು ಉಂಟುಮಾಡಿದಷ್ಟು ತೊಂದರೆಯನ್ನು ಏಷ್ಯಾಖಂಡದಲ್ಲಿಯೇ ಯಾರೂ ಉಂಟುಮಾಡಿರಲಿಲ್ಲ. ಆತನ ದಂಡಯಾತ್ರೆಯ ಪರಿಣಾಮವಾಗಿ ಗ್ರೀಕರಿಗೆ ಯಾವ ರಾಜಕೀಯ ಲಾಭವೂ ಭರತವರ್ಷದಲ್ಲಿ ದೊರೆಯಲಿಲ್ಲ. ಸಿಕಂದರನ ತರುವಾಯ ಆತನ್ನನುಕರಿಸಲು ಕೆಲವರು ವ್ಯರ್ಥ ಪ್ರಯತ್ನಪಟ್ಟರು. ಅದೊಂದಲ್ಲದೆ ಆ ದಂಡಯಾತ್ರೆಯು ಒಂದು ವಿಧವಾಗಿ ಮೌರ್ಯ ಚಂದ್ರಗುಪ್ತನಿಗೆ ಅನುಕೂಲವಾಯಿತು. ವೇಪಸೀ ಪ್ರಾಂತದಲ್ಲಿದ್ದಾಗಲೇ ಈ ಚಂದ್ರಗುಪ್ತನು ಸಿಕಂದರನ ಬಲವನ್ನು ಮಗಧರಾಜ್ಯದ ನಂದರಾಜರ ಮೇಲೆತ್ತಿಕಟ್ಟುವ ಆಲೋಚನೆಮಾಡಿ ಆತನ ಸಿಬಿರದಲ್ಲಿ ಕಾಣಿಸಿಕೊಂಡಿದ್ದನು. ವೇಗವಾಗಿ ಸಂಚರಿಸಿ, ಪಂಚನದ ಸಿಂಧು ಪ್ರಾಂತಗಳಲ್ಲಿ ಪ್ರಬಲರಾಗಿದ್ದವರನ್ನು ಸೋಲಿಸಿ ಸಿಕಂದರನು ಚಂದ್ರಗುಪ್ತನು ಮಾಡಬೇಕೆಂದಿದ್ದ ಕೆಲಸದಲ್ಲಿ ಅರ್ಧವನ್ನು ತಾನೇ ಮಾಡಿಬಿಟ್ಟನು. ಸಿಕಂದರನು ಸತ್ತಕೂಡಲೇ ಚಂದ್ರಗುಪ್ತನು ಕ್ಷತ್ರಿಯ ಕುಲಗಳನ್ನು ತನ್ನ ಅಧೀನಮಾಡಿಕೊಂಡು, ಅವರ ಸೈನ್ಯಗಳನ್ನು ಒಟ್ಟುಗೂಡಿಸಿಕೊಂಡು, ಪಂಚನದ ಸಿಂಧು ಪ್ರಾಂತಗಳನ್ನು ಗೆದ್ದುದೇ ಅಲ್ಲದೆ ವೇಗದಿಂದ ಸಂಚರಿಸುತ್ತ ಕುರು ಪಾಂಚಾಲ ದೇಶಗಳನ್ನು ಜಯಿಸಿ ನಂದರನ್ನು ನಾಶಗೊಳಿಸಲು ಅಣಿಯಾದನು.

ಸಿಕಂದರನ ಪ್ರಯತ್ನವನ್ನು ದಂಡಯಾತ್ರೆಯೆಂದು ಕರೆದು, ಅದೇ ಮೊದಲು ಐರೋಪ್ಯರು ಭಾರತವರ್ಷದಲ್ಲಿ ದಂಡೆತ್ತಿಬಂದುದೆಂದೂ, ಆಗ ಐರೋಪ್ಯರಿಗೆ ಸುಲಭ ಜಯವಾಯಿತೆಂದೂ ಹೇಳುವುದರಲ್ಲಿ ತಥ್ಯಾಂಶವೇ ತುಂಬಿರುವುದಿಲ್ಲ. ದೇಶದ ಒಂದು ಮೂಲೆಯಲ್ಲಿ ವೇಗವಾಗಿ ಸಂಚಾರ ಮಾಡಿ ಕ್ಷಣಿಕವಾದ ಜಯವನ್ನು ಪಡೆದು ಹೋದ ಪ್ರಯತ್ನವನ್ನು ದಂಡಯಾತ್ರೆಯೆಂದು ಹೇಳಲಾಗುವುದಿಲ್ಲ; ಸಿಕಂದರನಿಗೆ ಜಯವು ಸುಲಭವಾಗಿ ಸಿಕ್ಕಿತೆಂದೂ ಹೇಳಲಾಗುವುದಿಲ್ಲ. ಅದರ ವಿವರದಲ್ಲಿ ಸಿಕಂದರನು ಸೇನಾನಾಯಕತ್ವದಲ್ಲಿ ಎಷ್ಟು ಸಮರ್ಥನಾಗಿದ್ದನೆಂಬುದನ್ನೂ ಭಾರತೀಯ

ಯೋಧರು ಎಷ್ಟು ಸಮರ್ಥರಾಗಿದ್ದರೆಂಬುದನ್ನೂ ಕಂಡು ಮೆಚ್ಚಬಹುದು.

ಗಣರಾಷ್ಟ್ರಗಳು

ಸಿಕಂದರನ ವೃತ್ತಾಂತವನ್ನು ಬಣ್ಣಿಸುವ ಗ್ರೀಕ ಗ್ರಂಥಗಳಲ್ಲಿ ಪಂಚನದ ಸಿಂಧು ಪ್ರಾಂತಗಳಲ್ಲಿ ನೆಲೆಯಾಗಿದ್ದ ಕುಲಗಳ ಮತ್ತು ರಾಜ್ಯಗಳ ಪರಿಚಯವು ಪ್ರತ್ಯಕ್ಷದರ್ಶಿಗಳಿಂದಲೇ ತಿಳಿಯುವುದು. ಆ ಪ್ರಾಂತದಲ್ಲಿ ಎರಡು ಸಾವಿರಕ್ಕೆ ಮೇಲ್ಪಟ್ಟ ನಗರಗಳೂ ದುರ್ಗಗಳೂ ಇದ್ದವು. **ಕಠ**ರು, **ಯೌಧೇಯ**ರು, **ಮಾಳವ**ರು, **ಕ್ಷುದ್ರಕ**ರು, **ಅಂಬಷ್ಠ**ರು, **ಮುಚುಕುಂದ**ರು ಮುಂತಾದ ಕುಲಗಳವರು ಯುದ್ಧವಿದ್ಯೆಯಲ್ಲಿ ಪರಿಣತರಾಗಿ ಅಸಮ ಸಾಹಸಿಗಳೆನಿಸಿದ್ದರು. ಪೌರುಷವನ್ನೂ ಸೌಂದರ್ಯವನ್ನೂ ಮೆಚ್ಚುತ್ತ ಅವರು ರಣಶಿಕ್ಷಣವನ್ನು ಕುಲಸ್ಥರೆಲ್ಲರಲ್ಲಿಯೂ ಬಲವಂತಗೊಳಿಸಿಕೊಂಡು, ಗಂಭೀರಾಕೃತಿಗಳನ್ನುಳ್ಳವರಾಗಿ ದೀರ್ಘಾಯುಗಳಾಗಿದ್ದರು. ಅಂಗಹೀನರೂ ದುರ್ಬಲರೂ ಹುಟ್ಟಿದರೆ ಅವರನ್ನು ಬದುಕಗೊಡಿಸುತ್ತಿರಲಿಲ್ಲ. ಸಿಬಿರ ಕ್ರಮವೇ ಅವರ ಸಾಧಾರಣ ಜೀವನದಲ್ಲಿಯೂ ನಡೆಯುತ್ತಿತ್ತು. ಲಿಚ್ಛವಿಗಳಂತೆಯೇ ಇವರೂ ಸ್ವತಂತ್ರ ಪ್ರಿಯರು, ಸ್ವಾಭಿಮಾನಿಗಳು. ಅವರಲ್ಲಿ ಆಡಳಿತವು ಕುಲಮುಖ್ಯರಲ್ಲಿ ನೆಲೆಸಿತ್ತು; ರಾಜಕೀಯ ಅಧಿಕಾರಿಗಳನ್ನು ಕುಲಸ್ಥರ ಸಭೆಗಳಲ್ಲಿ ವರಿಸಿಕೊಳ್ಳುತ್ತಿದ್ದರು. ಇವರ ವ್ಯವಸ್ಥೆಯನ್ನು ಕಂಡು ಗ್ರೀಕರು ತಮ್ಮಲ್ಲಿ ಪ್ರಸಿದ್ಧರಾಗಿದ್ದ ಸ್ಪಾರ್ಟ ದೇಶದವರನ್ನು ಮೀರಿಸಿದವರಿವರೆಂದು ಬೆರಗಾದರು. ಪಂಚನದ ಪ್ರಾಂತದಲ್ಲಿ ತಪೋವನಗಳೂ ತಪಸ್ವಿಗಳೂ ತತ್ವಜ್ಞರೂ ಅಲ್ಲಲ್ಲಿ ಕಾಣುತ್ತಿದ್ದರು; ಅವರನ್ನು ಕಂಡು ಗ್ರೀಕರು ಅತ್ಯಾಶ್ಚರ್ಯಚಕಿತರಾದರು. ಬ್ರಾಹ್ಮಣರು ಪಂಚನದ ಪ್ರಾಂತದಲ್ಲಿ ಪ್ರಬಲರಾಗಿಯೇ ಇದ್ದರು; ಅವರು ಸಿಕಂದರನೊಡನೆ ಪ್ರಬಲವಾದ ಯುದ್ಧವನ್ನೇ ನಡೆಸಿದರು. ಸಿಂಧು ನದಿಗೆ ಪಶ್ಚಿಮದಲ್ಲಿದ್ದ ಕ್ಷತ್ರಿಯರು ಇತರ ಜನರ ಸಂಪರ್ಕವನ್ನು ಪಡೆದು ಆಚಾರ ಶುದ್ಧಿಯನ್ನು ಕಳೆದುಕೊಂಡಿದ್ದರು. ತಕ್ಷಶಿಲೆಯು ಇಡೀ ಏಷ್ಯಾಖಂಡಕ್ಕೇ ವ್ಯಾಪಾರದ ಕೇಂದ್ರವಾಗಿ ಪ್ರಸಿದ್ಧ ವಿದ್ಯಾಪೀಠಗಳ ನೆಲೆಯಾಗಿತ್ತು. ಇತರ ನಗರಗಳ ಬಳಿಯಲ್ಲಿಯೂ ಆಶ್ರಮಗಳೂ ವಿದ್ಯಾನಿಲಯಗಳೂ ಇದ್ದವು.

# ಬೌದ್ಧ ಪ್ರಚಾರ ವ್ಯಾಪ್ತಿಗಳು

ಮೂಡಲ ನಾಡುಗಳಲ್ಲಿ ಬೌದ್ಧಮತವು ಪ್ರಚಾರವಾಗಿ ವಿಸ್ತಾರ ಪಡೆದಿತ್ತು. ಬುದ್ಧದೇವನ ದಿವ್ಯ ತೇಜಸ್ಸಿನಿಂದಲೇ ಅನೇಕರು ಮುಗ್ಧರಾಗಿ ಬೌದ್ಧ ತತ್ವಗಳನ್ನೊಪ್ಪಿದ್ದರು. ಭಿಕ್ಷುಗಳ ಪ್ರಚಾರ ಕಾರ್ಯದಿಂದಲೂ ರಾಜರ ಪ್ರೋತ್ಸಾಹದಿಂದಲೂ ಮತವು ಮತ್ತಷ್ಟು ಪ್ರಚಾರವಾಯಿತು. ಮತದ ತತ್ವಗಳು ಸುಲಭವಾಗಿ ಎಲ್ಲರಿಗೂ ತಿಳಿಯುವಂತೆ ಪಾಳಿ ಭಾಷೆಯಲ್ಲಿಯೇ ಪ್ರಚಾರವಾಗುತ್ತಿದ್ದುದೂ, ಆಚಾರಗಳೂ ಸುಲಭವಾಗಿದ್ದು ಸರ್ವರಿಗೂ ಸಾಧ್ಯವಾಗಿದ್ದುದೂ ಸೇರಿ ಪ್ರಚಾರದಲ್ಲಿ ಸಹಾಯಕಗಳಾದವು. ಜೈನ ಬೌದ್ಧ ಮತಗಳೆರಡೂ ಯಜ್ಞಗಳನ್ನು ಖಂಡಿಸಿ ಪುರೋಹಿತ ಜನರ ಪ್ರಾಬಲ್ಯವನ್ನು ಮುರಿಯಲು ಯತ್ನಿಸಿದುದರಿಂದ ಜನರಿಗೊಪ್ಪಿದವು. ಬ್ರಾಹ್ಮಣರು ಜ್ಞಾನರಾಶಿಯನ್ನು ತಮ್ಮಲ್ಲಿಯೇ ಇಟ್ಟುಕೊಂಡು ಇತರರಿಗೆ ವ್ಯಾಸಂಗದ ಅಧಿಕಾರವನ್ನು ಕೂಡ ಕೊಡಲೊಪ್ಪದೆ ಇದ್ದರು. ಈ ಮತಗಳಲ್ಲಿ ಜ್ಞಾನವು ಎಲ್ಲರಿಗೂ ಸೇರಿದುದಾಯಿತು. ಆದರೆ ಜೈನರು ಸಂಸ್ಕೃತವನ್ನು ಅವಲಂಬಿಸಿದ್ದರು; ಬೌದ್ಧರು ಮಗಧದೇಶದ ಪ್ರಾಕೃತವಾದ ಪಾಳಿ ಭಾಷೆಯನ್ನೇ ಉಪಯೋಗಿಸಿ ಅಜ್ಞರಿಗೆ ಅನುಕೂಲರಾದರು; ಬೌದ್ಧಮತದಲ್ಲಿ ತಪಸ್ಸಿನ ಅವಶ್ಯಕತೆಯೂ ಇರಲಿಲ್ಲ. ಹೀನ ಕುಲದಲ್ಲಿ ಜನಿಸಿ ಸಾಹಸಿಗಳಾಗಿ ರಾಜ್ಯ ಕಟ್ಟಿದವರನ್ನು ಬ್ರಾಹ್ಮಣರು ಕ್ಷತ್ರಿಯರಲ್ಲವೆಂದು ನಿರಾಕರಿಸಿದರು; ಬೌದ್ಧಮತವಾದರೆ ಅವರಿಗೆ ಅನುಕೂಲವಾಗಿತ್ತು; ಅವರೂ ಬೌದ್ಧಮತದ ಪ್ರಚಾರಕ್ಕೆ ಅನುಕೂಲರಾದರು. ಇವೆಲ್ಲಕ್ಕಿಂತಲೂ ಬೌದ್ಧಮತಕ್ಕೆ ಬಲವನ್ನು ಕೊಟ್ಟದ್ದು ಬೌದ್ಧಸಂಘವೆಂಬುದು. ಆ ಸಂಘದ ಬಲದಿಂದ ಕಕ್ಷಿಗಳು ಪ್ರಬಲವಾಗಲು ಆಸ್ಪದವಿಲ್ಲವಾಗಿತ್ತು. ಬುದ್ಧದೇವನ ಪರಿನಿರ್ವಾಣವಾದ ನೂರು ವರ್ಷಗಳ ತರುವಾಯ ಬೌದ್ಧ ಭಿಕ್ಷುಗಳೆಲ್ಲರೂ **ವೈಶಾಲಿ**ಯಲ್ಲಿ **ಮಹಾಸಭೆ**ಯನ್ನು ನಡೆಸಿ ಮತದ ಪ್ರಚಾರವನ್ನೂ ಮತದ ಶುದ್ಧಿಯನ್ನೂ ನೆರವೇರಿಸುವ ಮಾರ್ಗಗಳನ್ನು ಆಲೋಚಿಸಿದರು. ಭಿಕ್ಷುಗಳ ನಿಷ್ಠೆಯು ಅವರ ಪ್ರಚಾರ ಕಾರ್ಯದಲ್ಲಿ ಪರಿಣಾಮಕಾರಕವಾಯಿತು. ಉದಾರ ಮನಸ್ಸಿನಿಂದಲೂ

ಸಹನೆಯಿಂದಲೂ ಅವರು ಜನಸಾಮಾನ್ಯರ ಆಚಾರಗಳನ್ನು ಹೆಚ್ಚಾಗಿ ಖಂಡಿಸದೆ ನೀತಿಯುತವಾದ ಜೀವನವೇ ಪ್ರಧಾನವೆಂದು ಸಾರಿದರು. **ಸ್ತೂಪ**ಗಳು ಎದ್ದಂತೆಯೇ ಬೋಧಿವೃಕ್ಷದ **ಪೂಜೆ**ಯೂ ಜನರಲ್ಲಿ ಸಾಮಾನ್ಯವಾಯಿತು; ಸ್ವಲ್ಪಕಾಲದಲ್ಲಿಯೇ ಬುದ್ಧನನ್ನು ದೇವಾಂಶ ಪುರುಷನೆಂದು ಜನರು ಭಾವಿಸಿಕೊಂಡು ಆತನ ಹೆಜ್ಜೆಯ ಗುರುತುಗಳನ್ನೂ ದೇವ ದೇವತೆಗಳನ್ನೂ ಪೂಜಿಸಲು ಪ್ರಾರಂಭಿಸಿದರು. ಮಗಧ, ಅಂಗ, ಕೋಸಲ, ವಿದೇಹ ಪ್ರಾಂತಗಳಲ್ಲಿ ಬೌದ್ಧಮತವು ಈ ರೀತಿಯಲ್ಲಿ ಬೇಗನೆ ವ್ಯಾಪ್ತಿಯನ್ನು



16. ಧಾಮೇಖಸ್ತೂಪ

ಪಡೆಯಿತು. ಸ್ತೂಪಗಳೂ ಚೈತ್ಯಗಳೂ **ವಿಹಾರ**ಗಳೂ ಎಲ್ಲೆಲ್ಲಿಯೂ ನಿರ್ಮಿತವಾದವು. ವಿಹಾರಗಳಲ್ಲಿ ಭಿಕ್ಷುಗಳು ವರ್ಷಾಕಾಲದ ವಿಶ್ರಾಂತಿಯನ್ನನುಭವಿಸಿದುದೇ ಅಲ್ಲದೆ ಅಲ್ಲಿಯೇ ಅಜ್ಞರಿಗೆ ಉಪದೇಶವನ್ನೂ, ಬಡಬಗ್ಗರಿಗೆ ಅನ್ನದಾನವನ್ನೂ, ರೋಗಿಜನರಿಗೆ ಭೈಷಜ್ಯವನ್ನೂ ನೀಡುತ್ತಿದ್ದರು. **ಚೈತ್ಯ**ಗಳೆಂಬ ನಿಲಯಗಳಲ್ಲಿ ಭಿಕ್ಷುಗಳು ತಮ್ಮ ವ್ಯಾಸಂಗವನ್ನೂ ಧ್ಯಾನ ಅಧ್ಯಯನಗಳನ್ನೂ ನಡೆಸುತ್ತ ಶಿಷ್ಯರನ್ನು ಶಿಕ್ಷಿಸುತ್ತ ಇರುತ್ತಿದ್ದರು.

ಬೌದ್ಧಮತದ ಪ್ರಚಾರವು ದಕ್ಷಿಣಾಪಥದಲ್ಲಿಯೂ ನಡೆಯಿತು.

ಆರ್ಯ ಸಂಸ್ಕೃತಿ ವಿಸ್ತಾರ

ಹಿಂದೆ ಆರ್ಯ ಋಷಿಜನರು ಅರಣ್ಯಗಳನ್ನು ಹೊಕ್ಕು ಆಶ್ರಮಗಳನ್ನು ಸ್ಥಾಪಿಸಿಕೊಂಡು ವೈದಿಕ ಮತವನ್ನು ಪ್ರಚಾರಮಾಡಿದ್ದಂತೆಯೇ ಬೌದ್ಧ ಭಿಕ್ಷುಗಳೂ ಸಾಹಸದಿಂದ ಪ್ರಯಾಣ ಮಾಡಿ ತಮ್ಮ ತತ್ವಗಳನ್ನು ಬೋಧಿಸತೊಡಗಿದರು. ದಕ್ಷಿಣಾಪಥದಲ್ಲಿ ಅನೇಕ ರಾಜ್ಯಗಳು ಸಿದ್ಧವಾಗಿದ್ದವು. ವ್ಯಾಪಾರದ ಅಭಿವೃದ್ಧಿಯಿಂದ ಅನೇಕ ಪಟ್ಟಣಗಳು ಹುಟ್ಟಿದ್ದವು. ನರ್ಮದಾ, ತಪತೀ, ಗೋದಾವರೀ, ಕೃಷ್ಣಾ ನದಿಗಳ ಪ್ರದೇಶಗಳು ಚಿರಪರಿಚಿತಗಳಾಗಿದ್ದು ಸಿಂಧು ಗಂಗೆ ಗಳಂತೆಯೇ ಪವಿತ್ರವೆನಿಸಿದ್ದವು. ವಿದರ್ಭ ರಾಷ್ಟ್ರದಿಂದ ಮೊದಲ್ಗೊಂಡು ದಕ್ಷಿಣದಲ್ಲಿ ಪಾಂಡ್ಯ ರಾಷ್ಟ್ರದವರೆಗೂ ದೇಶವು ರೂಢಿಯಾಗಿತ್ತು; ಅನಾರ್ಯಜನರು ಬೆಟ್ಟ ಗುಡ್ಡ ಪ್ರದೇಶಗಳಲ್ಲಿ ಮಾತ್ರ ಪ್ರತ್ಯೇಕ ರಾಗಿದ್ದರು. ಉಳಿದೆಡೆಗಳಲ್ಲಿ ಆರ್ಯಮತವೂ ಆರ್ಯ ಭಾಷೆಯೂ ಪ್ರಚಾರಗೊಂಡಿದ್ದವು. ಆದ್ದರಿಂದ ಬೌದ್ಧ ಭಿಕ್ಷುಗಳಿಗೆ ಹಿಂದಿನ ಋಷಿ ಗಳಿಗಿದ್ದಷ್ಟು ಕಷ್ಟವಿರಲಿಲ್ಲ. ಅವರ ಬೋಧೆಯೂ ತೀರ ಹೊಸದಾಗಿರಲಿಲ್ಲ.

ಬೌದ್ಧಮತದ ಸ್ಥಾನ

ವೈದಿಕಮತ ತತ್ವಗಳೂ ಶುದ್ಧವಾದ ಆಚಾರಗಳೂ ಪೂರ್ವದಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಂಬ ಸವರ್ಣರಲ್ಲಿಯೇ ಬಳಕೆಯಲ್ಲಿದ್ದವು. ಆರ್ಯಜನರು ದೇಶದಲ್ಲಿ ಹರಡಿ ಕೊಂಡ ಮೇಲೆ ಉದ್ಯೋಗ ವ್ಯಾಪಾರಗಳಲ್ಲಿ ನಿರತರಾದ ವೈಶ್ಯಜನರೂ, ಆರ್ಯರನ್ನು ಅನುಕರಿಸಿದ ಅನಾರ್ಯಜನರೂ ವೈದಿಕ ವಿದ್ಯೆಯಲ್ಲಿಯೂ ತತ್ವ ಶಾಸ್ತ್ರಗಳಲ್ಲಿಯೂ ಹೆಚ್ಚಾಗಿ ಪ್ರವೇಶಿಸ ಲಾರದೆ ಇದ್ದರು. ಕ್ಷತ್ರಿಯರೂ ಬ್ರಾಹ್ಮಣರೂ ಮಾತ್ರವೇ ವಿರಾಮ ಯುತರಾಗಿ ತತ್ವಾರ್ಥಿಗಳಾಗಿಯೂ ತತ್ವ ಶೋಧಕರಾಗಿಯೂ ಇದ್ದರು. ಬ್ರಾಹ್ಮಣ ಕ್ಷತ್ರಿಯರಲ್ಲಿ ಪರಸ್ಪರ ಸ್ಪರ್ಧೆಯು ಮಹಾಭಾರತಕ್ಕೆ ಹಿಂದೆಯೇ ತೋರಿಕೊಂಡಿತ್ತು. ಕ್ಷತ್ರಿಯರು ನಾಶರಾದಮೇಲೆ ಬ್ರಾಹ್ಮಣ ಜನರು ವೇದವಿದ್ಯೆಯನ್ನು ತಮ್ಮ ಅಧಿಕಾರದಲ್ಲಿಯೇ ಇಟ್ಟುಕೊಂಡು ದರ್ಪಿಷ್ಠರಾದರು; ಅವರಲ್ಲಿ ಪುರೋಹಿತರಾದವರು ಆ ಅಧಿಕಾರವನ್ನು

ದುರುಪಯೋಗಪಡಿಸಿಕೊಂಡರು. ಸಾಮಾನ್ಯ ಜನರು ಈ ರೀತಿಯಲ್ಲಿ ಮತವಿದ್ಯೆಯಲ್ಲಿ ಅಧಿಕಾರವನ್ನು ಕಳೆದುಕೊಂಡು ಒಂದು ಕಡೆ ನಾಸ್ತಿಕರನ್ನೂ, ಮತ್ತೊಂದು ಕಡೆ ಮಾಂತ್ರಿಕ ವಿದ್ಯೆಯನ್ನು ಅಭ್ಯಾಸಮಾಡಿ ರಹಸ್ಯ ಶಕ್ತಿಗಳನ್ನು ತೋರುತ್ತಿದ್ದವರನ್ನೂ, ದುರಾಶೆಯನ್ನೂ ಸ್ವಾರ್ಥವನ್ನೂ ಪ್ರಕಾಶಗೊಳಿಸುತ್ತಿದ್ದ ಪುರೋಹಿತರನ್ನೂ ಕಂಡು ಸ್ಥೈರ್ಯವನ್ನು ನೀಗಿ ನಿರಾಶರಾಗುವಂತಿತ್ತು. ಬೌದ್ಧಮತ ಪ್ರಚಾರವು ಸಾಮಾನ್ಯ ಜನರೆದುರಿಗಿದ್ದ ಈ ತೊಂದರೆ ಹಿಂಸೆಗಳನ್ನು ಹೋಗಲಾಡಿಸಿತು. ಹಿಂದೆ ಶ್ರೇಷ್ಠ ವರ್ಣದವರಿಗೆ ಮಾತ್ರ ಸಾಧ್ಯವೆನಿಸಿದ್ದ ಆರ್ಯ ಧರ್ಮ ತತ್ವಗಳನ್ನು ಸಾಮಾನ್ಯ ಜನರಲ್ಲಿ ಸುಲಭ ರೀತಿಯಲ್ಲಿ ಪ್ರಚಾರವಾದುದೇ ಬೌದ್ಧಮತದ ಉದ್ದೇಶವೂ ಕರ್ತವ್ಯವೂ ಆಯಿತೆಂದು ಒಟ್ಟಿನಲ್ಲಿ ಭಾವಿಸಬಹುದು. ಸನಾತನ ಆರ್ಯಧರ್ಮದ ನೀತಿ ಭಾಗವನ್ನು ವಿಸ್ತಾರಗೊಳಿಸಿ ಸಾಮಾನ್ಯ ಜನರಿಗೆರೆಯುವ ಕರ್ತವ್ಯವನ್ನು ಬೌದ್ಧಮತ ಪ್ರಚಾರವು ನೆರವೇರಿಸಿತು.

---

# ಮೌರ್ಯ ಸಾಮ್ರಾಜ್ಯ

(ಕ್ರಿ. ಪೂ. ೩೨೨ ರಿಂದ ಕ್ರಿ. ಪೂ. ೨೦೦ರ ವರೆಗೆ)

1. ಮೌರ್ಯವಂಶ ಸ್ಥಾಪನೆ.
2. ಮೌರ್ಯ ರಾಜ್ಯಭಾರ.
3. ಬಿಂದುಸಾರ ಚಕ್ರವರ್ತಿ.
4. ಧರ್ಮಾಶೋಕ ಚಕ್ರವರ್ತಿ.
5. ಸಾಮ್ರಾಜ್ಯಕ್ಷಯ.

## ಪ್ರಸಿದ್ಧ ಪುರುಷರು

| | | |
|---|---|---|
| ಚಂದ್ರಗುಪ್ತ. | ಚಾಣಕ್ಯ. | ಸೆಲ್ಯೂಕಸ್. |
| ಬಿಂದುಸಾರ. | | ಆಂಟಿಯಖಸ್. |
| ಅಶೋಕ. | ಉಪಗುಪ್ತ. | ಆರ್ಸಕೀಸ್. } ಸ್ವಾತಂತ್ರ್ಯ ಸ್ಥಾಪಕರು. |
| | ಮೊಗಲ್ಲನ. | ಡಯೊಡೋಟಸ್. } ಸ್ವಾತಂತ್ರ್ಯ ಸ್ಥಾಪಕರು. |
| | | ಷೈಹಂಗ್ಟಿ—ಮಹಾಕುಡ್ಯ. |

## * ಮೌರ್ಯವಂಶ ಸ್ಥಾಪನೆ

ಸಿಕಂದರನ ಬೆನ್ನುಕಂಡ ಕೂಡಲೆ ಪಂಚನದ ಸಿಂಧು ಪ್ರಾಂತಗಳಲ್ಲಿ ರಾಷ್ಟ್ರಯುಕ್ತರಾಗಿದ್ದ ಕ್ಷತ್ರಿಯ ಕುಲಸ್ಥರು ಬ್ರಾಹ್ಮಣ ಜನರಿಂದ ಉದ್ದೀಪ್ತರಾಗಿ ಯುನಾನೀ (ಯವನ-ಗ್ರೀಕ) ದಳಗಳನ್ನು ಓಡಿಸಿ ಅವರ ಅಧಿಕಾರಿಗಳನ್ನು ಹಿಡಿದು ಧ್ವಂಸಮಾಡಿಬಿಟ್ಟರು. ಶೂರನಾದ **ಮೌರ್ಯ ಚಂದ್ರಗುಪ್ತ**ನು ಮಗಧ ರಾಜವಂಶದವನೂ ನಂದರ ವಿರೋಧಿಯೂ ಆಗಿದ್ದು ಸಿಕಂದರನಿಂದ ನಂದರ ನಾಶವನ್ನು ಮಾಡಿಸಲು ಆದಕ್ಕೆ ಮೊದಲೇ ಪ್ರಯತ್ನಪಟ್ಟಿದ್ದನು. ಪಂಚನದ ಪ್ರಾಂತದಲ್ಲಿ ಅಲೆದಾಡುತ್ತಿದ್ದಾಗಲೇ ಚಂದ್ರಗುಪ್ತನು **ವಿಷ್ಣುಶರ್ಮ**ನೆಂಬ ಬ್ರಾಹ್ಮಣ ವಿದ್ವಾಂಸನ ಪರಿಚಯವನ್ನೂ ಗುರುತ್ವವನ್ನೂ ಪಡೆದನು; ಆ ವಿಷ್ಣುಶರ್ಮನೇ **ಚಾಣಕ್ಯ**

---

* ಮೌರ್ಯನೆಂಬ ಹೆಸರು ಕೆಲವರು ಚಂದ್ರಗುಪ್ತನ ತಾಯಿ ಮುರಾ ಎಂಬಾಕೆಯ ಹೆಸರಿನಿಂದ ಹುಟ್ಟಿದುದೆಂತಲೂ, ಕೆಲವರು ಚಂದ್ರಗುಪ್ತನ ತಂದೆ ಮೋರಾಧ್ಯಕ್ಷ (ಮೋರಾ-ಮಯೂರ) ನಾಗಿದ್ದುದರಿಂದ ಪ್ರಾಪ್ತವಾಯಿತೆಂದೂ ಅಭಿಪ್ರಾಯಪಡುವರು.

ನೆಂದೂ **ಕೌಟಿಲ್ಯ**ನೆಂದೂ ಪ್ರಸಿದ್ಧನಾದಾತನು. ಇಬ್ಬರೂ ಸೇರಿ ಕ್ಷತ್ರಿಯ ಕುಲಗಳ ಬಲವನ್ನು ಸ್ವಾಧೀನಮಾಡಿಕೊಂಡು, ಸಿಕಂದರನು ಸತ್ತ ಸ್ವಲ್ಪ ಕಾಲದಲ್ಲಿಯೇ ಹಲಕೆಲವು ರಾಜರನ್ನು ಒಟ್ಟುಗೂಡಿಸಿಕೊಂಡು ಮಗಧ ದೇಶದ ಮೇಲೆ ದಂಡೆತ್ತಿದರು. ನಂದವಂಶದವರು ನಾಶರಾದರು. **ಪಾಟಲಿಪುರ**ವನ್ನು ಜಯಶಾಲಿಯಾಗಿ ಪ್ರವೇಶಿಸಿ ಚಂದ್ರಗುಪ್ತನು ಶೌರಸೇನ, ಪಾಂಚಾಲ, ಅವಂತೀ, ಸೌರಾಷ್ಟ್ರ, ವತ್ಸ, ಕೋಸಲ ರಾಷ್ಟ್ರಗಳನ್ನು ಆಳ್ವಿಕೆಯಲ್ಲಿ ಸೇರಿಸಿಕೊಂಡು ಪ್ರಬಲರಾದ ಲಿಚ್ಛವಿ ಜನರಿಂದಲೂ ಗೌರವವನ್ನು ಪಡೆದನು. ಪರಾಕ್ರಮಿಯೂ ಕಾರ್ಯದಕ್ಷನೂ ಆಗಿದ್ದುದರಿಂದ ಇಷ್ಟು ವಿಶಾಲವಾದ ಸಾಮ್ರಾಜ್ಯವನ್ನು ಚಂದ್ರಗುಪ್ತನು ಕೆಲವು ವರ್ಷಗಳಲ್ಲಿಯೇ ಕಟ್ಟಿ ರೂಢಿಸಿಕೊಂಡು ಮೌರ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದನು.

ಚಂದ್ರಗುಪ್ತನು ಪಾಟಲಿಪುತ್ರದಲ್ಲಿಯೇ ಹುಟ್ಟಿ ಬೆಳೆದು ನಂದರ ಹಿಂಸೆಗೆ ಗುರಿಯಾಗಿ ರಾಜ್ಯಭ್ರಷ್ಟನಾಗಿದ್ದನು. ನಂದರಿಗೆ ಪ್ರತಿಕ್ರಿಯೆಯನ್ನು ಮಾಡುವ ಉದ್ದೇಶದಿಂದಲೇ ಆತನು ಪಂಚನದ ಪ್ರಾಂತದಲ್ಲಿ ಅಲೆಯುತ್ತಿದ್ದುದು. ಕೌಟಿಲ್ಯನ ಸಹಾಯವು ದೊರೆತಮೇಲೆ ಚಂದ್ರಗುಪ್ತನ ಪ್ರಯತ್ನಗಳೆಲ್ಲವೂ ಒಂದೊಂದಾಗಿ ಸಫಲವಾದವು. ಪಾಟಲಿಪುರವು ವಿಸ್ತಾರ ಸಾಮ್ರಾಜ್ಯಕ್ಕೆ ರಾಜಧಾನಿಯಾಯಿತು. ಪ್ರಸಿದ್ಧ ಮೌರ್ಯ ಚಕ್ರಾಧಿಪತ್ಯವು ಈ ರೀತಿಯಲ್ಲಿ ಕ್ರಿ. ಪೂ. 322ರಲ್ಲಿ ಸ್ಥಾಪನೆಯಾಯಿತು.

**ಸೆಲ್ಯೂಕಸ್**

ಅತ್ತ ಗ್ರೀಸ್, ಈಜಿಪ್ಟ್ ಮತ್ತು ಇರಾನೀ ಸಾಮ್ರಾಜ್ಯಗಳಿಗೆ ಒಡೆಯನಾಗಿದ್ದ ಸಿಕಂದರನ ಮರಣಾನಂತರ ಆತನ ಸೇನಾಪತಿಗಳಲ್ಲಿ ಪ್ರಬಲರಾದವರು ಆ ಭೂಭಾಗಗಳನ್ನು ತಮ್ಮಲ್ಲಿಯೇ ಹಂಚಿಕೊಂಡರು. ಭರತವರ್ಷದ ಒತ್ತಿನಲ್ಲಿಯೇ ಇದ್ದ ಭಾಗಗಳಿಗೆ ಸೆಲ್ಯೂಕಸ್ (Seleucas) ಎಂಬ ದಳಪತಿಯು ರಾಜನಾಗಿ ನಿಕೇಟರ್ (Nicator) ಎಂಬ ಬಿರುದನ್ನು ಧರಿಸಿದನು. ಈತನೂ ಮಹಾಶೂರನೇ ಆಗಿದ್ದನು. ವೇಪಸೀ ನದಿಯವರೆಗೂ ಸಿಕಂದರನು ಜಯಶಾಲಿಯಾಗಿದ್ದುದರಿಂದ ಅಲ್ಲಿಯವರೆಗೂ ತನ್ನ ರಾಜ್ಯವಿರುವಂತೆ ನೆರವೇರಿಸುವ ಯೋಚನೆಯನ್ನೇ ಅಲ್ಲದೆ ಸಿಕಂದರನು

ನಿರಾಶೆಯಿಂದ ಬಿಟ್ಟುಬಿಟ್ಟಿದ್ದ ಮೂಡಣ ದೇಶಗಳನ್ನೂ ತಾನು ಗೆದ್ದು ಸಿಕಂದರನಿಗಿಂತಲೂ ತಾನೇ ಗಟ್ಟಿಗನೆನಿಸಿಕೊಳ್ಳುವ ಆಸೆಯನ್ನೂ ಸೆಲ್ಯೂಕಸನು ಬೆಳೆಸಿದನು. ರಾಜನಾದ ಕೂಡಲೆ ತನ್ನ ಸೈನ್ಯವನ್ನು ನಡೆಸಿಕೊಂಡು ವಾಯವ್ಯ ಸರಹದ್ದಿನ ಪ್ರಾಂತದಲ್ಲಿ ಕಾಣಿಸಿಕೊಂಡನು. ಆದರೆ ಪ್ರತ್ಯೇಕ ಪ್ರತ್ಯೇಕವಾಗಿ ಎದುರುನಿಂತ ಕುಲಗಳಿಗೂ ರಾಜರಿಗೂ ಬದಲಾಗಿ ಸೆಲ್ಯೂಕಸನನ್ನು ಪ್ರತಿಭಟಿಸಿದುದು ಚಕ್ರವರ್ತಿಯ ಬಲ. ಚಂದ್ರಗುಪ್ತನು ತನ್ನ ಸೈನ್ಯವನ್ನು ವೇಗವಾಗಿ ನಡೆಸಿಕೊಂಡು ಸರಹದ್ದಿನಲ್ಲಿಯೇ ಸೆಲ್ಯೂಕಸನನ್ನು ತಡೆದು ಆತನನ್ನು ಚೆನ್ನಾಗಿ ಸೋಲಿಸಿಬಿಟ್ಟನು. ಹಿಂದೆ ಇದೇ ಜನರ ಸೈನ್ಯವನ್ನು ಎದುರಿಸಿದ್ದ ಪೌರವರಾಜನೂ ಮಾಳವಾದಿ ಕುಲಗಳೂ ಪಡೆಯದೆ ಹೋದ ಜಯವನ್ನು ಚಂದ್ರಗುಪ್ತನು ಪಡೆದನು.

ಪರಾಭವ

ಸೆಲ್ಯೂಕಸನಿಗೆ ಮೇರೆ ದಾಟುವುದರಲ್ಲಿಯೇ ಪೂರಾ ಪರಾಭವವಾಯಿತು; ಸೋತವನು ಹಾಗೆಯೇ ಹಿಂತಿರುಗಿಬಿಟ್ಟರೆ ತನ್ನ ರಾಜ್ಯಕ್ಕೇ ಅಪಾಯ ಬರಬಹುದೆಂದೂ, ಚಂದ್ರಗುಪ್ತನಂತಹ ಶೂರನ ಸ್ನೇಹವನ್ನು ಸಂಪಾದಿಸುವುದು ಒಳ್ಳೆಯದೆಂದೂ ಯೋಚಿಸಿ ರಾಯಭಾರ ನಡೆಸಿದನು. ವಾಯವ್ಯದಲ್ಲಿ ಈಗ ನಾವು ಅಫಘಾನ ಬಲೂಚಿಸ್ಥಾನಗಳೆಂದು ಕರೆಯುವ ವಿಶಾಲ ಕ್ಷೇತ್ರಗಳನ್ನು ಬಿಟ್ಟುಕೊಡುವುದಾಗಿಯೂ, ತನ್ನ ಮಗಳನ್ನು ಚಂದ್ರಗುಪ್ತನಿಗೆ ವಿವಾಹ ಮಾಡಿಕೊಡುವುದಾಗಿಯೂ ಒಪ್ಪಿಕೊಂಡು ಆತನ ಸ್ನೇಹವನ್ನೂ ಬಾಂಧವ್ಯವನ್ನೂ ಕಟ್ಟಲು ಆಶಿಸಿದನು. ಚಂದ್ರಗುಪ್ತನೂ ಸೋತ ಶತ್ರುವಿನಲ್ಲಿ ಔದಾರ್ಯ ಗಾಂಭೀರ್ಯಗಳನ್ನು ತೋರಿದನು. ಈಗ **ಕಾಬೂಲ್, ಹಿರಾತ್, ಕಾಂದಹಾರ್** ಎನಿಸಿರುವ ಮೂರು ಪ್ರಾಂತಗಳನ್ನು (Ariana, Arachosia, Paropanisadai) ತನ್ನ ಸಾಮ್ರಾಜ್ಯದಲ್ಲಿ ಸೇರಿಸಿಕೊಂಡು ಸೆಲ್ಯೂಕಸನ ಮಗಳನ್ನು ಪರಿಗ್ರಹಿಸಿ, ಮಾವನಿಗೆ ಮರ್ಯಾದೆ ಮಾಡಲು ಧನಕನಕ ವಸ್ತ್ರ ವಾಹನಗಳನ್ನು ಕೊಟ್ಟನು. ಈ ಸಂದರ್ಭದಲ್ಲಿ ಆತನು ಕೊಟ್ಟ 500 ಆನೆಗಳನ್ನು ಕಂಡು ಸೆಲ್ಯೂಕಸನು ಸಂತೋಷಪಟ್ಟನು. ತರುವಾಯ ಸೆಲ್ಯೂಕಸನು ಪರಸ್ಪರ ಸ್ನೇಹಬಾಂಧವ್ಯಗಳು ಸ್ಥಿರವಾಗಿ ನಡೆದುಬರಲು ತನ್ನ ಕಡೆಯ ರಾಯ

ರಾಯಭಾರ

ಭಾರಿಯೊಬ್ಬನು ಸದಾಕಾಲವೂ ಪಾಟಲಿಪುರದಲ್ಲಿರುವಂತೆ ವ್ಯವಸ್ಥೆಮಾಡಿದನು. ಮೊದಲುಬಂದ **ಮೆಗಾಸ್ಥೆನೀಸೆಂಬಾತನು** (Megasthenes) ಮೂರು ವರ್ಷಕಾಲ ದೇಶದಲ್ಲಿದ್ದು ಒಂದಾನೊಂದು ಪುಸ್ತಕವನ್ನು ಬರೆದು ಹೆಸರುವಾಸಿಯಾದನು. ಆತನ ತರುವಾಯ ಬೇರೊಬ್ಬಾತನು ರಾಯಭಾರಿಯಾದನು. ಸೆಲ್ಯೂಕಸನ ವಂಶಸ್ಥರೂ ಚಂದ್ರಗುಪ್ತನ ವಂಶಸ್ಥರೂ ಈ ಸ್ನೇಹವನ್ನು ಕಾಪಾಡಿಕೊಂಡೇ ಇದ್ದರು. ವರ್ತಕತನದ ಕ್ಷೇಮಾಭಿವೃದ್ಧಿಗಳ ದೃಷ್ಟಿಯಿಂದಲೂ ಈ ಸ್ನೇಹವು ಅವಶ್ಯಕವಾಗಿತ್ತು.

ಈ ರೀತಿಯಲ್ಲಿ ಸೆಲ್ಯೂಕಸನಿಗೆ ಅವಮಾನವೇ ಸಿದ್ಧವಾಯಿತು. ಮೊದಲು 'ಪಿಪೀಲಿಕಾ ಸೈನ್ಯ'ವನ್ನೂ, 'ಊರ್ಣರುಹ ವೃಕ್ಷ'ಗಳನ್ನೂ ನಂಬಿಕೊಂಡು ಭರತಖಂಡದ ಐಶ್ವರ್ಯವನ್ನು ಕೇಳಿ ಆಶ್ಚರ್ಯಪಟ್ಟಿದ್ದ ಗ್ರೀಕರಿಗೆ ಆ ಐಶ್ವರ್ಯವು ಪ್ರತ್ಯಕ್ಷವಾಯಿತು. ಈ ಸಂಪದ್ಯುಕ್ತ ದೇಶದ ಸಂಬಂಧವು ತಪ್ಪಿಹೋಗದಂತೆ ಏರ್ಪಡಿಸಿಕೊಳ್ಳಲು ಅವರು ಉತ್ಸುಕರಾದರು. ಅನೇಕ ಗ್ರೀಕರು ಭರತವರ್ಷದ ಸಮೀಪದಲ್ಲಿ ನೆಲೆಸುವವರಾದರು. ಚಂದ್ರಗುಪ್ತನ ಅಂತಃಪುರಕ್ಕೆ ಹೊರಟ ಯವನ ರಾಜಪುತ್ರಿಯ ಹಿಂದೆ ಅನುಚರರಂತೆ ಕೆಲವರು ಬಂದರು. ಇರಾನೀ ಸಾಮ್ರಾಜ್ಯದಲ್ಲಿ ಬೇರೆ ಬೇರೆ ಕುಲಗಳಾಗಿದ್ದು ಸಿಕಂದರನ ತರುವಾಯ ಗ್ರೀಕರ ನಡೆನುಡಿಯನ್ನು ಅನುಸರಿಸಿದ್ದ ಇತರರೂ ಗ್ರೀಕರ ಹಿಂದೆಯೇ ಉದ್ಯೋಗಗಳನ್ನೂ ವ್ಯಾಪಾರವನ್ನೂ ಅರಸುತ್ತ ಬಂದರು.

ಇಂಡಿಕಾ '

ಮೆಗಾಸ್ಥೆನೀಸನಿಗೆ ಈ ದೇಶವನ್ನು ಕಂಡಾಗ ಆಶ್ಚರ್ಯ ತೋರಿತು. ತನ್ನ ದೇಶಸ್ಥರಿಗೆ ಈ ದೇಶದ ಪರಿಚಯವುಂಟಾಗಲೆಂದು ತಾನು ಕಂಡು ಕೇಳಿದ ವಿವರವನ್ನು ಒಂದು ಪುಸ್ತಕದಲ್ಲಿ ಬರೆದನು. ಆ ಪುಸ್ತಕವೆಲ್ಲಿಯೋ ಮೂಲೆಯಲ್ಲಿ ಸೇರಿದ್ದು ಅರ್ಧ ನಷ್ಟವಾಗಿ ಕೆಲಕಾಲದಮೇಲೆ ಗ್ರೀಕಪಂಡಿತನೊಬ್ಬನಿಗೆ ದೊರಕಿತು. ಆ ಪಂಡಿತನು ಆ ಪುಸ್ತಕಾರ್ಧದ ಸಾರವನ್ನು ಗ್ರಂಥರೂಪದಲ್ಲಿ ಬರೆದಿಟ್ಟನು. ಅದೇ ಮೆಗಾಸ್ಥೆನೀಸನ 'ಇಂಡಿಕಾ' ಎಂಬುದು. ಇದಲ್ಲದೆ ಚಂದ್ರಗುಪ್ತನ ಗುರುವೂ ಮಂತ್ರಿಯೂ ಆಗಿದ್ದ ಕೌಟಿಲ್ಯನು ರಾಜನೀತಿಜ್ಞ

ರಲ್ಲಿ ಪ್ರಸಿದ್ಧನಾಗಿ ರಾಜ್ಯನೀತಿ ಶಾಸ್ತ್ರವನ್ನು ಅರ್ಥಶಾಸ್ತ್ರವೆಂಬ ಹೆಸರಿನಿಂದ ಬರೆದನು. ಈ ಎರಡು ಪುಸ್ತಕಗಳೂ ಚಂದ್ರಗುಪ್ತನ ರಾಜ್ಯಭಾರದ ವಿವರವನ್ನು ಒದಗಿಸುತ್ತವೆ. ಕೌಟಿಲೀಯ ಅರ್ಥಶಾಸ್ತ್ರವು ಆಗಿನ ರಾಜ್ಯ ನೀತಿಯನ್ನು ಪ್ರತಿಬಿಂಬಿಸುವ ಪೂರ್ಣ ಗ್ರಂಥ; ಅವುಗಳಲ್ಲಿ ಕೆಲವನ್ನು ದೃಢಪಡಿಸುವುದಲ್ಲದೆ ಚಂದ್ರಗುಪ್ತ ಚಕ್ರವರ್ತಿಯ ಆಸ್ಥಾನವನ್ನೂ ಪಾಟಲಿಪುರವನ್ನೂ ಮೆಗಾಸ್ಥೆನೀಸನ ಹೆಸರನ್ನು ತಾಳಿರುವ ಗ್ರಂಥವು ವಿವರಿಸುತ್ತದೆ.

ಅರ್ಥಶಾಸ್ತ್ರ

ಸೆಲ್ಯೂಕಸನನ್ನು ಸೋಲಿಸಿದಮೇಲೆ ಚಂದ್ರಗುಪ್ತನು ಹಿಮಾಚಲ ವಿಂಧ್ಯಾಚಲಗಳ ಮಧ್ಯಪ್ರದೇಶದಲ್ಲಿ ಉಳಿದಿದ್ದವರನ್ನು ಸುಲಭವಾಗಿ ವಶಪಡಿಸಿಕೊಂಡು ವಿಶಾಲವಾದ ಚಕ್ರಾಧಿಪತ್ಯಕ್ಕೆ ಒಡೆಯನಾದನು. ಮಹಾಭಾರತದ ಕಾಲದಿಂದ ಆರ್ಯಾವರ್ತದಲ್ಲಿ ಸಾರ್ವಭೌಮ ಪದವಿಯನ್ನು ಈ ರೀತಿಯಲ್ಲಿ ಸಾಧಿಸಿದವರು ಬೇರೆ ಯಾರೂ ಇಲ್ಲ. ಬೌದ್ಧ ಕಾಲದ ಇತಿಹಾಸದಲ್ಲಿ ಚಂದ್ರಗುಪ್ತನೇ ಮೊದಲನೆಯ ಚಕ್ರಾಧೀಶ್ವರನು; ಆರ್ಯಾವರ್ತವೆಲ್ಲಕ್ಕೂ ಅಧಿಪತಿಗಳಾಗಿ ಅಶ್ವಮೇಧಾದಿ ಮಹಾಯಜ್ಞಗಳನ್ನು ಸಾಂಗಗೊಳಿಸಿದವರು ಬಹಳ ಹಿಂದಿನ ಕಾಲದಲ್ಲಿದ್ದವರು. ಹಿಮಾಲಯ ವಿಂಧ್ಯಪರ್ವತಗಳ ಮಧ್ಯೆ ಈಗಿನ ಘಾರ್ಸೀಸ್ಥಾನದ ಪೂರ್ವದಿಕ್ಕಿನ ಎಲ್ಲೆಯಿಂದ ಬರ್ಮಾದೇಶದ ಪಶ್ಚಿಮದ ಎಲ್ಲೆಯವರೆಗೆ ವಿಶಾಲವಾಗಿದ್ದ ಆ ಸಾಮ್ರಾಜ್ಯದಲ್ಲಿ ಅನೇಕ ರಾಜರು ಯುದ್ಧದಲ್ಲಿ ಸೋತು ಉಪರಾಜರೂ ಸಾಮಂತ ರಾಜರೂ ಆಗಿದ್ದರು; ಕೆಲವರು ಯುದ್ಧಮಾಡದೆಯೇ ಸಾಮಂತ ಪದವಿಯನ್ನೊಪ್ಪಿಕೊಂಡು ಪೊಗದಿಯನ್ನು ಸಲ್ಲಿಸುತ್ತಿದ್ದರು. ಪಾಟಲಿಪುರವನ್ನೇ ರಾಜಧಾನಿಯಾಗಿ ಮಾಡಿಕೊಂಡು ಚಂದ್ರಗುಪ್ತ ಸಾರ್ವಭೌಮನು 24 ವರುಷ ಕಾಲ ರಾಜ್ಯಭಾರಮಾಡಿದನು. ಯೂರೋಪು ಖಂಡದಲ್ಲಿ ಹತ್ತೊಂಬತ್ತನೆ ಶತಮಾನದ ಆದಿಭಾಗದಲ್ಲಿ ನೆಪೋಲಿಯನ್ನೆಂಬ ಮಹಾಶೂರನ ಹೆಸರಿನಂತೆಯೇ ಚಂದ್ರಗುಪ್ತನ ಹೆಸರು ಶೌರ್ಯ ಸಾಹಸಗಳ ದೆಸೆಯಿಂದ ಇತರ ರಾಜರಿಗೆ ಸಿಂಹಸ್ವಪ್ನವಾಗಿತ್ತು. ಆದರೆ ಚಂದ್ರಗುಪ್ತನು ಕಡೆಯವರೆಗೂ ಅಜೇಯನಾಗಿಯೇ ಇದ್ದನು; ನೆಪೋಲಿಯನ್ನಿನಂತೆ

ಸಾರ್ವಭೌಮ ಪದವಿ

ಕಡೆಗಾಲದಲ್ಲಿ ಸರ್ವನಾಶವನ್ನು ಪಡೆಯಲಿಲ್ಲ. ವಿಶಾಲ ಸಾಮ್ರಾಜ್ಯವನ್ನು ಹೊಸದಾಗಿ ಕಟ್ಟಿ ರೂಢಿಸಿಕೊಳ್ಳುವ ಕೆಲಸದಲ್ಲಿ ಚಂದ್ರಗುಪ್ತನು ತಾನೇ ಯುದ್ಧಗಳನ್ನು ನಡೆಸಿದ್ದಲ್ಲದೆ ಪದೇ ಪದೇ ಪ್ರಾಂತಗಳಲ್ಲಿ ಸಂಚರಿಸುತ್ತ ಸದಾ ಕಾರ್ಯಮಗ್ನನಾಗಿಯೇ ಇದ್ದನು.

ರಾಜಧಾನಿ

ರಾಜಧಾನಿಯಾದ ಪಾಟಲಿಪುರವು ಒಂಬತ್ತು ಮೈಲಿ ಉದ್ದವೂ ಎರಡು ಮೈಲಿಯಗಲವೂ ಉಳ್ಳ ವಿಶಾಲ ನಗರವಾಗಿ 570 ಗೋಪುರಗಳನ್ನೂ, 64 ಬಾಗಿಲುಗಳನ್ನೂ ಉಳ್ಳುದಾಗಿತ್ತು. ನಗರದ ಮಧ್ಯೆ ಸುಂದರವಾದ ಉಪವನಗಳಿಂದ ಆವೃತವಾದ ಅರಮನೆಯ ಭಾಗವಿತ್ತು. ಅವುಗಳನ್ನು ಕಂಡು ಮೆಗಾಸ್ಥನೀಸನು ಇರಾನೀ ಸಮ್ರಾಟರ ಆಸ್ಥಾನ ವೈಭವವನ್ನು ಕಿರಿದೆನಿಸಿದ ವೈಭವವು ಚಂದ್ರಗುಪ್ತನ ಆಸ್ಥಾನದಲ್ಲಿ ಶೋಭಿಸುತ್ತಿತ್ತೆಂದು ಬರೆದುಕೊಂಡಿದ್ದಾನೆ. ಅರಮನೆಯ ಸ್ತಂಭಗಳಿಗೆ ಬಂಗಾರದ ಬಳ್ಳಿಗಳ ಮತ್ತು ಬೆಳ್ಳಿಯ ಹಕ್ಕಿಗಳ ಅಲಂಕಾರವಿತ್ತು; ಆರು ಅಡಿಗಳಷ್ಟು ಅಗಲ ವಿದ್ದ ಚಿನ್ನದ ಪಾತ್ರೆಗಳು ಉಪಯೋಗದಲ್ಲಿದ್ದವು. ಚಕ್ರವರ್ತಿಯು

ವೈಭವ

ಹೊರಗೆ ಕಾಣಿಸಿಕೊಂಡಾಗ ಚಿನ್ನದ ಪಲ್ಲಕ್ಕಿಯಲ್ಲಿಯೋ, ಆನೆಯಮೇಲೆ ದಿವ್ಯವಾದ ಅಂಬಾರಿಯಲ್ಲಿಯೋ ಕುಳಿತು ಹೊರಡುತ್ತಿದ್ದನು. ಚಂದ್ರಗುಪ್ತನಿಗೆ ಬೇಟೆಯಲ್ಲಿ ಬಹಳ ಆಸಕ್ತಿಯಿತ್ತು. ಆಗಾಗ್ಗೆ ರಥಸ್ಪರ್ಧೆಗಳನ್ನೂ ಮಲ್ಲಯುದ್ಧಗಳನ್ನೂ ಕಂಡು ವಿನೋದಗೊಳ್ಳುತ್ತಿದ್ದನು. ಆತನಿಗೆ ಮುನ್ನೂರು ಜನ ಯುವನ ಸ್ತ್ರೀಯರೇ ಅಂಗರಕ್ಷಕರಾಗಿರುತ್ತಿದ್ದರು. ಹಬ್ಬಗಳಲ್ಲಿಯೂ ಅಭಿಷೇಕೋತ್ಸವಗಳಲ್ಲಿಯೂ ನಡೆಯುತ್ತಿದ್ದ ಚಂದ್ರಗುಪ್ತನ ಅಭ್ಯಂಜನವು ಮೆಗಾಸ್ಥನೀಸನಿಗೆ ಅಚ್ಚರಿಯನ್ನುಂಟುಮಾಡಿತು. ಪ್ರತಿದಿನವೂ ಚಂದ್ರಗುಪ್ತನು ಓಲಗವನ್ನು ನಡೆಸುತ್ತ, ಸರ್ವ ಕಾಲಗಳಲ್ಲಿಯೂ ಪ್ರಜೆಗಳ ಪ್ರಾರ್ಥನೆಗಳನ್ನು ಕೇಳುತ್ತ, ಗೂಢಚಾರರ ವರದಿಗಳಿಗೆ ಕಿವಿಗೊಡುತ್ತ ಇರುತ್ತಿದ್ದನು. ಗೂಢಚಾರರು ಬಹು ಸಂಖ್ಯಾಕರಾಗಿ ಎಲ್ಲೆಡೆಗಳಲ್ಲಿಯೂ ಛದ್ಮವೇಷದಿಂದ ಸಂಚರಿಸುತ್ತ ಚಕ್ರವರ್ತಿಗೆ ವರ್ತಮಾನವನ್ನು ತಿಳಿಸುತ್ತಲಿದ್ದರು. ಚಂದ್ರಗುಪ್ತನಿಗೆ ರಹಸ್ಯವಾಗಿ

ವಿರೋಧವನ್ನೆಣಿಸುತ್ತಿದ್ದ ವೈರಿಗಳಿದ್ದರು; ಆದ್ದರಿಂದ ಆತನು ಮಲಗಿದ ಕೊಟಡಿಯಲ್ಲಿ ಪುನಃ ಮಲಗುತ್ತಿರಲಿಲ್ಲ, ವಿಷಭಯದಿಂದ ಅರಮನೆಯೊಳಕ್ಕೆ ಯಾವ ಪದಾರ್ಥವನ್ನೂ ಪರೀಕ್ಷೆಯಿಲ್ಲದೆ ಬಿಡುತ್ತಿರಲಿಲ್ಲ.

**ಮುದ್ರಾರಾಕ್ಷಸ**

ಚಂದ್ರಗುಪ್ತನ ತರುವಾಯ ಸಾವಿರ ವರ್ಷಗಳು ಕಳೆದಿದ್ದಾಗ ಚಂದ್ರಗುಪ್ತ ಚಾಣಕ್ಯರ ಸಂಬಂಧವಾದ ಕಥೆಯನ್ನು ನಾಟಕಕ್ಕೆ ವಸ್ತುವನ್ನಾಗಿ ಮಾಡಿಕೊಂಡು ವಿಶಾಖದತ್ತನೆಂಬ ಕವಿಯು ಮುದ್ರಾರಾಕ್ಷಸವೆಂಬ ನಾಟಕವನ್ನು ಬರೆದನು. ಆ ಕಥೆಯು ವರ್ಣಿತವಾದಂತೆಯೇ ಸಂಗತಿಗಳು ನಡೆದುವೆಂದು ಹೇಳಲು ಯಾವ ಆಧಾರವೂ ಇಲ್ಲ. ಚಾಣಕ್ಯನು ಚಂದ್ರಗುಪ್ತನಿಗೆ ಸಹಾಯಕನಾಗಿ ಕೆಲಕಾಲವಾದರೂ ಮಂತ್ರಿಯಾಗಿದ್ದನೆಂಬ ಅಂಶವು ಮಾತ್ರ ನಿರ್ವಿವಾದವಾದುದು.

**ಚಂದ್ರಗುಪ್ತನ ಮತ**

ಬ್ರಾಹ್ಮಣ ಗುರುವನ್ನೂ ಮಂತ್ರಿಯನ್ನೂ ಪಡೆದಿದ್ದ ಚಂದ್ರಗುಪ್ತನು ಮೊದಮೊದಲು ಬ್ರಾಹ್ಮಣರು ಬೋಧಿಸಿದ ಮತವನ್ನೇ ಅವಲಂಬಿಸಿದ್ದಿರಬೇಕು. ಚಾಣಕ್ಯನು ತಪಸ್ಸಿಗೆಂದು ಹೊರಟುಹೋದ ಮೇಲೆಯೋ ಮೃತನಾದಮೇಲೆಯೋ ಚಂದ್ರಗುಪ್ತನು ಭದ್ರಬಾಹುವಿನ ಉಪದೇಶವನ್ನು ಬಯಸಿ ಜೈನಮತವನ್ನವಲಂಬಿಸಿರಬಹುದು. ಆಳ್ವಿಕೆಯ ಮೊದಲಲ್ಲಿ ಆತನು ಜೈನನಾಗಿದ್ದನೆಂಬುದು ಅಸಂಭವ. ಭದ್ರಬಾಹುವಿನ ಉಪದೇಶಕ್ಕೊಳಗಾದಮೇಲೆ ನಡೆಯಿತೆಂದು ಪ್ರಸಿದ್ಧವಾದ ಕ್ಷಾಮಸೂಚಕ ಸ್ವಪ್ನದ ವಿವರವೂ ಶ್ರವಣಬೆಳುಗೊಳದಲ್ಲಿ ಚಂದ್ರಗುಪ್ತನು ವ್ರತಗಳನ್ನು ಕೈಕೊಂಡು ಅಂತ್ಯಕಾಲವನ್ನು ಕಳೆದ ವೃತ್ತಾಂತವೂ ಹಿಂದೆಯೇ ಬಂದಿದೆ. ಭದ್ರಬಾಹುವಿನೊಡನೆ ಹೊರಡಬೇಕೆಂದು ನಿಶ್ಚಯಿಸಿದಾಗ ರಾಜ್ಯವನ್ನು ಚಂದ್ರಗುಪ್ತನು ತನ್ನ ಮಗನಾದ ಬಿಂದುಸಾರನಿಗೆ ಕೊಟ್ಟು ಹೊರಟನು.

## ಮೌರ್ಯ ರಾಜ್ಯಭಾರ

ಅತಿವಿಸ್ತಾರವಾಗಿದ್ದ ಚಂದ್ರಗುಪ್ತನ ಚಕ್ರಾಧಿಪತ್ಯದಲ್ಲಿ ಮಗಧರಾಜ್ಯವು ಚಕ್ರವರ್ತಿಯ ಸ್ವಂತ ವಿಚಾರಣೆಯಲ್ಲಿಯೇ ಇತ್ತು. ಉಳಿದ

ಭಾಗಗಳಲ್ಲಿ ಕೆಲವು ಪ್ರಾಂತಗಳು ತಮ್ಮಲ್ಲಿ ಪೂರ್ವದಿಂದಲೂ ಬಳಕೆಯಲ್ಲಿದ್ದ ರಾಜ್ಯಭಾರದ ಪದ್ಧತಿಗಳನ್ನೇ ಅನುಸರಿಸುತ್ತ ಸಕಾಲಕ್ಕೆ ಗೊತ್ತಾದ ಪೊಗದಿಯನ್ನು ಸಲ್ಲಿಸುತ್ತಿದ್ದವು; ಮತ್ತೆ ಕೆಲವು ಪ್ರಾಂತಗಳು ಚಕ್ರವರ್ತಿಯಿಂದ ನಿಯುಕ್ತರಾದ ಪ್ರಾಂತಾಧಿಕಾರಿಗಳ (ಮಾಂಡಲಿಕರ) ಅಧಿಕಾರಕ್ಕೊಳಗಾಗಿದ್ದವು. ತಕ್ಷಶಿಲೆ, ಉಜ್ಜಯಿನಿ, ಗಿರಿನಗರ ಮುಂತಾದ ನಗರಗಳಲ್ಲಿ ಪ್ರಾಂತಾಧಿಕಾರಿಗಳಿದ್ದರು. ಅವರು ಚಕ್ರವರ್ತಿಯ ಅಪ್ಪಣೆ ಮೇರೆಗೆ ಆಡಳಿತದ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಲಿದ್ದರು. ಗೂಢಚಾರರ ಮೂಲಕ ಚಕ್ರವರ್ತಿಗೆ ಅತಿದೂರ ಪ್ರಾಂತಗಳಲ್ಲಿದ್ದ ಅಧಿಕಾರಿಗಳ ವರ್ತನೆಯ ವಿವರವೂ ತಿಳಿಯುತ್ತಿದ್ದಿತಾದುದರಿಂದ ಅಧಿಕಾರಿಗಳು ಭಯ ಭಕ್ತಿಗಳಿಂದ ಕೂಡಿದವರಾಗಿದ್ದರು. ಗೂಢಚಾರರಲ್ಲದೆ ಬೇರೆಯವರಾಗಿ ಸಮಾಚಾರ ಸಂಗ್ರಹಮಾಡಿ ಕಾಲಕಾಲಕ್ಕೆ ವರದಿ ಬರೆದು ಆಸ್ಥಾನಕ್ಕೆ ಕಳುಹಿಸಿಕೊಡಲು ತಕ್ಕ ಅಧಿಕಾರಿಗಳೂ ಪ್ರಾಂತಗಳಲ್ಲಿರುತ್ತಿದ್ದರು.

ಸಾಮ್ರಾಜ್ಯಬಂಧ

ರಾಜಧಾನಿಯಲ್ಲಿ ಓಲಗ ಮಾಡುತ್ತ ಚಕ್ರವರ್ತಿಯು ಈ ವರದಿಗಳನ್ನು ತಿಳಿದು ಮಂತ್ರಿವರ್ಗದವರಲ್ಲಿ ಮಂತ್ರಾಲೋಚನೆ ನಡೆಸಿ ಆಜ್ಞೆಗಳನ್ನು ಸೂಕ್ತವಾದ ರೀತಿಯಲ್ಲಿ ಸಾರುತ್ತಿದ್ದನು. ಚಕ್ರವರ್ತಿಗೆ ಸರ್ವಾಧಿಕಾರವಿತ್ತು; ಅಸಮಾನವೆನಿಸಿದ ಬಲದ ಅಧಿಕಾರವಿತ್ತು. ಚಂದ್ರಗುಪ್ತನ ಸೈನ್ಯವು ಚತುರಂಗ ಮಾತ್ರವಲ್ಲದೆ **ಷಡಂಗ**ಗಳಾಗಿತ್ತು. ಆರು ಲಕ್ಷ ಪದಾತಿಗಳೂ ಮೂವತ್ತು ಸಾವಿರ ಅಶ್ವಾರೋಹಿಗಳೂ ಒಂಬತ್ತು ಸಾವಿರ ರಥಗಳೂ ಒಂಬತ್ತು ಸಾವಿರ ಆನೆಗಳೂ ಅಲ್ಲದೆ ನೌಕಾಪಡೆಯೂ ಸಾಮಗ್ರಿ ಸಂಗ್ರಾಹಕ ಅಂಗವೂ ಇದ್ದವು. ಈ ಆರು ಅಂಗಗಳಲ್ಲಿ ಪ್ರತ್ಯಂಗಕ್ಕೂ ಐದು ಸಭಿಕರುಳ್ಳ ಒಂದೊಂದು **ಪಂಚಾಯತ ಸಭೆ**ಯು ಮೇಲ್ವಿಚಾರಣೆಯನ್ನು ನಡೆಸುತ್ತಿತ್ತು. ಸೆಲ್ಯೂಕಸನಂತಹ ಪ್ರಬಲ ಶತ್ರುವನ್ನು ಮೇರೆಯಿಂದ ಹೊರಕ್ಕೇ ಅಟ್ಟಿದ ಈ ಸೈನ್ಯವು ಸದಾ ಸನ್ನದ್ಧವಾಗಿತ್ತು; ಇದರ ಬಲವೇ ಚಂದ್ರಗುಪ್ತನ ಸರ್ವಾಧಿಕಾರಕ್ಕೆ ಮೂಲವಾಗಿತ್ತು. ಯುದ್ಧದಲ್ಲಿ ಹಿಂದಿನಿಂದಲೂ ರೂಢಿಯಲ್ಲಿದ್ದ ನೀತಿಯೊಂದು ಸಾಮಾನ್ಯ

ಪ್ರಚಂಡ ಸೈನ್ಯ

ವಾಗಿಯೇ ಇತ್ತು; ಏಕೆಂದರೆ ಜನಸಾಮಾನ್ಯರ ಗೋಜಿಗೆ ಯೋಧರಾದವರು ಹೋಗುತ್ತಿರಲಿಲ್ಲ. ಪಕ್ಕದ ಮೈದಾನದಲ್ಲಿ ಭಯಂಕರವಾದ ಯುದ್ಧವು ನಡೆಯುತ್ತ ರಕ್ತ ಪ್ರವಾಹವು ಹರಿಯುತ್ತಿದ್ದರೂ ಕೃಷೀವಲನು ನಿಶ್ಚಿಂತನಾಗಿ ಹೊಲವನ್ನುಳುತ್ತ ತನ್ನ ಕೆಲಸದಲ್ಲಿ ತಾನು ನಿರತನಾಗುತ್ತಿದ್ದುದನ್ನು ಕಂಡು ಮೆಗಾಸ್ಥನೀಸನು ವಿಸ್ಮಿತನಾದನು. ಕೃಷಿ ಕೈಗಾರಿಕೆ ವ್ಯಾಪಾರಗಳು ನಿರಾತಂಕವಾಗಿ ನಡೆಯುವುದಕ್ಕಾಗಿಯೇ ಸೈನ್ಯವಿರತಕ್ಕದ್ದೆಂಬುದು ಎಲ್ಲರಿಗೂ ತಿಳಿದ ತತ್ವವಾಗಿತ್ತು.

ಯುದ್ಧನೀತಿ

ಸೈನ್ಯದ ತರುವಾಯ ಸಾಮ್ರಾಜ್ಯಬಂಧಕ್ಕೆ ಮುಖ್ಯವಾಗಿದ್ದುದು ಸಂಚಾರ ಸೌಕರ್ಯಗಳ ವ್ಯವಸ್ಥೆ. ಈ ಸೌಕರ್ಯಗಳು ದಂಗೆಗಳನ್ನು ಅಡಗಿಸತಕ್ಕ ಸೈನ್ಯಕ್ಕೂ ವ್ಯಾಪಾರಕ್ಕೂ ಅವಶ್ಯವಾಗಿದ್ದವು. ಮೌರ್ಯ ಕಾಲದಲ್ಲಿ ಭರತವರ್ಷವು ಇಡೀ ಪೃಥ್ವಿಯಲ್ಲಿಯೇ ಭಾಗ್ಯಭೂಯಿಷ್ಠವಾಗಿ ಕೈಗಾರಿಕೆಗಳಿಗೆ ಪ್ರಸಿದ್ಧವಾಗಿದ್ದಂತೆಯೇ **ಸ್ಥಲಮಾರ್ಗ**ವಾಗಿಯೂ **ಜಲಮಾರ್ಗ**ವಾಗಿಯೂ ನಡೆದ ವ್ಯಾಪಾರದಲ್ಲಿ ಅಗ್ರಗಣ್ಯವಾಗಿತ್ತು. ತಕ್ಷಶಿಲೆಯಿಂದ ಪಾಟಲಿಪುರಕ್ಕೂ, ಭರುಕಚ್ಛದಿಂದ ಉಜ್ಜಯಿನಿ ವಾರಣಾಸಿಗಳನ್ನು ಹಾಯ್ದು ಪಾಟಲಿಪುರಕ್ಕೂ, ಮುಖ್ಯವಾದ ರಾಜಮಾರ್ಗಗಳಿದ್ದವು; ಅವುಗಳ ಉದ್ದಕ್ಕೂ ಸಾಲುಮರಗಳೂ ಬಾವಿಗಳೂ ಸತ್ರಗಳೂ ನಿರ್ಮಿತವಾಗಿದ್ದುವಲ್ಲದೆ ದೂರವನ್ನು ತೋರುವ ಕಂಬಗಳೂ ಇದ್ದವು. ಮಾರ್ಗಗಳು ಸುಗಮವಾಗಿ ಕಳ್ಳಕಾಕರ ಭೀತಿಯಿಲ್ಲದಿತ್ತು. ರಾಜಾಧಿಕಾರಿಗಳಲ್ಲದೆ ರಾಜಭಟರೂ ಗೂಢಚಾರರೂ ಆಗಾಗ್ಗೆ ಸಂಚರಿಸುತ್ತ ಸಮ್ಮುಖಕ್ಕೆ ವರ್ತಮಾನವನ್ನು ಒಯ್ಯುತ್ತಲೇ ಇದ್ದರು. ಜಲಮಾರ್ಗಗಳೂ ಸುವ್ಯವಸ್ಥಿತವಾಗಿದ್ದವು. ರೇವುಗಳನ್ನೂ ಸೇತುವೆಗಳನ್ನೂ ಸುಸ್ಥಿತಿಯಲ್ಲಿಟ್ಟು ಕಾಪಾಡುವುದಕ್ಕೂ, ಪುಂಡರನ್ನು ಹಿಡಿದು ದಂಡಿಸುವುದಕ್ಕೂ ಅಧಿಕಾರಿಗಳಿದ್ದರು. ರಾಜಾಧಿಕಾರಿಯಾದ **ನಾವಧ್ಯಕ್ಷ**ನೇ ಅನೇಕ ಹಡಗುಗಳನ್ನು ಇಟ್ಟು ವರ್ತಕರಿಗೆ ಅವುಗಳನ್ನು ಬಾಡಿಗೆಗೆ ಕೊಡಿಸುತ್ತಿದ್ದನು. ಜಲಮಾರ್ಗಗಳು ವ್ಯಾಪಾರದಲ್ಲಿ ಒಳ್ಳೆ ರೂಢಿಯನ್ನು ಪಡೆದಿದ್ದವು.

ಸಂಚಾರ ಸೌಕರ್ಯ

ನ್ಯಾಯ ರಕ್ಷಣೆ

ನ್ಯಾಯ ರಕ್ಷಣೆಯು ನ್ಯಾಯಾಧಿಕಾರಿಗಳಿಂದ ನಡೆಯುತ್ತಿತ್ತು. ಮೆಗಾಸ್ಥನೀಸನು ರಾಜ್ಯದಲ್ಲಿ ಕಳವೆಂಬುದೇ ಇರಲಿಲ್ಲವೆಂದು ಗ್ರಂಥದ ಒಂದೆಡೆಯಲ್ಲಿ ಸೂಚಿಸುತ್ತಾನೆ. ಚಂದ್ರಗುಪ್ತನ ಆಳ್ವಿಕೆಯು ಬೇರೂರಿ ಭದ್ರವಾದ ಮೇಲೆ ಆ ಸುಸ್ಥಿತಿಯು ನೆಲೆಸಿದ್ದಿರಬಹುದು. ಮೊದಲು ಕಳ್ಳಕಾಕರ ಹಾವಳಿಯು ಹೆಚ್ಚಾಗಿಯೇ ಇದ್ದಿರಬೇಕು. ಏಕೆಂದರೆ, ಅಪರಾಧಿಗಳಿಗೆ ನಡೆದ ಶಿಕ್ಷೆಯು ಕ್ರೂರವಾಗಿಯೇ ಇತ್ತು. ಸಾಧಾರಣವಾಗಿ ಕಠಿನ ಶಿಕ್ಷೆಯು ದೇಶದಲ್ಲಿ ಅಶಾಂತಿಯಿದ್ದಾಗಲೇ ತೋರಿಕೊಳ್ಳುವುದು. ನ್ಯಾಯ ತೀರ್ಮಾನವು ಧರ್ಮಶಾಸ್ತ್ರಗಳನ್ನೇ ಅನುಸರಿಸಿತ್ತು. ಪಂಚಾಯತ ವ್ಯವಸ್ಥೆಯು ಸರ್ವತ್ರ ರೂಢಿಯಾಗಿದ್ದುದರಿಂದ ಜನಜೀವನದ ರೀತಿಯೇ ಕ್ಷೇಮದಾಯಕವಾಗಿತ್ತು.

ಜಲಾಶಯ ನಿರ್ಮಾಣ

ನೀರಾವರಿ ಕೆಲಸಗಳಿಗೆ ಆಡಳಿತದಲ್ಲಿ ವಿಶೇಷವಾದ ಆದರವಿತ್ತು. ಬಾವಿಗಳನ್ನು ತೋಡಿಸುವ, ಕೆರೆಗಳನ್ನು ಕಟ್ಟಿಸುವ, ಕಾಲುವೆಗಳನ್ನು ಅಗೆಸುವ ಜನಹಿತಕಾರ್ಯಗಳು ಪ್ರಜಾಮುಖ್ಯರಿಂದಲೂ ರಾಜಾಧಿಕಾರಿಗಳಿಂದಲೂ ನಡೆಯುತ್ತಿದ್ದವು. ಚಂದ್ರಗುಪ್ತನಾಳುತ್ತಿದ್ದಾಗ ಜುನಾಘಡ ಅಥವಾ ಗಿರಿನಗರ ಪ್ರಾಂತದ ಜನರು ತಮ್ಮ ಪ್ರಾಂತದಲ್ಲಿ ಒಂದು ಸರೋವರವನ್ನು ನಿರ್ಮಿಸಬೇಕೆಂದು ಪ್ರಾಂತಾಧಿಕಾರಿಯಾಗಿದ್ದ **ಪುಷ್ಯಗುಪ್ತ**ನೆಂಬಾತನಲ್ಲಿ ಕೇಳಿಕೊಂಡರು. ಪುಷ್ಯಗುಪ್ತನು ಆ ವಿಷಯದಲ್ಲಿ ಚಕ್ರವರ್ತಿಯ ಅಪ್ಪಣೆಯನ್ನು ಪಡೆದು ಪ್ರಸಿದ್ಧವಾದ **ಸುದರ್ಶನ**ವೆಂಬ ವಿಶಾಲ ಸರೋವರವನ್ನು ಕಟ್ಟಿಸಿದನು. ಇದು ಒಂದು ದೃಷ್ಟಾಂತ ಮಾತ್ರ. ನೀರಾವರಿಯ ಅನುಕೂಲ ಹೆಚ್ಚಿದಷ್ಟು ರಾಜಾದಾಯವೂ ಹೆಚ್ಚುವ ಕಾರಣದಿಂದಲೂ ಧಾನ್ಯ ಸಮೃದ್ಧಿಯಾಗುವ ಕಾರಣದಿಂದಲೂ ನೀರಾವರಿಯ ಕೆಲಸಗಳಲ್ಲಿ ಆಡಳಿತದ ಲಕ್ಷ್ಯವು ಹೆಚ್ಚಾಗಿಯೇ ಇದ್ದಿತು.

ಇವುಗಳಲ್ಲದೆ ಗಣಿಗಳ ಕೆಲಸಕ್ಕಾಗಿ ಒಂದು ಶಾಖೆಯಿತ್ತು; ರಾಜಾಧಿಕಾರಿಗಳೇ ಗಣಿಗಳ ಕೆಲಸವನ್ನು ನಡೆಸುತ್ತಿದ್ದುದಲ್ಲದೆ ಹೊಸದಾಗಿ ಗಣಿಗಳನ್ನು ಕಂಡುಹಿಡಿದವರಿಗೆ ಬಹುಮಾನಗಳನ್ನೂ ಸ್ವತಂತ್ರವಾಗಿ ಕೆಲಸ ನಡೆಸ

ಲಿಷ್ಟಪಟ್ಟವರಿಂದ ರಾಯಮಾಸ(Royalty)ವನ್ನು ಬರಮಾಡಿಕೊಂಡು ಗಣಿಗಳ ಅಧಿಕಾರವನ್ನೂ ಕೊಡುತ್ತಿದ್ದರು. ಸಿಕ್ಕಿದ

ಇತರ ಶಾಖೆಗಳು

ಅದುರುಗಳನ್ನು ಪರೀಕ್ಷಿಸಿ ಲೋಹವನ್ನು ಪ್ರತ್ಯೇಕಿಸಿ ಶುದ್ಧಿಗೊಳಿಸಲು ಕೌಟಿಲ್ಯನು ವಿವರಿಸುವ ವಿಧಾನಗಳು ಸೋಜಿಗವನ್ನುಂಟುಮಾಡುತ್ತವೆ. ಪಶುಚಿಕಿತ್ಸೆಗೂ ಅಂತರಿಕ್ಷ ಪರೀಕ್ಷೆಗೂ ಆಡಳಿತದ ಶಾಖೆಗಳಿದ್ದವು; ಎರಡೂ ವ್ಯವಸಾಯಕ್ಕೆ ಸಹಾಯವಾದವುಗಳು. ದ್ಯೂತ ಮತ್ತು ಮದ್ಯಪಾನಗಳು ಊರಹೊರಗೆ ನಡೆಯತಕ್ಕುದೆಂದೂ ಜೂಜಿನ ಕಟ್ಟೆಗಳೂ ಮದ್ಯದ ಅಂಗಡಿಗಳೂ ನಿಷ್ಕಲ್ಮಷವಾಗಿ ಚಿತ್ತಾಕರ್ಷಕವಾಗಿರತಕ್ಕುದೆಂದೂ ರಾಜಾಜ್ಞೆಯಿತ್ತು; ಅವುಗಳಿಂದ ವಿಶೇಷವೇ ಆದ ರಾಜಾದಾಯವಿತ್ತು. ವೈದ್ಯವಿದ್ಯೆಗೆ ಪ್ರೋತ್ಸಾಹವಿತ್ತು; ಚಿಕಿತ್ಸಾಲಯಗಳಲ್ಲದೆ ಮೂಲಿಕೆಗಳನ್ನೂ ವನೌಷಧಗಳನ್ನೂ ಬೆಳೆಸಲು ಒಂದು ವನವೇ ರಾಜಾಜ್ಞೆಯಿಂದ ರಕ್ಷಿತವಾಗಿತ್ತು. ವಿದ್ವಾಂಸರಿಗೆ ಕಂದಾಯ ತೆರಿಗೆಗಳಿಲ್ಲದಂತೆ ಭೂಮಿಗಳನ್ನು ಕೊಡುವುದೂ, ಆಗಾಗ್ಗೆ ಸಭೆಗಳನ್ನು ಸೇರಿಯಿಸಿ ಸಂಭಾವನೆಗಳನ್ನು ಕೊಡುವುದೂ ಚಕ್ರವರ್ತಿಯು ತನ್ನ ಕರ್ತವ್ಯವೆಂದು ತಿಳಿದಿದ್ದನು.

ರಾಜಧಾನಿಯಲ್ಲಿ **ಶ್ರೇಷ್ಠ ಶಾಖೆ**ಗಳೆನ್ನುವವು ಒಟ್ಟು **ಮೂವತ್ತಿ**ದ್ದವು. ಅವುಗಳಲ್ಲಿ ಆಸ್ಥಾನಕ್ಕೆ ಸಂಬಂಧಪಟ್ಟ ಆನೆ, ಕುದುರೆ ಮತ್ತು ಗೋವುಗಳಿಗಾಗಿ ಬೇರೆ ಬೇರೆ ಅಧಿಕಾರಿಗಳಿದ್ದರು. ಅವುಗಳ ಆರೈಕೆಯ ವಿವರವು ಅರ್ಥಶಾಸ್ತ್ರದಲ್ಲಿ ಲಿಖಿತವಾಗಿ ಚಿತ್ತರಂಜಕವಾಗಿದೆ.

ಪ್ರಚಂಡ ಸೇನಾಪರಿವೃತನಾಗಿ ಸರ್ವಾಧಿಕಾರಯುಕ್ತನಾಗಿ ಚಂದ್ರಗುಪ್ತ ಚಕ್ರವರ್ತಿಯು ಸಾವಿರಾರು ಗೂಢಚಾರರನ್ನು ಪೋಷಿಸಿಕೊಂಡು ದರ್ಪದಿಂದ ಆಳುತ್ತಿದ್ದಾಗಲೂ ಪ್ರಜಾಸಮೂಹಕ್ಕೆ ಪೂರ್ವದಿಂದ ನಡೆದು ಬಂದಿದ್ದ ಆಡಳಿತ ವಿಭಾಗಗಳಲ್ಲಿ ಯಾವ ಭಾಗದ ಅಧಿಕಾರವೂ ತಪ್ಪಲಿಲ್ಲ.

ಜನಾಧಿಕಾರ

ವಾಯವ್ಯ ಮತ್ತು ಈಶಾನ್ಯ ಪ್ರಾಂತಗಳಲ್ಲಿದ್ದ ಗಣರಾಜ್ಯಗಳ ಒಳಾಡಳಿತಕ್ಕೆ ಲೋಪಬಾರದಿದ್ದುದೇ ಅಲ್ಲದೆ **ಗ್ರಾಮ ವ್ಯವಸ್ಥೆ**ಯಲ್ಲಿ, **ಶ್ರೇಣಿ**ಗಳಲ್ಲಿ, **ಸಂಘ**ಗಳಲ್ಲಿ ಮತ್ತು **ನಗರ**ಗಳಲ್ಲಿ ಪ್ರಜಾಮುಖ್ಯರೇ ಅಧಿಕಾರವನ್ನು

ಮಾಡುತ್ತಿದ್ದರು. ಗ್ರಾಮಗಳಲ್ಲಿ ಪಂಚಾಯತರೆಂಬ ಮುಖ್ಯಸ್ಥರೇ ಮಾರ್ಗಗಳನ್ನು ಸುಸ್ಥಿತಿಯಲ್ಲಿಡಿಸುತ್ತ, ನೀರಾವರಿಯನ್ನು ವ್ಯವಸ್ಥೆಗೊಳಿಸುತ್ತ ಗ್ರಾಮಸ್ಥರ ವ್ಯಾಜ್ಯಗಳನ್ನು ತಾವೇ ಪರಿಹರಿಸಿಕೊಳ್ಳುತ್ತ, ದಾನ ಧರ್ಮಗಳನ್ನೂ ತಾವೇ ವಹಿಸಿ ನಡೆಸುತ್ತ, ತಮ್ಮ ಗ್ರಾಮಕ್ಕೆ ಸೇರಿದ ವನಪ್ರದೇಶಗಳ ಉಪಯೋಗವನ್ನು ನಿರ್ಣಯಮಾಡುತ್ತ ಇರುತ್ತಿದ್ದರು. ಪ್ರಾಯಿಕವಾಗಿ ಪ್ರತಿ ಕಸಬು ಕೈಗಾರಿಕೆಯಲ್ಲಿಯೂ ವ್ಯವಸ್ಥೆಯು ಆ ಕಸಬುದಾರರಲ್ಲಿ ಮುಖ್ಯಸ್ಥರು ಸೇರಿದ ಶ್ರೇಣಿಯೆಂಬ ಸಭೆಯಲ್ಲಿ ನಡೆಯುತ್ತಲಿತ್ತು ; ಧಾರಣೆಗಳನ್ನೂ ಶ್ರಮಫಲ (wages) ವನ್ನೂ ಅವರೇ ಗೊತ್ತುಮಾಡಿ ಪರಸ್ಪರ ಸಹಾಯಮಾಡುತ್ತ ತಮ್ಮ ಕಸಬಿನಲ್ಲಿ ನೈಪುಣ್ಯವನ್ನೂ ಪ್ರಾಮಾಣಿಕತನವನ್ನೂ ರಕ್ಷಿಸುತ್ತಿದ್ದರು. ನಗರಗಳಲ್ಲಿ ವರ್ತಕಜನರು ಧನಾಢ್ಯರಾಗಿದ್ದು ತಾವೇ ರಕ್ಷಕದಳಗಳನ್ನು ಪೋಷಿಸುತ್ತಿದ್ದರು. ವರ್ತಕರು ಸಭೆ ಸೇರಿ ವ್ಯವಹರಿಸುತ್ತ ಅನೇಕವೇಳೆ ಪ್ರಭುವಿನ ಮನ್ನಣೆಗೆ ಪಾತ್ರರಾಗಿರುತ್ತಿದ್ದರು; ಹೊಸ ತೆರಿಗೆಯನ್ನು ನಿಶ್ಚಯಿಸುವಾಗ ಇವರನ್ನು ಕೇಳಿ ಪ್ರಭುವು ವರ್ತಿಸುತ್ತಿದ್ದನು. ರಾಜಾಧಿಕಾರವು ಮಿತಿಮೀರದಂತೆ ಈ ವಣಿಕ್ಸಂಘಗಳು ಬಲಿಷ್ಠವಾಗಿದ್ದವು. ಜೈನ ಬೌದ್ಧ ಸಂಘಗಳೂ ವಿದ್ಯಾಪೀಠಗಳೂ ವಿಹಾರಾಶ್ರಮಗಳೂ ರಾಜಾಧಿಕಾರಕ್ಕೊಳಪಟ್ಟೇ ಇರಲಿಲ್ಲ.

ಪುರವ್ಯವಸ್ಥೆ

ಪಾಟಲಿಪುರದ ವ್ಯವಸ್ಥೆಯನ್ನು ಮೆಗಾಸ್ಥನೀಸನು ವಿವರಿಸಿ ಆ ಕಾಲದ ನಗರ ವ್ಯವಸ್ಥೆಯು ಹೇಗಿದ್ದಿತೆಂದು ಭಾವಿಸಿಕೊಳ್ಳಲು ಸಹಾಯಮಾಡಿದ್ದಾನೆ. ಇತರ ನಗರಗಳು ಪಾಟಲಿಪುತ್ರದ ವ್ಯವಸ್ಥೆಯನ್ನೇ ಮೇಲ್ಪಂಕ್ತಿಯೆಂದಿಟ್ಟುಕೊಂಡಿದ್ದು ವ್ಯವಹರಿಸಿರಬೇಕು. ಪಾಟಲಿಪುತ್ರದಲ್ಲಿ ನಗರಾಧಿಕಾರವು **ಆರು ಪಂಚಾಯತ** ಸಭೆಗಳಲ್ಲಿ ನೆಲೆಸಿತ್ತು. ಕುಶಲಕಲೆಗಳು, ಪರದೇಶೀಯರು, ಜನನ ಮರಣ ಸಂಖ್ಯೆ, ವ್ಯಾಪಾರ, ಕೈಗಾರಿಕೆಗಳು, ಶುಲ್ಕಗಳು ಆ ಆರು ಸಭೆಗಳ ಆರು ಅಧಿಕಾರಕ್ಷೇತ್ರಗಳಾಗಿದ್ದವು. ಪ್ರಜಾಮುಖ್ಯರೇ ಈ ರೀತಿ ನಗರವ್ಯವಸ್ಥೆಯನ್ನು ಮಾಡಿಕೊಂಡು ನಗರಾಧಿಕಾರವನ್ನನುಭವಿಸುತ್ತಿದ್ದರು. ಪ್ರಜೆಗಳಲ್ಲಿ ಶ್ರೀಮಂತರಾದವರೂ ಪ್ರಜಾಹಿತೈಷಿಗಳಾದವರೂ ಬಾವಿ, ಛತ್ರ, ಚಿಕಿತ್ಸಾಲಯಗಳನ್ನು

ನಿರ್ಮಿಸುತ್ತಲೂ, ಸಾಲುಮರಗಳನ್ನು ನೆಡಿಸುತ್ತಲೂ, ವಿದ್ವಾಂಸರಿಗೂ ಬ್ರಾಹ್ಮಣ ಶ್ರಮಣರಿಗೂ ದಾನಕೊಡುತ್ತಲೂ ಇರುತ್ತಿದ್ದರು. ಶಿಕ್ಷಣ ಕ್ಷೇತ್ರಗಳೂ ವಿದ್ಯಾರ್ಜನೆಯೂ ಈ ರೀತಿಯಲ್ಲಿ ಸರ್ವರಿಗೂ ಆದರಣೀಯ ವಾಗಿ ಸ್ವತಂತ್ರವಾಗಿ ವೃದ್ಧಿಪಡೆಯುತ್ತಿದ್ದವು.

ಮೌರ್ಯ ಕಾಲದಲ್ಲಿ ಜನಸಾಮಾನ್ಯ ಜೀವನದ ವಿಚಾರದಲ್ಲಿ* ಪ್ರತ್ಯಕ್ಷ ದರ್ಶಿಯಾದ ಮೆಗಾಸ್ಥನೀಸನು ಸ್ಮರಣಾರ್ಹವಾದ ಕೆಲವಂಶಗಳನ್ನು ಬರೆದಿದ್ದಾನೆ. ಜನರು ಸರಳರಾಗಿಯೂ ಸುಖಿಗಳಾಗಿಯೂ ಶಾಂತರಾಗಿಯೂ

**ಜನಜೀವನ**

ಇದ್ದರು. ಮದ್ಯಪಾನವು ಅವರಲ್ಲಿ ಅಪರೂಪ ವಾಗಿತ್ತು; ಯಜ್ಞಕಾಲದಲ್ಲಿ ಮಾತ್ರ ಸೋಮ ಪಾನ ಮಾಡುತ್ತಿದ್ದರು. ಬತ್ತದ ಅನ್ನವೇ ಮುಖ್ಯಾಹಾರವಾಗಿತ್ತು. ಶ್ರೀಮಂತರಾದವರಲ್ಲಿ ಬಹುಪತ್ನೀತ್ವವು ಕಾಣು ತ್ತಿತ್ತು. ಬಹುಪತ್ನೀತ್ವಕ್ಕೆ ಅಡ್ಡಿಯಿಲ್ಲದಿದ್ದಾಗ್ಯೂ ಸಾಧಾರಣ ಜನರು ಏಕ ವಿವಾಹವನ್ನೇ ಮಾಡಿಕೊಳ್ಳುತ್ತಿದ್ದರು. ಸ್ತ್ರೀಯರಿಗೆ ಗೌರವವೂ ಅಧಿಕಾರವೂ ಇತ್ತು; ಅನೇಕ ಸ್ತ್ರೀಯರು ತತ್ವಶಾಸ್ತ್ರ ವ್ಯಾಸಂಗಿಗಳಾಗಿ ಸಂನ್ಯಾಸ ದೀಕ್ಷೆಯನ್ನೂ ತಾಳುತ್ತಿದ್ದರು. ಸಹಗಮನ ಪದ್ಧತಿಯನ್ನು ಮೆಗಾಸ್ಥ ನೀಸನು ಕಠರಲ್ಲಿಯೂ ತಕ್ಷಶಿಲೆಯ ಬಳಿ ಇದ್ದ ಕುಲಗಳಲ್ಲಿಯೂ ಕಂಡನು.

ಜನರು ಸತ್ಯವಂತರಾಗಿಯೂ ನಿಷ್ಕಪಟಿಗಳಾಗಿಯೂ ಇದ್ದು ವಿಶ್ವಾಸ ಯೋಗ್ಯರಾಗಿದ್ದರು. ಕಳ್ಳಕಾಕರ ಭಯವಿರಲಿಲ್ಲ. ನಿವಾಸಿಗಳು ಅವರ ಭಯದಿಂದ ಮನೆಗಳನ್ನು ಭದ್ರಪಡಿಸಿಕೊಳ್ಳುವ ಯೋಚನೆಯನ್ನೇ ಮಾಡು ತ್ತಿರಲಿಲ್ಲ. ಪರಸ್ಪರ ವಿಶ್ವಾಸದಿಂದ ಜೀವನವನ್ನು ನಡೆಸುತ್ತಿದ್ದರು. ಸಾಲಸೋಲಗಳಿಗಾಗಿಯೂ ಕರಾರು ಒಪ್ಪಂದಗಳಿಗಾಗಿಯೂ ಅವರಿಗೆ ಪತ್ರಗಳು ಬೇಕಾಗಿಯೇ ಇರಲಿಲ್ಲ; ಮಾತೇ ಸಾಕಾಗಿದ್ದಿತು. ವಿಧಿಗಳೂ ಕೂಡ ಪತ್ರಮುಖವಾಗಿರಲಿಲ್ಲ. ಜನರು ನ್ಯಾಯಸ್ಥಾನಗಳನ್ನು ಆಶ್ರಯಿ

---

* ಭಾರತೀಯ ಸಾಮಾನ್ಯ ಜೀವನವನ್ನೂ ಗುಣಗಳನ್ನೂ ಕ್ರಿ. ಪೂ 4ನೆ ಶತಮಾನ, ಕ್ರಿ. ಶ. 5ನೆ ಶತಮಾನ, 7ನೆ ಶತಮಾನ, 11ನೆ ಶತಮಾನಗಳಲ್ಲಿ ಮೆಗಾಸ್ಥನೀಸ್, ಫಾಹಿಯಾನ್, ಹಿಯುನ್ತ್ಸಾಂಗ್, ಆಲ್ಬಿರೂನಿ, ಎಂಬ ಪರ್ಯಟಕರು ವರ್ಣಿಸಿರುತ್ತಾರೆ. ಅವುಗಳನ್ನು ಪರಸ್ಪರವಾಗಿ ಹೋಲಿಸಿ ನೋಡುವುದೂ, ಅವುಗಳ ವಿಚಾರ ವಿಮರ್ಶೆಗಳನ್ನು ಮಾಡುವುದೂ ಇತಿಹಾಸಾಭ್ಯಾಸಿಗಳಿಗೆ ಮುಖ್ಯವಾದುದು.

ಸುವುದು ಅಪರೂಪವಾಗಿತ್ತು; ವ್ಯಾಜ್ಯಗಳನ್ನು ತಮ್ಮ ಪಂಚಾಯತ ಸಭೆಗಳಲ್ಲಿಯೇ ಸಮಾಧಾನಮಾಡಿಕೊಳ್ಳುತ್ತಿದ್ದರು.

ತೆಳುವಾದ ಹತ್ತಿಯ ವಸ್ತ್ರಗಳನ್ನೇ ಸಾಧಾರಣವಾಗಿ ಜನರು ಉಪಯೋಗಿಸುತ್ತಿದ್ದರು; ವಸ್ತ್ರಗಳಿಗೆ ಹೂಕೆಲಸಮಾಡಿ ಅಲಂಕಾರಗೊಳಿಸುವುದರಲ್ಲಿ ಜನರು ಪ್ರೀತಿಯನ್ನೂ ಕೌಶಲವನ್ನೂ ತೋರುತ್ತಿದ್ದರು. ಶ್ರೀಮಂತರಾದವರು ಆಭರಣಗಳನ್ನು ತೊಟ್ಟು ಸೇವಕರಿಂದ ಛತ್ರಿ ಹಿಡಿಸಿಕೊಂಡು ಶುಭ್ರವೂ ಹಗುರವೂ ಆದ ವಸ್ತ್ರಗಳನ್ನು ಧರಿಸಿ ಹೊರಗೆ ಹೊರಡುತ್ತಿದ್ದರು. ಕೆಲವು ವೇಳೆ ಶ್ರೀಮಂತರು ರಥಾರೂಢರಾಗಿಯೂ ಸಂಚರಿಸುತ್ತಿದ್ದರು. ಮೆಗಾಸ್ಥನೀಸನು ನಾಲ್ಕು ಕುದುರೆಗಳನ್ನು ಕಟ್ಟಿದ ರಥಗಳನ್ನು ಆಗಾಗ್ಗೆ ನೋಡುತ್ತಿದ್ದನು.

ದಾಸ್ಯವೆಂಬುದೇ ಭಾರತೀಯರಲ್ಲಿರಲಿಲ್ಲ. ಗ್ರೀಕರಲ್ಲಿ ಗುಲಾಮರನ್ನು ಕೊಂಡು ಮಾರುವ ಪದ್ಧತಿಯು ಬೆಳೆದಿತ್ತು. ಆದ್ದರಿಂದ ಈ ರಾಯಭಾರಿಯು ದಾಸ್ಯದ ಅಭಾವವನ್ನೂ ಜನರ ನೆಮ್ಮದಿಯನ್ನೂ ವಿಶ್ವಾಸಯೋಗ್ಯತೆಯನ್ನೂ ಕಂಡು ಆಶ್ಚರ್ಯಪಟ್ಟನು. ಜನರ ಗುಂಪುಗಳನ್ನು ಅಥವಾ ಜಾತಿಗಳನ್ನು ವಿಂಗಡಿಸುತ್ತ ಆತನು ತತ್ವಜ್ಞರು, ಕೃಷೀವಲರು, ಪಶುಪಾಲಕರು, ಶಿಲ್ಪಿಗಳು, ಯೋಧರು, ವ್ಯಾಧರು ಮುಂತಾಗಿ ಏಳು ವಿಭಾಗಗಳನ್ನು ಸೂಚಿಸಿರುವನು. ಆ ಸೂಚನೆಯು ಚಾತುರ್ವರ್ಣ್ಯವೇ ಬೇರೂರಿ ವೃತ್ತಿ ವಿಭಾಗವು ವಂಶಗತವಾಗಿ ಸ್ಥಿರವಾಗಿ ನೆಲೆಸಿದ ನಿಯಮವನ್ನು ದೃಢಪಡಿಸುತ್ತದೆ.

**ಅಕ್ಬರನೊಡನೆ ಹೋಲಿಕೆ**

ಈ ರೀತಿಯಲ್ಲಿ ದುಷ್ಟಶಿಕ್ಷಣವನ್ನೂ ಶಿಷ್ಟರಕ್ಷಣವನ್ನೂ ಚಂದ್ರಗುಪ್ತ ಚಕ್ರವರ್ತಿಯು ಸುವ್ಯವಸ್ಥಿತ ಆಡಳಿತ ವಿಧಾನಗಳಿಂದ ನೆರವೇರಿಸಿದನು. ಆತನ ಆಡಳಿತವು ಅಕ್ಬರನ ಆಡಳಿತಕ್ಕಿಂತ ಉತ್ತಮವಾದುದೆಂದು ಚರಿತ್ರಕಾರರ ಮತ. ಅಕ್ಬರನು ಉತ್ತರ ಹಿಂದೂಸ್ಥಾನವನ್ನು ಗೆದ್ದು ರೂಢಿಸಿಕೊಳ್ಳಲು 50 ವರ್ಷಕಾಲ ಹಿಡಿಯಿತು. ಚಂದ್ರಗುಪ್ತನು 24 ವರುಷಗಳಲ್ಲಿಯೇ ರೂಢಿಸಿಕೊಂಡುದಲ್ಲದೆ ಹೊರಗಿನಿಂದ ಬಂದ ಪ್ರಬಲ ಶತ್ರುವನ್ನು ಸೋಲಿಸಿ ಓಡಿಸಿದನು. ಆದರೆ ಅಕ್ಬರನಿಗಿದ್ದಷ್ಟು ಕಷ್ಟವು ಚಂದ್ರಗುಪ್ತನಿಗಿರಲಿಲ್ಲ. ಚಂದ್ರಗುಪ್ತನು ಮಹಾಪರಾಕ್ರಮಿಯೂ ಅತಿ

ಸಮರ್ಥನೂ ಆಗಿದ್ದು ಪೃಥ್ವಿಯ ನಾನಾಭಾಗಗಳಲ್ಲಿ ಆಳಿ ಪ್ರಸಿದ್ಧಿಪಡೆದ ಸಾಮ್ರಾಜ್ಯ ಸ್ಥಾಪಕರಲ್ಲಿಯೂ ಜಗದ್ವಿಖ್ಯಾತ ಸಾಹಸಿಗಳಲ್ಲಿಯೂ ಅಗ್ರಗಣ್ಯರ ಗುಂಪಿನಲ್ಲಿ ಸೇರಿದವನೆನಿಸಿರುತ್ತಾನೆ.

## ಬಿಂದುಸಾರ ಚಕ್ರವರ್ತಿ

ದಕ್ಷಿಣದ ಜಯ

ಕ್ರಿ. ಪೂ. 298ರಲ್ಲಿ ಚಂದ್ರಗುಪ್ತನು ರಾಜ್ಯಭಾರ ನಿವೃತ್ತನಾಗಲು ಬಿಂದುಸಾರನೆಂದು ಪ್ರಸಿದ್ಧನಾದ ಆತನ ಮಗನು ಸಮ್ರಾಟನಾದನು. ಆತನು ತಂದೆಗೆ ತಕ್ಕ ಮಗನಾಗಿ ಅತಿಭಯಂಕರನಾಗಿ ಅಮಿತ್ರಘಾತ (Amitrachates)ನೆಂಬ ಬಿರುದನ್ನು ವಹಿಸಿದ್ದನು. ಪಟ್ಟವನ್ನೇರಿದಮೇಲೆ ಆತನು ವಿಂಧ್ಯಪರ್ವತಕ್ಕೆ ದಕ್ಷಿಣದಲ್ಲಿದ್ದ ರಾಷ್ಟ್ರಗಳನ್ನು ಗೆದ್ದು ಸಾಮ್ರಾಜ್ಯವನ್ನು ವಿಸ್ತಾರಮಾಡಲು ಯತ್ನಿಸಿರಬೇಕೆಂದು ಅನುಮಾನಸಿದ್ಧವಾಗುವುದು. ಆ ಭಾಗದಲ್ಲಿ ಅಂದರೆ ಗೋದಾವರೀ ಕೃಷ್ಣಾ ತುಂಗಭದ್ರಾ ನದಿಗಳ ನಡುವಣ ಪ್ರದೇಶಗಳಲ್ಲಿ ಭೋಜ, ರಾಷ್ಟ್ರಿಕ, ಪುಳಿಂದ, ಪಿಥೇನಿಕ ಮತ್ತು ಶಾತವಾಹನರ ರಾಷ್ಟ್ರಗಳಿದ್ದವು. ಬಿಂದುಸಾರನು ಅವರೆಲ್ಲರನ್ನೂ ಸೋಲಿಸಿ ಪೊಗದಿಯನ್ನು ತೆಗೆದುಕೊಂಡನು. ಈಗಿನ ಮೈಸೂರು ಸಂಸ್ಥಾನದ ವರೆಗೂ ದಕ್ಷಿಣದಲ್ಲಿ ಸಾಮ್ರಾಜ್ಯವು ವಿಸ್ತಾರವನ್ನು ಪಡೆಯಿತು. ಬಿಂದು

ಯವನ ಮೈತ್ರಿ

ಸಾರನು ಸಮರ್ಥನಾಗಿದ್ದುದರಿಂದ ಸೆಲ್ಯೂಕಸನ ರಾಜ್ಯದಲ್ಲಿ ಆತನ ತರುವಾಯ ಆಳುತ್ತಿದ್ದ ಅಂಟಿಯಖಸ್ ಎಂಬ ದೊರೆಯು ಹಿಂದಿನಿಂದ ನಡೆದುಬಂದಿದ್ದ ಸ್ನೇಹವನ್ನು ಕಾಪಾಡಲು ರಾಯಭಾರಿಯನ್ನು ಪಾಟಲಿಪುರದಲ್ಲಿ ನಿಯೋಗಿಸಿಯೇ ಇದ್ದನು. ಇಬ್ಬರು ಪ್ರಭುಗಳೂ ಕೆಲವು ಕಾಗದ ಪತ್ರಗಳನ್ನು ಪರಸ್ಪರವಾಗಿ ಬೆಳೆಸುತ್ತಿದ್ದರು.

ಬಿಂದುಸಾರ ಚಕ್ರವರ್ತಿಯ ವಿಷಯವಾಗಿ ಮತ್ತೇನೂ ತಿಳಿಯದೆಯೇ ಇದೆ. ಆತನೂ 24 ವರ್ಷಕಾಲ ರಾಜ್ಯಭಾರಮಾಡಿ ಕ್ರಿ. ಪೂ. 273ರಲ್ಲಿ ಕಾಲಗತಿಯನ್ನೈದಿದನು. ಆ ತರುವಾಯ ಮೌರ್ಯ ವಂಶಜರಲ್ಲೆಲ್ಲ ಅಗ್ರಗಣ್ಯನಾದ ಅಶೋಕನು ಪಟ್ಟವನ್ನೇರಿದನು.

## ಧರ್ಮಾಶೋಕ ಚಕ್ರವರ್ತಿ

**ಪಟ್ಟ**

ರಾಜಕುಮಾರನಾಗಿದ್ದಾಗಲೇ ಅಶೋಕನು ಉಜ್ಜಯಿನಿಯಲ್ಲಿಯೂ ಅನಂತರ ತಕ್ಷಶಿಲೆಯಲ್ಲಿಯೂ ಮಾಂಡಲಿಕಾಧಿಕಾರದಲ್ಲಿ ನಿಯುಕ್ತನಾಗಿದ್ದು ಆಡಳಿತದಲ್ಲಿ ಅನುಭವಶಾಲಿಯಾಗಿದ್ದನು. ಅಲ್ಲಿಯ ದುಷ್ಟರನ್ನೂ ದಂಗೆಕೋರರನ್ನೂ ಅಡಗಿಸಿ ಸಮರ್ಥನೆನಿಸಿದ್ದನು. ಕ್ರಿ. ಪೂ. 273ರಲ್ಲಿ ಪಟ್ಟವನ್ನೇರಿದ ಸಮಯದಲ್ಲಿಯೇ ದಕ್ಷನೆಂದೂ ಶಕ್ತಿವಂತನೆಂದೂ ಹೆಸರು ಪಡೆದಿದ್ದನು. ಬೌದ್ಧರ ವೃತ್ತಾಂತಗಳಲ್ಲಿ ಈತನು ಅತಿದುಷ್ಟನೂ ನೀಚನೂ ಆಗಿದ್ದು ಚಂಡಾಶೋಕನೆಂಬ ಬಿರುದನ್ನು ಪಡೆದಿದ್ದನೆಂದಿರುವ ವಿವರವು ಬೌದ್ಧಮತ ಪ್ರಭಾವವನ್ನು ಬಣ್ಣಿಸುವುದಕ್ಕಾಗಿ ಮಾಡಿದ ಚೇಷ್ಟೆಯೆಂದು ಪಂಡಿತರ ಸಿದ್ಧಾಂತ. ಕಠೋರನಾಗಿಲ್ಲದಿದ್ದಾಗ್ಯೂ ಅಶೋಕನು ಪಟ್ಟಕ್ಕೆ ಬಂದಾಗ ಶೂರನೂ ಮಹತ್ವಾಕಾಂಕ್ಷಿಯೂ ಆಗಿದ್ದನು. ಸಾಮ್ರಾಜ್ಯವನ್ನು ವಿಸ್ತಾರಗೊಳಿಸುವುದೇ ಆತನಿಗೆ ಪ್ರಥಮ ಕರ್ತವ್ಯವಾಗಿ ತೋರಿತು.

**ಕಳಿಂಗ ಯುದ್ಧ**

ದಕ್ಷಿಣ ತೀರಪ್ರದೇಶದಲ್ಲಿ ಮಹಾನದೀ ಗೋದಾವರೀಮುಖಗಳ ಮಧ್ಯೆ ಇದ್ದ ಕಳಿಂಗ ರಾಷ್ಟ್ರವು ಸಾಮ್ರಾಜ್ಯದ ಹೊರಗೇ ಇದ್ದು ಸ್ವತಂತ್ರವಾಗಿತ್ತು. ಅಶೋಕನು ಕಳಿಂಗರನ್ನು ಸ್ವಾಧೀನಪಡಿಸಿಕೊಳ್ಳಲು ಸೇನಾಸಮೇತನಾಗಿ ತಾನೇ ಹೊರಟು, ಕಳಿಂಗದೇಶವನ್ನು ಮುತ್ತಿ ಅಲ್ಲಿಯವರೊಡನೆ ಕಾಠಿನ್ಯದಿಂದ ಯುದ್ಧಮಾಡಿ ಅವರ ಸ್ವಾತಂತ್ರ್ಯವನ್ನು ನಾಶಗೊಳಿಸಿದನು. ಆಗ ಯುದ್ಧದಲ್ಲಿ ನಡೆದ ಹತ್ಯೆಗಳನ್ನೂ ಜನರ ದುಃಖಸಂಕಟಗಳನ್ನೂ ಪ್ರತ್ಯಕ್ಷವಾಗಿ ನೋಡಿ ಅಶೋಕನು ಮನಸ್ಸಿನಲ್ಲಿ ಅತಿಯಾಗಿ ಮರುಕಪಟ್ಟನು. ತನ್ನ ಆಶೆಯಿಂದಲೇ ಇಷ್ಟು ಅನರ್ಥವು ನಡೆಯಿತೆಂಬ ಜ್ಞಾನವು ಆತನ ಮನಸ್ಸನ್ನು ಮಥಿಸಿತು. ಸಹಜವಾಗಿ ಕೋಮಲಹೃದಯನಾಗಿದ್ದ ಅಶೋಕನಿಗೆ ಇದರಿಂದ ಯುದ್ಧವೇ ಅನರ್ಥಹೇತುವೆಂದೂ ಯುದ್ಧವು ವರ್ಜ್ಯವೆಂದೂ ನಿಶ್ಚಯವುಂಟಾಯಿತು.

ಕಳಿಂಗ ಯುದ್ಧವು ಕ್ರಿ. ಪೂ. ಸು. 263–62ರಲ್ಲಿ ನಡೆಯಿತು.

ಬೌದ್ಧಮತ ಸ್ವೀಕಾರ

ಯುದ್ಧವನ್ನು ನಿಲ್ಲಿಸಿ ರಾಜಧಾನಿಗೆ ಹಿಂತಿರುಗಿದ ಮೇಲೆ ಅಶೋಕನಿಗೆ ಅಹಿಂಸಾ ತತ್ವಪ್ರಧಾನವಾಗಿದ್ದ ಬೌದ್ಧಮತದಲ್ಲಿ ಕುತೂಹಲವುಂಟಾಯಿತು. ಅದೇ ಸಮಯದಲ್ಲಿಯೇ ಬೌದ್ಧ ಭಿಕ್ಷುಗಳಲ್ಲಿ ಪೂಜ್ಯನಾಗಿದ್ದ **ಉಪಗುಪ್ತ**ನೆಂಬಾತನ ಪರಿಚಯವೂ ಅಶೋಕನಿಗುಂಟಾಯಿತು. ಉಪಗುಪ್ತನು ಮೊದಲು ಮಥುರಾಪುರಿಯಲ್ಲಿ ವರ್ತಕತನ ಮಾಡುತ್ತಿದ್ದು ವಿರಕ್ತನಾಗಿ ಬೌದ್ಧ ಭಿಕ್ಷುವಾಗಿ, ನಗರಗಳನ್ನು ಬಿಟ್ಟು ಅರಣ್ಯಗಳಲ್ಲಿಯೇ ಇರುತ್ತಿದ್ದನು. ಆತನು ಶ್ರದ್ಧಾವಿನಯಗಳಿಂದ ಚಕ್ರವರ್ತಿಗೆ ಬೌದ್ಧಮತದ ತತ್ವಗಳನ್ನು ವಿವರಿಸಿದನು. ಯುದ್ಧ ವಿಮುಖನಾಗಿದ್ದ ಅಶೋಕನು ಆಗಲೇ ಬೇಟೆಯನ್ನು ನಿಲ್ಲಿಸಿ ಅರಮನೆಯಲ್ಲಿ ನಡೆಯುತ್ತಿದ್ದ ಪ್ರಾಣಿವಧೆಯನ್ನು ಕಡಿಮೆ ಮಾಡಿದ್ದನು. ಉಪಗುಪ್ತನ ಉಪದೇಶವು ನಡೆದ ಕೂಡಲೆ ಚಕ್ರವರ್ತಿಯು ಬೌದ್ಧಮತಾವಲಂಬಿಯಾಗಿ ಅಷ್ಟರಿಂದಲೇ ತೃಪ್ತನಾಗದೆ ಸ್ವಲ್ಪ ಕಾಲಾನಂತರ ವೈರಾಗ್ಯವನ್ನೂ ತಾಳಿ ಭಿಕ್ಷುವಾಗಿ ಕ್ರಿ. ಪೂ. 260ರಲ್ಲಿ ತಾನೂ ಬೌದ್ಧ ಸಂಘವನ್ನು ಸೇರಿದನು. ಚಕ್ರವರ್ತಿ ಪದವಿಯಲ್ಲಿದ್ದು ಸಂನ್ಯಾಸವನ್ನು ತಾಳಿದ ಅಶೋಕನು ಅತ್ಯುಚ್ಚವಾದ ಆದರ್ಶಗಳನ್ನು ಮನಸ್ಸಿನಲ್ಲಿ ತಂದಿಟ್ಟುಕೊಂಡನು. ಇನ್ನು ಮುಂದೆ ಯುದ್ಧವನ್ನೇ ಮಾಡುವುದಿಲ್ಲವೆಂಬ ಸಂಕಲ್ಪಮಾಡಿ ಯುದ್ಧವನ್ನೇ ತ್ಯಜಿಸಿದನು. ರಾಜರೊಡನೆಯೂ ಯೋಧರೊಡನೆಯೂ ಕಾದಾಡಿ ಹೆಣಗಳ ರಾಶಿಗಳನ್ನು ಕೆಡಹುವುದಕ್ಕಿಂತ ಲೋಕದ ಅಜ್ಞಾನವನ್ನೂ ಪಾತಕವನ್ನೂ ಹೋಗಲಾಡಿಸಿ ಅಹಿಂಸಾ ಧರ್ಮವನ್ನು ನೆಲೆಗೊಳಿಸುವುದೇ ಪರಮೋತ್ತಮವೆಂದು ನಿರ್ಣಯಿಸಿದನು. ಸಾಮ್ರಾಜ್ಯವನ್ನು ವಿಸ್ತಾರಗೊಳಿಸಿ ಅಟ್ಟಹಾಸ ವೈಭವಗಳನ್ನು ಬೆಳೆಸಿ ಜನರ ಕಣ್ಣು ಕುಕ್ಕುವುದಕ್ಕಿಂತಲೂ ರಾಜ್ಯವನ್ನು ಧರ್ಮರಾಜ್ಯವನ್ನಾಗಿ ಮಾಡುವುದೇ ಉಚಿತವೆಂದು ನಿರ್ಧರಮಾಡಿಕೊಂಡನು. ಕ್ರಿ. ಪೂ. 259ರಿಂದ ಚಕ್ರವರ್ತಿಯು ಧರ್ಮವನ್ನು ನೆಲೆಗೊಳಿಸಲು ಪ್ರಜೆಗಳಿಗೆ ಸಂದೇಶರೂಪವಾಗಿ ಹಿತವಾದವನ್ನು ಹೇಳಿ ಪ್ರಕಟಗೊಳಿಸಲು ಆರಂಭಿಸಿದನು.

**ಮುಖ್ಯ ಶಿಲಾ ಶಾಸನಗಳು**

ಈ ಸಂದೇಶಗಳನ್ನು ಸಾಮಾನ್ಯವಾಗಿ ಶಾಸನಗಳೆಂದೂ ನಿರೂಪಗಳೆಂದೂ ಕರೆಯುವುದುಂಟು. ಅಶೋಕನ ನಿರೂಪಗಳೆಲ್ಲವೂ ಲಬ್ಧವಾಗಿಲ್ಲ. ಅವುಗಳಲ್ಲಿ ಅನೇಕ ನಿರೂಪಗಳು ಸಾಮ್ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಬಂಡೆಗಳಮೇಲೂ ಕಂಬಗಳಮೇಲೂ ಲಿಖಿತವಾಗಿ, ಎರಡುಸಾವಿರ ವರ್ಷಗಳು ಕಳೆದುಹೋದಾಗ್ಯೂ ಅಲ್ಲಲ್ಲಿ ಕಂಡುಬಂದಿವೆ. ಮಧ್ಯದೇಶದಲ್ಲಿ ಸಾಸ್ಸರಾಂ, ರೂಪನಾಥ, ವೈರಾಟ್; ದಕ್ಷಿಣದಲ್ಲಿ ಸಿದ್ಧಪುರ, ಬ್ರಹ್ಮಗಿರಿ; ವಾಯುವ್ಯದಲ್ಲಿ ಯೂಸುಫ್ ಸಾಯಿ (Yusuf Zai) ಪ್ರದೇಶದ ಷಹಬಾಸ್‌ಘರಿ, ಹಸಾರಾ ಜಿಲ್ಲೆಯ ಮನ್ಸೇರಾ; ಪಶ್ಚಿಮದಲ್ಲಿ ಸೌರಾಷ್ಟ್ರದಲ್ಲಿಯ ಗಿರಿನಗರ; ಮೂಡಲಲ್ಲಿ ಪುರೀ ಜಿಲ್ಲೆಯ ಧವುಲಿ, ಗಂಜಾಂ ಜಿಲ್ಲೆಯ ಜೌಗಡ; ಉತ್ತರದಲ್ಲಿ ನೇಪಾಲದ ತರೈ ಪ್ರದೇಶದಲ್ಲಿಯ ನಿಗ್ಲೀವ ಮತ್ತು ರುಮ್ಮಿಂಡಯ್ ಎಂಬ ಸ್ಥಳಗಳಲ್ಲಿ ದೊರೆತಿರುವ ಶಾಸನಗಳು ಸಾಮ್ರಾಜ್ಯವಿಸ್ತಾರವನ್ನು ತೋರಿಕೊಡುವ ಕಾರಣದಿಂದ ಮುಖ್ಯವಾಗಿವೆ. ಸಿಂಧುನದಿಯ ಪಶ್ಚಿಮ ಭಾಗದಲ್ಲಿ ಸಿಕ್ಕಿರತಕ್ಕ ಶಾಸನಗಳು ಬಲದಿಂದ ಎಡಕ್ಕೆ ಬರೆಯುವ **ಖರೋಷ್ಠೀ** ಲಿಪಿಯಲ್ಲಿವೆ; ಇತರ ಸ್ಥಳಗಳಲ್ಲಿ ಕಂಡಿರತಕ್ಕವು ಎಡದಿಂದ ಬಲಕ್ಕೆ ಬರೆಯುವ ***ಬ್ರಾಹ್ಮೀ** ಲಿಪಿಯಲ್ಲಿವೆ. ಈ ಬ್ರಾಹ್ಮೀಲಿಪಿಯೇ ನಾಗರಲಿಪಿಗಳಿಗೂ ಕನ್ನಡ ತೆಲುಗು ಲಿಪಿಗಳಿಗೂ ಮೂಲ. ಶಾಸನಗಳ ಭಾಷೆಯು ಪಾಳಿನುಡಿಯ ಒಂದು ರೂಪವಾದ **ಮಾಗಧೀ** ಎಂಬ ಪ್ರಾಕೃತ. ಎಲ್ಲವುಗಳಲ್ಲಿಯೂ ಧರ್ಮಪ್ರಚಾರವೇ ಮುಖ್ಯ ವಿಷಯ ಮತ್ತು ಉದ್ದೇಶ; ಕೆಲವು ಅಶೋಕನ ಮನಸ್ಸಿನ ಕೋಮಲತೆಯನ್ನು ಪ್ರಕಾಶಗೊಳಿಸಿ ಓದಿದವ[illegible] ಮುಗ್ಧರನ್ನಾಗಿ ಮಾಡುತ್ತವೆ. ಪೃಥ್ವಿಯಲ್ಲಿ ಆಳಿದ ಪ್ರಭುಗಳಲ್ಲಿ [illegible] ವನ ಶಾಸನವೂ ಇವುಗಳಂತೆ ಇಲ್ಲ. ಹಿರೇದಾರಾ ಸಮ್ರಾ[illegible] ರಾಜ [illegible] ಸ್ಥಾನಿ [illegible]

* ಬ್ರಾಹ್ಮೀಲಿಪಿಗೂ ಮೊಹೆಂಜೊದಾರೊ ಹರಪ್ಪಗಳ ಚಿತ್ರಲಿಪಿಗೂ ಸಾ[illegible]ಪ್ರತ್ಯಕ್ಷದ ಲಿಪಿಯೊಂದು ವಿಕ್ರಮಖೋಲಪೆಂಟೆಡೆಯ ಲೇಖನದಲ್ಲಿ ದೊರಕಿದೆ. ಅದರಿಂದ [illegible] ಲಿಪಿಯ ಮೂಲವು ಭಾರತೀಯವೆಂದೇ ದೃಢವಾಗುತ್ತದೆ. ಬ್ರಾಹ್ಮೀಲಿಪಿ (ಸಾಧಾರಣ ಮಾತಿನಲ್ಲಿ ಬ್ರಹ್ಮಲಿಪಿ)ಯೇ ನಮ್ಮ ವರ್ಣಮಾಲೆಗಳಿಗೆ ಮೂಲ.

ಲೇಖರೂಪದಲ್ಲುಂಟು; ಅದನ್ನು ಇವುಗಳೊಂದಿಗೆ ಹೋಲಿಸುವುದಕ್ಕೇ ಆಗುವುದಿಲ್ಲ. ಇತರ ಪ್ರಭುಗಳ ಶಾಸನಗಳಲ್ಲಿ ದರ್ಪವೂ ಅಟ್ಟಹಾಸವೂ ತುಂಬಿರುತ್ತವೆ; ಅಶೋಕನ ಶಾಸನಗಳಲ್ಲಿ ಕರುಣೆಯೂ ನಿಸ್ಪೃಹತೆಯೂ ದೈನ್ಯವೂ ತುಂಬಿವೆ.

ಕ್ಷೇತ್ರಯಾತ್ರೆ

ಕ್ರಿ. ಪೂ. 256ರಲ್ಲಿ ಚಕ್ರವರ್ತಿಯು ಬುದ್ಧದೇವನ ಜನ್ಮಸ್ಥಾನವಾದ ಕಪಿಲವಸ್ತು ಪ್ರಾಂತದಲ್ಲಿ ಸಂಚರಿಸಿ, ಲುಂಬಿನಿ ವನದ ಹಾಳು ಸ್ಥಿತಿಯನ್ನು ಕಂಡು ಮನಕರಗಿದವನಾಗಿ ಬೌದ್ಧ ಕ್ಷೇತ್ರಗಳನ್ನೆಲ್ಲ ಯಾತ್ರಾರ್ಥಿಯಾಗಿ ಕಾಣುವ ನಿಶ್ಚಯಮಾಡಿಕೊಂಡನು. ಕ್ರಿ. ಪೂ. 250ರಲ್ಲಿ ಉಪಗುಪ್ತನನ್ನು ಜತೆಯಲ್ಲಿ ಕರೆದುಕೊಂಡು, ಬೌದ್ಧಮತವನ್ನು ಸ್ವೀಕರಿಸಿದ್ದ ಚಾರುಮತಿ ಯೆಂಬ ಮಗಳೊಡನೆ ಪ್ರಯಾಣಮಾಡುತ್ತ ಕಪಿಲವಸ್ತು, ರಾಜಗೃಹ, ಗಯಾ, ಶ್ರಾವಸ್ತಿ, ವೈಶಾಲೀ, ವಾರಣಾಸಿ, ಕುಶೀನಗರ ಮುಂತಾದ ಸ್ಥಳಗಳೆಲ್ಲವನ್ನೂ ಕಂಡು, ಆ ಸ್ಥಳಗಳಲ್ಲೆಲ್ಲ ಉಚಿತವಾದ ಮಂದಿರಗಳನ್ನು ಕಟ್ಟುವುದಕ್ಕೂ ಸ್ಮಾರಕ ಸ್ತಂಭಗಳನ್ನು ನೆಡುವುದಕ್ಕೂ ಆಜ್ಞೆಮಾಡಿದನು. ಈ ಪ್ರವಾಸಕಾಲದಲ್ಲಿಯೇ ಚಾರುಮತೀದೇವಿಯ ಪತಿಯು ಕಾಲಗತಿ ಯನ್ನು ಹೊಂದಲು ಆಕೆಯು ಆದರದಿಂದ ಸಂನ್ಯಾಸವನ್ನು ತಾಳಿ ನೇಪಾಲ ದೇಶದ ಒಂದಾನೊಂದು ವಿಹಾರದಲ್ಲಿಯೇ ತನ್ನ ಉಳಿದ ಆಯುಷ್ಯವನ್ನು ಕಳೆಯಲು ನಿಶ್ಚಯಿಸಿ ಅಲ್ಲಿಯೇ ನಿಂತಳು.

ಯಾತ್ರೆಯ ಪರಿಣಾಮವಾಗಿ ಚಕ್ರವರ್ತಿಯ ಮನಸ್ಸಿನಲ್ಲಿ ಬೌದ್ಧ ಮತದಲ್ಲಿ ಶ್ರದ್ಧೆಯೂ ನಿಷ್ಠೆಯೂ ಹೆಚ್ಚಿದವು. ಕ್ರಿ. ಪೂ. 240ರಲ್ಲಿ ಆತನು ದೀಕ್ಷೆಯನ್ನು ಕೈಕೊಂಡು ಬೌದ್ಧ ಸಂಘವನ್ನುದ್ಧರಿಸಲು ತೊಡಗಿದನು. ಬೌದ್ಧ ಭಿಕ್ಷುಗಳ ಮಹಾಸಭೆಯನ್ನು ...ದ್ಧಮತ ಪ್ರಚಾರವನ್ನು ನಡೆಸಬೇಕೆಂದು ನಿಶ್ಚಯಮಾಡಿ ಕರೆಯಿಸಿದನು. ಬೌದ್ಧ ಮಹಾಸಭೆಗಳಲ್ಲಿ ಇದು ಮೂರನೆಯ ...ದ್ಧವಾಗಿದೆ. ಮೊಗಲ್ಲನ ಅಥವಾ ಮೊಗ್ಗಲಿಪುತ್ರನೆಂಬ ಬೌದ್ಧ ಭಿಕ್ಷುವು ಸಭಾಧ್ಯಕ್ಷನಾಗಿ ಸಭಾಕಾರ್ಯವನ್ನು ಸಮಗ್ರಗೊಳಿಸಿದನು.

ಭಿಕ್ಷುಗಳೆಂದು ವೇಷಧಾರಿಗಳಾಗಿ ಕಪಟ ಜೀವನವನ್ನು ನಡೆಸುತ್ತಲಿದ್ದವರೂ ಸುಶಿಕ್ಷಾ ದೀಕ್ಷೆಗಳಿಲ್ಲದೆ ಅಯೋಗ್ಯರೆನಿಸಿದ್ದವರೂ ಮೊದಲು ಅಧ್ಯಕ್ಷನ ವಿಚಾರಣೆಗೆ ಗುರಿಯಾದರು; ಅಯೋಗ್ಯರಾದವರು ಅಪಮಾನಕ್ಕೆ ಗುರಿಯಾಗಿ ಸಭಾಸ್ಥಾನದಿಂದ ಭ್ರಷ್ಟರಾದರು. ಈ ರೀತಿ ಸಂಘ ಶುದ್ಧಿಯಾದ ಮೇಲೆ ಬೌದ್ಧ ಗ್ರಂಥಗಳ ಸಂಗ್ರಹ ಶುದ್ಧಿಗಳ ಕರ್ತವ್ಯವು ಆಲೋಚಿತ ವಾಯಿತು. ಮಹಾಕಶ್ಯಪ, ಆನಂದ, ಉಪಾಲಿ ಮುಂತಾದ ಪೂರ್ವ ಭಿಕ್ಷುಗಳು ಬುದ್ಧದೇವನ ಉಪದೇಶಗಳನ್ನು ಸಂಗ್ರಹಿಸಿದ್ದರೂ ಅವುಗಳನ್ನು ಕ್ರಮವಾಗಿ ರಚಿಸಿರಲಿಲ್ಲ. ಈ ಸಭೆಯ ಸೂಚನೆಯಂತೆ ಬೌದ್ಧ ಭಿಕ್ಷು ಗಳಲ್ಲಿ ಪ್ರೌಢ ವಿದ್ವಾಂಸರಾಗಿದ್ದವರು ಅವುಗಳೆಲ್ಲವನ್ನೂ ಶೇಖರಿಸಿ ಶುದ್ಧಿ ಗೊಳಿಸಿ ***ತ್ರಿಪಿಟಕ**ಗಳ ರೂಪದಲ್ಲಿ ಸಿದ್ಧಗೊಳಿಸಿ ಬರೆಯಿಸಿದರು. ಈ ಗ್ರಂಥಗಳನ್ನು ಅನೇಕ ಪ್ರತಿ ಗಳಾಗಿ ಬರೆಯಿಸಿ ಮುಖ್ಯ ವಿಹಾರಗಳಿಗೆಲ್ಲ ಕಳು ಹಿಸಿಕೊಟ್ಟಿರಬೇಕೆಂಬುದು ನಿರ್ವಿವಾದವಾದುದು. ಗ್ರಂಥ ಶುದ್ಧಿಯು ವ್ಯವಸ್ಥೆಯಾದ ತರುವಾಯ ಬೌದ್ಧಮತ ಪ್ರಚಾರವನ್ನು ಕುರಿತು ಯೋಚಿಸಿ ಪ್ರಚಾರಕರನ್ನು ಸಾಮ್ರಾಜ್ಯದ ಒಳಗೂ ಹೊರಗೂ ಕೊಟ್ಟು ಕಳುಹಿಸ ತಕ್ಕುದೆಂದು ನಿಶ್ಚಯವಾಯಿತು. ಈ ಸಭೆಯ ಕಾರ್ಯಕಲಾಪವು ಪ್ರಸಿದ್ಧವಾಗಿ ಭರತವರ್ಷದಲ್ಲಿಯೇ ಅಲ್ಲದೆ **ಸಿಂಹಳ** ದ್ವೀಪದಲ್ಲಿಯೂ ಅಲ್ಲಿಯ **ತಿಷ್ಯರಾಜ**ನಿಗೆ ತಿಳಿದು ಆ ರಾಜನೇ ಬೌದ್ಧ ಭಿಕ್ಷುಗಳನ್ನು ಯಾಚಿಸಿದನು. ಅಶೋಕ ಚಕ್ರವರ್ತಿಯು ಆ ಪ್ರಾರ್ಥನೆಯನ್ನು ಮನ್ನಿಸಿ **ಮಗ** ಮತ್ತು **ಸಂಘಮಿತ್ರೆ**ಯೆಂಬ ತನ್ನ ಭ್ರಾತೃವರ್ಗದವರನ್ನೇ ಕೊಟ್ಟನು. ಅವರು ಸಿಂಹಳದ್ವೀಪಕ್ಕೆ ಪ್ರಯಾಣಮಾಡಿ ತಿಷ್ಯ ಆಸ್ಥಾನದಲ್ಲಿ ಬೌದ್ಧ ತತ್ವಗಳನ್ನು ವಿವರಿಸಲು, ಆ ರಾಜನೂ ಅತನ ಕರೂ ಮೆಚ್ಚಿ ಬೌದ್ಧಮತವನ್ನೇ ಸ್ವೀಕರಿಸಿದರು. ತಿಷ್ಯನು ಬೋಧಿವ

ಸಂಘ ಶುದ್ಧಿ

ಮತ ಗ್ರಂಥಗಳು

ಮತ ಪ್ರಚಾರ

---

* ತ್ರಿಪಿಟಕ ಅಥವಾ ತ್ರಿಪಿಟ್ಟಕಗಳೆಂದರೆ ಮೂರು ಬುಟ್ಟಿಗಳು ಅಥವಾ ವಿಭಾಗಗಳು — 1. ಸೂತ್ತ ಅಥವಾ ಸೂತ್ರಪಿಟಕ, 2. ವಿನಯಪಿಟಕ, 3. ಅಭಿದಮ್ಮ ಅಥವಾ ಅಭಿಧರ್ಮಪಿಟಕ.

ಒಂದು ಶಾಖೆಯನ್ನು ತರಿಸಿಕೊಂಡು ಅದನ್ನು ತನ್ನ ದೇಶದಲ್ಲಿಯೇ ನೆಡಿಸಿ ಅನುರಾಧಪುರದಲ್ಲಿ ಮಹೇಂದ್ರ ಸಂಘಮಿತ್ರೆಯರಿಗೆ ಒಂದು ವಿಹಾರವನ್ನು ಕಟ್ಟಿಸಿಕೊಟ್ಟನು. ಬೌದ್ಧಮತವು ಸಿಂಹಳದ್ವೀಪದಲ್ಲಿ ಬೇಗನೆ ಪ್ರಚಾರವಾಯಿತು. **ಬ್ರಹ್ಮದೇಶ** ಅಥವಾ **ಬರ್ಮಾದೇಶ**ದಲ್ಲಿಯೂ ಮತಪ್ರಚಾರಕರು ಸ್ವಲ್ಪಕಾಲದಲ್ಲಿಯೇ ಅಲ್ಲಿಯ ಜನರನ್ನೊಪ್ಪಿಸಿ ಪ್ರಚಾರಕಾರ್ಯದಲ್ಲಿ ಕೃತಕೃತ್ಯರಾದರು.

ಭಿಕ್ಷುಗಳ ದೂರಯಾತ್ರೆ

ಸಿಂಹಳದ್ವೀಪ ಬ್ರಹ್ಮದೇಶಗಳಲ್ಲದೆ ಇತರ ಭಾಗಗಳಿಗೂ ಪ್ರಚಾರಕರು ಹೊರಟರು. **ಚೋಳ, ಪಾಂಡ್ಯ, ಕೇರಲಪುತ್ರ, ಸತ್ಯಪುತ್ರ** ರಾಷ್ಟ್ರಗಳೇ ಅಲ್ಲದೆ ಕಳಿಂಗ, ಬನವಾಸಿ, ಶಾತವಾಹನ ರಾಷ್ಟ್ರಗಳಲ್ಲಿಯೂ ಬೌದ್ಧ ಭಿಕ್ಷುಗಳು ಪ್ರಚಾರ ಕಾರ್ಯವನ್ನು ಪ್ರಯತ್ನಿಸಿದರು. ಇವುಗಳಲ್ಲದೆ ಭೂಮಧ್ಯ ಸಮುದ್ರದ ಮೂಡಲ ಭಾಗದಲ್ಲಿದ್ದ ಯವನ ರಾಷ್ಟ್ರಗಳಿಗೂ ಈ ಪ್ರಚಾರಕರು ಹೊರಟು ಮತಪ್ರಚಾರ ಮಾಡಿದುದು ಸೋಜಿಗವಾದುದು. ಅಲ್ಲಿಯ ಯವನ ರಾಜರು ಅಶೋಕ ಚಕ್ರವರ್ತಿಯೊಡನೆ ರಾಯಭಾರಗಳನ್ನು ನಡೆಸುತ್ತ ಮೈತ್ರಿಯನ್ನು ಕಟ್ಟಿಕೊಂಡೇ ಇದ್ದರು. ಮಿಶ್ರದೇಶದ **ತುರಮಾಯ** (ಈಜಿಪ್ಟಿನ ಟೋಲೆಮಿ ಫಿಲಡೆಲ್ಫಸ್, Ptolemy Philadelphos) ಕೈರೆನೆಯ **ಮೋಗ** (ಮೇಗಾಸ್, Magas), ಸಿರಿಯದ **ಅಂಟಿಯೋಕ** (ಅಂಟಿಯಖಸ್, Antiochus), ಎಪಿರಸ್ಸಿನ **ಅಲಿಕಸುಂದರ** (ಅಲೆಕ್ಸಾಂಡರ್, Alexander) ರಾಜರುಗಳ ಬಳಿಗೆ ಪ್ರಚಾರಕರು ಹೊರಟ ಸಂಗತಿಯು ಶಿಲಾಲೇಖನಗಳಿಂದ ದೃಢಪಟ್ಟಿದೆ. ಈ ದೇಶಗಳಿಗೆ ಹೊರಟು ಅಲ್ಲಿಯ ಯವನ ತತ್ವಜ್ಞರನ್ನೂ ಯೆಹೂದೀಜನರನ್ನೂ ಕಂಡು ಈ ಪ್ರಚಾರಕರು ಬೌದ್ಧ ಧರ್ಮವನ್ನು ಎಷ್ಟು ಮಾತ್ರ ಪ್ರಚಾರಪಡಿಸಿದರೋ ತಿಳಿದಿಲ್ಲ. ಯೇಸು ಕ್ರಿಸ್ತನಿಗೆ ಇನ್ನೂರು ವರ್ಷಗಳ ಹಿಂದೆಯೇ ಆ ಪ್ರಾಂತಗಳಲ್ಲಿ ಸಂಚರಿಸಿ ಬೋಧೆಮಾಡಿದ ಬೌದ್ಧ ಭಿಕ್ಷುಗಳೇ ಕ್ರೈಸ್ತ ಮತತತ್ವಗಳು ತಲೆಯೆತ್ತಲು ಕಾರಣರೆಂದು ಕೆಲವರು ಅಭಿಪ್ರಾಯಪಡಲು ಅವಕಾಶವುಂಟು.

ಶಿಲಾಲೇಖ ರೂಪದಲ್ಲಿರುವ ಶಾಸನಗಳಿಂದಲೇ ಈ ಚಕ್ರವರ್ತಿಯ ವ್ಯಕ್ತಿ ಪರಿಚಯವು ನಮಗಾಗುವುದು. ಯುದ್ಧವನ್ನೇ ತ್ಯಜಿಸಿ ನಲವತ್ತು

ಧರ್ಮಾಶೋಕನ ಗುಣಸಂಪತ್ತು.

ವರ್ಷಕಾಲ ವಿಸ್ತಾರವಾದ ಸಾಮ್ರಾಜ್ಯವನ್ನು ಪಾಲಿಸಿದಂತಹವನು ಅಸಾಧಾರಣ ಗುಣಗಳನ್ನೇ ಪಡೆದಿದ್ದಿರಬೇಕು. ಅಶೋಕನ ಮನಸ್ಸು ನಿಷ್ಕಲ್ಮಷವಾದುದು, ಸರಳವಾದುದು. ಆತನ ಶಾಸನಗಳಲ್ಲಿ ಗರ್ವದ ಮಾತೊಂದಾದರೂ ಇಲ್ಲ. ಯುದ್ಧದಲ್ಲಿ ನಡೆವ ಹತ್ಯ ಹಿಂಸೆಗಳಿಗಾಗಿ ಪರಿತಾಪವೂ, ಧರ್ಮದಲ್ಲಿ ಶ್ರದ್ಧೆಯೂ, ರಾಷ್ಟ್ರದಲ್ಲಿ ತಾನು ಸೇವಕ ಮಾತ್ರದವನೆಂಬ ಪ್ರಜ್ಞೆಯೂ, ಧರ್ಮಕ್ಕಾಗಿ ಹಗಲಿರುಳೂ ಪಡುತ್ತಿದ್ದ ಶ್ರಮವೂ, ಜೀವನದ ರೀತಿಯಲ್ಲಿ ತೋರಿದ ಸೌಲಭ್ಯವೂ ಒಂದು ಶಾಸನದಲ್ಲಿ ಅತಿಸ್ಪಷ್ಟವಾಗಿ ಕಾಣುತ್ತವೆ. ತನ್ನ ದೋಷಗಳಾವುದನ್ನೂ ಆತನು ಮರೆಮಾಚಲಿಲ್ಲ; ಇಲ್ಲದ ಗುಣವನ್ನು ತೋರಿಸಲು ಯತ್ನಿಸಲೂ ಇಲ್ಲ. ಬೌದ್ಧಮತದಲ್ಲಿ ಅನಂತವಾದ ಭಕ್ತಿಯನ್ನೂ ಅಹಿಂಸಾ ತತ್ವದಲ್ಲಿ ಪರಮ ಶ್ರದ್ಧೆಯನ್ನೂ ತೋರಿದರೂ ಈ ಚಕ್ರವರ್ತಿಯು ಇತರ ಮತಸ್ಥರನ್ನು ಸ್ವಲ್ಪವಾದರೂ ತೊಂದರೆಗೆ ಗುರಿಮಾಡಲಿಲ್ಲ. ಪರಮತ ಸಹಿಷ್ಣುತೆಯೇ ಧರ್ಮದ ಅಡಿಗಲ್ಲೆಂದು ಆತನು ಬೋಧಿಸುತ್ತಿದ್ದನು. ಬ್ರಾಹ್ಮಣ ಶ್ರಮಣರನ್ನು ಎಲ್ಲರೂ ಗೌರವಿಸತಕ್ಕದ್ದೆಂದು ಸಾರುತ್ತಿದ್ದನು. ತನ್ನ ಅನುಭವವನ್ನು ಪ್ರಜೆಗಳಿಗೆ ತಿಳಿಸಿ ಅವರೆಲ್ಲರೂ ಧರ್ಮವನ್ನು ಬಿಡದೆ ಆಚರಿಸಬೇಕೆಂದು ಪದೇ ಪದೇ ಹೇಳಿರುವನು. ಸತ್ಯವನ್ನು ಬಿಡದಿರುವುದು, ಗುರುಹಿರಿಯರಲ್ಲಿ ವಿನೀತರಾಗಿರುವುದು, ಅಹಿಂಸಾ ತತ್ವವನ್ನಾಚರಿಸುವುದು, ಇತರ ಮತಸ್ಥರನ್ನು ನೋಯಿಸದೆ ಗೌರವಿಸುವುದು—ಆತನು ಉಪದೇಶಿಸಿದ ಧರ್ಮದ ಮುಖ್ಯ ಅಂಶಗಳು. ಆತನ ಶಾಸನಗಳು ರಾಜಶಾಸನಗಳಂತೆಯೇ ತೋರುವುದಿಲ್ಲ; ಯಾರೋ ಮಹಾತ್ಮನ ಮೃದುವಾಣಿಯಂತೆ ತೋರುವುದು. ಇಂತಹ ಅಶೋಕನು ಶಾಸನಗಳಲ್ಲಿ **ದೇವಾನಾಂ ಪ್ರಿಯ, ಪ್ರಿಯದರ್ಶಿ** ಎಂಬ ಹೆಸರುಗಳನ್ನು ತಾಳಿರುವನು; ಆದರೆ ಧರ್ಮಾಶೋಕ ಚಕ್ರವರ್ತಿಯೆಂಬ ಹೆಸರು ಜನರಲ್ಲಿ ರೂಢಿಯಾಗಿ ಶಾಶ್ವತವಾಗಿ ನಿಂತಿತು.

ಈ ಚಕ್ರವರ್ತಿಯ ಕಡೆಗಾಲವು ವ್ಯಸನದಿಂದ ತುಂಬಿತು. ಅರಮನೆಯಲ್ಲಿ ರಾಣಿಯರು ಪರಸ್ಪರ ಮಾತ್ಸರ್ಯದಿಂದ ಜಗಳಗಳನ್ನಾಡುತ್ತಿದ್ದುದಲ್ಲದೆ ಮುಂದಿನ ರಾಜ್ಯಾಧಿಕಾರಕ್ಕಾಗಿ ಒಳಸಂಚುಮಾಡುತ್ತಿದ್ದರು.

ಕಿರಿಯ ರಾಣಿಯಾಗಿದ್ದ **ತಿಷ್ಯರಕ್ಷಿತೆ**ಯೆಂಬಾಕೆಯಿಂದಲೇ ಚಕ್ರವರ್ತಿಯ ಮನಸ್ಸಿಗೆ ಅತಿಖೇದವುಂಟಾಯಿತು. ಅರಮನೆಯಲ್ಲಿ ನೆಟ್ಟಿದ್ದ ಬೋಧಿವೃಕ್ಷವನ್ನೇ ಆಕೆಯು ಕಿತ್ತು ಹಾಕಿಸಿದ್ದಲ್ಲದೆ **ಕುನಾಲ**ನೆಂಬ ರಾಜಕುಮಾರನಮೇಲೆ ತಪ್ಪನ್ನು ಹೊರಿಸಿ, ನಿರಪರಾಧಿಯಾಗಿದ್ದ ಆತನಿಗೆ ಕ್ರೂರ ಶಿಕ್ಷೆಯಾಗುವಂತೆ ಮಾಡಿದಳು. ಕುನಾಲನು ಈಕೆಯ ದೆಸೆಯಿಂದ ಕಣ್ಣುಗಳನ್ನು ಕಳೆದುಕೊಂಡು ರಾಜ್ಯಭ್ರಷ್ಟನಾಗಬೇಕಾಯಿತು. ಈ ದುರಂತ ಪ್ರಸಂಗವಾದಮೇಲೆ ಚಕ್ರವರ್ತಿಯ ಮೊಮ್ಮಕ್ಕಳು **ಸಾಂಪ್ರತಿ** ಮತ್ತು **ದಶರಥ**ರೆಂಬಿಬ್ಬರು ಮುಂದಿನ ರಾಜ್ಯಾಧಿಕಾರಕ್ಕಾಗಿ ತಾತನು ಜೀವಂತನಾಗಿದ್ದಾಗಲೇ ಕಲಹವಾಡತೊಡಗಿದರು. ಅಧಿಕಾರಿಗಳೂ ಸಾಮಂತರೂ ಈ ಪಕ್ಷ ವಿಪಕ್ಷಗಳಲ್ಲಿ ಸೇರಿಕೊಂಡು ಪಿತೂರಿಗಳನ್ನೆಬ್ಬಿಸುತ್ತಿದ್ದರು. ಕ್ರಿ. ಪೂ. 233ರಲ್ಲಿ ದೇಹತ್ಯಾಗ ಮಾಡಿದಾಗ ಅಶೋಕ ಚಕ್ರವರ್ತಿಯ ಮನಸ್ಸು ಈ ಸಂಗತಿಗಳಿಂದ ಖಿನ್ನತೆಯನ್ನು ತಾಳಿರಬೇಕಾಗಿತ್ತು.

**ಕಡೆಗಾಲ**

ರಾಜ್ಯಭಾರ ನಿರ್ವಾಹವು ಚಂದ್ರಗುಪ್ತ ಸಾರ್ವಭೌಮನ ಕಾಲದಲ್ಲಿದ್ದಂತೆಯೇ ಅಶೋಕ ಚಕ್ರವರ್ತಿಯ ಕಾಲದಲ್ಲಿಯೂ ನಡೆಯಿತು. ಗಿರಿನಗರದಲ್ಲಿ ನಿರ್ಮಿತವಾಗಿದ್ದ **ಸುದರ್ಶನ** ಸರೋವರದ ಕಟ್ಟೆಯೊಡೆದು ಹೋಗಿತ್ತು; ಆ ಪ್ರಾಂತದಲ್ಲಿ ರಾಜಾಧಿಕಾರಿಯಾಗಿದ್ದ **ತುಷಾಸ್ಪ**ನೆಂಬಾತನು ಕಟ್ಟೆಯ ಜೀರ್ಣೋದ್ಧಾರ ಮಾಡಿಸಿದನು. ಜನರ ಕ್ಷೇಮಾಭಿವೃದ್ಧಿಗಳಿಗೆ ಲೋಪವೇನೂ ತೋರಿಕೊಳ್ಳಲಿಲ್ಲ. ಸರ್ವಜನೋಪಯುಕ್ತವಾದ ಕಟ್ಟಡಗಳು ಅಶೋಕ ಚಕ್ರವರ್ತಿಯ ಕಾಲದಲ್ಲಿ ಇನ್ನೂ ಹೆಚ್ಚಿದವು. ಏಕೆಂದರೆ ಆ ಚಕ್ರವರ್ತಿಗೆ ಮಂದಿರಗಳನ್ನು ನಿರ್ಮಿಸುವುದರಲ್ಲಿ ಬಹು ಶ್ರದ್ಧೆಯಿತ್ತು. ಈತನು ಕಟ್ಟಿಸಿದ ವಿಹಾರಗಳೂ ಚೈತ್ಯಗಳೂ ಸ್ತೂಪಗಳೂ ಅಸಂಖ್ಯಾತ. ನೂರಾರು ವರ್ಷಗಳು ಕಳೆದ ತರುವಾಯ ದೂರದೇಶಗಳಿಂದ ಬಂದಿದ್ದ ಯಾತ್ರಾರ್ಥಿಗಳು ಆ ಕಟ್ಟಡಗಳನ್ನು ಕಂಡು ಆಶ್ಚರ್ಯಪಟ್ಟರು. ಅಂತಹ ಅದ್ಭುತವಾದ ಮಂದಿರಗಳನ್ನು ಕಟ್ಟಿಸಲು

**ರಾಜ್ಯಭಾರ**

**ಮಂದಿರಗಳು**

ಅಶೋಕನು ಅನೇಕ ದೈತ್ಯದಾನವರನ್ನು ಮಂತ್ರಶಕ್ತಿಯಿಂದ ಸ್ವಾಧೀನ ಮಾಡಿಕೊಂಡು, ಅವರಿಂದ ಅವುಗಳನ್ನು ಕಟ್ಟಿಸಿದನೆಂಬ ಕಟ್ಟುಕತೆಯನ್ನು ಜನರಾಡಿಕೊಳ್ಳುತ್ತಿದ್ದರಂತೆ.

ದಾನ

ಬೇಟೆಯನ್ನು ನಿಲ್ಲಿಸಿ ಅರಮನೆಯಲ್ಲಿ ಪ್ರಾಣಿಹತ್ಯವನ್ನು ನಿಷೇಧಿಸಿದ ತರುವಾಯ ಅಶೋಕನು ದಾನಧರ್ಮ ಮಾಡಲು ಒಂದು ಶಾಖೆಯನ್ನು ನಿರ್ಮಿಸಿದ್ದನು. ಅಲ್ಲಿ ಬಡಬಗ್ಗರಿಗೂ ಸಾಧುಸಂತರಿಗೂ ದಾನಧರ್ಮಗಳು ಮತಪಕ್ಷಪಾತ ಲೇಶವೂ ಇಲ್ಲದೆ ನಡೆಯುತ್ತಿದ್ದವು. ನರಜೀವಿಗಳಿಗಾಗಿ ವಿಶ್ರಾಂತಿಗೃಹಗಳನ್ನೂ ಸತ್ರಗಳನ್ನೂ ಕಟ್ಟಿಸಿದ್ದೇ ಅಲ್ಲದೆ ಈ ಚಕ್ರವರ್ತಿಯು ತನ್ನಲ್ಲಿ ನೆಲೆಗೊಂಡಿದ್ದ ಅಪಾರವಾದ ಭೂತದಯೆಯಿಂದ ಮೃಗಪ್ರಾಣಿಗಳಿಗೂ ಚಿಕಿತ್ಸಾಲಯಗಳನ್ನು ಕಟ್ಟಿಸಿ ಪ್ರಾಣಿಗಳನ್ನು ಕೊಲ್ಲುವುದು ಅಪರಾಧವೆಂದು ಪ್ರಕಟಿಸಿದನು. ಪಾಶ್ಚಾತ್ಯ ಸೀಮೆಗಳಲ್ಲಿ ಮಾನವ ರೋಗಿಗಳಿಗೆ ಚಿಕಿತ್ಸೆಯನ್ನು ಉಚಿತವಾಗಿ ಒದಗಿಸತಕ್ಕ ನಿಲಯಗಳನ್ನು ಕ್ರೈಸ್ತ ಮತಸ್ಥರೇ ಮೊದಲು ಕಟ್ಟಿಸಿದವರು; ಭಾರತ

ಚಿಕಿತ್ಸಾಲಯ

ವರ್ಷದಲ್ಲಿ ಅದಕ್ಕೆ ಇನ್ನೂರು ವರ್ಷಗಳ ಹಿಂದಿನ ಕಾಲದಲ್ಲಿಯೇ ಮಾನವರಿಗೇ ಅಲ್ಲದೆ ಜೀವಜಂತುಗಳಿಗೂ ಉಚಿತ ಚಿಕಿತ್ಸಾಲಯಗಳನ್ನು ಈ ಚಕ್ರವರ್ತಿಯು ನಿರ್ಮಿಸಿದ್ದನು. ಇದಲ್ಲದೆ ಅಶೋಕನು **ಧರ್ಮ ಮಹಾಮಾತ್ರ**ರೆಂಬ ಹೊಸ ಅಧಿಕಾರಿಗಳನ್ನು ನಿಯಾಮಕಮಾಡಿದ್ದನು; ಜನರಲ್ಲಿ ಸಂಚರಿಸಿ ಧರ್ಮ ತತ್ವಗಳನ್ನು ಬೋಧಿಸುವುದು ಅವರ ಕರ್ತವ್ಯವಾಗಿತ್ತು. ಆದರೆ ಪ್ರಾಯಶಃ ಯುದ್ಧತ್ಯಾಗದಿಂದಲೂ ಶಾಂತಿ ಸಾಧನೆಯಿಂದಲೂ ಸಾಮ್ರಾಜ್ಯದ ಶಕ್ತಿಯು ಕುಂದಿತು.

ಶಾಸ್ತ್ರ ವೃದ್ಧಿ

ಪ್ರಾಣಹಿಂಸೆಗೆ ಆಸ್ಪದಕೊಡುವ ಯಜ್ಞ ಯಾಗಾದಿಗಳಿಗೆ ಅಶೋಕ ಚಕ್ರವರ್ತಿಯು ಅವಕಾಶವನ್ನು ಕೊಡಲಿಲ್ಲ. ಯಜ್ಞ ವಿಧಿಯನ್ನು ವಿಸ್ತಾರಗೊಳಿಸಿ ಕ್ರಿಯೆಗೆ ಗೂಢಾರ್ಥವುಂಟೆಂದು ಹೇಳುತ್ತಲಿದ್ದ ಬ್ರಾಹ್ಮಣರಿಗೆ ಸ್ಪಷ್ಟವಾಗಿ ಪ್ರಕಟಿಸಲಾಗದಂತಹ ವಿದ್ಯೆಗಳನ್ನು ಬೆಳೆಸುವುದು ಅಶೋಕನ

ಕಾಲದಲ್ಲಿ ಸುಲಭ ಸಾಧ್ಯವಾಗಲಿಲ್ಲ. ಆತಂಕ ರಹಿತವಾಗಿ ತತ್ವ ನಿರ್ದೇಶವೂ ವಾದವಿವಾದಗಳೂ ನಡೆಯುತ್ತಿದ್ದ ಕಾಲದಲ್ಲಿ ರಹಸ್ಯವಾದ ತತ್ವಗಳಿಗೆ ಸಹಜವಾಗಿ ಅವಕಾಶ ಕಡಿಮೆಯಾಯಿತು. ಬ್ರಾಹ್ಮಣರಲ್ಲನೇಕರು ಬೌದ್ಧ ಮತವನ್ನು ಅನುಸರಿಸುತ್ತಲೂ ಬೌದ್ಧ ನೀತಿಯನ್ನೊಪ್ಪುತ್ತಲೂ ಇದ್ದುದ ರಿಂದ ಬ್ರಾಹ್ಮಣರಿಗೂ ಬೌದ್ಧರಿಗೂ ವಿರೋಧವು ಅತಿಯಾಗಿ ಬೆಳೆಯಲಿಲ್ಲ.



17. ಅಶೋಕ ಸ್ತಂಭಾಗ್ರ

ರಹಸ್ಯ ವಿದ್ಯೆಗಳ ಅಭ್ಯಾಸವನ್ನು ಬಿಟ್ಟು ಅನೇಕರು ವೈದ್ಯ, ರಸ, ವನಸ್ಪತಿ ಶಾಸ್ತ್ರಗಳನ್ನು ಅಭ್ಯಾಸಮಾಡಿದರು. ಕಲಾಭ್ಯಾಸವು ಹೆಚ್ಚಾಗಿ ಪ್ರಾವೀಣ್ಯವು ತೋರಿಕೊಂಡಿತು. ಆಗ ನಿರ್ಮಿತವಾದ ವಿಹಾರ ಚೈತ್ಯ

ಗಳಲ್ಲಿ ವಾಸ್ತುಶಿಲ್ಪಕಲೆಗಳು ವಿಕಾಸವಾದವು. ವಿಹಾರಾದಿ ಮಂದಿರಗಳು ವಿದ್ಯಾಭ್ಯಾಸಕ್ಕೆ, ಶಾಸ್ತ್ರ ಶೋಧನೆಗೆ, ಕಲಾಪರಿಣತಿಗೆ ಉತ್ತಮ ಸ್ಥಾನ ಗಳಾದವು. ಶಿಲ್ಪ, ಚಿತ್ರ, ವಾಸ್ತು ಕಲೆಗಳ ಸೌಂದರ್ಯವು ಅವುಗಳಲ್ಲಿಯೇ ತೋರಿ ಜನರನ್ನು ಆಕರ್ಷಿಸಿದವು. ಈ ರೀತಿಯಲ್ಲಿ ಅಶೋಕ ಚಕ್ರವರ್ತಿಯ ಕಾಲದಲ್ಲಿ ಬೌದ್ಧಮತ ವಿಸ್ತಾರದ ದೆಸೆಯಿಂದ ಶಾಸ್ತ್ರ ಪರಿಶೋಧನೆಗೂ ಕಲಾ ಪ್ರೌಢಿಮೆಗೂ ಸಹಾಯ ದೊರಕಿತು. ಭಾರತಭೂಮಿಯಲ್ಲಿ ವಿಹಾರಾದಿ ಮಂದಿರಗಳಲ್ಲಿ ನಡೆಯುತ್ತಿದ್ದ ತತ್ವ ಶೋಧನೆಯು ಅಶೋಕನ ದೆಸೆಯಿಂದ ಎಲ್ಲೆಲ್ಲಿಯೂ ಖ್ಯಾತಿಗೊಂಡಿತು. ಈ ಕಾರಣದಿಂದಲೇ ಗ್ರೀಕರಲ್ಲಿ ಮೊದಮೊದಲು ತತ್ವಜ್ಞರೆಂದು ಪ್ರಸಿದ್ಧರಾದ **ಥೇಲ್ಸ್** (Thales), **ಎಂಪೆಡಾಕ್ಲೀಸ್** (Empedocles), **ಅನೆಕ್ಸಾಗೊರಾಸ್** (Anaxagoras), **ಡೆಮೊಕ್ರಿಟಸ್** (Democritus) ಮುಂತಾದವರು ತತ್ವಾರ್ಥಿಗಳಾಗಿ ಪ್ರಾಚ್ಯದೇಶಗಳಲ್ಲಿ ಸುತ್ತಾಡಿ ಸ್ವದೇಶಕ್ಕೆ ಹಿಂತಿರುಗಿ ತಮ್ಮ ತತ್ವ ಪ್ರಚಾರಮಾಡಿದರು. ಸಿಕಂದರನ ತರುವಾಯದವರಾದ ಈ ತತ್ವಜ್ಞರು ಭಾರತಭೂಮಿಗೆ ಬಂದಿದ್ದ ಕುರುಹು ಯಾವುದೂ ಇಲ್ಲವಾದರೂ ಬಂದಿರಬಹುದೆಂದು ಊಹಿಸಲು ಅವಕಾಶವಿದೆ.

**ಕಲಾಪುಷ್ಟಿ**

ಸಿಂಹಳದ್ವೀಪ ಬ್ರಹ್ಮದೇಶದವರೊಂದಿಗೂ, ಸಾಮ್ರಾಜ್ಯದ ಹೊರಗಿದ್ದ ಚೋಳ, ಪಾಂಡ್ಯ, ಕೇರಲಪುತ್ರ, ಸತ್ಯಪುತ್ರ ರಾಷ್ಟ್ರಗಳೊಂದಿಗೂ ಮೈತ್ರಿಯನ್ನು ಬೆಳೆಸಿದ್ದುದಲ್ಲದೆ ಅಶೋಕನು ಪಾಶ್ಚಾತ್ಯ ದಿಕ್ಕಿನಲ್ಲಿ ಸಿರಿಯ, ಈಜಿಪ್ಟ್, ಕೈರೆನೆ, ಗ್ರೀಸ್, ಎಪಿರಸ್, ಮ್ಯಾಸಿಡೊನಿಯ ರಾಷ್ಟ್ರಗಳ ಪ್ರಭುಗಳೊಂದಿಗೂ ಸಹ ಸ್ನೇಹವನ್ನು ಕಟ್ಟಿದ್ದನು. ವಾಯುವ್ಯ ಮೇರೆಯಿಂದ ಆಚೆ ಈಗ ತುರ್ಕಿಸ್ಥಾನವೆಂದು ಹೆಸರಾಗಿರುವ ಮಧ್ಯ ಏಷ್ಯಾ ಪ್ರದೇಶದಲ್ಲಿಯೂ ಅಶೋಕನಿಂದ ಪ್ರೇರಿತರಾದ ಮತಪ್ರಚಾರಕರು ಸಂಚರಿಸಿದರು. ಈ ರೀತಿಯಲ್ಲಿ ಪೂರ್ವಾರ್ಧಗೋಳದಲ್ಲಿ ವ್ಯಾಪಾರಕ್ಕೂ ತತ್ವ ಸಾಧನೆಗೂ ಭರತವರ್ಷವು ಖ್ಯಾತವಾಗಿ ಧರ್ಮ ಪ್ರಚಾರವನ್ನು ನಡೆಸಿತು. ಮೌರ್ಯ ಸಾಮ್ರಾಜ್ಯವು ಪೃಥ್ವಿಗೇ ಭೂಷಣಪ್ರಾಯವಾದುದಾಗಿತ್ತು. ಅಶೋಕನ

**ಸಾಮ್ರಾಜ್ಯ ಗೌರವ**

ಕಾಲದಲ್ಲಿ ಸಿರಿಯಾದೇಶದಲ್ಲಿಯೂ ಚೀನಾದೇಶದಲ್ಲಿಯೂ ಮುಖ್ಯ ಘಟನೆಗಳು ಕೆಲವು ನಡೆದವು. ಸೆಲ್ಯೂಕಸನ ವಂಶಸ್ಥನಾದ **ಆಂಟಿಯುಖಸ್ ಥಿಯಸಾಸ್** ಎಂಬ ಸಿರಿಯಾದೇಶದ ರಾಜನು ವಿಷಯಲೋಲುಪನಾಗಿದ್ದುದರಿಂದ ಆತನ ಆಳ್ವಿಕೆಯಲ್ಲಿ ಬಿಗಿ ತಪ್ಪಿತು. ಪೂರ್ವದಲ್ಲಿ ಇರಾನೀ ಜನರೆಂದು ಹೆಸರು ಪಡೆದ ಆರ್ಯ ಶಾಖೆಯವರು ಗ್ರೀಕರಿಗೆ ಶರಣಾಗತರಾಗಿ 80 ವರ್ಷಗಳಿಂದ ಪರಾಧೀನರಾಗಿದ್ದು, ಈತನ ಆಳ್ವಿಕೆಯಲ್ಲಿ ಸ್ವತಂತ್ರರಾಗಲು ಸುಸಮಯವನ್ನು ಕಂಡರು. ಕ್ರಿ. ಪೂ. 240ರಲ್ಲಿ **ಪಾರ್ಥಿಯನ**ರೆಂಬ (Parthians) ಹೆಸರನ್ನು ಪಡೆದಿದ್ದ ಆ ಇರಾನೀ ಜನರ ಸಂತತಿಯವರು **ಆರ್ಸಕೀಸ್** (ಆರ್ಸಿಕ-ಹರ್ಷಕ?, Arsakes) ಎಂಬ ವೀರ ಪುರುಷನ

ಸಿರಿಯದ ಭಂಗ

ಪ್ರೇರಣೆಯಿಂದ ಗ್ರೀಕರ ಅಧಿಕಾರವನ್ನು ಕೊನೆಗಾಣಿಸಿ ತಮ್ಮ ದೇಶವಾದ ಪಾರ್ಥಿಯದಲ್ಲಿ ಸ್ವತಂತ್ರರಾದರು. ಪಾರ್ಥಿಯವೆಂಬುದೇ ಕಾಲಾನಂತರದಲ್ಲಿ ಫಾರಸೀಸ್ಥಾನವೆನ್ನಿಸಿತು. ಇವರ ಮೂಡಲಲ್ಲಿದ್ದ **ಬಾಖ್ತ್ರಿಯ** ಅಥವಾ **ಬ್ಯಾಕ್ಟ್ರಿಯ** (Bactria) ಪ್ರಾಂತದಲ್ಲಿ ಸಿರಿಯದರಸುಗಳ ಪ್ರಾಂತಾಧಿಕಾರಿಗಳಾಳುತ್ತಿದ್ದರು ; ಕ್ರಿ. ಪೂ. 240ರಲ್ಲಿ ಆಂಟಿಯುಖಸನ ದೌರ್ಬಲ್ಯವನ್ನು ಕಂಡು ಅಲ್ಲಿಯ ಅಧಿಕಾರಿ ಅಥವಾ ಭೋಗಪತಿ (Governor) ಯಾಗಿದ್ದ **ಡಯೊಡೋಟಸ್** (Diodotus) ಎಂಬಾತನು ತಾನೂ ಸ್ವತಂತ್ರನಾದನು. ಸೆಲ್ಯೂಕಸನು ಕಟ್ಟಿದ ಸಾಮ್ರಾಜ್ಯವು ಈ ರೀತಿಯಲ್ಲಿ ಒಡೆಯಿತು. ಇನ್ನೂ ಪಶ್ಚಿಮಕ್ಕೆ ಭೂಮಧ್ಯ ಸಾಗರದ ಭಾಗದಲ್ಲಿ ಗ್ರೀಕರು ತಮ್ಮ ಪ್ರಾಬಲ್ಯವನ್ನು ನೀಗುತ್ತಲಿರಲು ಇಟಲಿಯಲ್ಲಿ ಪ್ರಬಲರಾಗಿದ್ದ ರೋಮಕರು ಇಟಲಿಯ ಹೊರಗಡೆ ವ್ಯಾಪಿಸುತ್ತ ಪಶ್ಚಿಮಕ್ಕೂ ಪೂರ್ವಕ್ಕೂ ರಾಜ್ಯವಿಸ್ತಾರ ಮಾಡಿಕೊಳ್ಳುತ್ತಿದ್ದರು.

ಚೀನೀಕುಡ್ಯ

ಚೀನಾ ಸಾಮ್ರಾಜ್ಯವು ಅತಿಪುರಾತನವಾದುದಾದರೂ ವ್ಯಾಪಾರವೊಂದು ವಿನಾ ಭಾರತೀಯರಿಗೂ ಚೀನೀಯರಿಗೂ ಯಾವ ಇತರ ಸಂಬಂಧಗಳೂ ಬೆಳೆದಿರಲಿಲ್ಲ. ಅಶೋಕನ ಕಾಲದಲ್ಲಿ ಚೀನಾ ಸಾಮ್ರಾಜ್ಯದಲ್ಲಿ **ಷ್ವೆ ಹಂಗ್ಟಿ** (Shwe Hangti) ಎಂಬ ಚಕ್ರವರ್ತಿಯು ಆಳುತ್ತಿದ್ದು,

ವಾಯುವ್ಯದಿಂದಲೂ ಉತ್ತರದಿಂದಲೂ ತನ್ನ ರಾಜ್ಯದಮೇಲೆ ಹಿಂಡು ಹಿಂಡಾಗಿ ಕವಿದು ಬರುತ್ತಿದ್ದ ಅಸಭ್ಯ ಮಂಗೋಲಕುಲಗಳನ್ನು ತಡೆಯಲು ದೊಡ್ಡ ಸನ್ನಾಹವನ್ನು ಮಾಡಿ, ತನ್ನ ಉತ್ತರದ ಮೇರೆಯಲ್ಲಿ ಸಾವಿರಾರು ಮೈಲಿ ದೂರಕ್ಕೂ ಎತ್ತರವಾದ **ಗೋಡೆ**ಯನ್ನು (ಮಹಾಭಿತ್ತಿ) ಕಟ್ಟಿಸಿದನು. ಈ ಗೋಡೆಯನ್ನು ಕಟ್ಟಿದ ಕಾರಣದಿಂದ ಆ ಅಸಭ್ಯ ಕುಲಗಳಲ್ಲಿ ತಳಮಳ ವುಂಟಾಗಿ ಅವರಲ್ಲಿಯೇ ನೂಕುನುಗ್ಗಲುಂಟಾಯಿತು. ಇದರ ಪರಿಣಾಮವು ಮುಂದಿನ ಕಾಲದಲ್ಲಿ ಭರತಖಂಡದಲ್ಲಿಯೂ ಕಾಣಿಸಿಕೊಂಡಿತು.

ಸಾಮ್ರಾಜ್ಯ ಕ್ಷಯ

ಕ್ರಿ. ಪೂ. 233ರಲ್ಲಿ ಅಶೋಕನು ಮೃತಿಹೊಂದಿದನು. ಸಾಂಪ್ರತಿ ದಶರಥರು ತಮ್ಮ ಕಲಹವನ್ನು ಇನ್ನೂ ಹೆಚ್ಚಿಸಿ ಕೊಂಡು ಸಾಮ್ರಾಜ್ಯ ವಿಭಾಗಕ್ಕೆ ತೊಡಗಿದರು. ಹೀಗಿರಲು ಸಾಮ್ರಾಜ್ಯದ ಭಾಗಗಳು ಸ್ವತಂತ್ರ ವಾದವು. ವಿಂಧ್ಯಪರ್ವತದ ದಕ್ಷಿಣದಲ್ಲಿ ಶಾತವಾಹನರೂ ಕಳಿಂಗರೂ ಸ್ವತಂತ್ರರಾಗಿ ದಿನೇ ದಿನೇ ಪ್ರಬಲರಾದರು. ವಾಯುವ್ಯದಲ್ಲಿ ಸಿಂಧುನದಿಗೆ ಪಶ್ಚಿಮದಲ್ಲಿದ್ದ ಜನರು ಸ್ವತಂತ್ರರಾದರು. ಪಂಚನದ ಸಿಂಧು ಪ್ರಾಂತ ಗಳಲ್ಲಿ ಪೂರ್ವ ಪರಿಚಿತ ಕ್ಷತ್ರಿಯ ಕುಲಗಳು ತಮ್ಮ ಸ್ವಾತಂತ್ರ್ಯವನ್ನು ಸ್ವಲ್ಪಕಾಲದಲ್ಲಿಯೇ ಸಾಧಿಸಿಕೊಂಡವು. ಶತದ್ರು ಚರ್ಮಣ್ವತೀ (Chambal) ನದಿಗಳಿಂದ ಬ್ರಹ್ಮಪುತ್ರಾನದಿಯವರೆಗೂ ಇದ್ದ ಭಾಗ ಮಾತ್ರವೇ ಸಾಂಪ್ರತಿ ದಶರಥರಿಗೆ ರೂಢವಾಗಿತ್ತು. ಅದನ್ನು ಅವರು ಎರಡು ಭಾಗವಾಗಿ ವಿಭಾಗ ಮಾಡಿಕೊಂಡರು. **ಸಾಂಪ್ರತಿ**ಯು **ಉಜ್ಜಯಿನಿ**ಯನ್ನು ರಾಜಧಾನಿ ಮಾಡಿಕೊಂಡು ಪಶ್ಚಿಮ ಭಾಗವನ್ನು ಆಳತೊಡಗಿದನು. ಆತನ ವಂಶಸ್ಥರು ಅಲ್ಪಕಾಲದಲ್ಲಿಯೇ ರಾಜ್ಯವನ್ನು ಕಳೆದುಕೊಂಡರು. ಮೂಡಣ ಭಾಗವನ್ನು ಆಳತೊಡಗಿದ **ದಶರಥ**ನು **ಪಾಟಲಿಪು**ರದಲ್ಲಿಯೇ ನೆಲೆಸಿದನು. ದಶರಥನ ವಂಶಸ್ಥರು ಹಾಗೂ ಹೀಗೂ ಕ್ರಿ. ಪೂ. 188ರವರೆಗೆ ಪಾಟಲಿಪುರದಲ್ಲಿ ರಾಜ್ಯಭಾರಮಾಡುತ್ತಿದ್ದರು. ಅವರಲ್ಲಿ ಕಡೆಯ ರಾಜನಾಗಿದ್ದ **ಬೃಹದ್ರಥ**ನೆಂಬುವನನ್ನು ಆತನ ದಳಪತಿ ಯಾಗಿಯೇ ಇದ್ದ ಶುಂಗವಂಶದ **ಪುಷ್ಯಮಿತ್ರ**ನೆಂಬಾತನು ಆ ವರುಷದಲ್ಲಿ ಕೊಲ್ಲಿಸಿ ರಾಜ್ಯವನ್ನು ತಾನೇ ಆಳಲು ಮೊದಲುಮಾಡಿದನು.

ಮೌರ್ಯ ಸಾಮ್ರಾಜ್ಯವು ಪ್ರಾಬಲ್ಯ, ಐಶ್ವರ್ಯ, ವ್ಯಾಪಾರಗಳಿಗೆ ಪೃಥ್ವಿಯಲ್ಲಿಯೇ ಹಿರಿದೆನಿಸಿ ಬೆಳಗಿತು. ಆ ಕಾರಣದಿಂದಲೇ ದೇಶದ ಕೀರ್ತಿ ಗೌರವಗಳು ಇತರ ದೇಶಗಳಲ್ಲಿ ಹರಡಿದವು. ಮುಂದಿನ ಕಾಲದ ಬೃಹದ್ಭಾರತ ಪ್ರಯತ್ನಕ್ಕೆ ಅಸ್ತಿಭಾರವು ಒದಗಿತು.

---

# ಬೃಹತ್ತರ ಭಾರತದ ಆರಂಭ

(ಕ್ರಿ. ಪೂ. 230ರಿಂದ ಕ್ರಿ. ಶ. 200ರವರೆಗೆ)

1. ರಾಜಕೀಯ ಘಟನೆಗಳು.
2. ಧಾರ್ಮಿಕ ಸಾಂಸ್ಕೃತಿಕ ಪರಿವರ್ತನೆ.
3. ವ್ಯಾಪಾರ ವೃದ್ಧಿ.
4. ಇತರ ರಾಜವಂಶಗಳು.
5. ಬೃಹತ್ತರ ಭಾರತ.
6. ಐಶ್ವರ್ಯ ವೃದ್ಧಿ ಕಲಾವಿಕಾಸಗಳು.

## ಪ್ರಸಿದ್ಧ ಪುರುಷರು

ಪುಷ್ಯಮಿತ್ರ.
ಹಾಲ.
ಗೌತಮೀಪುತ್ರ.
ಕುಂತಲಶ್ರೀ.
ಭವನಾಗ.
ಪ್ರವರಸೇನ.
ಮಿನಾಂಡರ್.
ಕನಿಷ್ಕ.
ರುದ್ರದಾಮ.
ಪತಂಜಲಿ.
ಅಶ್ವಘೋಷ.
ನಾಗಾರ್ಜುನ.
ಷೆ ಹಂಗ್ಟಿ.
ಆಗಸ್ಟಸ್.
ಮಿಂಗ್ಟಿ.

## ರಾಜಕೀಯ ಘಟನೆಗಳು

### ಯವನ ಕುಲಗಳು

ಕ್ರಿ. ಪೂ. 246ರಲ್ಲಿ ಸೆಲ್ಯೂಕಸನ ಸಾಮ್ರಾಜ್ಯದ ಬಂಧನವನ್ನು ಬಿಡಿಸಿಕೊಂಡು ಸ್ವತಂತ್ರವಾದ *ಪಾರ್ಥಿಯ (Parthia) ಮತ್ತು ಬಾಖ್ತ್ರಿಯ (Bactria) ಎಂಬವುಗಳಲ್ಲಿ ಬಾಖ್ತ್ರಿಯವೇ ನಮ್ಮ ದೇಶಕ್ಕೆ ಸಮೀಪವಾಗಿದ್ದುದು. ಬಾಖ್ತ್ರಿಯದ ಜನರು (ಬಾಹ್ಲೀಕರು) ಒಪ್ಪು ಭಾಗ ಗ್ರೀಕ ಜಾತಿಯವರೇ ಆಗಿದ್ದರು. ಪಾರ್ಥಿಯವು ಗ್ರೀಕರ ಮಧ್ಯೆ ಸಿಕ್ಕಿಕೊಂಡಿದ್ದುದರಿಂದ ಆರ್ಷಕ ಅಥವಾ ಹರ್ಷಕ (Arsakes)ನು

* ಬ್ಯಾಕ್ಟ್ರಿಯ ಎಂಬುದು ಗ್ರೀಕರಿಟ್ಟ ಹೆಸರು. ಬಾಹ್ಲೀಕವೆಂಬ ಹೆಸರೇ ಬಲ್ಲಖ್ ಅಥವಾ ಬಾಖ್ (Balkh) ಎಂಬ ರೂಪಾಂತರವನ್ನು ಹೊಂದಿ ಬ್ಯಾಕ್ಟ್ರಿಯವೆಂಬ ಹೆಸರನ್ನು ಗ್ರೀಕರಿಂದ ಪಡೆಯಿತು. ಪಾರ್ಥಿಯ ಎಂಬುದೇ ಪಾರದ. ಆದ್ದರಿಂದ ಬ್ಯಾಕ್ಟ್ರಿಯ ಪಾರ್ಥಿಯಗಳಿಗೆ ಬಾಖ್ತ್ರಿಯ-ಬಾಹ್ಲೀಕ ಪಾರದ ಶಬ್ದಗಳನ್ನು ಉಪಯೋಗಿಸಬಹುದು.

ಸ್ವಾತಂತ್ರ್ಯವನ್ನು ಭದ್ರಗೊಳಿಸಬೇಕಾಗಿತ್ತು. ಬಾಕ್ಟ್ರಿಯದ **ಡಯೊಡೋಟಸ** (Diodotus) ನಿಗೆ ಅಂತಹ ತೊಂದರೆಯಿರಲಿಲ್ಲ; ಮೂಡಲಲ್ಲಿದ್ದ ಸಿಂಧು ನದಿಯ ಪ್ರದೇಶವು ಮೌರ್ಯ ಬಂಧನದಿಂದ ತಪ್ಪಿಸಿಕೊಂಡು ಪರಸ್ಪರ ಕಲಹಗಳಲ್ಲಿ ತೊಡಗಿದ್ದ ಕುಲಗಳ ಸ್ವಾಧೀನದಲ್ಲಿತ್ತು. ಈ ಕಾರಣದಿಂದ ಬಾಕ್ಟ್ರಿಯದ ಗ್ರೀಕ ಸಾಹಸಿಗಳು ಸಿಂಧು ನದಿಯ ಪ್ರದೇಶವನ್ನು ವಶಮಾಡಿಕೊಳ್ಳುವ ಆಸೆಯನ್ನು ಬೆಳೆಸಿ ಪದೇ ಪದೇ ಮುತ್ತಲು ಪ್ರಯತ್ನಿಸಿದರು. ಅವರಲ್ಲಿ **ಡಿಮೆಟ್ರಿಯಸ್** (Demetrius) ಎಂಬಾತನು ಕ್ರಿ. ಪೂ. 190ರಲ್ಲಿ ಸಿಂಧುನದಿಯವರೆಗೆ ನುಗ್ಗಿ ಆ ನದಿಯ ಪಶ್ಚಿಮ ಪಾರ್ಶ್ವವನ್ನು ಗೆದ್ದನು. ಆತನ ವಂಶಸ್ಥರೂ (Indo-Bactrians), ಇತರರೂ ಆ ವಾಯುವ್ಯ ಭಾಗಗಳಲ್ಲಿ ಪುಟ್ಟ ಪುಟ್ಟ ರಾಜ್ಯಗಳನ್ನು ಕಟ್ಟಿದರು. ಕಾಬೂಲ್ ಪ್ರಾಂತದಲ್ಲಿ ಕೆಲವುಕಾಲ ಈ ಬಾಕ್ಟ್ರಿಯದ ಗ್ರೀಕರ ರಾಜ್ಯಗಳು ನಡೆದವು. ಆ ರಾಜರಲ್ಲಿ ಅತಿಪ್ರಸಿದ್ಧನಾದವನು **ಮಿನಾಂಡರ್** (Menander) ಎಂಬಾತನು. ಆತನು ಸಮರ್ಥನಾಗಿದ್ದು ಪಂಚನದ ಪ್ರಾಂತವನ್ನು ಮುತ್ತಿ ವಶಪಡಿಸಿಕೊಂಡು ಇನ್ನೂ ಮುಂದೆ ನುಗ್ಗಿ ವಿಸ್ತಾರವಾದ ರಾಜ್ಯ ಕಟ್ಟಲು ಸು. ಕ್ರಿ. ಪೂ. 150ರಲ್ಲಿ ಪ್ರಯತ್ನಪಟ್ಟನು. ಆತನು ಬೌದ್ಧ ಮತವನ್ನು ಸ್ವೀಕರಿಸಿ ಮಿಳಿಂದನೆಂದು ಹೆಸರಾಗಿದ್ದಾನೆ. ಮೌರ್ಯ ಸಾಮ್ರಾಜ್ಯವು ಒಡೆದ ಕಾಲದಲ್ಲಿ ವಾಯುವ್ಯ ಪ್ರಾಂತಗಳನ್ನು ಜಯಿಸಿ ರೂಢಿಸಿಕೊಂಡು ಈ ಬಾಕ್ಟ್ರಿಯದ ಗ್ರೀಕರು ಒಂದೂವರೆ ಶತಮಾನ ಕಾಲ ಆಳಿದರು; ಇವರ ಪಶ್ಚಿಮಕ್ಕಿದ್ದ ಪಾರ್ಥಿಯದವರಿಂದ ಇವರ ರಾಜ್ಯ ನಷ್ಟವಾಯಿತು. ಮೂಡಲಲ್ಲಿ ಕ್ಷತ್ರಿಯ ಕುಲಗಳೂ ಮಗಧಾಧಿಪತಿಗಳೂ ಇವರಿಗೆ ಹೆಚ್ಚಿನ ಅವಕಾಶವನ್ನು ಕೊಡದಾದರು; ಪಡುವಲಲ್ಲಿ ನೆರೆಯವರೇ ಆಗಿದ್ದ ಪಾರ್ಥಿಯನರು ಶತ್ರುಗಳಾಗಿ ಇವರ ರಾಜ್ಯಗಳನ್ನು ಕೊನೆಗಾಣಿಸಿದರು. **ಶಾಕಲ** ನಗರಿ (ಈಗಿನ ಸಿಯಾಲ್ಕೋಟ್) ಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ಮಿನಾಂಡರನು ಪಾಂಚಾಲ ದೇಶವನ್ನು ಗೆಲ್ಲಲು ಸನ್ನಾಹಪಟ್ಟಾಗ ಮಗಧರಾಜನ ಸೇನೆಯು ಆತನ ಸೈನ್ಯವನ್ನು ಸೋಲಿಸಿತು. ಅದೇ ಬಾಕ್ಟ್ರಿಯದವರ ಉತ್ತಮ ಪ್ರಯತ್ನವಾಗಿತ್ತು.

## ಶುಂಗ ವಂಶ

ಸಾಮ್ರಾಜ್ಯವನ್ನು ರಕ್ಷಿಸಿಕೊಂಡು ಲೋಪವಿಲ್ಲದಂತೆ ಆಳಲು ಅಸಮರ್ಥರೆನಿಸಿದ ಮೌರ್ಯಕುಲದರಸರು ಪಾಟಲಿಪುತ್ರದಲ್ಲಿ ಕ್ರಿ. ಪೂ. 188ರವರೆಗೆ ಹಾಗೂ ಹೀಗೂ ಆಳುತ್ತಿದ್ದರು. ಆ ವರುಷದಲ್ಲಿ ಬೃಹದ್ರಥ ರಾಜನನ್ನು ಸೇನಾಪತಿ **ಪುಷ್ಯಮಿತ್ರ**ನು ಕೊಲ್ಲಿಸಿ **ಶುಂಗ ವಂಶ**ವನ್ನು ಮಗಧದಲ್ಲಿ ಸ್ಥಾಪಿಸಿದನು. ಪುಷ್ಯಮಿತ್ರನು ಬೌದ್ಧನಾಗಿರದೆ ಸನಾತನ ವೈದಿಕಮತವನ್ನು ಅವಲಂಬಿಸಿದ್ದನು. ರಾಜ್ಯವನ್ನು ಅಪಹರಿಸಿದ ಕೂಡಲೆ ಪುಷ್ಯಮಿತ್ರನು ಸೇನೆಯೊಡನೆ ಹೊರಟು ಶತದ್ರು ನದಿಯವರೆಗೂ ದಂಡ ಯಾತ್ರೆಗೈದು ಸಾಮ್ರಾಜ್ಯವನ್ನು ಹಿಮಾಚಲ ವಿಂಧ್ಯಪರ್ವತಗಳ ನಡುವೆ ತಕ್ಕಮಟ್ಟಿಗೆ ಕಟ್ಟಿದನು. ಈ ವಿಜಯವು ಮುಗಿದ ಕೂಡಲೆ ಒಂದು ಅಶ್ವಮೇಧ ಯಜ್ಞಮಾಡಲು ಹವಣಿಸಿದನು. ಬಹುಕಾಲದಿಂದ ಆ ಯಜ್ಞವು ನಡೆದಿರಲಿಲ್ಲ. ಆ ಯಜ್ಞ ಸನ್ನಾಹದಲ್ಲಿಯೇ ಪುಷ್ಯಮಿತ್ರನ ಮೊಮ್ಮಗ **ವಸುಮಿತ್ರ**ನು ಸೈನ್ಯದೊಡನೆ ಸಂಚರಿಸುತ್ತಿದ್ದಾಗ ಈಗಿನ ರಾಜಪುತ್ರ ಸ್ಥಾನದ ಒಂದು ಭಾಗದಲ್ಲಿ ಮಿನಾಂಡರಿನ ಸೈನ್ಯವನ್ನು ಎದುರುಗೊಂಡು ಸೋಲಿಸಿದನು. ಯವನರನ್ನು ಸೋಲಿಸಿದುದು ಯಜ್ಞಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನುಂಟುಮಾಡಿತು. ಯಜ್ಞವನ್ನು ಪುಷ್ಯಮಿತ್ರನು ಅತಿ ವೈಭವದಿಂದ ಸಾಂಗವಾಗಿ ನಡೆಸಿದನು. ಈ ಯಜ್ಞವು ಬ್ರಾಹ್ಮಣ ಮತಸ್ಥರ ಪ್ರಾಬಲ್ಯ ಸೂಚಕವಾದುದು. ಯಜ್ಞಶಾಲೆಯಲ್ಲಿ ಯೋಗಸೂತ್ರ ಕಾರನೂ ಪ್ರಸಿದ್ಧ ವಯ್ಯಾಕರಣಿಯೂ ಆದ ಪತಂಜಲಿಯೂ ಇತರ ವಿದ್ವಾಂಸರೂ ಇದ್ದರು. ಪುಷ್ಯಮಿತ್ರನ ಸಾಮರ್ಥ್ಯದಿಂದ ಮಗಧ ಸಾಮ್ರಾಜ್ಯವು ಪುನಃ ತಲೆಯೆತ್ತಿತು. ಆತನ ತರುವಾಯ ಆಳಿದ **ಅಗ್ನಿಮಿತ್ರ**ನು ಯುವರಾಜನಾಗಿದ್ದಾಗಲೇ ವಿದಿಶಾ ಪ್ರಾಂತದ ಅಧಿಕಾರ ವನ್ನು ಮಾಡಿ ಅನುಭವಸ್ಥನಾಗಿದ್ದನು; ಆತನೇ ಕಾಳಿದಾಸನ ಮಾಲವಿಕಾ ಗ್ನಿಮಿತ್ರ ನಾಟಕದ ನಾಯಕ. ಅಗ್ನಿಮಿತ್ರನ ಅನಂತರ ವಸುಮಿತ್ರನು ಪಟ್ಟವನ್ನೇರಿದನು. ಆತನ ತರುವಾಯ ಆಳಿದ ಶುಂಗ ವಂಶಸ್ಥರು ಜಾಣ ರಾಗಿದ್ದಾಗ್ಯೂ ಸುಖಾಭಿಲಾಷಿಗಳಾಗಿ ಸಂಗೀತ ನೃತ್ಯ ನಾಟಕಗಳಲ್ಲಿ

ಮಗ್ನರಾಗಿ ದುರ್ಬಲರಾದರು. ಕ್ರಿ. ಪೂ. 76ರಲ್ಲಿ ಆಳುತ್ತಿದ್ದ **ದೇವಭೂತಿ** ಎಂಬಾತನೇ ಕಡೆಯವನಾದನು; ಏಕೆಂದರೆ ಆ ವರ್ಷದಲ್ಲಿ ಆತನ ಮಂತ್ರಿಯಾಗಿದ್ದ ಕಾಣ್ವಾಯನ ಗೋತ್ರದ **ವಾಸುದೇವ**ನೆಂಬ ಮಂತ್ರಿಯು ಪಿತೂರಿಯನ್ನು ಕಟ್ಟಿ ದೇವಭೂತಿರಾಜನನ್ನು ಕೊಲೆಮಾಡಿಸಿ ತಾನೇ ಸಿಂಹಾಸನವನ್ನೇರಿದನು.

## ಕಾಣ್ವ ವಂಶ

**ಕಾಣ್ವ ವಂಶ** ಸ್ಥಾಪನೆಯ ಕಾಲದಲ್ಲಿ ಪುಷ್ಯಮಿತ್ರನ ಕಾಲದಲ್ಲಿದ್ದಷ್ಟು ವಿಸ್ತಾರವೂ ಮಗಧ ಸಾಮ್ರಾಜ್ಯಕ್ಕಿರಲಿಲ್ಲ. ವಾಸುದೇವನಾಳಿದ ಸಾಮ್ರಾಜ್ಯವು ಸಾಮಾನ್ಯವಾದ ರಾಜ್ಯವಾಗಿತ್ತು. ಆತನ ವೇಳೆಗೆ ಬಾಕ್ಟ್ರಿಯ ಕುಲದ ಗ್ರೀಕರ ಪ್ರಾಬಲ್ಯವೂ ನಷ್ಟವಾಗಿತ್ತು. ವಾಯುವ್ಯದಲ್ಲಿ ಗ್ರೀಕರ ವಿರೋಧಿಗಳಾಗಿದ್ದ ಪಾರ್ಥಿಯನರು ತಮ್ಮ ಸ್ವಾತಂತ್ರ್ಯವನ್ನು ಭದ್ರಪಡಿಸಿಕೊಂಡಮೇಲೆ ಮೂಡಲಲ್ಲಿದ್ದ ಬಾಕ್ಟ್ರಿಯವನ್ನು ಕ್ರಿ. ಪೂ. 138ರಲ್ಲಿ ಜಯಿಸಿಬಿಟ್ಟರು; ಮುಂದಿದ್ದ ಗ್ರೀಕರಾಜ್ಯಗಳೂ ಒಂದೊಂದಾಗಿ ಅವರಿಗೆ ವಶವಾಗಿ ತಕ್ಷಶಿಲೆಯ ಪ್ರಾಂತವೂ ಪಂಚನದ ಪ್ರಾಂತದ ಭಾಗಗಳೂ ಪಾರ್ಥಿಯನರಿಗೇ ಸೇರಿದವು. ಒಂದು ಶತಮಾನ ವರ್ಷಗಳು ಮಾತ್ರ ಬಾಕ್ಟ್ರೀ ಗ್ರೀಕರ ಅಧಿಕಾರವು ನಡೆಯಿತು. ಅವರ ರಾಜ್ಯಾಧಿಕಾರವನ್ನು **ಪಾರ್ಥಿಯನ**ರು ಆಕ್ರಮಿಸಿಕೊಂಡರು. ಪಾರ್ಥಿಯನರ ಸಾಮ್ರಾಜ್ಯಪ್ರಯತ್ನವು ನಿಷ್ಕಂಟಕವಾಗಿ ನಡೆಯಲಿಲ್ಲ. ಪಶ್ಚಿಮ ದಿಕ್ಕಿನಲ್ಲಿ ರೋಮಕರೂ ಉತ್ತರ ದಿಕ್ಕಿನಲ್ಲಿ ಮಂಗೋಲ ಕುಲಗಳವರೂ ಅನೇಕ ವಿಧವಾದ ತೊಂದರೆಗಳನ್ನುಂಟುಮಾಡುತ್ತಿದ್ದರು. ಸ್ವದೇಶ ಸಂಬಂಧವನ್ನು ತಪ್ಪಿಸಿಕೊಂಡವರಾಗಿ ವಾಯುವ್ಯ ಪ್ರಾಂತದಲ್ಲಿ ಅರಸುತನಮಾಡಿದ ಪಾರ್ಥಿಯನರು (Indo-Parthians) ಪ್ರಬಲರಾಗಲಿಲ್ಲ. ಅವರಲ್ಲಿ ಹೆಸರುವಾಸಿಯಾದಾತನು **ಗುಡುಫರ** (Gondophernes) ನೆಂಬಾತನು; ಆತನ ಆಸ್ಥಾನಕ್ಕೆ ಯೇಸುಕ್ರಿಸ್ತನ ಪರಮಶಿಷ್ಯರಲ್ಲೊಬ್ಬನಾದ ಥಾಮಸನೆಂಬಾತನು ಹೊರಟಿದ್ದನೆಂದು ಕ್ರೈಸ್ತ ಜನರಲ್ಲಿ ಒಂದು ಕಥೆಯುಂಟು. **ಅಪೋಸ್ತಲ ಥಾಮಸ**ನು (Apostle St. Thomas) ಪಶ್ಚಿಮ ತೀರಪ್ರದೇಶಕ್ಕೆ ಬಂದು

ಅಲ್ಲಲ್ಲಿ ಸಂಚರಿಸಿ ಕಡೆಗೆ ಪೂರ್ವ ತೀರದಲ್ಲಿ ಮೃತಿಹೊಂದಿದನೆಂಬ ಭಾಗದಲ್ಲಿ ನಿಜವಡಗಿರಬಹುದು.

## ಶಕರು

**ಉತ್ತರದಲ್ಲಿ**

ಅತ್ತ ಚೀನಾ ಚಕ್ರವರ್ತಿ **ಷ್ಟೆ ಹಂಗ್ಟಿ**ಯೆಂಬಾತನು ಉತ್ತರದಿಕ್ಕಿನಲ್ಲಿ ದೊಡ್ಡ ಗೋಡೆಯನ್ನು ಕಟ್ಟಿಸಿದಾಗ ಮಂಗೋಲ ಕುಲಗಳು ಚೀನಾದೇಶದ ಆಸೆಯನ್ನು ಬಿಟ್ಟು ಬೇರೆಡೆಗಳಲ್ಲಿ ವಿಸ್ತಾರವನ್ನು ಪಡೆಯಬೇಕಾಯಿತಷ್ಟೆ. ಈ ಅಸಭ್ಯ ಕುಲಗಳ ತೊಂದರೆಯನ್ನು ತಾಳಲಾರದೆ ಮಧ್ಯ ಏಷ್ಯದಲ್ಲಿ ಹೆಲ್ಮಂಡ್ ನದೀಪ್ರಾಂತದಲ್ಲಿ ನೆಲೆಸಿದ್ದ **ಶಕ**ರೆಂಬ ಒಂದು ಕುಲದ ಜನರು ಆ ಪ್ರಾಂತವನ್ನು ಬಿಟ್ಟು ದಕ್ಷಿಣದ ಕಡೆಗೆ ಒತ್ತಿದರು. ಬಾಖ್ತ್ರಿಯ ದೇಶವು ಅವರ ಪಾಲಾಯಿತು; ಆಗ ಬಾಖ್ತ್ರಿಯದ ಸಣ್ಣ ಪುಟ್ಟ ಅರಸರು ಓಡಿಹೋಗಿ ಗಾಂಧಾರ ಮತ್ತು ಕಾಂಬೋಜ ದೇಶಗಳಲ್ಲಿದ್ದ ತಮ್ಮ ಕುಲಸ್ಥರನ್ನು ಸೇರಿಕೊಳ್ಳಲು ಯತ್ನಿಸಿದರು. ಆದರೆ ಅಲ್ಲಿ ಪಾರ್ಥಿಯನರು (Parthians) ಪ್ರಬಲರಾಗಿದ್ದರು. ವಾಯುವ್ಯ ಪ್ರಾಂತಗಳಲ್ಲಿ ಈ ರೀತಿ ದೇಶಭ್ರಷ್ಟರಾಗಿದ್ದ ಬಾಖ್ತ್ರಿಯದವರಿಗೂ ಪಾರ್ಥಿಯನರಿಗೂ ದ್ವಂದ್ವಗಳು ನಡೆದವು. ಆದರೆ ಸ್ವಲ್ಪ ಕಾಲ ಮಾತ್ರ. ಕ್ರಿ. ಪೂ. 80ರ ವೇಳೆಗೆ ಪಾರ್ಥಿಯ ದೇಶವನ್ನಾಳುತ್ತಿದ್ದ ಪ್ರಭುಗಳು ಯೂಫ್ರೆಟೀಸ್ ನದಿಯವರೆಗೂ ವಿಸ್ತಾರಗೊಂಡಿದ್ದ ರೋಮಕರಿಗೆ ಶರಣೆನ್ನಬೇಕಾಯಿತು. ಪಾರ್ಥಿಯನರ ಪ್ರಾಬಲ್ಯವು ನಷ್ಟವಾಯಿತು. ಬಾಖ್ತ್ರಿಯ ದೇಶವನ್ನು ಆಕ್ರಮಿಸಿಕೊಂಡಿದ್ದ ಶಕರು ಇನ್ನೂ ಮುಂದಾಗಿ ನಮ್ಮ ದೇಶದ ವಾಯುವ್ಯ ಭಾಗಗಳಲ್ಲಿ ಸ್ಪರ್ಧಿಸುತ್ತಿದ್ದ ಬಾಖ್ತ್ರೀಜನರನ್ನೂ ಪಾರ್ಥಿಯನರನ್ನೂ ಮೂಲೆಗೆ ತಳ್ಳಿಕೊಂಡು ನುಗ್ಗಿ ತಕ್ಷಶಿಲಾ ಪ್ರಾಂತವನ್ನು ವಶಪಡಿಸಿಕೊಂಡರು. ಕ್ರಿ. ಪೂ. ಒಂದನೆ ಶತಮಾನದಲ್ಲಿ ತಕ್ಷಶಿಲಾ ಪ್ರಾಂತದಲ್ಲಿ ರಾಜ್ಯ ಕಟ್ಟಿದ ಶಕರಿಗೆ ಉತ್ತರ ಶಕರೆಂಬುದಾಗಿಯೂ, **ಉತ್ತರ ಸತ್ರಪ** (Northern Satraps) ರೆಂಬುದಾಗಿಯೂ ಹೆಸರು. ಏಕೆಂದರೆ, ಅಲ್ಲಿ ಆಳಿದ ಶಕರು ಶಕಸ್ಥಾನದಲ್ಲಿ ಆಳುತ್ತಿದ್ದ ತಮ್ಮ ಪ್ರಭುವಿನ ಶ್ರೇಷ್ಠಾಧಿಕಾರವನ್ನೊಪ್ಪಿಕೊಂಡಿದ್ದರು.

ಶಕಸ್ಥಾನದಿಂದ ಇವರನ್ನು ಓಡಿಸಿದ ಮಂಗೋಲ ಕುಲಗಳವರು ಅಷ್ಟರಿಂದಲೇ ತೃಪ್ತರಾಗದೆ ಶಕರ ಹಿಂದೆಯೇ ಪಶ್ಚಿಮದಲ್ಲಿ ಒತ್ತಿಕೊಂಡು ಬರುತ್ತಿದ್ದರು. ಆ ಕುಲಗಳಲ್ಲಿ ಮುಂದಿದ್ದ ***ಯುಚಿ** (Yueh Chi) ಕುಲದವರು ಉಳಿದಿದ್ದ ಶಕರನ್ನು ಅವರ ಮೂಲದೇಶದಿಂದ ಓಡಿಸಿದರು. ಹೀಗೆ ಭ್ರಷ್ಟರಾದ ಶಕರು ಭಾರತವರ್ಷದ ಕಡೆಗೆ ತಂಡ ತಂಡವಾಗಿ ಸಂಚರಿಸುತ್ತ ವಾಯುವ್ಯ ಭಾಗಗಳಲ್ಲಿಯೇ ನಿಲ್ಲದೆ ಗಂಗಾನದಿಯ ಬಯಲಿನಕಡೆಗೂ ಪಶ್ಚಿಮ ಪ್ರಾಂತಗಳಿಗೂ ನುಗ್ಗಿದರು. ಪೂರ್ವದಿಕ್ಕಿನಲ್ಲಿ ಇವರಿಗೆ ಅವಕಾಶ ದೊರಕದಿರಲು ಸೌರಾಷ್ಟ್ರ ಅವಂತೀ ಪ್ರಾಂತಗಳಲ್ಲಿ ಇವರ ನುಗ್ಗು ಬಲವಾಯಿತು. ಪಂಚನದ ಪ್ರಾಂತದಲ್ಲಿ ಸಿಕಂದರನ ಕಾಲದಿಂದಿದ್ದ ಮಾಳವ ಕುಲದವರೂ ಇತರರೂ ಆ ಪ್ರಾಂತವನ್ನು ಇವರಿಗೆ ಬಿಟ್ಟುಕೊಡಬೇಕಾಗಿ ಬಂದು ಪೂರ್ವದಿಕ್ಕಿಗೆ ಚಲಿಸಿ, ಗಂಗಾನದಿಯ ಬಯಲಿಗಿದ್ದ ಮಾರ್ಗಗಳಲ್ಲಿ ಅಡ್ಡವಾಗಿ ನಿಂತರು. ಸೌರಾಷ್ಟ್ರ, ಅವಂತೀ ಮುಂತಾದ ಪಶ್ಚಿಮ ಭಾಗಗಳು ಈ ಶಕ ಕುಲಸ್ಥರ ಪ್ರಭುತ್ವಕ್ಕೊಳಗಾದವು. ನರ್ಮದಾ ತಪತೀ ನದಿಗಳನ್ನು ದಾಟಿ ದಕ್ಷಿಣದಲ್ಲಿಯೂ ವ್ಯಾಪಿಸಲು ಸಿದ್ಧರಾದ ಈ ಪಶ್ಚಿಮ ಶಕರ ತಂಡಗಳು ಆ ಭಾಗದಲ್ಲಿ ಪ್ರಬಲರಾದ ರಾಜರನ್ನು ಇದುರಿಸಿ ಸೋತು ಅಲ್ಲಿಗೇ ತಮ್ಮ ವಿಸ್ತಾರವನ್ನು ನಿಲ್ಲಿಸಿಕೊಳ್ಳಬೇಕಾಯಿತು. ಈ ರೀತಿ ಶಕರನ್ನು ತಡೆದವರು ಯಾರು ?†

---

* ಯುೂಚಿ ಎಂಬುದು ಚೀನೀ ಹೆಸರು. ಅವರಲ್ಲಿ ಕುಶ್ ಎಂಬ ಕುಲದವರನ್ನೇ ಇಂಗ್ಲೀಷಿನಲ್ಲಿ ಕುಶಾನ್ ಎಂದು ಕರೆಯುತ್ತಾರೆ. ಪಶುಪಾಲನೆಯಿಂದಲೇ ಜೀವಿಸುತ್ತ ಹುಲ್ಲುಗಾವಲುಗಳನ್ನರಸುತ್ತಿದ್ದುದರಿಂದಲೇ ಪ್ರಾಯಶಃ ಅವರಿಗೆ ಸಂಸ್ಕೃತ ಕುಶ ಶಬ್ದಸಂಬಂಧವುಳ್ಳ ಕುಶ್ ಎಂಬ ಹೆಸರು. ನಮ್ಮ ದೇಶಭಾಷೆಗಳಲ್ಲಿ ಕುಶೀಕುಲವೆಂಬುದು ಒಪ್ಪುವುದು; ಕುಶಾನರೆಂಬುದು ಒಪ್ಪುವುದಿಲ್ಲ.

† ವಿಕ್ರಮ ಶಕೆಯೆಂಬುದು ಕ್ರಿ. ಪೂ. 58–57ರಲ್ಲಿ ಪ್ರಾರಂಭವಾಗುವುದು: ಅದನ್ನು ಪ್ರಾರಂಭಿಸಿದಾತನು ಉಜ್ಜಯಿನಿಯಲ್ಲಿ ಅತಿಯಶಸ್ವಿಯಾಗಿ ಆಳಿದ ವಿಕ್ರಮಾದಿತ್ಯನೆಂಬ ಚಕ್ರವರ್ತಿಯು. ಆತನು ಶಕರನ್ನು ಧ್ವಂಸಮಾಡಿ ನಾಶಗೊಳಿಸಿದ್ದೇ ಅಲ್ಲದೆ ಅನೇಕ ಧರ್ಮಕೆಲಸಗಳನ್ನು ನೆರವೇರಿಸಿದನು. ಆತನ ಆಸ್ಥಾನವು ದಕ್ಷರಾದ ಮಂತ್ರಿಗಳಿಂದಲೂ, ಸಾಹಸಿಗಳಾದ ದಳಪತಿಗಳಿಂದಲೂ, ಪ್ರಖ್ಯಾತರಾದ ಪಂಡಿತರಿಂದಲೂ, ಶ್ರೇಷ್ಠರಾದ ಕವಿಗಳಿಂದಲೂ ಶೋಭಿಸುತ್ತಿತ್ತು. ಆತನ ಸಿಂಹಾಸನವು ಪ್ರಸಿದ್ಧವಾದುದು. ಆತನ ವಿಷಯವಾಗಿ ಅನೇಕಾನೇಕ ಕಥೆಗಳುಂಟು. ಈಗಿನ ಭಾವಲಪುರದ ಬಳಿ ಕರೂರೆಂಬೆಡೆಯಲ್ಲಿ

## ಶಾತವಾಹನ ವಂಶ

ಅಶೋಕನ ಸಾಮ್ರಾಜ್ಯವು ಒಡೆದಾಗ ದಖ್ಖಿನ ಮೂಲೆಯಲ್ಲಿ ಮೊದಲಿನಿಂದಲೂ ಸ್ವತಂತ್ರವಾಗಿಯೇ ಇದ್ದ ಚೋಳ, ಪಾಂಡ್ಯ, ಕೇರಲ ರಾಜ್ಯಗಳು ಹಿಂದಿನಂತೆಯೇ ನಡೆದುಬಂದುವು; ತುಂಗಭದ್ರಾನದಿಗೂ ವಿಂಧ್ಯಪರ್ವತಕ್ಕೂ ನಡುವೆ ಇದ್ದ ಭೋಜ, ರಾಷ್ಟ್ರಿಕ, ಪುಳಿಂದ, ಶಬರ, ಶಾತವಾಹನರಲ್ಲಿ ಶಾತವಾಹನರೇ ಪ್ರಬಲರಾಗಿ ಕೃಷ್ಣಾನದಿಯ ಎರಡು ಕಡೆಗಳಲ್ಲಿಯೂ ಇದ್ದ ತಮ್ಮ ರಾಜ್ಯವನ್ನು ಅಶೋಕನ ತರುವಾಯ ವಿಸ್ತಾರಗೊಳಿಸಿಕೊಂಡರು. ಪುರಾಣಗಳಲ್ಲಿ ಶಾತವಾಹನರಿಗೆ **ಆಂಧ್ರಭೃತ್ಯ**ರೆಂಬ ಹೆಸರು ವಾಡಿಕೆಯಾಗಿದೆ.* ಚಂದ್ರಗುಪ್ತ ಚಕ್ರವರ್ತಿಯ ಕಾಲದಲ್ಲಿಯೇ ಮೂವತ್ತು ದುರ್ಗಗಳನ್ನೂ ಪ್ರಬಲವಾದ ಸೈನ್ಯವನ್ನೂ ಅವರು ಪಡೆದಿದ್ದರು. **ಪ್ರತಿಷ್ಠಾನನಗರ** ಮತ್ತು **ಧನ್ಯಕಟಕ (ಅಮರಾವತಿ)**ಗಳು ಅವರಿಗೆ ರಾಜಧಾನಿಗಳಾಗಿದ್ದುವು. ಚಂದ್ರಗುಪ್ತ ಚಕ್ರವರ್ತಿಯಿಂದಲೋ ಬಿಂದುಸಾರ ಚಕ್ರವರ್ತಿಯಿಂದಲೋ ಇವರು ಪರಾಜಿತರಾಗಿ ಮೌರ್ಯ ಸಮ್ರಾಟರಿಗೆ ಪೊಗದಿಯನ್ನು ಸಲ್ಲಿಸುತ್ತಿದ್ದರು.

ಸಾಮ್ರಾಜ್ಯ

ಅಶೋಕನ ಮರಣಾನಂತರ ಶಾತವಾಹನರು ತಮ್ಮ ಸ್ವಾತಂತ್ರ್ಯವನ್ನು ಸ್ಥಾಪಿಸಿಕೊಂಡುದೇ ಅಲ್ಲದೆ ರಾಜ್ಯ ವಿಸ್ತಾರಕ್ಕೂ ಮೊದಲಿಟ್ಟರು. ಅವರಂತೆಯೇ ಸ್ವತಂತ್ರರಾಗಿದ್ದ ಕಳಿಂಗರೂ ಕೂಡ ಪ್ರಬಲರಾಗಿ **ಖರವೇಲ**ನೆಂಬ ರಾಜನ ಕೈಕೆಳಗೆ ಮಗಧ ದೇಶದಲ್ಲಿ ದಂಡಯಾತ್ರೆಯನ್ನು ನಡೆಸಲು ಶಕ್ತಿಯುಳ್ಳವರಾದರು. ಖರವೇಲರಾಜನು ಶಾತವಾಹನರಲ್ಲಿ ಮೈತ್ರಿಯನ್ನೇ ತೋರಿದನು. ಕಳಿಂಗರಿಗೂ ಶಾತವಾಹನರಿಗೂ ದ್ವಂದ್ವವುಂಟಾಗಲಿಲ್ಲ. ಖರವೇಲರಾಜನ ತರುವಾಯ ಕಳಿಂಗರ ಪ್ರಾಬಲ್ಯವು

---

ಆತನು ಶಕರನ್ನೂ ಮ್ಲೇಚ್ಛರನ್ನೂ ಚನ್ನಾಗಿ ಸೋಲಿಸಿದನಂತೆ. ಈ ಅಂಶಗಳು ಯಾವುವೂ ನಿಷ್ಕೃಷ್ಟವಾಗಿಲ್ಲ. ವಿಕ್ರಮಾದಿತ್ಯನ ಆಸ್ಥಾನದಲ್ಲಿ ನವರತ್ನಗಳೆನಿಸಿದ ಕವಿಜನರಿದ್ದರೆಂದು ವರ್ಣಿಸುವ ಈ ಶ್ಲೋಕವನ್ನು ಜ್ಞಾಪಕದಲ್ಲಿಡುವುದು ಉಪಯುಕ್ತ :

ಧನ್ವಂತರಿಕ್ಷಪಣಕಾಮರಸಿಂಹಶಂಕುವೇತಾಲಭಟ್ಟಘಟಕರ್ಪರಕಾಲಿದಾಸಾಃ ।
ಖ್ಯಾತೋ ವರಾಹಮಿಹಿರೋ ನೃಪತೇಸ್ಸಭಾಯಾಂ ರತ್ನಾನಿ ವೈ ವರರುಚಿರ್ನವ
ವಿಕ್ರಮಸ್ಯ ॥

ಕ್ಷೀಣವಾಯಿತು. ಆ ವೇಳೆಗೆ ಗೋದಾವರೀ ಪ್ರಾಂತವೆಲ್ಲವನ್ನೂ ಸ್ವಾಧೀನ ಗೊಳಿಸಿಕೊಂಡಿದ್ದ ಶಾತವಾಹನ ರಾಜರು ಪ್ರಾಬಲ್ಯದಲ್ಲಿ ಹೆಚ್ಚಿ ವಿಂಧ್ಯ ಪರ್ವತಪ್ರಾಂತವನ್ನೂ ಜಯಿಸಿ ಮಗಧರಾಜ್ಯವನ್ನಾಕ್ರಮಿಸುವವರಾದರು. ಕ್ರಿ. ಪೂ. 230ರಲ್ಲಿ ಸ್ವಾತಂತ್ರ್ಯಪಡೆದ ಶಾತವಾಹನರು ಕ್ರಿ. ಪೂ. 31ರ ವೇಳೆಗೆ ಈ ರೀತಿ ಪ್ರಬಲರಾಗಿ ಮಗಧ ರಾಜ್ಯದಲ್ಲಿ ನುಗ್ಗಿ ಅಲ್ಲಿ ಆಳುತ್ತಿದ್ದ ಕಾಣ್ವ ವಂಶದ **ಸುಶರ್ಮ**ರಾಜನ ಅಧಿಕಾರವನ್ನು ಕೊನೆಗಾಣಿಸಿದರು. ದಖನ್ನಿನಲ್ಲಿ ರಾಜ್ಯಕಟ್ಟಿಕೊಂಡು ವಿಶಾಲವಾದ ಸಾಮ್ರಾಜ್ಯವನ್ನು ನಿರ್ಮಿಸಿದ



18. ಅಜಂತ—ಸಾಮಾನ್ಯ ದೃಶ್ಯ

ಹಾಲರಾಜ

ಈ ಶಾತವಾಹನ ವಂಶಜರಲ್ಲಿ ರಾಜರ ಹೆಸರುಗಳು ಸಲವತ್ತು ತಲೆಗಳವರೆಗೂ ಪುರಾಣಗಳಲ್ಲಿ ದೊರಕುತ್ತವೆ. ಆರ್ಯ ಧರ್ಮವನ್ನು ರಕ್ಷಿಸಿ ನಾನ್ನೂರು ವರ್ಷಕಾಲ ಪ್ರಾಬಲ್ಯವನ್ನನುಭವಿಸಿದ ಈ ಅರಸರಲ್ಲಿ ಹದಿನೇಳನೆಯಾತನಾದ **ಹಾಲ ರಾಜ**ನು ಸಾಹಿತ್ಯದಲ್ಲಿ ಪ್ರಸಿದ್ಧನು. ಆತನ ಆಸ್ಥಾನದಲ್ಲಿ ಅನೇಕ ಪಂಡಿತರೂ ಕವಿಗಳೂ ಇದ್ದರು. ಪ್ರಾಕೃತ ಭಾಷೆಯಲ್ಲಿ ಸಾಹಿತ್ಯವು ಬೆಳೆದಿತ್ತು;

ಹಾಲರಾಜನೇ ರಸಜ್ಞನೆನಿಸಿ ಗಾಥಾಸಪ್ತಶತಿಯೆಂಬ ಪ್ರಾಕೃತ ಭಾಷೆಯ ಗ್ರಂಥವನ್ನು ರಚಿಸಿದನು. ಶಾತವಾಹನ ರಾಜರು ಪಂಡಿತ ಜನರಲ್ಲಿ ಔದಾರ್ಯವನ್ನೂ, ಜೈನ ಬೌದ್ಧ ಬ್ರಾಹ್ಮಣ ಗುರುಗಳಲ್ಲಿ ನಿಷ್ಪಕ್ಷಪಾತವಾದ ಭಕ್ತಿ ಗೌರವಗಳನ್ನೂ ತೋರುತ್ತಿದ್ದರು. ಅವರ ಕಾಲದಲ್ಲಿಯೇ ಜಗದ್ವಿಖ್ಯಾತವಾದ ಅಜಂತ ಗುಹೆಗಳ ನಿರ್ಮಾಣವು ಪ್ರಾರಂಭವಾಯಿತು.

ಗೌತಮೀಪುತ್ರ

ಶಾತವಾಹನರು ಪ್ರಬಲರಾಗುವ್ದಾಗಲೇ ಪಶ್ಚಿಮದಲ್ಲಿ ಶಕಜನರ ಎರಡನೆ ಗುಂಪಿನವರು ಸುಗ್ಗಿ ಸೌರಾಷ್ಟ್ರ ಅವಂತೀ ದೇಶಗಳಲ್ಲಿ ನೆಲೆಸಿ ರಾಜ್ಯ ಕಟ್ಟಿದರು. **ಕ್ಷಹರಾತವಂಶ**ವೆಂಬ ಅವರ ರಾಜವಂಶದವರು ಕ್ರಿ. ಪೂ. ಮೊದಲನೆ ಶತಮಾನದ ಅಂತ್ಯಕಾಲದಲ್ಲಿ ಈಗಿನ ಗುಜರಾಥ ಮಹಾರಾಷ್ಟ್ರಗಳನ್ನು ಪ್ರವೇಶಿಸಿದರು. ಆ ಪ್ರಾಂತಗಳಲ್ಲಿ **ಭೂಮುಕ**ನೆಂಬ ಶಕನು ರಾಜ್ಯ ಕಟ್ಟಿದನು. ಆ ರಾಜ್ಯವು ಎರಡನೆ ಶತಮಾನದಾರಂಭದಲ್ಲಿ **ನಹಪಾನ**ನೆಂಬ ಕ್ಷಹರಾತ ರಾಜನ ಪಾಲಿಗೆ ಬಂತು. ಆಗ ಶಾತವಾಹನ ಸಾಮ್ರಾಜ್ಯಕ್ಕೆ **ಗೌತಮೀಪುತ್ರ**ನೆಂಬ ಅತಿಸಮರ್ಥನಾದಾತನು ಅರಸನಾಗಿದ್ದನು. ಶಕಜನರು ನುಗ್ಗುತ್ತಿದ್ದುದನ್ನು ಕಂಡು ಸಹಿಸಲಾರದೆ ಆತನು ಸೈನ್ಯಗೂಡಿ ಹೊರಟು ನಹಪಾನನೊಡನೆ ಹೋರಾಡಿ ಆತನ ಅಧಿಕಾರವನ್ನು ನಾಶಗೊಳಿಸಿ ಅವರು ಆಕ್ರಮಿಸಿದ್ದ ರಾಷ್ಟ್ರವನ್ನು ಬಿಡಿಸಿಕೊಂಡು ಅವರನ್ನು ಉತ್ತರಕ್ಕೇ ಅಟ್ಟಿ ಬಿಟ್ಟನು. ವಿಳಿವಾಯಕುರನೆಂಬ ಹೆಸರಿನಿಂದಲೂ ಪ್ರಸಿದ್ಧನಾದ ಗೌತಮೀಪುತ್ರನು ಕ್ರಿ. ಪೂ. 76ರಲ್ಲಿ ಪಟ್ಟಾಭಿಷಿಕ್ತನಾಗಿ ಕೀರ್ತಿಯಿಂದ ಆಳಿದನು. ಈತನ ಸಾಮ್ರಾಜ್ಯವು ಸುಮಾರು ಯಮುನಾ ನದಿಯಿಂದ ಕೃಷ್ಣಾ ತುಂಗಭದ್ರಾ ನದಿಗಳವರೆಗೂ ವ್ಯಾಪಿಸಿತ್ತು. ಈತನ ಕಾಲದಲ್ಲಿಯೇ ಶಾತವಾಹನ ಸಾಮ್ರಾಜ್ಯವು ಅತಿವಿಸ್ತಾರವನ್ನು ಪಡೆದಿದ್ದಿತು.

ವಾಸಿಷ್ಠೀಪುತ್ರ

ಶಕರ ಬಲವನ್ನು ಮುರಿದು ಶೌರ್ಯ ಸಾಹಸಗಳನ್ನು ತೋರಿದುದಲ್ಲದೆ ಈತನು ಧರ್ಮನಿಷ್ಠನಾಗಿ ಅನೇಕ ದಾನಧರ್ಮಗಳನ್ನು ಮಾಡಿ ಉದಾರಿಯೆನಿಸಿದನು. ನಾಸಿಕದ ಬಳಿ ನಾನಾಘಾಟ್ ಗುಹೆಗಳಲ್ಲಿ ಆತನ ದಾನ ಸೂಚನೆಗಳು ಕಾಣುತ್ತವೆ. ಈತನ ತರುವಾಯ ಪಟ್ಟವನ್ನೇರಿದ **ವಾಸಿಷ್ಠೀಪುತ್ರ**ನೆಂಬ (ಅಥವಾ ಪುಲುಮಾಯಿ)

ಈತನ ಮಗನು ತಂದೆಯಂತೆಯೇ ಪರಾಕ್ರಮಿಯಾಗಿದ್ದನು. ಸೋತು ಹೋದ ಶಕರು ಅವಂತೀ ಸೌರಾಷ್ಟ್ರಗಳಲ್ಲಿ **ಚಷ್ಟನ**ನೆಂಬ ಕ್ಷಹರಾತನು ಕಟ್ಟಿದ್ದ ರಾಜ್ಯವನ್ನು ಸೇರಿಕೊಂಡು ಶಾತವಾಹನರಲ್ಲಿ ಮೈತ್ರಿಯಿಂದಲೇ ವರ್ತಿಸುತ್ತಿದ್ದರು.

ಶಕರ ನಾಶ

ವಾಸಿಷ್ಠೀಪುತ್ರನ ಕಾಲದಲ್ಲಿ ಶಾತವಾಹನ ಸಾಮ್ರಾಜ್ಯದ ವಿಸ್ತಾರವೂ ಗೌರವವೂ ರಕ್ಷಿತವಾಯಿತು. ಕ್ಷಹರಾತರ ಬಲವು ಕುಗ್ಗಿತು. ವಾಸಿಷ್ಠೀಪುತ್ರನ ತರುವಾಯ ಆಳಿದ ಶಾತವಾಹನ ಪ್ರಭುಗಳು ಶಕರ ಬಲವನ್ನು ಮುರಿದು ನರ್ಮದಾನದಿಯ ದಕ್ಷಿಣದಲ್ಲಿ ಅವರ ಆಧಿಪತ್ಯವನ್ನು ಕೊನೆಗಾಣಿಸಿದರು. **ಕುಂತಲಶ್ರೀ ಶಾತಕರ್ಣಿ**ಯೆಂಬ ಶಾತವಾಹನ ರಾಜನು ಶಕರನ್ನು ಚೆನ್ನಾಗಿ ಸೋಲಿಸಿದನು; ಈ ಘಟನೆಯು ಕ್ರಿ. ಶ. 78ರಲ್ಲಿ ನಡೆಯಿತೆಂದೂ, ಆ ಕಾರಣದಿಂದಲೇ *ಶಾಲಿವಾಹನ ಶಕೆಯೆಂಬುದು ಪ್ರಾರಂಭವಾಯಿತೆಂದೂ ಕೆಲವರು ಪಂಡಿತರು ಸಿದ್ಧಾಂತ ಮಾಡಿದ್ದಾರೆ. ಕುಂತಲಶ್ರೀ ಶಾತಕರ್ಣಿಯ ತರುವಾಯ ಶಾತವಾಹನ ವಂಶದಲ್ಲಿ **ಯಜ್ಞಶ್ರೀ ಶಾತಕರ್ಣಿ**ಯೆಂಬ ರಾಜನು ಪ್ರಬಲನಾಗಿಯೇ ಇದ್ದನು. ಆತನಿಗೆ

---

* ಶಾಲಿವಾಹನ ಶಕೆಯನ್ನು ಕುಶೀ ಕುಲದ ವಿಮರಾಜನು ಪ್ರಾರಂಭಿಸಿದನೆಂದು ಕೆಲವರೂ, ಕನಿಷ್ಕನೇ ಆರಂಭಿಸಿದನೆಂದು ಕೆಲವರೂ, ಕ್ಷಹರಾತ ಚಷ್ಟನನೆಂಬಾತನು ಮೊದಲಿಟ್ಟನೆಂದು ಕೆಲವರೂ ಅಭಿಪ್ರಾಯಪಟ್ಟಿದ್ದಾರೆ. ಬೇರೆ ಕೆಲವರು ಪಂಡಿತರು ಈಚೆಗೆ ಕುಂತಲಶ್ರೀ ಶಾತಕರ್ಣಿಯು ಶಕರನ್ನು ಸೋಲಿಸಿದ ಕಾಲದಿಂದ ಆ ಗಣನೆಯು ಮೊದಲಾಯಿತೆಂದು ಸಿದ್ಧಾಂತ ಮಾಡಿದ್ದಾರೆ. ಯಜ್ಞಶ್ರೀ ಶಾತಕರ್ಣಿಯು ಆರಂಭಿಸಿದನೆಂಬ ವಾದವೂ ಇದೆ. ಕ್ರಿ. ಪೂ. 100ರಿಂದ ಕ್ರಿ. ಶ. 200ರವರೆಗೆ ಆಳಿದ ರಾಜವಂಶಗಳ ಕಾಲನಿರ್ಣಯವು ವಾದಗ್ರಸ್ತವಾಗಿಯೇ ಇದೆ.

ಡಾ|| ಫ್ಲೀಟೆಂಬ ಐರೋಪ್ಯ ಪಂಡಿತನು ಗುಪ್ತ ಶಕೆಯು ಕ್ರಿ. ಶ. 319ರಲ್ಲಿ ಮೊದಲಾಯಿತೆಂದು ನಿರ್ಣಯಮಾಡಿದನು. ಮೊನ್ನೆವರೆಗೆ ಆ ನಿರ್ಣಯವನ್ನೇ ಇತಿಹಾಸ ಗ್ರಂಥಕಾರರು ಅನುಸರಿಸಿದ್ದರು. ಈಚೆಗೆ ಆತನ ನಿರ್ಣಯವು ದುರ್ಬಲವಾದುದೆಂದು ಕೆಲವರಿಗೆ ಕಂಡುಬಂದಿದೆ. ಶಾತವಾಹನ, ಗುಪ್ತ, ಕುಶೀಕುಲಗಳ ರಾಜರು ಸಮಕಾಲಿಕರೆಂಬ ವಾದವು ಈಚೆಗೆ ಹುಟ್ಟಿದೆ.

ಈ ಸಂದರ್ಭದಲ್ಲಿಯೇ ವಿಕ್ರಮ ಶಕೆ, ಮಾಳವ ಶಕೆ, ಗುಪ್ತ ಶಕೆ, ಶಾಲಿವಾಹನ ಶಕೆಗಳ ಇತ್ಯರ್ಥವಾಗಬೇಕಾಗಿದೆ. ಪ್ರಸಿದ್ಧ ಶಕಾರಿ ವಿಕ್ರಮಾದಿತ್ಯ ಚಕ್ರವರ್ತಿಯು ಯಾರೆಂಬ ತೊಡಕೂ ಇದರಲ್ಲಿ ಸೇರಿದೆ. ಈ ಅಂಶವು ನಿಷ್ಕರ್ಷೆಯಾದರೆ ಈ ಭಾಗಕ್ಕೆ ಮುಸುಕಿರುವ ಮಂಜು ಕರಗಿಹೋಗುತ್ತದೆ. ಪಂಡಿತರು ಇದರಲ್ಲಿ ಈಚೆಗೆ ತೊಡಗಿರುವುದರಿಂದ ಸ್ವಲ್ಪ ಕಾಲದಲ್ಲಿಯೇ ನಿರ್ಣಯವು ಸಿದ್ಧವಾಗಬಹುದು. ಆದ್ದರಿಂದ ಇಲ್ಲಿ ಕೊಟ್ಟಿರುವ ಕಾಲಕ್ರಮವನ್ನು ತಾತ್ಕಾಲಿಕವೆಂದು ಭಾವಿಸಬೇಕು.

ಗೌತಮೀಪುತ್ರನೆಂದೂ ಹೆಸರಿತ್ತು. ಆತನೂ ಶಕಕುಲಸ್ಥರನ್ನು ಸೋಲಿಸಿ ಶಕರ ಬಲವನ್ನು ಹಾಳುಮಾಡಿದನು. ಆತನ ನಾಣ್ಯಗಳಲ್ಲಿ ಹಡಗುಗಳ ಮುದ್ರೆಯೇ ಇದೆ; ಆದ್ದರಿಂದ ಶಾತವಾಹನರು ನೌಕಾಬಲವನ್ನು ಕಟ್ಟಿ ಸಮುದ್ರದ ಮೇಲೆಯೂ ಅಧಿಕಾರವನ್ನು ಮಾಡುತ್ತ ದೂರ ದೇಶ ವ್ಯಾಪಾರಕ್ಕೆ ವಿಶೇಷವಾದ ಪ್ರೋತ್ಸಾಹವನ್ನು ಒದಗಿಸುತ್ತಲಿದ್ದರೆಂದು ಭಾವಿಸಬಹುದಾಗಿದೆ. ಯಜ್ಞಶ್ರೀ ರಾಜನ ತರುವಾಯ ಶಾತವಾಹನ ವಂಶಜರು ಕೆಲವರು ಆಳಿದರು; ಆದರೆ ಅವರ ಪ್ರಾಬಲ್ಯವು ಕುಗ್ಗಿತು. ಸಾಮ್ರಾಜ್ಯದ ಬೇರೆಬೇರೆ ಭಾಗಗಳಲ್ಲಿ ಮಾಂಡಲಿಕರಾಗಿಯೂ ಸಾಮಂತರಾಗಿಯೂ ಇದ್ದವರು ಕ್ರಮವಾಗಿ ಸ್ವಾತಂತ್ರ್ಯವನ್ನು ಸಾಧಿಸಿಕೊಂಡರು.

ರುದ್ರದಾಮ
ಕ್ರಿ. ಶ. 130—150

ಮಾಳವ ಪ್ರಾಂತದಲ್ಲಿ ನೆಲೆಸಿದ್ದ ಚಷ್ಟನನೆಂಬ ಶಕನು ಹಿರಿಯ ಗೌತಮೀಪುತ್ರನಿಗೆ ಸಹಾಯಕನಾಗಿದ್ದುಕೊಂಡು ಪ್ರಾಯಶಃ ಮಾಂಡಲಿಕನಾಗಿದ್ದನು. ಚಷ್ಟನನ ತರುವಾಯ ಉಜ್ಜಯಿನಿಯಲ್ಲಿ ಆಳಲಾರಂಭಿಸಿದ ಆತನ ಮೊಮ್ಮಗ ರುದ್ರದಾಮನೆಂಬಾತನು ಪ್ರತಾಪಶಾಲಿಯಾಗಿದ್ದುದರಿಂದ ರಾಜ್ಯವಿಸ್ತಾರಕ್ಕೆ ತೊಡಗಿದನು. ಆಗ ಶಾತವಾಹನ ಪ್ರಭುಗಳಿಗೆ ಇಳಿಗಾಲವಾಗಿತ್ತು. ವಾಸಿಷ್ಠೀಪುತ್ರನೆಂಬ ಹೆಸರಿನ ಶಾತವಾಹನ ರಾಜನು ಆಳುತ್ತಿದ್ದನು. ರುದ್ರದಾಮನು ಈ ಕಡೆಯ ವಾಸಿಷ್ಠೀಪುತ್ರನೊಡನೆ ಯುದ್ಧಮಾಡಿ ಆತನನ್ನು ಸೋಲಿಸಿದನು. ಹಿಂದೆ ನಹಪಾನನು ಆಳುತ್ತಲಿದ್ದ ಪ್ರದೇಶಗಳನ್ನು ವಶಪಡಿಸಿಕೊಂಡು **ಮಹಾಕ್ಷತ್ರಪ**ನೆಂಬ ಬಿರುದನ್ನು ಧರಿಸಿದನು. ಆದರೆ ರುದ್ರದಾಮನು ವಾಸಿಷ್ಠೀಪುತ್ರನಿಗೆ ದಕ್ಷಮಿತ್ರೆಯೆಂಬ ತನ್ನ ಮಗಳನ್ನು ಕೊಟ್ಟು ಮದುವೆಯನ್ನೇ ನಡೆಸಿದ್ದನು. ಅಳಿಯನ ರಾಜ್ಯಕ್ಕೆ ಲೋಪಬಾರದಂತೆ ಇನ್ನು ಮುಂದೆ ವರ್ತಿಸುವುದಾಗಿ ಮಾತುಕೊಟ್ಟನು. ನಹಪಾನನ ವಂಶವು ನಷ್ಟವಾಗಿತ್ತು. ರುದ್ರದಾಮನೇ ಸೌರಾಷ್ಟ್ರ, ಮಾಳವ, ಗುಜರಾಥ ಗಳನ್ನು ಒಟ್ಟುಗೂಡಿಸಿ ಮಹಾಕ್ಷತ್ರಪನೆಂಬ ಬಿರುದಿನಿಂದ ಆಳಿದನು. ಆ ಕಾಲಕ್ಕೆ ಶಕರು ಭಾರತೀಯ ಭಾಷೆಯನ್ನೂ ರೀತಿ ನೀತಿಗಳನ್ನೂ ಒಪ್ಪಿಕೊಂಡುಬಿಟ್ಟಿದ್ದರು; ಯವನರಂತೆಯೇ ಇವರೂ ಸ್ವಲ್ಪ ಕಾಲದಲ್ಲಿ ತಮ್ಮ

ವೈಶಿಷ್ಟ್ಯವನ್ನು ನೀಗಿಕೊಂಡರು; ಆದರೆ ಗ್ರೀಕರಂತೆ ಇವರು ಬೌದ್ಧ ಮತಸ್ಥರಾಗಲಿಲ್ಲ. ಭಾರತೀಯರಲ್ಲಿ ಸೇರಿಕೊಳ್ಳಲು ತವಕಪಡುತ್ತಲಿದ್ದ ರುದ್ರದಾಮನು ವಾಸಿಷ್ಠೀಪುತ್ರನ ಸಂಬಂಧವನ್ನು ಕಟ್ಟಿಕೊಂಡುದು ಜಾತಿ ಗೌರವವನ್ನು ಪಡೆಯುವ ಆಸೆಯಿಂದ. ಆರ್ಯಧರ್ಮವನ್ನೇ ಅನುಸರಿಸುತ್ತ ರುದ್ರದಾಮನು **ಸುದರ್ಶನ** ಸರೋವರದ ಕಟ್ಟೆಯು ಪುನಃ ಒಡೆದಿರಲು ಅದನ್ನು ಜೀರ್ಣೋದ್ಧಾರಗೊಳಿಸಿ, ಅದರ ಸಮೀಪದಲ್ಲಿಯೇ ಒಂದು ಶಿಲಾಲೇಖವನ್ನು ಬರೆಯಿಸಿದನು. ಆ ಲೇಖವು ಸಂಸ್ಕೃತ ಭಾಷೆಯಲ್ಲಿದೆ. ಯಶಸ್ವಿಯಾಗಿ ಆಳಿದ ರುದ್ರದಾಮನ ತರುವಾಯ ಕ್ಷಹರಾತ ವಂಶದವರೆಂದು ಹೆಸರಾದ ಆತನ ವಂಶಸ್ಥರು ಉಜ್ಜಯಿನಿಯಲ್ಲಿ ಪಟ್ಟಭದ್ರರಾಗಿ ಸ್ವಲ್ಪ ಕಾಲ ಮಾತ್ರ ಆಳುತ್ತಿದ್ದರು.

## ಕುಶೀಕುಲ

ಕುಶೀಕುಲ

ಅತ್ತ ಉತ್ತರದಲ್ಲಿ ನೆಲೆಸಿದ್ದ ಶಕರು ಸ್ವಲ್ಪ ಕಾಲದಲ್ಲಿಯೇ ತಕ್ಷಶಿಲಾ ಮಧುರಾ ಪ್ರಾಂತಗಳಲ್ಲಿ ರೂಢಿಸಿಕೊಳ್ಳಲು ಯತ್ನಿಸುತ್ತಿದ್ದ ಆಧಿಪತ್ಯವನ್ನು ಕ್ಷಿಪ್ರದಲ್ಲಿಯೇ ಕಳೆದುಕೊಳ್ಳಬೇಕಾಯಿತು. ಶಕಸ್ಥಾನದಿಂದ ಅವರು ಬಾಖ್ತ್ರಿಯದ ಮಾರ್ಗವಾಗಿ ಭರತವರ್ಷಕ್ಕೆ ತೆರಳಿದಂತೆ ಅವರ ಹಿಂದೆಯೇ **'ಯೂಚಿ'** ಎಂಬ ತುರುಷ್ಕ ಅಥವಾ ತುಖಾರ ಕುಲದವರು ಚಲಿಸುತ್ತಿದ್ದರು. ಭಾರತದೇಶದೊಳಗೆ ಶಕರು ರಾಜ್ಯ ಕಟ್ಟಿಕೊಳ್ಳುತ್ತಿದ್ದ ವೇಳೆಯಲ್ಲಿ ಹೊರಗಡೆ ಇದ್ದ ಶಕರ ಪ್ರಾಬಲ್ಯವು ಈ ಯೂಚಿ ಕುಲದವರೆದುರಿನಲ್ಲಿ ನಾಶಹೊಂದಿತು. ಯೂಚಿ ಕುಲದವರು ಬಾಖ್ತ್ರಿಯ ಮತ್ತು ಉದ್ಯಾನ (ಈಗಿನ ಅಫ್ಘಾನಸ್ಥಾನ) ಕ್ಷೇತ್ರಗಳಲ್ಲಿ ಶಕರು ನಡೆಸುತ್ತಿದ್ದ ಅಧಿಕಾರವನ್ನು ಸುಲಭವಾಗಿ ಕಸಕೊಂಡರು. ಆದರೂ ಅಸಭ್ಯರಾದ ಈ ಜನರು ತಮ್ಮಲ್ಲಿಯೇ ಕಲಹಗಳನ್ನಾಡಿಕೊಳ್ಳುತ್ತಿದ್ದರು. ಅವರಲ್ಲಿ ಕುಶೀ ಅಥವಾ ಕುಶಾನಕುಲದವನಾದ **ಕುಜೂಲ** (Kujula Kadphises) ನೆಂಬಾತನು ಸಾಮರ್ಥ್ಯದಿಂದ ಇತರ ಕುಲನಾಯಕರನ್ನು ವಶಪಡಿಸಿಕೊಂಡು, ಯೂಚಿ ಜನರನ್ನು ಒಟ್ಟುಗೂಡಿಸಿ (ಕ್ರಿ. ಶ. 48–78) ಹಿಂದೂಕುಷ್ ಪರ್ವತದ ಒತ್ತಿ

ನಲ್ಲಿ ಒಂದು ರಾಜ್ಯವನ್ನು ಕಟ್ಟಿದನು. ಈತನ ತರುವಾಯ ರಾಜ್ಯಾಧಿಕಾರ ಮಾಡಿದ **ವಿಮ** (Wima Kadphises) ಎಂಬಾತನು ಬಲಿಷ್ಠನಾಗಿ ಸಿಂಧು ನದಿಯ ಪ್ರಾಂತವನ್ನು ಗೆದ್ದನು. ಪಾರ್ಥಿಯ, ಬಾಕ್ಟ್ರಿಯ ಶಕಸ್ಥಾನ, ಮತ್ತು ಭರತವರ್ಷದ ವಾಯವ್ಯ ಭಾಗಗಳು ಆತನ ಅಧಿಕಾರಕ್ಕೊಳಗಾಗಿ ಕುಶೀ ಸಾಮ್ರಾಜ್ಯವು (ಕ್ರಿ. ಶ. 78–110) ಪ್ರಬಲವಾಯಿತು. ಶಕರು, ಪಹ್ಲವರು ಮುಂತಾದ ನಾನಾ ಜನರು ಆತನಿಗೆ ಅಧೀನರಾದರು. ಕಾಶ್ಮೀರ ದೇಶವೂ ಈತನ ಪಾಲಾಯಿತು. ಈತನು ವಾಯುವ್ಯದಲ್ಲಿ **ಪುರುಷಪುರ** (Peshawar)ವೆಂಬಲ್ಲಿಯೇ ಪ್ರಾಯಶಃ ರಾಜಧಾನಿಯನ್ನು ಮಾಡಿ ಕೊಂಡಿದ್ದನು. ರೋಮಕ ಸಮ್ರಾಟನಾಗಿದ್ದ **ಟ್ರಾಜನ್** (Trajan) ಎಂಬಾತನೊಡನೆ ಈತನು ರಾಯಭಾರವನ್ನು ನಡೆಸಿದನು. ಈ ರೀತಿ ಕುಶೀ ಸಾಮ್ರಾಜ್ಯವನ್ನು ವಿಸ್ತಾರಗೊಳಿಸಿ ಪ್ರಸಿದ್ಧನಾದ ವಿಮನ ತರುವಾಯ **ಕನಿಷ್ಕ**ನೆಂಬ ವಿಖ್ಯಾತ ಪುರುಷನು (ಕ್ರಿ. ಶ. 120–144) ಸಮ್ರಾಟನಾದನು.

ಚೀನೀ ವಿಸ್ತಾರ

ಕುಶೀಕುಲದವರು ತುಖಾರ ಅಥವಾ ತುರುಷ್ಕ ಜಾತಿಯವರು; ಮಧ್ಯ ಏಷ್ಯದಲ್ಲಿ ಅನೇಕ ಕಾಲವಿದ್ದವರಾದುದರಿಂದ ಚೀನಾ ಸಾಮ್ರಾಜ್ಯದ ಪರಿಚಯವು ಅವರಿಗೆ ಭರತ ವರ್ಷದ ಪರಿಚಯಕ್ಕಿಂತ ಹೆಚ್ಚಾಗಿತ್ತು. ವಿಮ ಚಕ್ರವರ್ತಿಯು ಚೀನಾ ಚಕ್ರವರ್ತಿಯ ಸಂಬಂಧಕ್ಕಾಸೆಪಟ್ಟು ಆತನ ಮಗಳನ್ನು ವಿವಾಹ ಮಾಡಿಕೊಡೆಂದು ಕೇಳಲು ಚೀನಾದೇಶದವರು ಕೋಪಗೊಂಡು ಅವಮಾನವನ್ನು ಮಾಡಿದರು. ಆ ಅವಮಾನಕ್ಕೆ ಪ್ರತೀಕಾರಮಾಡಬೇಕೆಂದು ವಿಮರಾಜನು ಒಂದು ದೊಡ್ಡ ಸೇನೆಯನ್ನು ಕೂಡಿಸಿ ಪಾಮಿರ್ ಪ್ರದೇಶದ ಮಾರ್ಗವಾಗಿ ಚೀನೀಯರ ಮೇಲೆ ಕಳುಹಿಸಲು, ಆ ಸೈನ್ಯವು ಚೀನಾದಳಪತಿಯಾಗಿದ್ದ **ಪಾನ್ಚಾ** (Panchao) ಯೆಂಬಾತನಿಗೆದುರಾಗಿ ಸರ್ವನಾಶವನ್ನೇ ಹೊಂದಿತು. ಪಾನ್ಚಾ ದಳ ಪತಿಯು ಪ್ರಚಂಡನಾಗಿದ್ದನು. ಕುಶೀಕುಲದವರನ್ನು ಈ ರೀತಿಯಲ್ಲಿ ಸೋಲಿಸಿ ಅವರಿಂದ ತನ್ನ ಪ್ರಭುವಿಗೆ ಪೊಗದಿ ಸಲ್ಲಬೇಕೆಂದು ಗೊತ್ತು ಮಾಡಿ, ಆತನು ತನ್ನ ದಳದೊಡನೆ ಪಶ್ಚಿಮಕ್ಕೆ ಹೊರಟು ಕ್ಯಾಸ್ಪಿಯನ್ ಸಮುದ್ರದವರೆಗೂ ದೇಶಗಳನ್ನು ಜಯಿಸಿದನು. ಖೋಟನ್ (Khotan)

ಕ್ಯಾಷ್ಘರ್ (Kashgar), ಯೂರ್ಕಂದ್ (Yarkand), ತುರಕಸ್ಥಾನ (Turkestan)ಗಳನ್ನು ಚೀನಾ ದಳಪತಿಯು ಗೆದ್ದುದು ಜ್ಞಾಪಕಾರ್ಹವಾದ ಸಂಗತಿ. ಆ ವೇಳೆಯಲ್ಲಿ ಹಿಮಾಚಲಪರ್ವತದ ಆಚೆಯಿದ್ದ ಉತ್ತರ ಕುರು ಮುಂತಾದ ರಾಷ್ಟ್ರಗಳು ಚೀನಾ ಸಾಮ್ರಾಜ್ಯದೊಳಗೆ ಸೇರಬೇಕಾಯಿತು; ಕಾಶ್ಮೀರದೇಶದವರಿಗೆ ಚೀನೀ ಜನರ ಸಂಬಂಧವು ಹೆಚ್ಚಿನವಂತಾಯಿತು.

## ಕನಿಷ್ಕ ಚಕ್ರವರ್ತಿ (ಕ್ರಿ. ಶ. 120–144 ?)

ಕನಿಷ್ಕನು ಪಟ್ಟವನ್ನೇರಿದಾಗ ಚೀನೀಯರಿಗೆ ಪೊಗದಿ ಕೊಡುತ್ತ ವಶ್ಯತೆಯನ್ನೊಪ್ಪಿಕೊಂಡಿರಬೇಕಾಗಿತ್ತು. ಇದನ್ನು ಸಹಿಸದೆ ಕನಿಷ್ಕನು ತನ್ನ ರಾಜ್ಯವನ್ನು ವಿಸ್ತಾರಪಡಿಸಿ ಹೆಚ್ಚು ಬಲವನ್ನು ಗಳಿಸಿ ಚೀನೀಯರ ಮೇಲೆ ಮುಯ್ಯಿ ತೀರಿಸಿಕೊಳ್ಳಲು ಮನಸ್ಸು ಮಾಡಿದನು. ಪಂಚನದ ಪಾಂಚಾಲದೇಶಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡು ಪೂರ್ವ ದಿಕ್ಕಿನಲ್ಲಿ ಕಾಶೀ ಪಾಟಲೀಪುತ್ರ ನಗರಗಳನ್ನು ಮುತ್ತಿದನು. ಪಾಟಲಿಪುತ್ರದಲ್ಲಿ **ಅಶ್ವಘೋಷ**ನೆಂಬ ಪ್ರಖ್ಯಾತ ಬೌದ್ಧ ಪಂಡಿತನಿದ್ದನು. ಕನಿಷ್ಕನು ಆತನನ್ನು ಕಂಡು ಬಲವಂತದಿಂದಲೇ ತನ್ನ ರಾಜಧಾನಿಗೆ ಕರೆದುಕೊಂಡು ಹೋದನು. ಭರತಖಂಡದಲ್ಲಿ ಪಂಚನದ, ಸಿಂಧು, ರಾಜಪುತ್ರಸ್ಥಾನ ಮತ್ತು ಪಾಂಚಾಲಗಳೆಂಬ ಭಾಗಗಳು ಕನಿಷ್ಕನ ಸಾಮ್ರಾಜ್ಯದಲ್ಲಿ ಸೇರಿದವು. ಅಲ್ಲಿ ಆಳುತ್ತಿದ್ದ ಸಣ್ಣ ರಾಜರುಗಳು ಪೊಗದಿಕೊಡಲೊಪ್ಪಿದರು. ಅಶ್ವಘೋಷನ ಪರಿಚಯ ಪ್ರಭಾವದಿಂದಲೋ ಏನೋ ಈ ಕನಿಷ್ಕ ಚಕ್ರವರ್ತಿಯು ಬೌದ್ಧ ಮತದಲ್ಲಿ ಪಕ್ಷಪಾತವುಳ್ಳವನಾದನು. ರಾಜಧಾನಿಯನ್ನು ಸೇರಿದ ತರುವಾಯ ಕನಿಷ್ಕನು ಚೀನೀಯರ ಮೇಲೆ ಯುದ್ಧಕ್ಕೆ ಸಿದ್ಧನಾದನು. ಪಾನ್ಚ್ಯಾ ದಳಪತಿಯು



19. ಕನಿಷ್ಕನ ನಾಣ್ಯ

ಮೃತನಾಗಿದ್ದನು. ಕನಿಷ್ಕನು ಪೊಗದಿಯನ್ನು ನಿಲ್ಲಿಸಿ ತನ್ನ ಸೇನೆಗಳನ್ನು ಕಾಶ್ಮೀರ ಪಾಮಿರ್ ಪ್ರದೇಶಗಳ ಉತ್ತರದಲ್ಲಿರುವ ಖೋಟನ್, ಯಾರ್ಕಂದ್, ಕ್ಯಾಷ್ಗರ್ ಪ್ರಾಂತಗಳ ಮೇಲೆ ಕಳುಹಿಸಿದನು. ಆ ಪ್ರಾಂತಗಳು ಚೀನಾ ಸಾಮ್ರಾಜ್ಯದ ಭಾಗಗಳಾಗಿದ್ದವು; ಆದರೆ ಚೀನಾ ಚಕ್ರವರ್ತಿಯು ದುರ್ಬಲನಾಗಿದ್ದುದರಿಂದ ಅವುಗಳನ್ನುಳಿಸಿಕೊಳ್ಳಲಾರದೆ ಹೋದನು. ಆ ಪ್ರಾಂತಗಳನ್ನು ಗೆದ್ದು 'ದೈವಪುತ್ರ'ನೆಂಬ ಬಿರುದನ್ನು ತಾಳಿ, ಕನಿಷ್ಕನು ಅಲ್ಲಿ ಆಳುತ್ತಿದ್ದ ಚೀನೀ ರಾಜಕುಮಾರರನ್ನು ಸೆರೆಹಿಡಿದು ತನ್ನ ರಾಜಧಾನಿಗೊಯ್ದು ಕೆಲಕಾಲ ಅವರನ್ನು ತನ್ನ ರಾಜ್ಯದಲ್ಲಿಯೇ ಇಟ್ಟುಕೊಂಡಿದ್ದನು. ಈ ಚೀನೀ ರಾಜಕುಮಾರರು ಬೌದ್ಧರೇ ಆಗಿದ್ದುದರಿಂದ ಕನಿಷ್ಕನ ರಾಜ್ಯದಲ್ಲಿದ್ದಾಗಲೂ ಬೌದ್ಧರಲ್ಲಿ ವಿಶ್ವಾಸವನ್ನು ತೋರಿ ಬೌದ್ಧ ಮಂದಿರಗಳಿಗೆ ದಾನಗಳನ್ನು ಕೊಟ್ಟರು.

4ನೆ ಬೌದ್ಧ ಮಹಾಸಭೆ

ಬೌದ್ಧ ಸಂಪರ್ಕಗಳು ಬೆಳೆದು ಕನಿಷ್ಕನ ಮನಸ್ಸಿನಲ್ಲಿ ಬೌದ್ಧಮತ ಭಕ್ತಿಯು ಹೆಚ್ಚಿತು. ಧರ್ಮಾಶೋಕನ ಕೀರ್ತಿಯು ತಿಳಿಯಬಂದು ತಾನೂ ಅಶೋಕ ಚಕ್ರವರ್ತಿಯಂತೆಯೇ ಯಶಸ್ವಿಯಾಗಬೇಕೆಂಬ ಆಕಾಂಕ್ಷೆಯು ಹುಟ್ಟಿತು. ಯುದ್ಧಗಳಲ್ಲಿ ಜಯಶಾಲಿಯಾದ ಮೇಲೆ ಜಯಸ್ತಂಭಗಳನ್ನೂ ವಿಜಯಮಂದಿರಗಳನ್ನೂ ಕಟ್ಟುವುದರಲ್ಲಿ ತೊಡಗಿದ್ದವನು ಬೌದ್ಧ ವಿಹಾರಗಳನ್ನೂ ಸ್ತೂಪಗಳನ್ನೂ ನಿರ್ಮಿಸುವುದರಲ್ಲಿ ನಿರತನಾದನು. ಗಾಂಧಾರ, ಉದ್ಯಾನ, ಕಪಿಶಾ, ಪುಷ್ಕರಾವತಿಗಳೆಂಬ ವಾಯುವ್ಯ ಕ್ಷೇತ್ರಗಳಲ್ಲಿ ಅನೇಕಾನೇಕ ಬೌದ್ಧ ಮಂದಿರಗಳು ನಿರ್ಮಿತವಾದವು. ಇದಲ್ಲದೆ ಕನಿಷ್ಕನು ಅಶೋಕನಂತೆಯೇ ಮಹಾಸಭೆಯನ್ನು ಕೂಡಿಸಲು ಆಸೆಪಟ್ಟು ವಿದ್ವಾಂಸರೆಲ್ಲರನ್ನೂ ಕರೆಯಿಸಿದನು. ಹೀಗೆ ನೆರೆದ ಸಭೆಗೇ ನಾಲ್ಕನೆ ಬೌದ್ಧ ಮಹಾಸಭೆಯೆಂದು ಹೆಸರು. ಈ ಸಭೆಯಲ್ಲಿ ಬೌದ್ಧ ಗ್ರಂಥಗಳ ಸಂಚಯವೂ, ಮಹಾಯಾನವೆಂಬ ಬೌದ್ಧಮತದ ಎರಡನೆ ತರಂಗದ ವ್ಯವಸ್ಥೆಯೂ, ಮಧ್ಯ ಏಷ್ಯಾ, ತಿಬ್ಬತ್, ಚೀನಾ ದೇಶಗಳಲ್ಲಿ ಮತ ಪ್ರಚಾರ ಕಾರ್ಯದ ಆರಂಭವೂ ನಡೆದವು. ಕಾಶ್ಮೀರದಲ್ಲಿ ಕುಂದಲವನವೆಂಬಲ್ಲಿ ನೆರೆದ ಈ ಸಭೆಯು ಕಾರ್ಯಕಲಾಪವನ್ನು ಸಂಗ್ರಹಗೊಳಿಸಿ, ತಾಮ್ರದ ತಗಡುಗಳ ಮೇಲೆ

ಬರೆಯಿಸಿ, ಅವುಗಳನ್ನು ಒಂದಾನೊಂದು ಸ್ತೂಪದಲ್ಲಿ ಈ ಚಕ್ರವರ್ತಿಯ ಕಾಲದಲ್ಲಿ ಪ್ರತಿಷ್ಠೆಮಾಡಿದರು. ಆ ಲೇಖಗಳು ಇದುವರೆಗೂ ದೊರೆತಿಲ್ಲ. ಸಭೆಯ ಕಾರ್ಯಕಲಾಪಗಳಿಗೆ ಕಾರಣನೂ ಆಶ್ರಯದಾತನೂ ಆದ ಕನಿಷ್ಕ



20. ತಕ್ಷಶಿಲೆಯ ಶೋಧಿತ ಭಾಗ

ನನ್ನು ಆಶೋಕನನ್ನು ಸ್ತುತಿಸಿದಂತೆಯೇ ಬೌದ್ಧರು ಸ್ತುತಿಸಿರುವರು. ಆಶೋಕನಿಗೂ ಕನಿಷ್ಕನಿಗೂ ಹೋಲಿಕೆಯು ಬಹು ಸ್ವಲ್ಪ. ಯುದ್ಧಾತುರನೂ ರಾಜ್ಯಲೋಭಿಯೂ ನಿಷ್ಠುರನೂ ಆಗಿದ್ದ ಕನಿಷ್ಕನಿಗೂ, ಕೋಮಲ ಮನಸ್ಕನೂ ಸರಲಹೃದಯನೂ ಸ್ವಾರ್ಥರಹಿತನೂ ಆಗಿದ್ದ ಆಶೋಕನಿಗೂ

ವ್ಯಾಘ್ರ ಗೋವುಗಳ ತಾರತಮ್ಯವು ಕಾಣುತ್ತದೆ. ಪುನಃ ಯುದ್ಧಕ್ಕೆ ಸನ್ನದ್ಧನಾಗಿ ದಂಡಯಾತ್ರೆಗೆಂದು ಹೊರಟಾಗ ಕನಿಷ್ಕನನ್ನು ಆತನ ಅಧಿಕಾರಿಗಳೇ ಪಿತೂರಿಮಾಡಿ ಹಾಸಿಗೆಯಲ್ಲಿಯೇ ಬಂಧಿಸಿ, ಶ್ವಾಸ ನಿರೋಧ ಮಾಡಿ ಕೊಲ್ಲಿಸಿದರು. ಈ ಚಕ್ರವರ್ತಿಯು ಈ ರೀತಿ ದುರ್ಮರಣಕ್ಕೆ ತುತ್ತಾದನು. ಕುಶೀಕುಲ ಸಾಮ್ರಾಜ್ಯವು ಆತನ ಕಾಲದಲ್ಲಿಯೇ ಅತ್ಯುಚ್ಚ ಸ್ಥಿತಿಯಲ್ಲಿದ್ದುದು. ಆ ಸಾಮ್ರಾಜ್ಯವು ಭರತವರ್ಷದ ಒಳಗಿದ್ದುದಕ್ಕಿಂತ ಹೊರಗೇ ಹೆಚ್ಚಾಗಿತ್ತು ; ಆ ಕಾರಣದಿಂದ ಅದನ್ನು ಏಷ್ಯದ ಸಾಮ್ರಾಜ್ಯ, ಭಾರತ ಸಾಮ್ರಾಜ್ಯವಲ್ಲವೆಂದು ಹೇಳಬೇಕಾಗಿರುತ್ತದೆ.

**ಕುಶೀ ಸಾಮ್ರಾಜ್ಯ ಕ್ಷಯ**

ಕನಿಷ್ಕನ ತರುವಾಯ ಅತ್ಯಲ್ಪ ಅವಧಿಯಲ್ಲಿಯೇ ಸಾಮ್ರಾಜ್ಯವು ಒಡೆಯಿತು. ಆತನು ಜೀವಂತನಾಗಿದ್ದಾಗಲೇ **ಹುವಿಷ್ಕ ವಾಸಿಷ್ಕ**ರೆಂಬವರು ಆತನ ಪ್ರತಿನಿಧಿಗಳಾಗಿ ತಕ್ಷಶಿಲಾ ಮಥುರಾ ಪ್ರಾಂತಗಳಲ್ಲಿ ಅಧಿಕಾರ ಮಾಡುತ್ತಿದ್ದರು. ಆತನು ಮೃತನಾದ ಕೂಡಲೆ ಇವರಿಬ್ಬರೂ ಪ್ರಾಯಶಃ ರಾಜ್ಯವನ್ನು ಪಾಲುಮಾಡಿಕೊಂಡರು. ಕನಿಷ್ಕನ ತರುವಾಯ **ವಾಸುದೇವ**ನೆಂಬ ಕುಶೀಕುಲಸ್ಥನು ಕೆಲವು ಕಾಲ ವಾಯುವ್ಯ ಪ್ರಾಂತದಲ್ಲಿ ಆಳಿದನು. ವಾಸುದೇವನೆಂಬ ಹೆಸರನ್ನು ತಾಳಿದುದರಿಂದಲೇ ಕುಶೀಕುಲದವರು ಶಕರಂತೆಯೇ ಸ್ವಲ್ಪಕಾಲ ಭಾರತಭೂಮಿಯಲ್ಲಿ ನೆಲಸಿದ ಪರಿಣಾಮವಾಗಿ ತಮ್ಮ ಅಸಭ್ಯತೆಯನ್ನು ಬಿಟ್ಟು ಸಭ್ಯರಾಗಿ, ಭಾರತೀಯ ಧರ್ಮವನ್ನೊಪ್ಪಿಕೊಂಡ ಸಂಗತಿಯು ಸೂಚಿತವಾಗುವುದು. ಆದರೆ ಸಾಮ್ರಾಜ್ಯವು ಕಿರಿದಾಯಿತು. ಗಂಗಾನದಿಯ ಬಳಿ ಇದ್ದವರು ಪೊಗದಿಯನ್ನು ನಿಲ್ಲಿಸಿಬಿಟ್ಟರು. ಪಶ್ಚಿಮದಲ್ಲಿ ಪಾರ್ಥಿಯ ದೇಶದಲ್ಲಿ ಅಲ್ಲಿಯ ದೇಶೀಯರು ಈ ಅಸಭ್ಯಜನರ ಹಾವಳಿಯನ್ನು ನಿಲ್ಲಿಸಲು ಉದ್ಯುಕ್ತರಾದರು. ಕ್ರಿ. ಶ. 226ರಲ್ಲಿ ಆರ್ಸಕೀಸನ ವಂಶವು ಕೊನೆಗಂಡಿತು; **ಅರ್ತಕ್ಷತ್ರ** ಅಥವಾ **ಅರ್ದಷೀರ್ ಪಾಪಕಾನ್** (Ardeshir Papakan) ಎಂಬ ಶೂರನು ಪಾರ್ಥಿಯದರಸನಾಗಿ **ಸಾಸಾನೀ** (Sasanian) ಎಂಬ ಹೆಸರಿನಿಂದ ಪ್ರಸಿದ್ಧವಾದ ವಂಶವನ್ನು ಸ್ಥಾಪಿಸಿದನು. ಸಾಸಾನೀ ದೊರೆಗಳು ತಮ್ಮ ದೇಶದಿಂದ ಎಲ್ಲ ಅಸಭ್ಯ ಜಾತಿಯವರನ್ನೂ ಓಡಿಸಿದರು. ಪಶ್ಚಿಮದಲ್ಲಿ

ಇವರಿಂದ ಕುಶೀ ಸಾಮ್ರಾಜ್ಯವು ನಷ್ಟವಾಯಿತು. ಆ ಕುಲದ ಶಾಖೆಗಳ ಅರಸರು ಮಧ್ಯ ಏಷ್ಯದಲ್ಲಿಯೂ ನಮ್ಮ ದೇಶದ ವಾಯವ್ಯ ಭಾಗಗಳಲ್ಲಿಯೂ ಬೇರೆ ಬೇರೆ ಸಣ್ಣ ರಾಜ್ಯಗಳಲ್ಲಿ ಅರಸುತನ ಮಾಡುತ್ತಿದ್ದರು.

## ಸಾಂಸ್ಕೃತಿಕ ಪರಿವರ್ತನೆ

ಕ್ರಿ. ಪೂ. 230ರಿಂದ ಕ್ರಿ. ಶ. 150ರವರೆಗೆ ಮೂರು ಶತಮಾನಗಳ ಕಾಲವಾಯಿತು. ಆ ದೀರ್ಘಕಾಲದಲ್ಲಿ ದೇಶೀಯವಾದ ಸಾಮ್ರಾಜ್ಯ ವಾವುದೂ ಮೌರ್ಯಸಾಮ್ರಾಜ್ಯದಷ್ಟು ವಿಸ್ತಾರವನ್ನಾಗಲಿ ಪ್ರಾಬಲ್ಯ ವನ್ನಾಗಲಿ ಪಡೆಯಲಿಲ್ಲ. ಚಂದ್ರಗುಪ್ತ ಬಿಂದುಸಾರರಂತಹ ಪ್ರತಾಪಶಾಲಿ ಗಳಾದ ಚಕ್ರವರ್ತಿಗಳು ಗಂಗಾ ಸಿಂಧು ನದಿಗಳ ಪ್ರದೇಶಗಳಲ್ಲಿ ಆಳುತ್ತಿದ್ದ ಪಕ್ಷದಲ್ಲಿ ಪರದೇಶೀಯರಿಗೆ ಆಸ್ಪದವೇ ಸಿಗುತ್ತಿರಲಿಲ್ಲ. ಅಂತಹ ಸಾರ್ವ ಭೌಮರಿಲ್ಲದೆ ದೇಶವು ನಾನಾಮುಖವಾಗಿದ್ದ ವೇಳೆಯಲ್ಲಿ ಅನೇಕಾನೇಕ ಪರ ದೇಶೀಯರು ದೇಶದಲ್ಲಿ ಪ್ರವೇಶಿಸಿ ರಾಜ್ಯಗಳನ್ನು ಕಟ್ಟಿಕೊಂಡು ನೆಲೆಸಿದರು. ಅವರಲ್ಲಿ ಗ್ರೀಕರೂ ಪಾರ್ಥಿಯನರೂ ಸಭ್ಯತೆಯನ್ನು ಪಡೆದಿದ್ದರು; ಶಕರೂ ಯೂಚಿಗಳೂ ಅಸಭ್ಯರಾಗಿದ್ದರು. ಸಭ್ಯರಾದವರೂ ಅಸಭ್ಯರಾದವರೂ

**ಸಾಂಸ್ಕೃತಿಕ ಜಯ**

ಭಾರತಭೂಮಿಯಲ್ಲಿ ಸ್ವಲ್ಪಕಾಲ ನೆಲೆಸಿದಮೇಲೆ ತಮ್ಮ ಪೂರ್ವರೀತಿ ನೀತಿಗಳನ್ನು ತ್ಯಜಿಸಿ ಭಾರತ ವರ್ಷದ ಧರ್ಮಕ್ಕೆ ಕಟ್ಟುಬಿದ್ದು ಸಂಸ್ಕೃತ ರಾದರು.* ನಡೆನುಡಿಗಳಲ್ಲಿಯೂ ಧರ್ಮಾಚರಣೆಯಲ್ಲಿಯೂ ಅವರೆಲ್ಲರೂ

---

* ಇದೇ ಕಾಲದಲ್ಲಿಯೇ ಗ್ರೀಸ್ ದೇಶವನ್ನು ರೋಮಕರು ಜಯಿಸಿದರು; ಆದರೆ ರೋಮಕರು ಗ್ರೀಕರ ಸಂಸ್ಕೃತಿಗೆ ಸೋತರು. ಆ ಅಂಶವನ್ನೇ 'Captive Greece captured her proud captor' ಎಂಬ ವಾಕ್ಯದಲ್ಲಿ ಇತಿಹಾಸಕಾರರು ಪ್ರಸಿದ್ಧಗೊಳಿಸುತ್ತಾರೆ. ಭಾರತಭೂಮಿಯ ವಿಷಯದಲ್ಲಿ ಅದೇ ವಾಕ್ಯವನ್ನು ಶತಶಃ ತಥ್ಯವೆಂದು ಹೇಳಬಹುದು. "Trampled India tamed the barbarian hordes and taught the enlightened Greeks" ಎಂದು ಧಾರಾಳವಾಗಿ ಹೇಳಬಹುದಾಗಿದೆ. ಗ್ರೀಕರೂ ರೋಮಕರೂ ಈ ದೇಶದಲ್ಲಿ ನೆಲೆಸಿದರು; ಅವರ ವೈಶಿಷ್ಟ್ಯವೇ ಭರತಭೂಮಿಯಲ್ಲಿ ಉಳಿಯದಾಯಿತು. ಸುಸಂಸ್ಕೃತರೆಂದು ಹೆಸರಾಗಿದ್ದ ಗ್ರೀಕರೂ ಭಾರತೀಯರಿಗೆ ಶಿಷ್ಯರಂತಾಗಿ ಪುನರ್ಜನ್ಮವನ್ನೇ ಪಡೆದರು.

ರೋಮಕ ಸಾಮ್ರಾಜ್ಯವು ಅಸಭ್ಯಕುಲಗಳ ಹಾವಳಿಯಿಂದ ಪಟ್ಟ ಪರಿಣಾಮವನ್ನೂ, ಭರತವರ್ಷದಲ್ಲಿ ಅಸಭ್ಯ ಜನರ ಹಾವಳಿಯಿಂದ ಆದ ಪರಿಣಾಮವನ್ನೂ ಹೋಲಿಸತಕ್ಕುದು.

ಭಾರತೀಯರ ಅನುಯಾಯಿಗಳಾಗಿ ಭಾರತೀಯರಲ್ಲಿ ಕಲೆತುಹೋದುದು ಈ ಮುನ್ನೂರು ವರ್ಷಕಾಲದಲ್ಲಿ ಸೋಜಿಗದ ಸಂಗತಿ. ರಾಜ್ಯಾಧಿಕಾರವಿದ್ದಷ್ಟು ಕಾಲ ಅವರು ಕ್ಷತ್ರಿಯರಾಗಿರಲು ಯತ್ನಿಸಿ, ರಾಜಕೀಯ ಪ್ರಾಬಲ್ಯವನ್ನು ನೀಗಿದಮೇಲೆ ಸಾಮಾನ್ಯ ಉದ್ಯೋಗಗಳನ್ನವಲಂಬಿಸಿ, ಬೌದ್ಧ ಭಿಕ್ಷುಗಳನ್ನೋ ಬ್ರಾಹ್ಮಣ ವಿದ್ವಾಂಸರನ್ನೋ ಗುರುಗಳಂತೆ ಕಂಡು ಭಾರತೀಯರಲ್ಲಿ ಒಂದಾದರು. ಸೇರಿಕೊಂಡ ವರ್ಣದಲ್ಲಿ ಬೇರೆ ಪಂಗಡ ಅಥವಾ ಜಾತಿಗಳಾಗಿ ಏರ್ಪಟ್ಟು ಶಾಂತಿ ಸಹನೆಗಳನ್ನು ವೃದ್ಧಿಪಡಿಸಿಕೊಂಡರು. ಈ ರೀತಿಯಲ್ಲಿ ಭಾರತೀಯ ಸಂಸ್ಕೃತಿಯೆಂಬುದು ಯುದ್ಧಭೂಮಿಯಲ್ಲಿ ವಿಜಯಿಗಳಾದವರನ್ನು ವಶಪಡಿಸಿಕೊಂಡು ಸ್ವಚೈತನ್ಯ ಬಲವನ್ನು ತೋರಿತು. ಬೇರೆ ಬೇರೆ ಜಾತಿಗಳ ಪ್ರವೇಶದಿಂದ ವಿಸ್ತಾರವನ್ನೂ ವೈವಿಧ್ಯವನ್ನೂ ತಾಳಿದ ಭಾರತೀಯ ಜನಜೀವನದಲ್ಲಿ ಅನೇಕ ಬದಲಾವಣೆಗಳು ತೋರಿಕೊಂಡವು. ಬೌದ್ಧಮತದ ಆಚಾರ ವಿಚಾರಗಳಲ್ಲಿಯೇ ಸ್ಥಿತಿ ವ್ಯತ್ಯಾಸವು ಕಾಲಕ್ರಮವಾಗಿ ಉಂಟಾಯಿತು.

ಸನಾತನ ಧರ್ಮ

ಪ್ರಾರಂಭದಲ್ಲಿ ಬೌದ್ಧ ಮತವು ಯಜ್ಞ ವಿರೋಧವನ್ನೂ ಬ್ರಾಹ್ಮಣ ಜನರ ಗೋಪ್ಯತೆಯ ವಿರೋಧವನ್ನೂ ಕಟ್ಟಿಕೊಂಡು, ಸಾಮಾನ್ಯ ಜನರಲ್ಲಿ ಸತ್ಯ, ಶೌಚಾಚಾರ, ಅಹಿಂಸಾ ತತ್ವಗಳನ್ನು ನೆಲೆಗೊಳಿಸಿ ಸುಲಭ ರೀತಿಯಲ್ಲಿ ವ್ಯವಹರಿಸುತ್ತಿತ್ತು. ವಿಸ್ತಾರವಾಗಿ ಪ್ರಚಾರವಾಗುತ್ತ ಸ್ತೂಪ ವಿಹಾರ ಚೈತ್ಯಾಲಯಗಳು ತೋರಿಕೊಂಡು ಶಿಕ್ಷಣ, ಪ್ರಾರ್ಥನೆ, ವಿದ್ಯಾ ಸಾಧನೆ, ಕಲಾಭ್ಯಾಸಗಳಿಗೆ ಸ್ಥಾನಗಳಾದವು. ಅತ್ತ ಬ್ರಾಹ್ಮಣ ಜನರಿಗೆ ಬುದ್ಧದೇವನು ಅವಲಂಬಿಸಿದ ತತ್ವಗಳು ಹೊಸದಾಗಿರಲಿಲ್ಲ. ಬ್ರಾಹ್ಮಣರಲ್ಲಿ ಕೆಲವರು ಬೌದ್ಧ ತತ್ವವಿಚಾರಗಳನ್ನು ಒಪ್ಪಿಕೊಂಡರು. ಉಳಿದವರು ಪೂರ್ತಿ ಒಪ್ಪಿಗೆಯನ್ನು ತೋರದಿದ್ದರೂ ಬೌದ್ಧರು ಉಪದೇಶಿಸಿದ ನೀತಿಯನ್ನು ಒಪ್ಪಿದರು. ಬೌದ್ಧ ಮತವು ವಿಸ್ತಾರವಾಗಿ ಪ್ರಚಾರವಾಗುತ್ತಿದ್ದಾಗ ಬ್ರಾಹ್ಮಣ ಮತಸ್ಥರ ಪ್ರಾಬಲ್ಯವು ಮಗಧದೇಶದಲ್ಲಿಯೂ ಅದರ ನೆರೆಹೊರೆಯಲ್ಲಿಯೂ ತಗ್ಗಿತೇ ವಿನಾ ಉಳಿದೆಡೆಗಳಲ್ಲಿ ಕುಂದಲಿಲ್ಲ. ಬೌದ್ಧಮತಸ್ಥರ ವಿರೋಧವು ಬ್ರಾಹ್ಮಣ ವಿದ್ವಾಂಸರಿಗೂ ತತ್ವಜ್ಞರಿಗೂ ಉತ್ತೇಜನವನ್ನೇ ಎರೆಯಿತು.

ವಿರೋಧವು ಪಂಡಿತವರ್ಗದಲ್ಲಿ ವಾದ ವಿವಾದಗಳಲ್ಲಿ ಮಾತ್ರವೇ ತೋರುತ್ತಿತ್ತು; ಪರಸ್ಪರ ಹಿಂಸೆಯ ರೂಪವನ್ನು ತಾಳಲಿಲ್ಲ. ವಿಹಾರಗಳಲ್ಲಿಯೂ ವಿದ್ವತ್ಸಭೆಗಳಲ್ಲಿಯೂ ಬ್ರಾಹ್ಮಣಜನರೂ ಬೌದ್ಧರೂ ಪರಸ್ಪರ ಸೌಹಾರ್ದದಿಂದ ವಾದಗಳನ್ನು ನಡೆಸುತ್ತ ತತ್ತ್ವೋಪಾಸನೆ ಮಾಡುತ್ತಿದ್ದರು. ಇದರ ಪರಿಣಾಮವಾಗಿ ಬ್ರಾಹ್ಮಣ ಜನರಲ್ಲಿ ಶ್ರುತಿ ಸ್ಮೃತಿ ಗ್ರಂಥರಾಶಿಗಳ ವ್ಯಾಸಂಗವು ಹೆಚ್ಚಿತು; ಸಾಮಾನ್ಯ ಜನರಲ್ಲಿ ನೀತಿಧರ್ಮಗಳನ್ನು ಪ್ರಚಾರಮಾಡುವುದು ಕರ್ತವ್ಯವೆಂದು ಬ್ರಾಹ್ಮಣ ಜನರೂ ಭಾವಿಸಿದರು. ಇತ್ತ ಬೌದ್ಧ ಮತಸ್ಥರಲ್ಲಿ ಸಾಮಾನ್ಯ ಜನರಿಗೆ ಪ್ರಿಯವಾದ ಆಚಾರ ವಿಚಾರಗಳೂ, ಪರದೇಶೀಯರು ಸೇರಿದ ಕಾರಣದಿಂದ ಇತರ ಬದಲಾವಣೆಗಳೂ ತೋರಿಕೊಂಡವು. ಬ್ರಾಹ್ಮಣ ಮತಸ್ಥರು ಸಾಮಾನ್ಯ ಜನರಿಗೆ ಉಪದೇಶಮಾಡುತ್ತ ತಮ್ಮ ತತ್ತ್ವಗಳನ್ನು ಸುಲಭಗೊಳಿಸುವುದಕ್ಕೆ ತೊಡಗಿದರು. ಬೌದ್ಧ ಮತಸ್ಥರು ಮೊದಲು ತಮ್ಮ ಮತಾಚಾರಗಳಲ್ಲದೆ ಇದ್ದ ಆಚಾರಗಳನ್ನು ಒಪ್ಪಿಕೊಂಡರು.

*ಬೌದ್ಧ ಬ್ರಾಹ್ಮಣರ ಸ್ಪರ್ಧೆ*

ಶುಂಗ ಮತ್ತು ಕಾಣ್ವವಂಶಗಳ ರಾಜ್ಯಾಧಿಕಾರವೂ, ಅಶ್ವಮೇಧದ ಆಚರಣೆಯೂ, ಪತಂಜಲಿಯಿಂದ ಯೋಗ ಸೂತ್ರಗಳ ರಚನೆಯೂ, ಶಾತವಾಹನರು ವೈದಿಕ ಮತಸಿಷ್ಠರೆಂದು ತೋರಿದ ಹೆಮ್ಮೆಯೂ, ಕ್ಷಹರಾತ ವಂಶದವರ ಬ್ರಾಹ್ಮಣ ಮತದ ಸ್ವೀಕಾರವೂ ಬ್ರಾಹ್ಮಣ ಮತದ ಪ್ರಬಲ ಸ್ಥಿತಿಯನ್ನು ಸೂಚಿಸುತ್ತವೆ. ಪ್ರಾಯಿಕವಾಗಿ ಸಪ್ತಸಿಂಧುವೆಂದು ಹಿಂದೆ ಹೆಸರುಗೊಂಡಿದ್ದ ವಾಯವ್ಯ ಪ್ರದೇಶವು ಬ್ರಾಹ್ಮಣ ಮತ ಪ್ರಧಾನವಾಗಿಯೇ ಇತ್ತು. ತಕ್ಷಶಿಲೆ ಉಜ್ಜಯಿನಿಗಳು ಅವರ ಪ್ರಾಬಲ್ಯವನ್ನು ತೋರುತ್ತಿದ್ದ ವಿದ್ಯಾಕ್ಷೇತ್ರಗಳಾಗಿಯೇ ಇದ್ದವು. ಬೌದ್ಧಮತಸ್ಥರು ಈ ಪ್ರಾಂತಗಳಲ್ಲಿ ಸಂಚರಿಸುತ್ತಲಿದ್ದಾಗ ಬ್ರಾಹ್ಮಣಜನರ ಪ್ರಭಾವಕ್ಕೊಳಗಾದರು. ತಮ್ಮ ಧ್ಯಾನ ತತ್ತ್ವವನ್ನೇ ಯೋಗಶಾಸ್ತ್ರವು ವಿಸ್ತಾರಗೊಳಿಸಿ ಭದ್ರಗೊಳಿಸಿದಂತಿತ್ತು. ಅಲ್ಲದೆ ನಾಸ್ತಿಕ್ಯದ ಆಚಾರವು ಸ್ವಲ್ಪಕಾಲದಲ್ಲಿಯೇ ಮಾಯವಾಗಿ ಆಸ್ತಿಕ್ಯವು ತೋರಿಕೊಂಡಿದ್ದುದರಿಂದ ಬೌದ್ಧ

*ಮಹಾಯಾನ*

ಮತಸ್ಥರೂ ಆಸ್ತಿಕರಾಗಿ ಬುದ್ಧನನ್ನು ಬುದ್ಧದೇವನೆಂದು ಪೂಜಿಸುತ್ತಲೂ, ಆದಿ ಬುದ್ಧದೇವನ ಆಜ್ಞಾಧಾರಕರಾದ ಧ್ಯಾನಿಬುದ್ಧ, ಬೋಧಿಸತ್ವರನ್ನು ಆರಾಧಿಸುತ್ತಲೂ ಇದ್ದರು. ಬೌದ್ಧರಲ್ಲಿ ಆಜ್ಞೇಯವಾದವು ಮಾಯವಾಗಿ ಜನಸಾಮಾನ್ಯರ ಆಚಾರ ಬಲದಿಂದಲೇ ಆಸ್ತಿಕ್ಯವು ದೃಢವಾಯಿತು. ಇಂತಹ ಕಾಲಸ್ಥಿತಿಯಲ್ಲಿ ಗ್ರೀಕರೂ ಪಾರ್ಥಿಯನರೂ ರಾಜಕೀಯಾಧಿಕಾರವನ್ನು ಪಡೆದರು. ಅವರು ಇರಾನೀ ಸಾಮ್ರಾಜ್ಯದಲ್ಲಿ ಕೆಲಕಾಲವಿದ್ದ ಕಾರಣದಿಂದ ಅಲ್ಲಿಯ ಮತಾಚಾರಗಳನ್ನು ಅನುಸರಿಸುತ್ತ ಸೂರ್ಯದೇವನನ್ನು ಮಿತ್ರನೆಂಬ ಹೆಸರಿನಿಂದ ಪೂಜಿಸುತ್ತಿದ್ದರು. ಗ್ರೀಕ ತತ್ವಜ್ಞರೂ, ಪಾರ್ಥಿಯನರಲ್ಲಿ ತತ್ವಜ್ಞರಾಗಿದ್ದ **ಮಗಗೋತ್ರಜ** ಪುರೋಹಿತರೂ* ಕೂಡಿ ಬ್ರಾಹ್ಮಣರೂ ಬೌದ್ಧರೂ ಸೇರಿದ್ದ ವಿದ್ಯಾಪೀಠಗಳಲ್ಲಿ ವ್ಯಾಸಂಗಿಗಳಾದರು. ಗ್ರೀಕರಾಗಲಿ ಇರಾನಿನವರಾಗಲಿ ಭಾರತೀಯ ತತ್ವರಾಶಿಗೆ ಮಿಗಿಲೆನಿಸಿದ ತತ್ವಗಳಾವುವನ್ನೂ ಪಡೆದಿರಲಿಲ್ಲ; ಎರಡು ಗುಂಪಿನವರೂ ಹಿಂದಿನ ಕಾಲದಲ್ಲಿ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಭಾರತೀಯರ ಶಿಷ್ಯರಂತೆಯೇ ಇದ್ದರು. ಈ ಕಾರಣದಿಂದ ಸಭ್ಯಜಾತಿಯವರಾದ ಗ್ರೀಕರೂ ಪಾರ್ಥಿಯನರೂ ಭಾರತೀಯರಲ್ಲಿ ಕಲೆತು ತಮ್ಮ ಪ್ರತ್ಯೇಕತೆಯನ್ನು ಕಳೆದುಕೊಂಡರು. ಅಸಭ್ಯರೇ ಆಗಿದ್ದ ಶಕರೂ ಕುಶೀಕುಲಸ್ಥರೂ ಅಜ್ಞರಾಗಿದ್ದುದರಿಂದ ಆಚಾರ ಶುದ್ಧಿಯನ್ನು ಪಡೆದು ಭಾರತೀಯರನ್ನು ಗುರುಸ್ಥಾನದಲ್ಲಿಟ್ಟು ಶಿಷ್ಯತ್ವವನ್ನು ಒಪ್ಪಿಕೊಂಡರು. ವಾಯುವ್ಯ ಭಾಗಗಳಲ್ಲಿ ಅರಸುತನ ಮಾಡಿದ ಈ ಜನರು ತಮ್ಮ ಪೂರ್ವ ಪೂಜೆಗಳನ್ನು ಬಿಟ್ಟು ಬುದ್ಧದೇವ, ಮಹೇಶ್ವರ, ಸ್ಕಂದರನ್ನು ಆರಾಧಿಸುತ್ತ, ಆರ್ಯ ಭಾಷೆಯನ್ನವಲಂಬಿಸಿ ತಮ್ಮ ಹೆಸರುಗಳನ್ನು ಬದಲಾಯಿಸಿಕೊಳ್ಳುತ್ತ, ಭಾರತೀಯ ರಾಜವಂಶಗಳ ಸಂಬಂಧವನ್ನಾಶಿಸುತ್ತ ಕಡೆಗೆ ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ಸೇರಿದವರಾದರು.

ಗ್ರೀಕರ ಪರಿಣಾಮ

---

* ಒಂದಾನೊಂದು ಶಾಸನದಲ್ಲಿ ಈ ಮಗ ಗೋತ್ರಜರ ವೃತ್ತಾಂತವು ಈ ರೀತಿಯಲ್ಲಿ ಕಥಿತವಾಗಿದೆ; ಮಿಹಿರಗೋತ್ರದ ಸುಜಹ್ವನೆಂಬ ಬ್ರಾಹ್ಮಣನಿಗೆ ನಿಕ್ಷುಭಾ ಎಂಬ ಪುತ್ರಿಯಿದ್ದಳು. ಆಕೆಯಲ್ಲಿ ಸೂರ್ಯನು ಅನುರಕ್ತನಾದನು; ಆಕೆಯಲ್ಲಿ ಸೂರ್ಯನಿಗೆ ಜರಶಬ್ದ ಅಥವಾ ಜರಸಸ್ತ (ಸರವಸ್ತ ಅಥವಾ Zoroaster) ಎಂಬ ಮಗನು ಹುಟ್ಟಿದನು. ಜರಶಬ್ದನ ಮಕ್ಕಳೇ ಮಗರು (Magas or Magi).

ಪ್ರಾಚೀನ ಧರ್ಮಶಾಸ್ತ್ರಗಳನ್ನು ವ್ಯಾಸಂಗಮಾಡುತ್ತ ವಿದ್ವಾಂಸರು ಜನಸಾಮಾನ್ಯರ ಉಪದೇಶವನ್ನೂ ಶಿಕ್ಷಣವನ್ನೂ ಕೈಕೊಂಡುದಲ್ಲದೆ ವಿಜ್ಞಾನಶಾಸ್ತ್ರಗಳನ್ನೂ ಅಭ್ಯಾಸ ಮಾಡಿ ಅವುಗಳನ್ನು ಮುಂದರಿಸಿದರು. ಯೋಗ ಶಾಸ್ತ್ರವನ್ನು ಸೂತ್ರರೂಪದಲ್ಲಿ **ಪತಂಜಲಿ**ಯು ಬರೆದುದು ತಿಳಿದಂತೆ. ಅಗ್ನಿವೇಶ, ಧನ್ವಂತರಿ ಮುಂತಾದ ಪೂರ್ವಜರು ವಿವರಿಸಿದ್ದ ಆಯುರ್ವೇದವನ್ನು ಸಂಗ್ರಹಗೊಳಿಸಿದ **ಚರಕ**ನು ಕನಿಷ್ಕನ ಕಾಲದವನೆಂದು ಕೆಲವರ ಅಭಿಪ್ರಾಯ. **ಚರಕ ಸುಶ್ರುತ**ರು ಹಿಂದಿನ ಕಾಲದವರೇ ಆಗಿದ್ದರೂ ಬೌದ್ಧ ಮತಸ್ಥನಾಗಿ **ಅಷ್ಟಾಂಗಹೃದಯ**ವೆಂಬ ಆಯುರ್ವೇದ ಗ್ರಂಥವನ್ನು ರಚಿಸಿದ **ವಾಗ್ಭಟ**ನು ಈ ಕಾಲದಲ್ಲಿದ್ದಾತನು. ಭೈಷಜ್ಯ ಚಿಕಿತ್ಸಾಶಾಸ್ತ್ರಗಳು ರಸತಂತ್ರ ವನಸ್ಪತಿ ಪರೀಕ್ಷೆಗಳೊಡನೆ ಪುಷ್ಟಿಪಡೆದವು. ಬೌದ್ಧ ವಿಹಾರಗಳೂ, ಬ್ರಾಹ್ಮಣ ಜನರ ವಿದ್ಯಾಪೀಠಗಳೂ ಈ ಶಾಸ್ತ್ರ ಪೋಷಣೆಯ ಕಾರ್ಯದಲ್ಲಿ ಭಾಗಿಗಳಾದವು. ಸಾಮಾನ್ಯ ಜನರಿಗೆ ನೀತಿಬೋಧೆಯನ್ನೂ ಸದಾಚಾರ ವಿವರವನ್ನೂ ಹೇಳಲು ಈ ಕಾಲದ ಉಪದೇಶಕರು ಶಿಥಿಲವಾಗಿದ್ದ ಇತಿಹಾಸ ಪುರಾಣ ಗ್ರಂಥಗಳಲ್ಲಿ ಅವಕಾಶವನ್ನು ಕಲ್ಪಿಸಿಕೊಂಡರು. ರಾಮಾಯಣ ಮಹಾಭಾರತಗಳು ಈ ಉದ್ದೇಶಕ್ಕೆ ಅನುಕೂಲವಾಗಿದ್ದುದದರಿಂದ ಅವು ವಿಸ್ತಾರವನ್ನು ಹೊಂದಿದವು. ಮನುಧರ್ಮಶಾಸ್ತ್ರವೆಂಬ ಗ್ರಂಥವು ಆಚಾರ ವ್ಯವಹಾರಗಳನ್ನೂ ವರ್ಣಧರ್ಮವನ್ನೂ ನಿರ್ಧರಿಸಿಕೊಡತಕ್ಕ ಗ್ರಂಥವಾಯಿತು. ಅನೇಕ ಮುಖವಾಗಿ ತತ್ವ, ನೀತಿ, ಆಚಾರ, ಇತಿಹಾಸ, ಶಾಸ್ತ್ರ ಗ್ರಂಥಗಳು ರಚಿತವಾಗುತ್ತಿದ್ದ ಕಾಲದಲ್ಲಿ ವ್ಯಾಕರಣಶಾಸ್ತ್ರವು ಅವಶ್ಯವಾಗಿ ಅಭ್ಯಸ್ತವಾಗಿ ಪೂರ್ಣತೆಯನ್ನು ಪಡೆಯಿತು. ಪಾಣಿನ್ಯಾಚಾರ್ಯನ ಅಷ್ಟಾಧ್ಯಾಯೀ ಎಂಬ ಗ್ರಂಥವು ಕಾತ್ಯಾಯನನೆಂಬ ಪಂಡಿತನಿಂದ ಮೌರ್ಯರ ಹಿಂದೆಯೇ ವಿಸ್ತಾರವನ್ನು ಪಡೆದಿತ್ತು; ಪತಂಜಲಿಯು ಅದನ್ನು ಇನ್ನೂ ಪರಿಷ್ಕರಿಸಿದನು. ಈ ವ್ಯಾಕರಣವೇ ಸಂಗ್ರಹವಾಗಿ ಕಾಲಕ್ರಮದಲ್ಲಿ ಕೌಮುದೀ ಎಂದು ಪ್ರಸಿದ್ಧವಾಯಿತು. ಸುಲಭವೂ ಸಂಗ್ರಹವೂ ಆದ ಇತರ ವ್ಯಾಕರಣ ಗ್ರಂಥಗಳೂ ರಚಿತವಾಗಿ ಸಂಸ್ಕೃತ ಭಾಷೆಯ ವ್ಯಾಸಂಗವೂ ವಾಡಿಕೆಯೂ ಸಾಮಾನ್ಯವಾಯಿತು. ರಾಜಾ

ಸ್ಥಾನಗಳಲ್ಲಿ, ವಿದ್ವದ್ಗೋಷ್ಠಿಗಳಲ್ಲಿ, ಸಭಾಮಂದಿರಗಳಲ್ಲಿ ಮತ್ತು ಶ್ರೇಷ್ಠ ವರ್ಣದವರಲ್ಲಿ ಸಂಸ್ಕೃತವೇ ಸಾಮಾನ್ಯ ಭಾಷೆ ಯಾಗಿತ್ತು. ಜನಸಾಮಾನ್ಯರು ಪ್ರಾಕೃತವೆಂಬ ಸಂಸ್ಕೃತದ ಅಪಭ್ರಂಶವನ್ನು ಆಡುತ್ತಿದ್ದರು.

ಸಂಸ್ಕೃತ ಭಾಷೆ

ಅಶೋಕ ಚಕ್ರವರ್ತಿಯು ಮತ್ತು ಶಾತವಾಹನರ ಶಾಸನಗಳು ಪ್ರಾಕೃತ ಭಾಷೆಯಲ್ಲಿಯೇ ಇರುವುದರಿಂದಲೂ, ರುದ್ರದಾಮನ ಕಾಲದಿಂದ ಮುಂದಕ್ಕೆ ಶಾಸನಗಳು ಸಂಸ್ಕೃತ ಭಾಷೆಯನ್ನೇ ಉಪಯೋಗಿಸಿಕೊಂಡಿರುವುದ ರಿಂದಲೂ ಈ ಕಾಲದಲ್ಲಿಯೇ ವೈದಿಕ ಕಾಲದ ಆರ್ಯ ಭಾಷೆಯು ಸುಲಭವೂ ಶ್ರಾವ್ಯವೂ ಆಗಿ, ಕಾವ್ಯರಾಶಿಯಲ್ಲಿ ತೋರುವ ಸಂಸ್ಕೃತ ರೂಪವನ್ನು ತಾಳಿ ವ್ಯಾಪ್ತಿ ಪಡೆಯಿತೆಂದು ಹೇಳಬಹುದು. ಕ್ರಿ. ಶ. 1ನೆ ಶತಮಾನದವರೆಗೆ ಪಾಳಿ ಭಾಷೆಯಲ್ಲಿ ಅನೇಕಾನೇಕ ಗ್ರಂಥಗಳು ಬೌದ್ಧರಿಂದ ರಚಿತವಾದವು; 1ನೆ ಶತಮಾನದಿಂದ ಮುಂದಕ್ಕೆ ಸಂಸ್ಕೃತವು ಚೈತನ್ಯವುಳ್ಳದ್ದಾಗಿ ಸರ್ವೋಪಯುಕ್ತವಾಗಿ ಬೌದ್ಧರಿಗೂ ಗ್ರಾಂಥಿಕ ಭಾಷೆಯಾಯಿತು. ಪಾಳಿ ಸಾಹಿತ್ಯವು ನಿಂತುಹೋದ ಕಾಲಕ್ಕೇ ಬೌದ್ಧಮತದ ಪ್ರತ್ಯೇಕತೆಯೂ ನಿಂತುಹೋಯಿತೆಂದು ಸಕಾರಣವಾಗಿ ಭಾವಿಸಬಹುದು.

ಬೌದ್ಧ ಮತದಲ್ಲಿ ಈ ರೀತಿ ಆಸ್ತಿಕ್ಯವು ಭದ್ರವಾಯಿತು. ದೇವ ಲೋಕವು ಸಿದ್ಧವಾಗಿ ಅನೇಕ ದೇವ ದೇವತೆಗಳು ತೋರಿಕೊಂಡು ಜನರ ಮನಸ್ಸು ರಂಜಿತವಾಯಿತು. ಬುದ್ಧನು ಆದಿಬುದ್ಧನ ಅವತಾರಗಳಲ್ಲಿ ಓರ್ವನೆಂಬ ನಂಬಿಕೆಯುಂಟಾಗಿ ಇತರ ಅವತಾರಗಳ ಪುರಾಣಗಳು ರಚಿತವಾದವು. ದೇವ ದೇವತೆಗಳಲ್ಲದೆ ಸ್ವರ್ಗ ನರಕಗಳೂ, ಉತ್ಸವ ಹಬ್ಬಗಳೂ, ಮೂರ್ತಿ ಪೂಜೆಯೂ ಬೌದ್ಧರ ಉಪದೇಶದಲ್ಲಿ ತೋರಿಕೊಂಡವು. ನಾನಾಮುಖ ವಾಗಿ ಬೆಳೆದಿದ್ದ ಬೌದ್ಧರ ಆಚಾರ ವಿಚಾರಗಳನ್ನು ಕ್ರಿಸ್ತಶಕದ ಆದಿಯಲ್ಲಿ **ನಾಗಾರ್ಜುನ**ನೆಂಬ ಪಂಡಿತಶ್ರೇಷ್ಠನು ಪರೀಕ್ಷಿಸಿ, ಎಲ್ಲವನ್ನೂ ಕ್ರಮಗೊಳಿ ಸುವುದರಲ್ಲಿ ಉಪಯುಕ್ತವಾಗುವಹಾಗೆ ಬೌದ್ಧ ತತ್ವಗಳಿಗೆ ವ್ಯಾಖ್ಯಾನ ಬರೆದಂತೆ ಒಂದು ಗ್ರಂಥವನ್ನು ರಚಿಸಿದನು. ಕನಿಷ್ಕನ ಬಲವಂತಕ್ಕೊಳ ಗಾಗಿ ಪುರುಷಪುರಕ್ಕೆ ಹೊರಟ ಅಶ್ವಘೋಷನು ಬುದ್ಧಚರಿತೆಯನ್ನು

ಸಂಸ್ಕೃತ ಕಾವ್ಯ

ಸಂಸ್ಕೃತ ಭಾಷೆಯಲ್ಲಿಯೇ ಬರೆದಂತೆ ನಾಗಾರ್ಜುನನೂ ಪ್ರಾಜ್ಞಾ ಪರಿಮಿತಾ ಎಂಬ ಗ್ರಂಥವನ್ನೂ ಸಂಸ್ಕೃತದಲ್ಲಿಯೇ ಬರೆದನು. ಬ್ರಾಹ್ಮಣ ಜನರ ಆಚಾರ ವಿಚಾರಗಳನ್ನೂ, ಬೌದ್ಧರ ನೀತಿ ಪ್ರಧಾನವಾದ ಮತವನ್ನೂ ಸಮನ್ವಯಮಾಡಲು ಇದು ತಕ್ಕ ಪರಿಸ್ಥಿತಿಯಾಗಿತ್ತು. ಸಂಸ್ಕೃತ ಭಾಷೆಯಲ್ಲಿ ಕಾವ್ಯರೂಪದ ಸಾಹಿತ್ಯವು ವೃದ್ಧಿಯಾಗುವುದಕ್ಕೂ ಇದು ತಕ್ಕ ವಾತಾವರಣವನ್ನು ಒಡ್ಡಿತು. ರಾಮಾಯಣ ಮಹಾಭಾರತಗಳು ಆದಿಕಾವ್ಯಗಳೆನಿಸಿ ವಿಸ್ತಾರವನ್ನು ಪಡೆದ ಈ ಕಾಲದಲ್ಲಿಯೇ ಅಶ್ವಘೋಷ, ಭಾಸ, ಸೌಮಿಲ್ಲ, ಕವಿಪುತ್ರ, ಶೂದ್ರಕ (?) ಮೊದಲಾಗಿ ಕಾಳಿದಾಸನ ಹಿಂದಿನವರೆಂದು ಪ್ರಸಿದ್ಧರಾದವರು ಬದುಕಿದ್ದರು.

## ವ್ಯಾಪಾರ ವೃದ್ಧಿ

ವ್ಯಾಪಾರ ವೃದ್ಧಿ

ಏಕರಾಜ್ಯವಿಲ್ಲದೆ ಅನೇಕ ಅಸಭ್ಯ ಜನರ ತಂಡಗಳು ಪ್ರವೇಶಮಾಡಿದ ಈ ಕಾಲದಲ್ಲಿಯೂ ಧಾರ್ಮಿಕ, ವೈಜ್ಞಾನಿಕ, ಸಾಹಿತ್ಯ ಕ್ಷೇತ್ರಗಳಲ್ಲಿ ಅಭಿವೃದ್ಧಿಗೆ ಪ್ರಬಲವಾದ ಅಡ್ಡಿಯುಂಟಾಗಲಿಲ್ಲ. ಅದೇ ರೀತಿಯಲ್ಲಿಯೇ ಕೈಗಾರಿಕೆ ಮತ್ತು ವ್ಯಾಪಾರಗಳ ಅಭಿವೃದ್ಧಿಗೂ ಆತಂಕವು ತೋರಲಿಲ್ಲ. ಕ್ರಿ. ಪೂ. 1ನೆ ಶತಮಾನದಿಂದ ಕ್ರಿ. ಶ. 3ನೆ ಶತಮಾನದಂತ್ಯದವರೆಗೆ ಭಾರತೀಯರ ಹೊರಗಿನ ವ್ಯಾಪಾರವು ಅದ್ಭುತ ರೀತಿಯಲ್ಲಿಯೇ ನಡೆಯಿತು. ಅದಕ್ಕೆ ಮುಖ್ಯಕಾರಣವಾದ ಸಂಗತಿಯು ಹೊರಗೇ ಘಟಿಸಿತ್ತು. ಗ್ರೀಕ ರಾಜ್ಯಗಳು ಕ್ಷೀಣಗತಿಯನ್ನು ಪಡೆದ ಕಾಲದಲ್ಲಿ ಭೂಮಧ್ಯಸಮುದ್ರ ಪ್ರಾಂತಗಳಲ್ಲೆಲ್ಲ ರೋಮಕರು ಪ್ರಬಲರಾಗಿ ಅಟ್ಲಾಂಟಿಕ್ ಸಾಗರದಿಂದ ಮೆಸೊಪೊಟೇಮಿಯದವರೆಗೂ, ಮತ್ತು ಡಾನ್ಯೂಬ್ ನದಿಯಿಂದ ಸಹರಾ ಮರುಭೂಮಿಯವರೆಗೂ ವ್ಯಾಪಿಸಿದರು. ಕ್ರಿ. ಪೂ. 30ರಲ್ಲಿ ಮಿಶ್ರ ದೇಶವು ರೋಮಕರ ಹಸ್ತಗತವಾಯಿತು; ಭೋಗವೈಭವಗಳಿಗೆ ಹೆಸರಾಗಿದ್ದ ಆ ದೇಶವು ಲಭಿಸಿದಂದಿನಿಂದ ರೋಮಕರಲ್ಲಿ ಭೋಗಾ ಸಕ್ತಿಯು ಹೆಚ್ಚಿ ಭಾರತೀಯ ವಸ್ತುಗಳಲ್ಲಿ ಆದರವು ಹೆಚ್ಚಿತು. ಅದೇ ಸಮಯದಲ್ಲಿಯೇ ರೋಮಕ ಸಾಮ್ರಾಜ್ಯವು ಸಮ್ರಾಟನನ್ನೂ ಆಸ್ಥಾನ

ವನ್ನೂ ಪಡೆಯಿತು. ರೋಮಕರಲ್ಲಿ ಭರತವರ್ಷದ ವಸ್ತ್ರಾಭರಣಗಳಿಗೂ ವಾಸನಾದ್ರವ್ಯಗಳಿಗೂ ಆದರವು ಏರಿ ಅವುಗಳ ಬೆಲೆಯೂ ಏರಿತು. ರೋಮಕ ವರ್ತಕರೇ ಈ ವ್ಯಾಪಾರವನ್ನು ನಡೆಸಬೇಕೆಂದು ತವಕಪಟ್ಟರು; ಹಡಗುಗಳನ್ನು ಕಟ್ಟಿಸಿ ಕಳುಹಿಸಿದರು. ನೀಲ ನದಿ(Nile)ಯ ಪ್ರದೇಶಗಳಿಗೂ ಸಿರಿಯಾ ದೇಶದ ಪ್ರದೇಶಗಳಿಗೂ ಭಾರತೀಯ ವ್ಯಾಪಾರಿಗಳು ಪೂರ್ವಕಾಲದಿಂದಲೂ ಹೊರಡುತ್ತಿದ್ದರಷ್ಟೆ. ಅವರ ವ್ಯಾಪಾರವು ಈಗ ಅವರ ಕನಸಿನ ಲಾಭವನ್ನೂ ಮೀರಿಸುವಷ್ಟು ಬೆಳೆಯಿತು. ರೋಮಕ ನಾವಿಕರೂ ಸಾಹಸಪಟ್ಟು ಕೆಂಪು ಕಡಲಿನ ದಕ್ಷಿಣ ಭಾಗಗಳಿಂದ ಸಮುದ್ರ ಪ್ರಯಾಣ ಹೊರಟು ಭರುಕಚ್ಛ, ಸೊಪಾರಕ, ಮುಜ್ಜಿರಿ, ಸಿಂಹಳಗಳನ್ನು ತಲುಪಿ ವ್ಯಾಪಾರ ನಡೆಸಲು ಆರಂಭಿಸಿದರು. ಕ್ರಿ. ಶ. 45ರಲ್ಲಿ ರೋಮಕ ನಾವಿಕನೊಬ್ಬನು ವರ್ಷದಲ್ಲಿ ಕ್ರಮವಾಗಿ ಹಿಂದೂ ಸಾಗರದ ಮೇಲೆ ವಾಣಿಜ್ಯ ಮಾರುತಗಳು ಬೀಸುವುದನ್ನು ತಿಳಿದುಕೊಂಡನು. ಅಂದಿನಿಂದ ರೋಮಕರಿಗೆ ಮೂರು ತಿಂಗಳ ಪ್ರಯಾಣ ವಾಗಿದ್ದುದು ನಲವತ್ತೇ ದಿನಗಳ ಪ್ರಯಾಣವಾಯಿತು. ಹಿಂದೂ ಸಾಗರದ ಭಾಗಗಳನ್ನೂ ಭರತ ಖಂಡದ ಬಂದರುಗಳನ್ನೂ ವ್ಯಾಪಾರಸ್ಥಳಗಳನ್ನೂ ತಿಳಿದುಕೊಳ್ಳಲು ರೋಮಕರು ಶ್ರದ್ಧಾಳುಗಳಾಗಿ ಸಾಹಸಪಟ್ಟರು. ವ್ಯಾಪಾರಸ್ಥರಿಗೆ ಬೇಕಾದ ವಿವರವನ್ನು ಸಂಗ್ರಹಿಸಿದಂತಹ ಲ್ಯಾಟಿನ್ ಭಾಷೆಯ ಗ್ರಂಥಗಳಲ್ಲಿ **ಪೆರಿಪ್ಲಸ್** ಎಂಬ ಗ್ರಂಥವೂ (Periplus of the Erythræan Sea), **ಟೊಲೆಮಿ** ಎಂಬಾತನು ಬರೆದ **ಭೂವಿವರವೂ** (Ptolemy's Geography) ಈಗಲೂ ಲಬ್ಧವಾಗಿ ಆ ಕಾಲದಲ್ಲಿದ್ದ ವ್ಯಾಪಾರಸ್ಥಳಗಳನ್ನೂ ಬಂದರುಗಳನ್ನೂ ತಿಳಿಸುತ್ತವೆ. ಪ್ರಖ್ಯಾತ ವೆನಿಸಿದ್ದ 300 ಭಾರತೀಯ ನಗರಗಳ ಹೆಸರುಗಳು ಪೆರಿಪ್ಲಸ್ ಗ್ರಂಥದಲ್ಲಿ ಇವೆ. ಅವುಗಳನ್ನು ಈಗ ಗುರುತಿಸುವುದು ಮಾತ್ರ ಕಷ್ಟವಾಗಿದೆ.

ಇಷ್ಟು ಆತುರದಿಂದ ರೋಮಕರು ಆಶಿಸಿದ ಪದಾರ್ಥಗಳು ಭಾರತ ವರ್ಷದಲ್ಲಿಯೇ ದೊರಕುತ್ತಲಿದ್ದವು. ವಾಸನಾದ್ರವ್ಯಗಳು ಪಶ್ಚಿಮತೀರ ಪ್ರದೇಶದಿಂದಲೂ ಸಿಂಹಳದಿಂದಲೂ ಸಾಗುತ್ತಿದ್ದವು. ಮುತ್ತುಗಳು ಪಾಂಡ್ಯ

ದೇಶದ ಮತ್ತು ಸಿಂಹಳದ್ವೀಪದ ಸುತ್ತಲೂ ಇದ್ದ ಸಮುದ್ರದಲ್ಲಿಯೇ ಲಬ್ಧವಾಗುತ್ತಿದ್ದವು. ದಂತದ ಪದಾರ್ಥಗಳೂ ಆಭರಣಗಳೂ ರತ್ನ ಖಚಿತವಾದ ಪಾತ್ರೆಗಳೂ ದಖನ್ನಿನ ನಗರಗಳಲ್ಲಿ ದೊರಕುತ್ತಿದ್ದವು. ನವರತ್ನಗಳಲ್ಲಿ ಪಚ್ಚೆ, ವೈಡೂರ್ಯ, ವಜ್ರಗಳು ಶಾತವಾಹನ ಸಾಮ್ರಾಜ್ಯದಲ್ಲಿಯೂ ಚೋಳ ಪಾಂಡ್ಯ ರಾಷ್ಟ್ರಗಳಲ್ಲಿಯೂ ದೊರಕುತ್ತಿದ್ದವು. ರೇಷ್ಮೆಯ ವಸ್ತ್ರಗಳೂ ನಾನಾವಿಧ ಮೃಗ ಪಕ್ಷಿಗಳೂ ಈ ನಗರಗಳಲ್ಲಿಯೇ ವ್ಯಾಪಾರವಾಗುತ್ತಿದ್ದವು. ರೋಮಕರು ಆಹಾರಕ್ಕಲ್ಲದೆ ಮೃಗಗಳನ್ನು ತಮ್ಮ ಮಲ್ಲಯುದ್ಧಗಳಿಗೂ ಆಶಿಸುತ್ತಿದ್ದರು.

ವ್ಯಾಪಾರ ಸಾಮಗ್ರಿ

ಕೆಲವು ಸಂಗತಿಗಳಿಂದ ಈ ವ್ಯಾಪಾರವು ಎಷ್ಟು ಪ್ರಬಲವಾಗಿತ್ತೆಂದು ಭಾವಿಸಿಕೊಳ್ಳಬಹುದು. ರೋಮಕ ಸಮ್ರಾಟನಾದ **ಆಗಸ್ಟಸ** (Augustus)ನು ಪಾಂಡ್ಯರಾಜನೊಂದಿಗೂ, **ಟ್ರಾಜನ್** (Trajan) ಎಂಬಾತನು ಕುಶೀಕುಲ ರಾಜನೊಡನೆಯೂ ರಾಯಭಾರಗಳನ್ನು ನಡೆಸಿದರು. ಭರತವರ್ಷದ ರೇಷ್ಮೆವಸ್ತ್ರಗಳಿಗಾಗಿಯೂ ವಾಸನಾದ್ರವ್ಯಗಳಿಗಾಗಿಯೂ ರೋಮಕ ಶ್ರೀಮಂತರು ಹೇರಳವಾದ ಧನವನ್ನೊಡ್ಡುತ್ತಿದ್ದರು. ರೇಷ್ಮೆ ವಸ್ತ್ರಗಳಿಗೆ ತೂಕದಷ್ಟು ಚಿನ್ನವು ಬೆಲೆಯಾಗಿತ್ತು. ನೀರೋ ಎಂಬ ಚಕ್ರವರ್ತಿಯ ಕಾಲದಲ್ಲಿ ರೋಮಕರ ಭೋಗಾಸಕ್ತಿಯು ಪರಮಾವಧಿಯನ್ನು ಮುಟ್ಟಿತು. **ನೀರೋ** ಚಕ್ರವರ್ತಿ (Nero) ಯು ತನ್ನ ತಾಯಿಯು ಸತ್ತ ಕಾಲದಲ್ಲಿ 300 ಪೌಂಡುಗಳಷ್ಟು ಮೆಣಸನ್ನು ಸುಡಿಸಿದನು. ಭರುಕಚ್ಛದಿಂದ ವರ್ತಕರು ತಂದಿದ್ದ ರತ್ನಖಚಿತವಾಗಿದ್ದ ಒಂದು ಸಣ್ಣ ಬಟ್ಟಲಿಗೆ £55,125ರಷ್ಟು ಧನವನ್ನು ಸುರಿದು ತೆಗೆದುಕೊಂಡನು. ರೇಷ್ಮೆ ವಸ್ತ್ರಗಳನ್ನು ಧರಿಸಿದ ರೋಮಕರು ವಸ್ತ್ರಗಳನ್ನು ಧರಿಸಿದವರಂತೆಯೇ ಕಾಣುತ್ತಿರಲಿಲ್ಲ; ಆ ವಸ್ತ್ರಗಳು ಅಷ್ಟು ತೆಳುವಾಗಿದ್ದವು. ಅವುಗಳನ್ನೇ ಉಡುವುದು ರೋಮಕರಿಗೆ ಹುಚ್ಚಾಗಿ ಪರಿಣಮಿಸಿತು. **ಕ್ಯಾರಕಲ್ಲ** (Caracalla)ನೆಂಬ ಚಕ್ರವರ್ತಿಯು ಭಾರತೀಯರ ರೇಷ್ಮೆ ವಸ್ತ್ರಗಳನ್ನುಡುವುದು ನೀತಿಯುಲ್ಲವೆಂದು ಆ ವಸ್ತ್ರಗಳನ್ನು ಯಾರೂ ಧರಿಸಕೂಡದೆಂಬ

ವ್ಯಾಪಾರ ಪ್ರಾಬಲ್ಯ

ಕಟ್ಟಾಜ್ಞೆಯನ್ನು ಮಾಡಿದನು. ರೋಮಕರಿಗೆ ಭಾರತೀಯ ವಸ್ತುಗಳಲ್ಲಿ ಪ್ರೀತಿಯು ಉನ್ಮಾದವಾಗಿ ಪರಿಣಮಿಸಿತ್ತು. ರೋಮಕ ಇತಿಹಾಸವನ್ನು ಬರೆದ **ಪ್ಲಿನಿ** (Pliny)ಯೆಂಬ ಗ್ರಂಥಕರ್ತನು ಭಾರತೀಯ ವ್ಯಾಪಾರವನ್ನು ಆಕ್ಷೇಪಿಸಿ, ಆ ವ್ಯಾಪಾರದ ದೆಸೆಯಿಂದ ರೋಮಕರು ವರ್ಷೇ ವರ್ಷೇ £ 1,000,000 ಅಷ್ಟು ಧನವನ್ನು ಅನ್ಯಾಯವಾಗಿ ಹಾಳುಮಾಡುತ್ತಿದ್ದರೆಂದೂ, ಆದರಿಂದ ರೋಮಕರಿಗೆ ದಾರಿದ್ರ್ಯವೇ ಮೂಡುವುದೆಂದೂ ಪ್ರಲಾಪಿಸಿದನು.

ಪರಿಣಾಮ

ರೋಮಕ ನಾಣ್ಯಗಳು ನಮ್ಮ ದೇಶದಲ್ಲಿ ರಾಶಿ ರಾಶಿಯಾಗಿ ಬಂದು ಸೇರಿದವು. ಉತ್ತರ ಭಾಗಗಳಲ್ಲಿ ಆಳಿದವರು ಅವುಗಳನ್ನು ಕರಗಿಸಿ ಪುನಃ ಬೇರೆ ಮುದ್ರೆಗಳನ್ನೊತ್ತಿಸಿದರು; ದಖನ್ನಿನಲ್ಲಿ ಅನೇಕ ಕಾಲದವರೆಗೂ ರೋಮಕ ನಾಣ್ಯಗಳು ವ್ಯವಹಾರದಲ್ಲಿದ್ದವು. ಉತ್ತರ ಆರ್ಕಾಟು, ಮಧುರೆ, ತಿರುನೆಲ್ವೇಲಿ ಜಿಲ್ಲೆಗಳಲ್ಲಿ ಭೂಮಿಯಲ್ಲಿ ನಿಕ್ಷಿಪ್ತವಾಗಿದ್ದ ಆ ನಾಣ್ಯಗಳು ರಾಶಿ ರಾಶಿಗಳಾಗಿ ದೊರೆತಿವೆ. ರೋಮಕ ಹಣವೊಂದೇ ಅಲ್ಲ; ರೋಮಕರೂ ದೇಶಕ್ಕೆ ಬಂದು ಭಾರತೀಯ ರಾಜರ ಊಳಿಗ ಮಾಡಿದರು. ಪಾಂಡ್ಯರಾಜನ ಸುತ್ತಲೂ ಆಯುಧಪಾಣಿಗಳಾದ ರೋಮಕ ಸ್ತ್ರೀಯರ ಗುಂಪಿರುತ್ತಿತ್ತು. ಕೋರ್ಕೈ, ಕಾವೇರೀಪಟ್ಟಣ ಮುಂತಾದ ರೇವು ಪಟ್ಟಣಗಳಲ್ಲಿ ರೋಮಕ ನಾವಿಕರೂ ರೋಮಕ ಹಡಗುಗಳೂ ಸಾಮಾನ್ಯವಾಗಿದ್ದುವೆಂದು ಪುರಾತನ ತಮಿಳು ಗ್ರಂಥಗಳಿಂದ ವ್ಯಕ್ತವಾಗುತ್ತದೆ. ರೋಮಕರು ಈ ರೀತಿ ಬರುತ್ತ ಭಾರತೀಯರೊಡನೆ ಸೇರುತ್ತ ಇದ್ದಾಗ್ಗೂ ಬೌದ್ಧಿಕ ವ್ಯವಸಾಯದಲ್ಲಿ ಪರಸ್ಪರವಾಗಿ ಪರಿಚಯ ಲಾಭಗಳು ವಿಶೇಷವಾಗಿ ನಡೆಯಲಿಲ್ಲ. ರೋಮಕರು ಭಾರತೀಯ ಸಂಸ್ಕೃತಿಯನ್ನರಿತುಕೊಳ್ಳಲೇ ಇಲ್ಲ; ಭಾರತೀಯರು ಅವರ ಸಿದ್ಧಾಂತ ಶಾಸ್ತ್ರವನ್ನು ಮಾತ್ರ ಸ್ವಲ್ಪಮಟ್ಟಿಗೆ ಮೆಚ್ಚಿದರು. ರೋಮಕ ಸಿದ್ಧಾಂತವೆಂಬ ಒಂದು ಗ್ರಂಥದಲ್ಲಿ ಅವರ ಪರಿಚಯ ಪ್ರಭಾವವು ತೋರಿಕೊಂಡಿದೆ.

ಆಗಸ್ಟಸ್ ಚಕ್ರವರ್ತಿಯ ಕಾಲದಲ್ಲಿ ಅತಿಶಯವಾಗಿ ವೃದ್ಧಿಗೊಳ್ಳಲು ಆರಂಭವಾಗಿ, ಈ ವ್ಯಾಪಾರವು ನೀರೋ ಪ್ರಭುವಿನ ಕಾಲದಲ್ಲಿ ಅತ್ಯುನ್ನತಾ

ವಸ್ಥೆಯನ್ನು ತಾಳಿ, ಆತನ ಕಾಲದಿಂದ ಕಡಿಮೆಯಾಯಿತು. ಅದಕ್ಕೆ ಕಾರಣ ರೋಮಕರ ಐಶ್ವರ್ಯವು ಕಡಿಮೆಯಾಗುತ್ತಿದ್ದು

ವ್ಯಾಪಾರದ ಅವನತಿ

ದೊಂದೇ ಅಲ್ಲ; ರೋಮಕ ಸಾಮ್ರಾಜ್ಯಕ್ಕೆ ಉತ್ತರ ದಿಕ್ಕಿನಲ್ಲಿ ಅಸಭ್ಯಜನರ ಹಾವಳಿಯಿಂದ ಉಂಟಾದ ಹೆಚ್ಚು ಹೆಚ್ಚಾದ ತೊಂದರೆಯೂ ಪ್ರಬಲಕಾರಣವಾಯಿತು. ಕ್ಯಾರಕಲ್ಲನ ಕಾಲದಿಂದ ರೋಮಕರು ಭೋಗ್ಯವಸ್ತುಗಳನ್ನು ಹಿಂದಿನಂತೆ ನಿಶ್ಚಿಂತೆಯಾಗಿ ಕೊಳ್ಳುವುದನ್ನು ಬಿಟ್ಟರು. ವ್ಯಾಪಾರವು ಸ್ವಲ್ಪ ಇಳಿಯಿತು. ಆದರೂ ಚಿನ್ನಕ್ಕಿಂತಲೂ ಸಂಬಾರಪದಾರ್ಥವೇ ರೋಮಕ ಪಟ್ಟಣದಲ್ಲಿ ಪ್ರಿಯವಾಗಿದ್ದುದನ್ನು ಕ್ರಿ. ಶ. 300ರಲ್ಲಿ ನಡೆದ ಒಂದು ಸಂಗತಿಯು ತೋರುತ್ತದೆ. ಆ ವರುಷ ರೋಮಕ ಪಟ್ಟಣವನ್ನು ಮುತ್ತಿದ ಪಶ್ಚಿಮ ಗಥರ (Visi-Goths) ನಾಯಕ **ಅಲಾರಿಕ್ಕೆಂ**ಬಾತನು (Alaric) ತನಗೆ 3000 ಪೌಂಡುಗಳಷ್ಟು ಮೆಣಸನ್ನು ಕೊಡಿಸಿದಲ್ಲಿ ಪಟ್ಟಣವನ್ನುಳಿಸುವುದಾಗಿ ರೋಮಕರಿಗೆ ತಿಳಿಸಿದನು. ಕ್ರಿ. ಶ. 300ರ ತರುವಾಯ ರೋಮಕ ಸಾಮ್ರಾಜ್ಯದ ಪಶ್ಚಿಮಾರ್ಧವು ಪದೇ ಪದೇ ಈ ಅಸಭ್ಯ ಕುಲಗಳ ದಾಂಧಲೆಗೆ ಸಿಕ್ಕಿ, ಕಡೆಗೆ 476ರಲ್ಲಿ ರೋಮಕ ಪಟ್ಟಣವೇ ಅವರ ಪಾಲಾಯಿತು. ಆ ಕಾರಣದಿಂದ ಭಾರತೀಯ ವ್ಯಾಪಾರವು ಕಾಲಕ್ರಮವಾಗಿ ಇಳಿಯುತ್ತ ಬಂದು ಕಡೆಗೆ ಸಾಮ್ರಾಜ್ಯದ ಪೂರ್ವಾರ್ಧ (Eastern Empire) ದೊಂದಿಗೆ ಮಾತ್ರ ಉಳಿಯಿತು. ಪಶ್ಚಿಮಾರ್ಧದಲ್ಲಿ ದೊಂಬಿ ದೊಂಬಿಗಳಾಗಿ ನುಗ್ಗಿ, ಗಂಧರ್ವ ಕೋಲಾಹಲವನ್ನೆಬ್ಬಿಸಿದ ಅಸಭ್ಯಜನರೊಂದಿಗೆ ವ್ಯಾಪಾರವನ್ನೇನು ನಡೆಸುವುದು? ಆದ್ದರಿಂದ ಕಾನ್‌ಸ್ಟಾಂಟಿನೋಪಲ್ ಪಟ್ಟಣವೇ ರಾಜಧಾನಿಯಾಗಿದ್ದ ಪೂರ್ವಾರ್ಧ ರೋಮಕ ಸಾಮ್ರಾಜ್ಯದೊಂದಿಗೆ ಮಾತ್ರ ವ್ಯಾಪಾರವು 476ರ ಅನಂತರ ನಡೆಯುತ್ತಿತ್ತು.

ಈಸಾಯಿ ನೆಲೆ

ಈ ವ್ಯಾಪಾರ ಸಂಬಂಧಗಳ ಪ್ರಭಾವದಿಂದ ನಡೆದ ಒಂದು ಸಂಗತಿಯು ಸ್ಮರಣಾರ್ಹವಾಗಿದೆ. ರೋಮಕರ ಆಳ್ವಿಕೆಯಲ್ಲಿ ಈಸಾಯಿ (Christians) ಗಳು ಚಿತ್ರಹಿಂಸೆಗೆ ಗುರಿಯಾಗುತ್ತಿದ್ದರು. ಕ್ರೈಸ್ತಮತದ ಆದಿಯಲ್ಲಿ ಆ ಮತದ ಅನುಯಾಯಿಗಳು ಕೆಲವರು ಸಿರಿಯಾ ದೇಶವನ್ನು ಬಿಟ್ಟೋಡಿ




ರಾಜಗೋಪಾಲ್ ಫೋಟೋ ಜಿಂಕೊ ಆಫೀಸ್, ಬೆಂಗಳೂರು ಸಿಟಿ

ನಮ್ಮ ದೇಶಕ್ಕೆ ಬಂದು ಕ್ರಿ. ಶ. ಸು. 345ರಲ್ಲಿ ಪಶ್ಚಿಮತೀರದಲ್ಲಿ ನೆಲೆಸಿದರು. ಶಾಂತಿಯನ್ನು ಹುಡುಕಿಕೊಂಡು ಬಂದ ಈ ಜನರು ಈ ದೇಶದಲ್ಲಿ ಶಾಂತಿ ಕ್ಷೇಮಗಳನ್ನು ಪಡೆದು ಇಲ್ಲಿಯೇ ನೆಲೆಸಿದರು.

## ಇತರ ರಾಜವಂಶಗಳು

ದ್ರವಿಡ ರಾಜ್ಯಗಳು

ರೋಮಕ ವ್ಯಾಪಾರವು ಪ್ರಬಲವಾಗಿ ನಡೆಯುತ್ತಿದ್ದುದು ಜಲಮಾರ್ಗಗಳಿಂದಲೇ ಆದುದರಿಂದಲೂ, ವ್ಯಾಪಾರ ವಸ್ತುಗಳಿಗೆ ತವರ್ಮನೆಯಾದುದರಿಂದಲೂ ದಖನ್ನಿನಲ್ಲಿ ಅವರ ವ್ಯಾಪಾರವು ಹೆಚ್ಚಾಗಿ ನಡೆಯಿತು. ದಖನ್ನಿನಲ್ಲಿ ಆಗ ಶಾತವಾಹನ ಸಾಮ್ರಾಜ್ಯವು ತುಂಗಭದ್ರಾ ನದಿಯ ಉತ್ತರದಲ್ಲಿ ನಡೆಯುತ್ತಿತ್ತು. ದಕ್ಷಿಣದಲ್ಲಿ ಅಶೋಕನ ಸಾಮ್ರಾಜ್ಯದ ಹೊರಗಿದ್ದರೂ ಆತನೊಡನೆ ಮೈತ್ರಿಯಿಂದಿದ್ದ ಚೋಳ, ಪಾಂಡ್ಯ, ಕೇರಲಪುತ್ರ, ಸತ್ಯಪುತ್ರರ ರಾಷ್ಟ್ರಗಳಿದ್ದವು. ಸತ್ಯಪುತ್ರ ರಾಷ್ಟ್ರದ ಪರಿಚಯವು ಅಶೋಕ ಚಕ್ರವರ್ತಿಯ ಶಾಸನಗಳಲ್ಲಲ್ಲದೆ ಇನ್ನೆಲ್ಲಿಯೂ ದೊರಕುವುದಿಲ್ಲ. **ಚೋಳ ಪಾಂಡ್ಯ ಕೇರಲ ರಾಷ್ಟ್ರ**ಗಳೇ ಪೂರ್ವಕಾಲದಿಂದಲೂ ಪ್ರಸಿದ್ಧವಾದವುಗಳು. ಅಲ್ಲಿ ತಮಿಳು ಭಾಷೆಯೇ ಇತ್ತು; ಸಂಸ್ಕೃತ ಭಾಷೆಯ ವ್ಯಾಸಂಗವಿದ್ದರೂ ಇತರೆಡೆಗಳಲ್ಲಿದ್ದಷ್ಟು ಮುಖ್ಯವಾಗಿರಲಿಲ್ಲ. ಈ ಮೂರು ರಾಜ್ಯಗಳೂ ದ್ರಾವಿಡ ರಾಜ್ಯಗಳೆಂದು ಹೆಸರಾದವು; ಪ್ರಾಚೀನ ಕಾಲದಿಂದಲೂ ಪ್ರಸಿದ್ಧವಾದವು. ಕ್ರಿಸ್ತ ಪೂರ್ವ ಕಾಲದಲ್ಲಿಯೇ ಆ ರಾಜ್ಯಗಳ ಅರಸರು ಪರಸ್ಪರ ಸ್ಪರ್ಧೆಗಳಲ್ಲಿಯೂ ಸಿಂಹಳದ್ವೀಪದವರೊಡನೆ ಸಂಧಿವಿಗ್ರಹಗಳಲ್ಲಿಯೂ ನಿರತರಾಗಿದ್ದು ತಮಿಳು ಭಾಷೆಯ ಸಾಹಿತ್ಯವನ್ನು ಪೋಷಿಸಿದರು. **ಮಧುರೆ**ಯಲ್ಲಿ **ಸಂಘ**ವೆಂದು ಹೆಸರಾದ ಸಂಸ್ಥೆಯಿದ್ದು ವಿದ್ವಾಂಸರನ್ನೂ ಗ್ರಂಥಕರ್ತರನ್ನೂ ಪ್ರೋತ್ಸಾಹಿಸುತ್ತಿತ್ತು. ಪ್ರಸಿದ್ಧ ಗ್ರಂಥಗಳಾದ ಕುರಳ್, ಮಣಿಮೇಖಲೈ ಮುಂತಾದ ಪ್ರಾಚೀನ ಗ್ರಂಥಗಳು ಕ್ರಿ. ಶ. 2ನೇ, 3ನೇ ಶತಮಾನಗಳಲ್ಲಿ ರಚಿತವಾದವುಗಳು. ಆ ಕಾಲದಲ್ಲಿ **ಕರಿಕಾಲ**ನೆಂಬ ಚೋಳ ರಾಜನೂ, **ನೆದಂಜೆಲಿಯ**ನೆಂಬ ಪಾಂಡ್ಯನೂ, **ಶೆಂಗುಟ್ಟುವನ್** ಎಂಬ ಕೇರಲರಾಜನೂ ಸಮಕಾಲಿಕರಾಗಿ ಧರ್ಮಾತ್ಮರಾಗಿ ಆಳುತ್ತಿದ್ದರೆಂದು

ಪುರಾಣವಿದೆ. ಕರಿಕಾಲನೇ ಕಾವೇರೀ ನದಿಗೆ ಅಣೆಕಟ್ಟನ್ನು ಕಟ್ಟಿಸಿದನಂತೆ. ಈ ಮೂರು ರಾಜ್ಯಗಳು ಪ್ರಸಿದ್ಧವೂ ಪ್ರಾಚೀನವೂ ಆಗಿದ್ದಾಗ್ಗೂ ಅವುಗಳ ಪೂರ್ವ ಚರಿತ್ರೆಯು ವಿವರವಾಗಿ ಲಬ್ಧವಾಗಿಲ್ಲ. ಸ್ವಲ್ಪ ಕಾಲದಲ್ಲಿಯೇ ಚೋಳರಸರು ಉತ್ತರದ ಕಡೆಯಿಂದ ತಮ್ಮನ್ನು ನಿಗ್ರಹಿಸಿದ ಪಲ್ಲವರಾಜರಿಗೆ ಸೋತು ಮರೆಯಲ್ಲಿದ್ದಂತೆಯೇ ಇರಬೇಕಾಗಿಬಂತು.

**ಶಾತವಾಹನ ಕ್ಷಯ**

ಶಾತವಾಹನ ವಂಶದವರು ಬ್ರಾಹ್ಮಣ ಕುಲದವರಾಗಿದ್ದರು. ನಾಗ ಕುಲದವರೆಂಬುವರು ಈಗ ಮೈಸೂರೆಂದು ಹೆಸರಾದ ಭಾಗದ ಉತ್ತರದಲ್ಲಿ ಪ್ರಬಲರಾಗಿದ್ದರು. ನಾಗ ಕುಲದವರೂ ಇತರ ಕುಲಗಳವರೂ ಶಾತವಾಹನ ರಾಜರ ಸಂಬಂಧವನ್ನು ಬೆಳೆಸಿಕೊಂಡು ಕ್ರಿ. ಶ. 230ರ ತರುವಾಯ ತಮ್ಮ ಸಾಮಂತಾಧಿಕಾರವನ್ನು ಹೆಚ್ಚಿಸಿಕೊಂಡು ತಮ್ಮ ತಮ್ಮ ಭಾಗಗಳಲ್ಲಿ ಸ್ವತಂತ್ರರಾದರು. ಈ ರೀತಿಯಲ್ಲಿ ಶಾತವಾಹನ ಸಾಮ್ರಾಜ್ಯವು ಕ್ಷೀಣತೆ ಯನ್ನೈದಿದಾಗ ಉತ್ತರದಲ್ಲಿಯೂ ದಕ್ಷಿಣದಲ್ಲಿಯೂ ಅನ್ಯ ರಾಜವಂಶಗಳು ಸ್ಥಾಪಿತವಾದವು.

**ಭಾರಶಿವ ವಂಶ**

ಶಾತವಾಹನ ಸಮ್ರಾಟರ ದೆಸೆಯಿಂದ ಶಕ ಕುಲದವರ ಧ್ವಂಸ ವಾಗುವ ವೇಳೆಗೆ ತುಖಾರ ಅಥವಾ ಕುಶೀಕುಲದವರ ಸಾಮ್ರಾಜ್ಯವು ವಾಯುವ್ಯದಲ್ಲಿ ಸಿದ್ಧವಾಗಿ ಕನಿಷ್ಕನ ಕಾಲದಲ್ಲಿ ಪ್ರಬಲವಾಯಿತಷ್ಟೆ! ಆಗ ಪಂಚನದ ಪ್ರದೇಶವನ್ನು ಕಳಕೊಂಡ ಕ್ಷತ್ರಿಯ ಕುಲಗಳು ಯಮುನಾ ನದಿಗೆ ದಕ್ಷಿಣ ದಲ್ಲಿ ನೆಲೆಸುವವರಾದರು. ಸನಾತನ ವೈದಿಕ ಧರ್ಮವನ್ನು ಅವಲಂಬಿಸಿದ್ದ ಈ ಕುಲಗಳಲ್ಲಿ ನಾಗಕುಲದ ಒಂದು ಶಾಖೆಯವರು ವಾರಣಾಸಿ ಕೌಶಾಂಬಿ ಗಳ ಮಧ್ಯಪ್ರದೇಶದಲ್ಲಿ ರಾಜ್ಯ ಕಟ್ಟಿಕೊಂಡು, ಕನಿಷ್ಕನ ತರುವಾಯ ದುರ್ಬಲರಾಗಿದ್ದ ಕುಶೀಕುಲದ ಅಧಿಪತಿಗಳನ್ನು ಸೋಲಿಸಿ ರಾಜ್ಯವನ್ನು ವಿಸ್ತರಿಸಿಕೊಂಡರು. ಶಾತವಾಹನ ವಂಶಜರು ದುರ್ಬಲರಾದ ತರುವಾಯ ವಿಂಧ್ಯಪರ್ವತಕ್ಕೆ ಉತ್ತರದಲ್ಲಿ **ಪದ್ಮಾವತಿ**ಯೆಂಬ ನಗರವನ್ನು ರಾಜಧಾನಿ ಯಾಗಿ ನಿರ್ಮಿಸಿಕೊಂಡು ಈ ನಾಗಕುಲದವರು ಭಾರಶಿವರೆಂಬ ಹೆಸರಿನಿಂದ ಆಳಿದರು. ಶುಂಗ ವಂಶಸ್ಥರು 2 ಅಶ್ವಮೇಧಗಳನ್ನೂ, ಶಾತವಾಹನ

ಸಮ್ರಾಟರು 2 ಅಶ್ವಮೇಧಗಳನ್ನೂ ಮಾಡಿದ್ದಲ್ಲಿ, ಭಾರಶಿವ ವಂಶದವರು ಹತ್ತು ಅಶ್ವಮೇಧ ಯಜ್ಞಗಳನ್ನು ನೆರವೇರಿಸಬಲ್ಲವರಾದರು. ವಾರಣಾಸಿಯಲ್ಲಿ **ದಶಾಶ್ವಮೇಧಘಟ್ಟ**ವೆಂಬುದು ಈ ಭಾರಶಿವ ಮಹಾರಾಜರ



21. ಕಾಶಿ—ದಶಾಶ್ವಮೇಧಘಟ್ಟ

ಸ್ಮಾರಕವೇ ಆಗಿರಬೇಕೆಂದು ಅನುಮಾನಪಡಲು ಅವಕಾಶವಿದೆ. ಈ ರೀತಿಯಲ್ಲಿ ಕ್ರಿ. ಶ. 180ರಲ್ಲಿ ಕುಶೀಕುಲದವರ ಆಧಿಪತ್ಯವು ನಷ್ಟವಾಗಿ ಭಾರಶಿವ ಸಾಮ್ರಾಜ್ಯವು ಭದ್ರವಾಯಿತು.

ಇತರ ರಾಜ್ಯಗಳು

ಶಾತವಾಹನ ಸಾಮ್ರಾಜ್ಯವು ಒಡೆದ ತರುವಾಯ ದಖನ್ನಿನಲ್ಲಿ ಪಲ್ಲವ ವಂಶದವರೇ ಪ್ರಾಬಲ್ಯವನ್ನು ಪಡೆದಾಗ್ಯೂ ಬೇರೆ ಬೇರೆ ಭಾಗಗಳಲ್ಲಿ ಶಾತವಾಹನ ಶಾಖೆಗಳವರು ರಾಜ್ಯ ಸ್ಥಾಪನೆಮಾಡಿದರು. ಕೃಷ್ಣಾನದಿಗೆ ಉತ್ತರದಲ್ಲಿ **ಇಕ್ಷ್ವಾಕು ಕುಲ**ದರಸುಗಳು ಎರಡನೆ ಶತಮಾನದಂತ್ಯದಿಂದ ಹೆಸರುವಾಸಿಯಾಗಿ ಆಳಿದರು. ಅಮರಾವತಿ ಮತ್ತು ನಾಗಾರ್ಜುನಕೊಂಡಗಳಲ್ಲಿ

ಅವರ ದಾನಗಳು ತೋರಿಕೊಂಡಿವೆ. ಇಕ್ಷ್ವಾಕು ಕುಲದರಸರು ವೈದಿಕ ಧರ್ಮಾನುಯಾಯಿಗಳಾಗಿದ್ದರು. ಆದರೂ ಅವರ ಪಟ್ಟಮಹಿಷಿಯರು ಬೌದ್ಧಮತಸ್ಥರಿಗೆ ವಿಶೇಷವಾದ ದಾನಗಳನ್ನು ಮಾಡಿದರು. ಇಕ್ಷ್ವಾಕು ಕುಲದವರಂತೆಯೇ ತುಂಗಭದ್ರಾನದಿಗೆ ಉತ್ತರದಲ್ಲಿ ಬನವಾಸಿಯಲ್ಲಿ ಸ್ಥಾಪಿತವಾದ **ಕದಂಬ ಕುಲ**ದವರು ವೈದಿಕ ಧರ್ಮವನ್ನೇ ಅವಲಂಬಿಸಿದ್ದರು. ಕದಂಬ ರಾಜ್ಯಸ್ಥಾಪಕನು ಮಯೂರಶರ್ಮನೆಂಬ ಬ್ರಾಹ್ಮಣನಾಗಿದ್ದು ರಾಜನಾದ ತರುವಾಯ ಮಯೂರವರ್ಮನೆಂಬ ಹೆಸರನ್ನು ತಾಳಿ ಕ್ಷತ್ರಿಯನಾದನು.

## ಬೃಹತ್ತರ ಭಾರತ

ಸಂಸ್ಕೃತಿ ವಿಶಿಷ್ಟ

ರೋಮಕ ಸಾಮ್ರಾಜ್ಯ ವಿಧ್ವಂಸದಿಂದ ಪಶ್ಚಿಮ ದಿಕ್ಕಿನಲ್ಲಿ ಕ್ಷೀಣತೆಯನ್ನು ಹೊಂದಿದ ಭಾರತೀಯ ವ್ಯಾಪಾರವು ಪೂರ್ವ ದಿಕ್ಕಿನಲ್ಲಿ ಹೆಚ್ಚಿಕೊಂಡು ಪ್ರಬಲವಾಯಿತು. ಕುಶೀ ಕುಲದ ಸಾಮ್ರಾಜ್ಯ ಸ್ಥಾಪನೆಯಲ್ಲಿ ಖೋಟನ್, ಕ್ಯಾಷ್ಗರ್, ಯಾರ್ಕಂದ್ ಪ್ರದೇಶಗಳು ಭಾಗಗಳಾದ ಮೇಲೆ ಅಲ್ಲಿಯ ಮಾರ್ಗಗಳು ಸುಪರಿಚಿತಗಳಾಗಿ ಚೀನಾ ಸಾಮ್ರಾಜ್ಯದೊಂದಿಗೆ ಸಂಬಂಧಗಳು ನಡೆಯಲು ಅನುಕೂಲವಾಯಿತು. ಕ್ರಿ. ಶ. 68ರಲ್ಲಿ **ಮಿಂಗ್ಟಿ** (Ming Ti) ಎಂಬ ಚೀನಾ ಚಕ್ರವರ್ತಿಯ ಕಾಲದಲ್ಲಿ ಮಗಧ ದೇಶದವನಾಗಿದ್ದ **ಕಶ್ಯಪ ಮತಂಗ**ನೆಂಬ ಬೌದ್ಧ ಪಂಡಿತನು **ಚೀನಾ ಸಾಮ್ರಾಜ್ಯ**ದಲ್ಲಿ ಕಾಣಿಸಿಕೊಂಡು ಬೌದ್ಧಮತ ಪ್ರಚಾರವನ್ನು ಮೊದಲುಮಾಡಿದನು. ಆತನ ತರುವಾಯ ಇತರರೂ ಸಾಹಸಪಟ್ಟು ಆತನಂತೆಯೇ ಚೀನಾ ಸಾಮ್ರಾಜ್ಯಕ್ಕೆ ಹೊರಟರು. ಪಾಮಿರ್ ಮೂಲಕವಾಗಿಯೂ ತಿಬ್ಬತ್ ಮೂಲಕವಾಗಿಯೂ ಚೀನಾ ದೇಶಕ್ಕೆ ಹೋಗುವ ಮಾರ್ಗಗಳು ರೂಢಿಯಾದವು. ದಕ್ಷಿಣದಲ್ಲಿ ಬ್ರಹ್ಮದೇಶದೊಡನೆಯೂ ಮಲಯಪರ್ಯಾಯ ದ್ವೀಪ (ಸುವರ್ಣಭೂಮಿ), ಮಲಯದ್ವೀಪಗಳೊಡನೆಯೂ ವ್ಯಾಪಾರವನ್ನು ಮಾಡುತ್ತಿದ್ದ ವರ್ತಕರೂ ನಾವಿಕರೂ ಇನ್ನೂ ಮುಂದಕ್ಕೆ ಹೊರಟರು. **ಜವ ದ್ವೀಪ** (Java), **ಸುಮಾತ್ರ, ಶ್ಯಾಮ** (Siam),

**ಕಾಂಬುಜ** (Cambodia) ಮತ್ತು **ಚಂಪಾ** (Annam) ಎಂಬ ದೇಶಾಂತರಗಳಲ್ಲಿ ಕ್ರಿ. ಶ. ಮೊದಲನೆಯ ಶತಮಾನದಲ್ಲಿಯೇ ನೆಲೆಗಳನ್ನು ಮಾಡಿಕೊಂಡರು. ಅವರಿಂದ ಪ್ರೇರಿತರಾಗಿ ಬ್ರಾಹ್ಮಣ ಪುರೋಹಿತರೂ ಅವರೊಡನೆ ಹೊರಟು ಆ ದೇಶಗಳಲ್ಲಿ ನಿವಾಸಿಗಳಾದರು. ಸ್ವಲ್ಪಕಾಲದಲ್ಲಿ ಕ್ಷತ್ರಿಯರೂ ಹೊರಟು ಆ ದೂರ ಕ್ಷೇತ್ರಗಳಲ್ಲಿ ರಾಜ್ಯಗಳನ್ನು ಕಟ್ಟಿದರು. ಇವರ ದೆಸೆಯಿಂದ ಆ ಪ್ರದೇಶಗಳಲ್ಲಿ ಸಂಸ್ಕೃತ ಭಾಷೆಯೂ ಆರ್ಯಧರ್ಮವೂ ಪ್ರಚಾರವಾದವು. ಅಲ್ಲಿ ನೆಲೆಸಿದವರು ಮಾತೃಭೂಮಿಯನ್ನು **ಆರ್ಯದೇಶ**ವೆಂದು ಸ್ಮರಿಸುತ್ತ ಆರ್ಯಧರ್ಮಾನುಸಾರವಾಗಿ ಬಾಳಿದರು. ಮಧ್ಯ ಏಷ್ಯ ಪ್ರಾಂತಗಳು ಮತ್ತು ತಿಬ್ಬತ್ ಚೀನಾ ದೇಶಗಳಲ್ಲಿ ಬೌದ್ಧಮತ ಪ್ರಚಾರವೂ, ಮಲಯದ್ವೀಪ ಸಮುದಾಯ ಮತ್ತು ಅದರ ನೆರೆಯಲ್ಲಿರುವ ದೇಶ ವಿದೇಶಗಳಲ್ಲಿ ಸವೀನವೆನ್ನಬಹುದಾದ ಬ್ರಾಹ್ಮಣ ಮತ ಪ್ರಚಾರವೂ ನಡೆದು ಬೃಹತ್ತರ ಭಾರತವೆಂಬುದು ಸಿದ್ಧವಾಯಿತು. ಬೃಹತ್ತರ ಭಾರತ ಅಥವಾ ವಿಸ್ತೃತ ಭಾರತವೆಂದರೆ ಭರತವರ್ಷದ ಹೊರಗಡೆ ಆರ್ಯ ಸಭ್ಯತೆಯ ಪ್ರಚಾರದಿಂದ ಸಿದ್ಧವಾದ ಉಪಭಾರತ ವರ್ಷಗಳ ಸಮುದಾಯ. **ಸೆರಿಂಡಿಯ** (Serindia) ಅಂದರೆ ಮಧ್ಯ ಏಷ್ಯದ ಪ್ರದೇಶಗಳೂ, **ಇಂಡೊನೇಸಿಯ** (Indonesia) ಅಥವಾ ಏಷ್ಯಾಖಂಡದ ನೈರುತ್ಯ ಭಾಗಗಳೂ ಬೃಹತ್ತರ ಭಾರತದ ಎರಡು ಭಾಗಗಳು. ಶಾತವಾಹನ ಪ್ರಭುಗಳ ಕಡೆಗಾಲದ ವೇಳೆಗೆ ಭಾರತೀಯರ ದೂರದ ನೆಲಸುಗಳು ಪೂರ್ವದಿಕ್ಕಿನಲ್ಲಿ ಪೀತಸಮುದ್ರದವರೆಗೂ ವೃದ್ಧಿಗೊಂಡಿದ್ದವು. ಮುಂದಿನ ಕಾಲದಲ್ಲಿ ಆ ಕ್ಷೇತ್ರಗಳಲ್ಲಿ ರಾಜ್ಯಗಳೂ ಸಾಮ್ರಾಜ್ಯಗಳೂ ತೋರಿಕೊಂಡು ಪ್ರಬಲವಾದವು. ಆದರೆ ಈ ಕ್ಷೇತ್ರಾಂತರ ಸಾಧನೆಯಲ್ಲಿ ರಾಜಕೀಯ ಬಾಂಧವ್ಯವು ಪ್ರಬಲವಾಗಿರಲಿಲ್ಲವೆಂಬುದನ್ನು ಮರೆಯಬಾರದು. ಆ ಪ್ರದೇಶಗಳಲ್ಲಿ ಆಳಿದ ಭಾರತೀಯರು ಸರ್ವಸ್ವತಂತ್ರರಾಗಿಯೇ ಇದ್ದರು; ಮಾತೃಭೂಮಿಯಲ್ಲಿ ಆಳುತ್ತಿದ್ದ ಪ್ರಭುಗಳಿಗೆ ಯಾವ ವಿಧದಲ್ಲಿಯೂ ಅಧೀನರಾಗಿರಲಿಲ್ಲ. ಆದ್ದರಿಂದ ಇದು ರಾಜ್ಯವಿಸ್ತಾರವಲ್ಲ; ಸಂಸ್ಕೃತಿಯ ವಿಸ್ತಾರ. ವ್ಯಾಪಾರದಿಂದ ಹುಟ್ಟಿದ ಸಂಸ್ಕೃತಿ ವ್ಯಾಪ್ತಿ.

## ಕಲಾ ಪರಿಣತಿ

ಐಶ್ವರ್ಯ ವೃದ್ಧಿ

ಪೂರ್ವ ಪಶ್ಚಿಮ ದಿಕ್ಕುಗಳೆರಡರಲ್ಲಿಯೂ ನಮ್ಮ ದೇಶದ ವ್ಯಾಪಾರವು ಅಭಿವೃದ್ಧಿಗೊಂಡ ಈ ಕಾಲದಲ್ಲಿ ನಮ್ಮ ದೇಶದಿಂದ ರೋಮಕ ಶ್ರೀಮಂತರಿಗಾಗಿ ಸುಗಂಧದ್ರವ್ಯಗಳು, ನವರತ್ನಗಳು, ರತ್ನಾಭರಣಗಳು, ಮೃದು ಪೀತಾಂಬರಗಳು, ತೆಳುವಾದ ಹತ್ತಿಯ ದುಕೂಲಗಳು, ನಾನಾವರ್ಣಗಳುಳ್ಳ ವಸ್ತುಗಳು, ನವಿಲಿನಂತೆ ಮನೋಹರವಾದ ಪುಚ್ಛಗಳುಳ್ಳ ಪಕ್ಷಿಗಳು, ಕಪಿಗಳು, ಕ್ರೂರಮೃಗಗಳು ಸಾಗುತ್ತಿದ್ದವು. ಹತ್ತಿಯ ಬಟ್ಟೆಗಳನ್ನೂ ಭತ್ತವನ್ನೂ ಪೂರ್ವದಿಕ್ಕಿನ ಜನರು ಕೊಳ್ಳುತ್ತಿದ್ದರು. ರೇಷ್ಮೆಯ ವಸ್ತ್ರಗಳು, ರತ್ನಗಳು ಮುಂತಾದ ವಸ್ತುಗಳು ಚೀನಾ ದೇಶದಿಂದ ಇಲ್ಲಿಗೆ ಬಂದು ಇಲ್ಲಿಂದ ಪುನಃ ಹೊರಗಡೆಗೆ ಸಾಗುತ್ತಿದ್ದವು. ಇದರ ಪರಿಣಾಮವಾಗಿ ಇತರ ದೇಶಗಳ ಧನವು ಇಲ್ಲಿ ರಾಶೀಕೃತವಾದುದಲ್ಲದೆ ನೌಕಾನಿರ್ಮಾಣ ವಿದ್ಯೆಯೂ ಜಲಮಾರ್ಗ ಸಾಧನೆಯೂ ಅಭಿವೃದ್ಧಿಯಾದವು*; ದೇಶದಲ್ಲಿ ಅನೇಕ ನಗರಗಳು ಬೆಳೆದವು; ದೇಶದ ಐಶ್ವರ್ಯವು ಹೆಚ್ಚಿತು. ನಾನಾಜಾತಿಯ ಅಸಭ್ಯ ಜನರು ತಂಡ ತಂಡಗಳಾಗಿ ದೇಶದಲ್ಲಿ ನುಗ್ಗಿ ಬಂದು ಭಾರತೀಯ ಪ್ರಭುತ್ವಕ್ಕೆ ಲೋಪವನ್ನು ತಂದಾಗ್ಯೂ ಜನಜೀವನದಲ್ಲಿ ತೊಂದರೆಯು ಕಾಣಲಿಲ್ಲ. ತತ್ತ್ವವಿಚಾರ, ಧರ್ಮಪ್ರಚಾರ, ಶಾಸ್ತ್ರಶೋಧನೆ, ಸಾಹಿತ್ಯ ಪುಷ್ಟಿಗಳಲ್ಲಿ ಅಭಿವೃದ್ಧಿಗೆ ಆತಂಕ ತೋರಲಿಲ್ಲ. ಐಶ್ವರ್ಯವೃದ್ಧಿಯೂ ನಗರ ನಿರ್ಮಾಣವೂ ಈ ಕಾಲದಲ್ಲಿ ವಿಶೇಷವಾಗಿಯೇ

---

* ಕ್ರಿ. ಪೂ. 120ರ ವರೆಗೂ ರೋಮಕರು ಭಾರತವರ್ಷಕ್ಕೆ ಹೊರಡುವ ಪ್ರಯತ್ನ ಮಾಡಲಿಲ್ಲ. ಕೆಂಪುಕಡಲಿನಲ್ಲಿ ಹಡಗೊಡೆದು ದಡವನ್ನು ಸೇರಿದ ಒಬ್ಬ ಭಾರತೀಯನು ರೋಮಕರಿಗೆ ಸಹಾಯಕನಾಗಿ ಮಾರ್ಗವನ್ನು ತೋರಿಸಿದನಂತೆ.

ರೋಮಕ ಸಾಮ್ರಾಜ್ಯ ಭಾಗಗಳಲ್ಲಿ ಭಾರತೀಯರು ಅಲ್ಲಲ್ಲಿ ಪ್ರವಾಸಿಗಳಾಗಿದ್ದರು. ಸು. ಕ್ರಿ. ಶ. 24ರಲ್ಲಿ ಅಥೆನ್ಸ್ ಪಟ್ಟಣದಲ್ಲಿ ಭಾರತೀಯ ಯೋಗಿಯೊಬ್ಬನು ಚಿತಾರೋಹಣ ಮಾಡಿ ಅಲ್ಲಿಯವರಿಗೆ ಆಶ್ಚರ್ಯವನ್ನುಂಟು ಮಾಡಿದನು. ಒಂದನೇ ಶತಮಾನದಲ್ಲಿಯೇ ಜರ್ಮನಿಯಲ್ಲಿ ಕೆಲವರು ಭಾರತೀಯರು ದಾರಿ ತಪ್ಪಿ ಸೂವ್ಯೆ ಎಂಬ ರಾಕ್ಷಸಜನರಲ್ಲಿ ಸಿಕ್ಕಿಕೊಂಡು ರೋಮಕರಿಗೆ ಕಾಣಿಕೆಯ ರೂಪವಾಗಿ ಆ ಜನರಿಂದ ದತ್ತರಾದರು.

ಸುಗೋತ್ರ (Socotra) ದ್ವೀಪವು ಭಾರತೀಯ ನೆಲೆಯಾಗಿತ್ತು.

ಇತ್ತು. ಪೂರ್ವದಂತೆ ಪ್ರತಿಗ್ರಾಮದಲ್ಲಿಯೂ ಗ್ರಾಮಸ್ಥರೇ ಗ್ರಾಮದ ಆಡಳಿತವನ್ನೂ, ಪ್ರತಿ ಪಟ್ಟಣದಲ್ಲಿಯೂ ವರ್ತಕಪ್ರಮುಖರೇ ನಗರ ವ್ಯವಸ್ಥೆಯನ್ನೂ, ಪ್ರತಿ ರಾಜಧಾನಿಯಲ್ಲಿ ಪಂಚಾಯತ ಪ್ರಮುಖರೇ ಆಡಳಿತವನ್ನೂ ವಹಿಸಿಕೊಂಡು ನಡೆಸುತ್ತಿದ್ದಾಗ ರಾಜಕೀಯವಾದ ಉಪದ್ರವಗಳು ಜನತೆಯ ಭಾಗ್ಯ ವೃದ್ಧಿಗೆ ಅಡ್ಡಿಯಾಗಲಿಲ್ಲ. **ನಿಗಮ**ಗಳೆಂದು ಹೆಸರು ಪಡೆದ ವ್ಯಾಪಾರ ಪ್ರಧಾನವಾದ ಪಟ್ಟಣಗಳಲ್ಲಿ ನಿಗಮ ಸಭೆಯಲ್ಲಿ ಕುಳಿತು ವರ್ತಕರು ನಡೆಸಿದ ತೀರ್ಪುಗಳನ್ನು ರಾಜನೂ ರಾಜಾಧಿಕಾರಿಗಳೂ ಗೌರವಿಸುತ್ತಿದ್ದರು. ಕಸಬು ಕೈಗಾರಿಕೆಗಳಲ್ಲಿಯೂ ಕುಶಲ ಕಲೆಗಳಲ್ಲಿಯೂ ಶ್ರೇಣಿಗಳೆಂಬ ಸಂಸ್ಥೆಗಳು ಆಡಳಿತವನ್ನು ನಡೆಸುತ್ತಲಿದ್ದವು. ಶ್ರೇಣಿ ಮುಖ್ಯರೂ ವರ್ತಕ ಪ್ರಮುಖರೂ ಶ್ರೇಷ್ಠಿಗಳೆನಿಸಿ ಪ್ರಬಲರಾಗಿದ್ದರು. ರಾಜಪುರುಷರು ಅವರೊಡನೆ ಸ್ನೇಹವನ್ನು ಬೆಳೆಸುತ್ತ ಅವರನ್ನು ಗೌರವಿಸುತ್ತ ಇದ್ದುದಲ್ಲದೆ ಕೆಲವೇಳೆಗಳಲ್ಲಿ ಅವರ ಸಂಬಂಧವನ್ನೂ ಅಪೇಕ್ಷಿಸುತ್ತಿದ್ದರು. ಸ್ವಂತ ನಾಣ್ಯಗಳನ್ನು ಮುದ್ರಿಸುತ್ತ ಸ್ವತಂತ್ರವಾಗಿ ಆಡಳಿತವನ್ನು ನಡೆಸುತ್ತಿದ್ದ ನಿಗಮ ಸಭೆಗಳು ಈ ಕಾಲದಲ್ಲಿ ಕಾಣಬಂದಿವೆ. ರಾಜರಹಿತವಾದ ಆಡಳಿತದ ರೀತಿಯನ್ನು ಅವಲಂಬಿಸಿದ ಈ ನಿಗಮಗಳು ಲಿಚ್ಛವಿ, ಯೌಧೇಯ ಮೊದಲಾದವರಂತೆ ಕುಲ ವ್ಯವಸ್ಥೆಗಳಲ್ಲ; ನಗರ ವ್ಯವಸ್ಥೆಗಳು.

ಕಲಾಪುಷ್ಟಿ

ಐಶ್ವರ್ಯವು ವೃದ್ಧಿಯಾದಂತೆ ಮತ ಸಂಘಗಳಲ್ಲಿಯೂ ವಿದ್ವಾಂಸ ಜನರಲ್ಲಿಯೂ ಮಾಡಿದ ದಾನ ಧರ್ಮಗಳು ಹೆಚ್ಚಿದವು. ರಾಜಪುರುಷರೂ ಶ್ರೀಮಂತರೂ ಅನೇಕ ವಿಧವಾದ ದಾನಗಳನ್ನು ಮಾಡಿದರು. ಮಂದಿರ ನಿರ್ಮಾಣವು ಈ ಕಾಲದಲ್ಲಿ ವಿಶೇಷವಾಗಿಯೇ ನಡೆಯಿತು. ವಾಯವ್ಯ ದಿಕ್ಕಿನಲ್ಲಿ ಗಾಂಧಾರ ದೇಶದಲ್ಲಿ ಯವನರೂ ಪಾರ್ಥಿಯನರೂ ಭಾರತೀಯ ಧರ್ಮವನ್ನೊಪ್ಪಿ ಅಲ್ಲಿ ವಿಹಾರಗಳನ್ನೂ ಸ್ತೂಪಗಳನ್ನೂ ಕಟ್ಟಿಸಿದರು; ಬುದ್ಧನ ಪ್ರತಿಮೆಗಳನ್ನು ಕೆತ್ತಿಸಿದರು. ಅವುಗಳಲ್ಲಿ ವಿಚಿತ್ರವಾದ ಕಲಾ ಲಕ್ಷಣಗಳು ತೋರಿರುವುದರಿಂದ **ಗಾಂಧಾರ ದೇಶದ** ಕಲೆಯು ಭಿನ್ನವೆನಿಸಿದೆ. ಕುಶೀಕುಲ ಪ್ರಭುಗಳ ಕಾಲದಲ್ಲಿ ವಿಹಾರ ನಿರ್ಮಾಣವು ಇನ್ನೂ ಹೆಚ್ಚಿ ಗಾಂಧಾರವು ಎರಡನೆಯ ವಿಹಾರ ದೇಶವಾಯಿತು. ಇವುಗಳು ಕಾಲ

ಗತಿಗೂ ಅಸಭ್ಯ ಜಾತಿಯವರ ಕೋಟಲೆಗೂ ಸಿಕ್ಕಿ ಬಹು ಭಾಗ ನಷ್ಟವಾಗಿ ಸ್ವಲ್ಪ ಭಾಗ ಮಾತ್ರ ಶಿಥಿಲವಾಗಿಯೂ ಭೂಗತವಾಗಿಯೂ ಉಳಿದಿದೆ. ದಕ್ಷಿಣದಲ್ಲಿ ವ್ಯಾಪಾರಸ್ಥರ ದಾನ ಧರ್ಮಗಳು ವಿಶೇಷವಾಗಿ ನಡೆದವು. **ಕಾರ್ಲೆ**ಯಲ್ಲಿ ಈ ಕಾಲದಲ್ಲಿ ನಿರ್ಮಿತವಾಗಿ ಪ್ರಸಿದ್ಧವಾದ ಚೈತ್ಯಾಲಯವು ಬನವಾಸಿ



22. ಕಾರ್ಲೆಯ ಮಂದಿರದ ಒಳಭಾಗ

ನಾಡಿನ ವರ್ತಕನೊಬ್ಬನ ಭಕ್ತಿ ಔದಾರ್ಯಗಳಿಂದ ಸಿದ್ಧವಾಯಿತು. **ಕಣ್ಹೇರಿ**ಯ ಗುಹೆಗಳು ಬೌದ್ಧ ಭಿಕ್ಷುಗಳಿಗಾಗಿ ಈ ಕಾಲದಲ್ಲಿ ವರ್ತಕ ಜನರಿಂದಲೇ ನಿರ್ಮಿತವಾದವು. **ಅಜಂತ**ದಲ್ಲಿ ಈ ಕಾಲದಲ್ಲಿಯೇ ಗುಹೆಗಳ ನಿರ್ಮಾಣವು ಮೊದಲಾದುದು. ವಾಸ್ತು ಶಿಲ್ಪ ಚಿತ್ರಗಳೆಂಬ ಮೂರು ಕಲೆಗಳೂ ಆ ಗುಹೆಗಳಲ್ಲಿ ಗೋಚರವಾಗುವುವು. **ಅಮರಾವತಿ** ಮತ್ತು **ನಾಗಾರ್ಜುನಕೊಂಡ**ಗಳಲ್ಲಿ ಸ್ತೂಪಗಳೂ ಈ ಕಾಲದಲ್ಲಿ ನಿರ್ಮಿತವಾದವುಗಳೇ.

ಒಟ್ಟಿನಲ್ಲಿ ಈ ಕಾಲವು ಆರ್ಯ ಧರ್ಮವು ಬೌದ್ಧ ನೀತಿಯನ್ನೊಳಗೊಂಡು, ಜನಸಾಮಾನ್ಯರಲ್ಲಿ ಭದ್ರವಾಗಿ, ಹೊರಗಿನ ಪ್ರದೇಶಗಳಲ್ಲಿ ಪ್ರಚಾರವನ್ನು ಪಡೆದ ಕಾಲ. ಆದ್ದರಿಂದ ಇದನ್ನು **ಬೃಹತ್ತರ ಭಾರತದ ಆದಿ**ಯೆಂದು ಕರೆಯಬಹುದು. ಅಟ್ಲಾಂಟಿಕ್ ಸಾಗರದಿಂದ ಪೆಸಿಫಿಕ್ ಸಾಗರದವರೆಗಿನ ಪೂರ್ವಾರ್ಧಗೋಲದ ಪಶ್ಚಿಮಾಗ್ರದಲ್ಲಿದ್ದ ರೋಮಕ ಸಾಮ್ರಾಜ್ಯಕ್ಕೆ ಬೇಕಾಗಿದ್ದ ಭೋಗ್ಯವಸ್ತುಗಳನ್ನೂ, ಪೂರ್ವಾಗ್ರದಲ್ಲಿದ್ದ ಚೀನಾ ಸಾಮ್ರಾಜ್ಯಕ್ಕೆ ಬೇಕಾಗಿದ್ದ ಧರ್ಮದಾನವನ್ನೂ ಭಾರತೀಯರೇ ಒದಗಿಸುತ್ತಲಿದ್ದರು; ಭಾರತೀಯ ಸಂಸ್ಕೃತಿಯು ಮೇರೆಯು ಭೂಮಧ್ಯ ಸಾಗರದಿಂದ ಪೀತಸಮುದ್ರದವರೆಗೂ, ಮಧ್ಯ ಏಷ್ಯಾ ಪ್ರಾಂತದಿಂದ ಪೂರ್ವ ದಕ್ಷಿಣ ಸಾಗರಗಳವರೆಗೂ ವ್ಯಾಪಿಸಿತ್ತು. ಭಾರತೀಯ ನಾವಿಕರೂ ಪ್ರಯಾಣಿಕರೂ ಬಾಲ್ಟಿಕ್ ಸಮುದ್ರತೀರದಿಂದ ಪೀತ ಸಮುದ್ರತೀರದ ವರೆಗಿರುವ ವಿದೇಶಗಳಲ್ಲಿ ಕಾಣಿಸಿಕೊಂಡರು. ಪೃಥ್ವಿಯಲ್ಲಿ ರೋಮಕ ಸಾಮ್ರಾಜ್ಯಕ್ಕಿಂತಲೂ ಚೀನಾ ಸಾಮ್ರಾಜ್ಯಕ್ಕಿಂತಲೂ ಭಾರತವರ್ಷವು ವಿಸ್ತಾರದಲ್ಲಿಯೂ ಐಶ್ವರ್ಯದಲ್ಲಿಯೂ ಕಲಾ ಪರಿಣತಿಯಲ್ಲಿಯೂ ತಾತ್ವಿಕ ತೇಜಸ್ಸಿನಲ್ಲಿಯೂ ಕೇಂದ್ರವಾಗಿದ್ದಿತು.

———

# ಕ್ರಿ. ಪೂ. 230ರಿಂದ ಕ್ರಿ. ಶ. 230ರವರೆಗೆ

| ರೋಮಕ<br>ಇಟಲಿ | ಗ್ರೀಸ್<br>ಅಲಿಕಸುಂದರ<br>ಇತ್ಯಾದಿ | ಸಿರಿಯ | ಪಾರ್ಥಿಯ ಬ್ಯಾಖ್ಟ್ರಿಯ | ಮೌರ್ಯ ಚಕ್ರಾಧಿಪತ್ಯ—ಅಶೋಕ ಚಕ್ರವರ್ತಿ<br>ವಾಯುವ್ಯ | ಮಧ್ಯದೇಶ | ಪಶ್ಚಿಮ | ದಖನ್ | ಚೀನಾ<br>ಷೈಹುಂಗ್ಟಿ |
|---|---|---|---|---|---|---|---|---|
| | | 261. ಆಂಟಿಯಖಸ್ ಥಿಯಾಸ್ | 250—ಆರ್ಸಿಕ<br>ಡಯೊಡೋಟಸ್ } | | | | | |
| | | | 230<br>ಡಿಮೆಟ್ರಿಯಸ್ | | ದಶರಥ | ಸಾಂಪ್ರತಿ | 230 ಸಿಮುಕ<br>ಶಾತಕರ್ಣಿ | (ಮಹಾಕುಡ್ಯ) |
| | | 223— ಆಂಟಿಯಖಸ್ III | | | | | | |
| | | | | | 188 ಬೃಹದ್ರಥ | | | |
| | 168—ಪಿಡ್ನಕದನ<br>ರೋಮಕಜಯ | | 150 ಮಿನಾಂಡರ್ > | ........ | < ಪುಷ್ಯಮಿತ್ರ ಶುಂಗ | | | |
| | | 64—ರೋಮಕ<br>ಜಯ | ಶಕರ ಆಕ್ರಮಣ | ಸತ್ರಪರು | ಅಗ್ನಿಮಿತ್ರ<br>ವಸುಮಿತ್ರ | | | |
| | | | | ಗುಡುಫರ | ದೇವಭೂಮಿ | | | |
| 31: ಮಿಶ್ರದ ಜಯ<br>27: ಆಗಸ್ಟಸ್<br>26: ಭಾರತೀಯ ರಾಯಭಾರ | | | | ಕುಶೀಕುಲ | ಕಾಣ್ವ<br>76 ವಾಸುದೇವ | | | ವುಟಿ<br>(ಕುಶೀ ರಾಯಭಾರ) |
| ಕ್ರಿಸ್ತ ಶಕ<br>14: ಆಗಸ್ಟಸ್ ಮರಣ | | | | ಕುಜೂಲ | 31 ಸುಶರ್ಮ | <<<< | ಹಾಲಶ್ರೀ | 68 ಮಿಂಗ್ ಟಿ |
| 41: ಕ್ಲಾಡಿಯಸ್ | | | | ವಿಮ | | | | ಕಶ್ಯಪ<br>ಮತಂಗ |
| 54 } 68 } ನೀರೊ | | | | ಕನಿಷ್ಕ | | ಶಕರು-ಭೂಮ<br>ನಹಪಾನ > | ಗೌತಮಿಪುತ್ರ<br>< ವಾಸಿಷ್ಠೀಪುತ್ರ | |
| 98 ಟ್ರಾಜನ್ | | | ಕುಶೀಕುಲದವರ ಆಕ್ರಮಣ | ಹುವಿಷ್ಕ | | ಚಷ್ಟನ<br>ಜಯದಾಮ | ಶಿವಸ್ಕಂದ<br>ಗೌತಮಿಪುತ್ರ<br>ಯಜ್ಞ ಶ್ರೀ | |
| | | | | | | ರುದ್ರದಾಮ > | < ವಾಸಿಷ್ಠೀ<br>ಪುತ್ರ | |
| | | | | 180 ವಾಸುದೇವ | > < 180 ಭಾರಶಿವ ವಂಶ | | | |
| 211 ಕ್ಯಾರಕಲ್ಲ | | | | | | | | |
| 300 ಅಲಾರಿಕ್<br>364—ಪೂರ್ವ ಪಶ್ಚಿಮ ವಿಭಾಗ<br>476—ರೋಮಕ ವಿನಾಶ | | | 226 ಅರ್ತಕ್ಷತ್ರ<br>ಪಾಪಕಾನ್<br>ಸಾಸಾನೀ | | 320 ಚಂದ್ರಗುಪ್ತ | | ವಾಕಾಟಕ ಪಲ್ಲವ | |

# ತೃತೀಯ ಕಲ್ಲೋಲ

## ತೇಜೋವಿರಾಜಿತ ಭಾರತವರ್ಷ

1. ತೇಜಃಪುಂಜ ಕಾಲ .. .. ಕ್ರಿ. ಶ. 250—700

2. ರಾಜಪುತ್ರ ಕುಲ ರಾಷ್ಟ್ರಗಳು .. ,, 700–1200

# ತೇಜಃಪುಂಜ ಕಾಲ

## (250–700)

(ಕಾಲಿದಾಸ ಕಾಲದಿಂದ ಶಂಕರ ಕಾಲದವರೆಗೆ)

1. ಭಾರಶಿವ ವಂಶ.
2. ವಿಂಧ್ಯಕ–ಗುಪ್ತ ವಂಶಗಳು.
3. ಹೂಣಜನರು.
4. ಫಾಹಿಯನ್ನನ ಪ್ರವಾಸ.
5. ಮೌಖರಿ, ವರ್ಧನ ವಂಶಗಳು.
6. ಪಲ್ಲವ ಚಾಲುಕ್ಯ ದ್ವಂದ್ವ.
7. ಬೃಹತ್ತರ ಭಾರತ.
8. ಕಾಲಸ್ಥಿತಿ.
9. ಕಲಾ ಪರಿಣತಿ.
10. ಧರ್ಮವ್ಯಾಪ್ತಿ ಶುದ್ಧಿಗಳು.

### ಪ್ರಸಿದ್ಧ ಪುರುಷರು

| ಪ್ರಭುಗಳು. | ಕವಿಗಳು. | ಶಾಸ್ತ್ರಜ್ಞರು. | ಧರ್ಮಜ್ಞರು. |
|---|---|---|---|
| ಪ್ರವರಸೇನ. | ಭಾಸ. | ಆರ್ಯಭಟ. | ಕುಮಾರಜೀವ. |
| ಸಮುದ್ರಗುಪ್ತ. | ಕಾಲಿದಾಸ. | ವರಾಹಮಿಹಿರ. | ಕೌಂಡಿನ್ಯ. |
| ಚಂದ್ರಗುಪ್ತ. | ಭಾರವಿ. | ಬ್ರಹ್ಮಗುಪ್ತ. | ಗುಣವರ್ಮ. |
| ಕುಮಾರಗುಪ್ತ. | ದಂಡಿ. | | ಬೋಧಿಧರ್ಮ. |
| ಹರ್ಷವರ್ಧನ. | ಬಾಣ. | | ಕುಮಾರಿಲಭಟ್ಟ. |
| ಪುಲಿಕೇಶಿ. | | | ಶಂಕರಾಚಾರ್ಯ. |
| ನರಸಿಂಹವರ್ಮ. | | | |

## 3-4ನೆ ಶತಮಾನ

**ಶಾತವಾಹನಕ್ಷಯ**

ಕ್ರಿ. ಪೂ. 4ನೆ ಶತಮಾನದಿಂದಲೂ ದಕ್ಷಿಣಾಪಥದಲ್ಲಿ ಪ್ರಬಲರಾಗಿದ್ದು, ಮೌರ್ಯ ಸಾಮ್ರಾಜ್ಯವು ಛಿದ್ರವಾದ ಸಮಯದಲ್ಲಿ ಸ್ವತಂತ್ರರಾಗಿ ಸಾಮ್ರಾಜ್ಯ ಪ್ರಯತ್ನ ಮಾಡಿದ ಶಾತವಾಹನರು ಬ್ರಾಹ್ಮಣ ಕುಲದವರಾಗಿದ್ದರು. ಕ್ರಿ. ಪೂ. 1ನೆ ಶತಮಾನದಲ್ಲಿಯೇ ಅವರು ವಿಂಧ್ಯಪರ್ವತ ಶ್ರೇಣಿಯನ್ನು ದಾಟಿ ವಿದಿಶಾ ವಿದರ್ಭ ಪ್ರಾಂತಗಳನ್ನು ಜಯಿಸಿ, ಕ್ರಿ. ಪೂ.

31ರಲ್ಲಿ ಮಗಧದೇಶವನ್ನು ಆಕ್ರಮಿಸಿದರು. ಆ ವರುಷ ಕಾಣ್ವಾಯನ ವಂಶದ ಸುಶರ್ಮ ರಾಜನು ಶಾತವಾಹನ ರಾಜನಿಗೆ ಸೋತು ಸೆರೆಯಾಳಾದನು. ಶಾತವಾಹನಪ್ರಭುವು ಸುಶರ್ಮನನ್ನು ದಬ್ಬಿಬಿಟ್ಟು ಮಗಧ ದೇಶದಲ್ಲಿ ತನ್ನ ಆಳ್ವಿಕೆಯನ್ನೇ ನೆಲೆಗೊಳಿಸಿದನು. ಆದರೆ ಮಗಧ ದೇಶದಲ್ಲಿ 50 ವರುಷಗಳಿಗಿಂತ ಹೆಚ್ಚು ಕಾಲ ಶಾತವಾಹನರ ಪ್ರಭುತ್ವವು ನಡೆಯಲಿಲ್ಲ. ಇದಕ್ಕೆ ಶಕ ಕುಲದವರ ಮತ್ತು ಅವರ ಹಿಂದೆಯೇ ಬಂದ ತುಖಾರ ಕುಲದವರ ಹಾವಳಿಯೇ ಕಾರಣವಾಯಿತು. ಶಾತವಾಹನರ ಉತ್ತರ ಕ್ಷೇತ್ರಗಳು ತುಖಾರ ಕುಲಸ್ಥರ ತೊಂದರೆಗೆ ಸಿಕ್ಕಿದವು.

**ತುಖಾರ ನೀತಿ**

ಹಿಮಾಲಯ ವಿಂಧ್ಯಪರ್ವತಗಳ ಮಧ್ಯೆ ವಾಯವ್ಯದಲ್ಲಿ ತುಖಾರ ಕುಲದವರೂ, ಪಶ್ಚಿಮದಲ್ಲಿ ಶಕಕುಲದ ಕ್ಷತ್ರಪರೂ ರಾಜ್ಯ ಕಟ್ಟುತ್ತಿದ್ದಾಗ ದೇಶೀಯ ರಾಜವಂಶಗಳು ಸುಮ್ಮನಿರಲಿಲ್ಲ. ವಿದಿಶಾ ಪ್ರಾಂತದಲ್ಲಿ ಪೂರ್ವದಿಂದಲೂ ನೆಲೆಯಾಗಿದ್ದು, ಶಾತವಾಹನರ ಪ್ರಾಬಲ್ಯ ಕಾಲದಲ್ಲಿ ಸಾಮಂತರಂತಿದ್ದ **ನಾಗಕುಲ**ದವರು ತುಖಾರರಲ್ಲಿ ವಿರೋಧವನ್ನು ಸಾಧಿಸಿದರು. ಕೆಲಕಾಲ ಮಾತ್ರ ನಾಗಕುಲದವರು ತುಖಾರರಿಗೆ ಅಧೀನರಾಗಿದ್ದರು. ವಿಂಧ್ಯಪರ್ವತಕ್ಕೆ ಉತ್ತರದಲ್ಲಿ **ಪದ್ಮಾವತಿ**ಯೆಂಬ ನಗರದಿಂದ ಆಳುತ್ತಲಿದ್ದ ನಾಗಕುಲದವರಿಗೂ ಇತರ ರಾಜವಂಶಜರಿಗೂ ತುಖಾರರ ಆಳ್ವಿಕೆಯು ಅಸಹ್ಯವಾಗಿತ್ತು. ಕನಿಷ್ಕ ವಾಸುದೇವರು ಭಾರತೀಯ ಧರ್ಮವನ್ನವಲಂಬಿಸುವ ಪ್ರಯತ್ನವನ್ನು ಮಾಡಿದಾಗ್ಯೂ ಒಟ್ಟಿನಲ್ಲಿ ತುಖಾರ ಕುಲದವರು ಅನಾಗರಿಕರಾಗಿಯೇ ಇದ್ದು ಧರ್ಮ ಬಾಹಿರರಾಗಿದ್ದರು. ಮತಗುರುಗಳಾದ ಬ್ರಾಹ್ಮಣರನ್ನು ಹಿಂಸೆಪಡಿಸಿ ತಮ್ಮ ರಾಜ್ಯದಲ್ಲಿ ಬ್ರಾಹ್ಮಣರಿಗೆ ಆಶ್ರಯವಿಲ್ಲದಂತೆ ಮಾಡಿದರು. ಉತ್ತಮ ಜಾತಿಯ ಬ್ರಾಹ್ಮಣರನ್ನೂ ಕ್ಷತ್ರಿಯರನ್ನೂ ಅಡಗಿಸಿ ಕೀಳುಜಾತಿಯವರನ್ನೇ ಉದ್ಯೋಗಸ್ಥರನ್ನಾಗಿ ನಿಯಮಿಸಿಕೊಳ್ಳುತ್ತಲೂ, ಪರದೇಶೀಯರನ್ನು ಕರೆಸಿಕೊಂಡು ಅವರಿಗೆ ಅಧಿಕಾರವನ್ನು ಕೊಡುತ್ತಲೂ ಇದ್ದರು. ಬೌದ್ಧ ಮತವನ್ನು ಅವಲಂಬಿಸುತ್ತೇವೆಂದು ವರ್ಣಾಶ್ರಮ ಧರ್ಮವನ್ನು ಮೂಲೋತ್ಪಾಟನಮಾಡಲು ಹವಣಿಸಿದರು. ಅನೇಕ ದೇವಾಲಯ

ಗಳನ್ನು ಧ್ವಂಸಮಾಡಿ ಅವುಗಳ ಐಶ್ವರ್ಯದಿಂದ ಸೈನ್ಯಗಳನ್ನು ಸೇರಿಸಿ ಯುದ್ಧಗಳನ್ನು ಬೆಳೆಸುತ್ತಲಿದ್ದರು; ತಮ್ಮ ಮಾತೃಸ್ಥಾನವಾದ ಬಾಹ್ಲೀಕ ದೇಶಕ್ಕೆ ಧನವನ್ನು ಸಾಗಿಸುತ್ತಲೂ ಇದ್ದರು. ಪ್ರಜಾಹತ್ಯಗಳನ್ನು ಆಗಾಗ್ಗೆ ಮಾಡಿಸುತ್ತಿದ್ದುದಲ್ಲದೆ ಗಂಗಾ ಯಮುನಾ ಪುಣ್ಯನದಿಗಳ ಕ್ಷೇತ್ರಗಳಲ್ಲಿ ರಾಜ್ಯವನ್ನು ಬೆಳೆಸಿದ್ದ ಈ ಜನರು

**ಉದ್ಧಾರ ಲಕ್ಷ್ಯ**

ಗೋವಧೆಯನ್ನು ನಡೆಸುತ್ತಿದ್ದರು. ಈ ದುಷ್ಕೃತ್ಯಗಳನ್ನು ದೇಶೀಯ ರಾಜವಂಶಜರು ಸಹಿಸದಾದರು; ತುಖಾರ ಕುಲದ ರಾಜ್ಯವನ್ನು ಧ್ವಂಸಮಾಡಬೇಕೆಂದು ಹವಣಿಸಿದರು. ಅಂತಹ ದೇಶೀಯ ರಾಜವಂಶಗಳಲ್ಲಿ ಅಗ್ರಗಣ್ಯರಾದವರು ನಾಗ ಕುಲದವರು.

## ಭಾರಶಿವ ವಂಶ (ಕ್ರಿ. ಶ. 170–284)

ತುಖಾರ ಕುಲದವರಲ್ಲಿ 90ರಿಂದ 120ರವರೆಗೆ ಗಂಗಾ ಯಮುನಾ ಪ್ರಾಂತಗಳಲ್ಲಿ ಅಧಿಕಾರಮಾಡಿದ **ವನಸ್ಪರ**ನೆಂಬ

ಸ್ಥಾಪನೆ

ಕ್ಷೇತ್ರಪಾಲಕನ ವರ್ತನೆಯೂ ಹೀಯವಾಗಿತ್ತು. ಅದೇ ಕಾಲದಲ್ಲಿಯೇ **ಪದ್ಮಾವತಿ, ಕಾಂತಿಪುರಿ**ಗಳಲ್ಲಿ ಅರಸುತನಮಾಡುತಲಿದ್ದ ನಾಗಕುಲದವರು ತುಖಾರರ ನಾಶವನ್ನು ಬಯಸಿ, ಅದಕ್ಕಾಗಿ ಪ್ರಲಯಕರ್ತನಾದ ಶಿವನ ಭಕ್ತರಾದರು; **ಭಾರಶಿವ**ರೆಂಬ ಹೆಸರನ್ನು ಧರಿಸಿದರು. **ನವನಾಗರು** ಅಥವಾ ಭಾರಶಿವರೆಂದೆನಿಸಿದ ಈ ಕುಲದವರು ಕ್ರಿ. ಶ. 1ನೆ ಶತಮಾನದಲ್ಲಿ ವಿಂಧ್ಯಪರ್ವತದ ಸಾನು ಪ್ರದೇಶಗಳಿಂದ ಮುಂದಾಗಿ, ಪೂರ್ವದ ಶೌರಸೇನ ಪಾಂಚಾಲ ರಾಷ್ಟ್ರಗಳನ್ನು ತುಖಾರರಿಂದ ಬಿಡಿಸುವ ಉದ್ಯಮದಲ್ಲಿ ನಿರತರಾದರು. ಕನಿಷ್ಕನ ವಂಶಜರಲ್ಲಿ ಕಡೆಯವನೆನಿಸಿದ ವಾಸುದೇವನೆಂಬಾತನು ತುಖಾರ ಸಮ್ರಾಟನೆನಿಸಿದ್ದ ಕಾಲದಲ್ಲಿ, ಅಂದರೆ ಸು. 150ರಲ್ಲಿ, ಈ ಭಾರಶಿವ ವಂಶದವರು ಪ್ರಬಲರಾದರು. **ವೀರಸೇನ**ನೆಂಬ ನಾಗಕುಲಸ್ಥನು ಮಥುರಾ ನಗರದಿಂದ ತುಖಾರರನ್ನೋಡಿಸಿ ಆ ಶೌರಸೇನ ರಾಷ್ಟ್ರವನ್ನು ಗೆದ್ದನು. ಅಲ್ಲಿಂದ ಮುಂದೆ ವೀರಸೇನನು ಪಂಚನದ ಪ್ರಾಂತದಲ್ಲಿಯೂ ಅಯೋಧ್ಯಾ ಮಗಧ

ಪ್ರಾಂತಗಳಲ್ಲಿಯೂ ಇದ್ದ ತುಖಾರರನ್ನು ನಾಶಗೊಳಿಸಿ ತನ್ನ ಅಧಿಕಾರಿಗಳನ್ನು ನಿಯಮಿಸಿದನು. ಸು. 175ರಿಂದ 210ರವರೆಗೆ ಆಳಿದ ವೀರಸೇನನು ಗಂಗಾ ಯಮುನಾ ತೀರಪ್ರದೇಶಗಳನ್ನು ಉದ್ಧಾರ ಮಾಡಿದನು. ಸಮಯವನ್ನು ನಿರೀಕ್ಷಿಸುತ್ತಲಿದ್ದ **ಮಾದ್ರಕ, ಯೌಧೇಯ, ಮಾಳವ** ಮುಂತಾದ ಗಣಸ್ಥರು ಇದೇ ವೇಳೆಯಲ್ಲಿ ಪಂಜನದ ಪ್ರಾಂತದಲ್ಲಿ ತುಖಾರರ ಆಧಿಪತ್ಯವನ್ನು ಕೊನೆಗಾಣಿಸಿ ಬಿಟ್ಟರು.

ವಿಸ್ತಾರ

ಪ್ರಚಂಡರೆನಿಸಿ ಇರಾನೀ ಸಾಮ್ರಾಜ್ಯದ ಎಲ್ಲೆಯಿಂದ ಪಾಟಲಿಪುರದ ವರೆಗೂ ಸಾಮ್ರಾಜ್ಯವನ್ನು ಕಟ್ಟಿ ಅಜೇಯರಾಗಿ ಯುದ್ಧಮಾಡುತ್ತಿದ್ದ ತುಖಾರ ಕುಲದವರನ್ನಿದಿರಿಸುವುದು ಸಾಮಾನ್ಯವಾಗಿರಲಿಲ್ಲ; ಅತಿಸಾಹಸದ ಕೆಲಸವಾಗಿತ್ತು. ವೀರಸೇನನು ಶಿವಭಕ್ತಿಯಿಂದ ಕೂಡಿದವನಾಗಿ ಪರಮ ಸಾಹಸದ ಕೆಲಸವನ್ನೇ ಕೈಕೊಂಡನು. ಮುಘಲ ಸಾಮ್ರಾಜ್ಯದೆದುರು ಬೀಳಲು ಶಿವಾಜಿಗೆಷ್ಟು ಧೈರ್ಯ ಸಾಹಸಗಳು ಬೇಕಾಗಿದ್ದವೋ ವೀರಸೇನನಿಗೂ ಅಷ್ಟೇ ಧೈರ್ಯ ಸಾಹಸಗಳು ಅವಶ್ಯವಾಗಿದ್ದವು. ಗಂಗಾ ಯಮುನಾ ಪ್ರಾಂತಗಳನ್ನು ಉದ್ಧಾರಮಾಡಿದ ಕೂಡಲೆ ವೀರಸೇನನೂ ಆತನ ವಂಶಜರೂ ಒಂದು ದೇಶೀಯ ಸಾಮ್ರಾಜ್ಯವನ್ನು ಕಟ್ಟಿದರು. ಮಾಳವ, ಯೌಧೇಯ, ಮಾದ್ರಕ ಮುಂತಾದ ಗಣಮುಖ್ಯರು ಅವರ ಒಡೆತನವನ್ನೊಪ್ಪಿಕೊಂಡರು. ಸಾಮ್ರಾಜ್ಯ ವೃದ್ಧಿಯಾಗುತ್ತ **ಮಥುರಾ** ನಗರ (ಶೌರಸೇನ), **ಪದ್ಮಾವತೀ** ನಗರ(ವಿದಿಶಾ), **ಅಹಿಚ್ಛತ್ರ** ನಗರ(ಪಾಂಚಾಲ), **ಇಂದ್ರಪುರ** (ಪಂಜನದ), **ಚಂಪಾವತೀ** (ಮಗಧ) ಮತ್ತು **ಸ್ರುಘ್ನ** (ಪಂಚನದ) ಗಳಲ್ಲಿ ರಾಜಪ್ರತಿನಿಧಿಗಳು ಪ್ರತಿಷ್ಠಿತರಾದರು. ಭಾರಶಿವ ಸಾಮ್ರಾಜ್ಯದಲ್ಲಿ ರಾಜಪ್ರತಿನಿಧಿಗಳ ಆಳ್ವಿಕೆಗೊಳಪಟ್ಟ ಪ್ರಾಂತಗಳೂ, ಸಾಮಂತಪದವಿಯನ್ನೊಪ್ಪಿಕೊಂಡು ಸ್ವಂತ ಕ್ಷೇತ್ರದ ಆಡಳಿತದಲ್ಲಿ ಸ್ವತಂತ್ರರಾಗಿಯೇ ಇದ್ದ ಗಣರಾಜ್ಯಗಳೂ ಸೇರಿದ್ದವು. ಈ ರೀತಿ ಸಿಂಧು ನದಿಯಿಂದ ಮಗಧ ದೇಶದವರೆಗೆ ಆರ್ಯಾವರ್ತವು ತುಖಾರ ವಂಶದವರ ದುರ್ನೀತಿಯುತವಾದ ಆಡಳಿತದಿಂದ ಪಾರಾಗಿ, ಭಾರಶಿವ ಸಾಮ್ರಾಜ್ಯವಾಗಿ

ಪರಿಣಮಿಸಿತು. ಈಗಿನ ಬಿಹಾರ, ಸಂಯುಕ್ತ ಪ್ರಾಂತ, ಬುಂದೇಲ ಖಂಡ, ಮಧ್ಯಪ್ರಾಂತ, ಮಾಲವ, ರಾಜಪುತ್ರಸ್ಥಾನ ಮತ್ತು ಮೂಡಲ ಪಂಜಾಬು ಪ್ರಾಂತಗಳು ಆ ಸಾಮ್ರಾಜ್ಯದಲ್ಲಿ ಸೇರಿದ್ದವು. **ಪುರಿಕಾ** (ನಾಗಪುರ?) ಎಂಬುದೇ ಪ್ರಾಯಶಃ ಇವರ ರಾಜಧಾನಿಯಾಗಿದ್ದಿತು.

ಆರ್ಯ ಧರ್ಮವನ್ನುದ್ಧಾರಮಾಡಿದ ಭಾರಶಿವ ವಂಶದವರ ಸಾಮ್ರಾಜ್ಯವು ಸುಮಾರು 150ರಲ್ಲಿ ಪ್ರಾರಂಭವಾಗಿ ಕ್ರಮವಾಗಿ ವೃದ್ಧಿ ಪಡೆದು, ಕ್ರಿ. ಶ. 315ರ ವರೆಗೆ ಪ್ರಬಲವಾಗಿ ನಡೆಯಿತು. ವೀರಸೇನನ ತರುವಾಯ ಹಯನಾಗ, ತ್ರಯನಾಗ, ಬರ್ಹಿಣನಾಗ ಮುಂತಾದವರು ಆಳಿದರು. ಕ್ರಿ. ಶ. 290ರಿಂದ 315ರವರೆಗೆ ಆಳಿದ **ಭವನಾಗ ಮಹಾರಾಜನೇ** ಈ ಸಮ್ರಾಟರಲ್ಲಿ ಕಡೆಯವನು. ಆತನು ತನ್ನ ಕುವರಿಯೊಡನೆ ತನ್ನ ಪದವಿಯನ್ನೂ **ವಿಂಧ್ಯಕ ವಂಶದ**ವರೆಂದು ಹೆಸರಾದ ವಾಕಾಟಕ ವಂಶದವರಿಗೆ ಕೊಟ್ಟುಬಿಟ್ಟನು.

ಭಾರಶಿವ ವಂಶದವರ ಸಾಮ್ರಾಜ್ಯವು ಸ್ಮರಣಾರ್ಹವಾದುದು.

ಭಾರಶಿವರ ಮೇಲ್ಮೆ

ಸನಾತನ ಮತವನ್ನೂ ವರ್ಣಾಶ್ರಮ ಧರ್ಮವನ್ನೂ ಉದ್ಧಾರಮಾಡಿದ ಆ ವಂಶಜರು ಗೋಬ್ರಾಹ್ಮಣರ ಪೋಷಣೆಯನ್ನು ಕೈಕೊಂಡು **ಗಂಗಾಯಮುನಾ** ನದಿಗಳ ಚಿಹ್ನೆಗಳನ್ನೇ ತಮ್ಮ ನಾಣ್ಯಗಳಲ್ಲಿ ಮುದ್ರಿಸಿದರು. ದೇವಾಲಯ ಗಳನ್ನು ನಿರ್ಮಿಸಿ **ನಾಗರ ವಿಧಾನ**ವೆಂಬ ಮಂದಿರ ನಿರ್ಮಾಣ ರೀತಿಯನ್ನು ಮೊದಲಿಟ್ಟರು. ಇವರ ಕಾಲದಲ್ಲಿ ಪ್ರಾಕೃತಭಾಷೆಯೇ ಆಡಳಿತದ ಭಾಷೆ ಯಾಗಿದ್ದಾಗ್ಯೂ, **ನಾಗರಲಿಪಿ**ಯೆಂಬುದು ಇವರ ಕಾಲದಲ್ಲಿ ಇವರ ಪ್ರೋತ್ಸಾಹದಿಂದಲೇ ರೂಪಗೊಂಡಿತು. ಆರ್ಯ ಧರ್ಮವನ್ನು ಉದ್ಧಾರ ಮಾಡಿದ ಈ ಭಾರಶಿವ ವಂಶದವರು ಹತ್ತು ಅಶ್ವಮೇಧಗಳನ್ನು ನಡೆಸಿದರು. ಶುಂಗ ವಂಶಜರೂ ಶಾತವಾಹನ ಸಮ್ರಾಟರೂ ಎರಡೆರಡು ಅಶ್ವಮೇಧ ಗಳನ್ನು ಮಾತ್ರ ನಡೆಸಿದ್ದರು. ಭಾರಶಿವರಾದರೋ **“ದಶಾಶ್ವಮೇಧಾವಭೃತಸ್ನಾನಾನಾಂ”** ಎಂದು ಪ್ರಸಿದ್ಧರಾಗಿದ್ದಾರೆ. ಕಾಶಿಯಲ್ಲಿ ಇಂದಿಗೂ ಪ್ರಸಿದ್ಧವಾಗಿರುವ **ದಶಾಶ್ವಮೇಧ ಘಟ್ಟ**ವೆಂಬುದು ಪ್ರಾಯಶಃ ಆ ವಂಶದವರ ಸ್ಮಾರಕವಾಗಿದೆ.

## ವಿಂಧ್ಯಕ ವಂಶ (284–348)

ವೀಗೆ

ಭಾರಶಿವ ಚಕ್ರವರ್ತಿಗಳ ದಳಪತಿಯಾಗಿ ಆಂಧ್ರ ಮತ್ತು ನಿಷಧ ಕ್ಷೇತ್ರಗಳಲ್ಲಿ ಜಯಶಾಲಿಯಾಗಿ ಯುದ್ಧಗಳನ್ನು ನಡೆಸಿದ್ದ ಬ್ರಾಹ್ಮಣನೊಬ್ಬನು **ವಿಂಧ್ಯಶಕ್ತಿ**ಯೆಂಬ ಹೆಸರಿನಿಂದ ಪ್ರಸಿದ್ಧನಾದನು. ಆತನು ಕಾಂಚನಕಾ (ನಾಚನಾ) ಎಂಬೆಡೆಯಲ್ಲಿ ಕ್ಷೇತ್ರಪಾಲಕನಾಗಿದ್ದುಕೊಂಡು ತನ್ನ ಅಧಿಕಾರವನ್ನೂ ಆಧಿಪತ್ಯವನ್ನೂ ಇನ್ನೂ ಹೆಚ್ಚಿಸಿದನು. ಆ ಬ್ರಾಹ್ಮಣನು ವಾಕಾಟವೆಂಬ ಒಂದಾನೊಂದು ಗ್ರಾಮದವನು; ಆ ಗ್ರಾಮವು ದ್ರೋಣಾಚಾರ್ಯರದೆಂದು ಇಂದಿಗೂ ಪ್ರತೀತಿಯಿದೆ. ಆತನು ಭಾರದ್ವಾಜ ಗೋತ್ರ ಶಾಖೆಯಾದ ವಿಷ್ಣುವೃದ್ಧ ಗೋತ್ರದವನಾಗಿದ್ದನು. ಪ್ರತಾಪಶಾಲಿಯಾಗಿ ವಿಂಧ್ಯ ಪರ್ವತದ ಉತ್ತರದಲ್ಲಿಯೂ ದಕ್ಷಿಣದಲ್ಲಿಯೂ ಜಯಗಳನ್ನು ಪಡೆದಿದ್ದ ಈತನ ತರುವಾಯ ಈತನ ಮಗನಾದ **ಪ್ರವರಸೇನ**ನೆಂಬಾತನು ಪಟ್ಟವನ್ನು ಪಡೆದನು. ಈ ವಂಶಕ್ಕೇ **ವಿಂಧ್ಯಕ** ಅಥವಾ **ವಾಕಾಟಕ** ವಂಶವೆಂದು ಹೆಸರಾಗಿದೆ.

ವಿಂಧ್ಯಶಕ್ತಿಯು ಕ್ರಿ. ಶ. 248ರಿಂದ 284ರವರೆಗೆ ಪ್ರಬಲನಾಗಿದ್ದು ಕಾಲವಾಗಲು ಪ್ರವರಸೇನನು ಸಮ್ರಾಟಪದವಿಯನ್ನು ಪಡೆಯುವ ಸಂಕಲ್ಪ ಮಾಡಿದನು. ಕ್ರಿ. ಶ. 284ರಿಂದ 344ರವರೆಗೆ ಚಕ್ರವರ್ತಿಯಾಗಿ ಆಳಿ ಅತಿವಿಖ್ಯಾತನಾದನು. ಭಾರಶಿವ ವಂಶದವರು ದುರ್ಬಲರಾಗಿದ್ದರು. ಆ ವಂಶದ ಭವನಾಗ ಮಹಾರಾಜನು ಪ್ರಾಯಶಃ ಪುತ್ರ ಸಂತತಿಯಿಲ್ಲದವನಾಗಿದ್ದು ತನ್ನ ಮಗಳನ್ನು ಪ್ರವರಸೇನನ ಮಗ ಗೌತಮೀಪುತ್ರನಿಗೆ ಮದುವೆಮಾಡಿಕೊಟ್ಟು ತನ್ನ ರಾಜ್ಯವು ದೌಹಿತ್ರನಿಗೆ ಸಲ್ಲುವಂತೆ ನಿಶ್ಚಯ ಮಾಡಿಬಿಟ್ಟನು. ಭಾರಶಿವ ವಂಶಜರ ಪದವಿಯು ಈ ರೀತಿಯಲ್ಲಿ ವಾಕಾಟಕ ವಂಶಜರಿಗೆ ಪ್ರಾಪ್ತವಾಯಿತು. ವಿಂಧ್ಯ ಪರ್ವತಕ್ಕೆ ದಕ್ಷಿಣದಲ್ಲಿ ಸಾಮ್ರಾಜ್ಯವು ಬೆಳೆಯುವುದಕ್ಕೂ ಅನುಕೂಲವಾಗಿತ್ತು.

ದಕ್ಷಿಣಾಪಥದಲ್ಲಿ ಏಕೇಶ್ವರರಂತೆಯೇ ಆಳುತ್ತಿದ್ದ ಶಾತವಾಹನರ ಕಾಲದಲ್ಲಿ ಅವರ ಸಾಮ್ರಾಜ್ಯವು ಇತರ ಸಾಮ್ರಾಜ್ಯಗಳಂತೆ ಪ್ರಾಂತ ವಿಭಾ

ಗಕ್ಕೊಳಗಾಗಿ ರಾಜಬಂಧುಗಳ ಮತ್ತು ಇತರ ಅಧಿಪತಿಗಳ ವಶದಲ್ಲಿತ್ತು.

ಕ್ಷತ್ರಪರ ಕ್ಷಯ, 236

ಗೋದಾವರೀ ಕೃಷ್ಣಾ ನದಿಗಳ ಪ್ರದೇಶಗಳು ಶಾತವಾಹನರ ಸ್ವಂತ ಆಳ್ವಿಕೆಗೊಳಗಾಗಿದ್ದವು; ಇತರ ಭಾಗಗಳಲ್ಲಿ ಸಾಮಂತರಾದವರು ಆಳ್ವಿಕೆಯನ್ನು ನಡೆಸುತ್ತಿದ್ದರು. ಶಕ ಕುಲಸ್ಥರ ಹಾವಳಿಯಲ್ಲಿ ಪಶ್ಚಿಮ ಪ್ರಾಂತಗಳನ್ನು ಕಳೆದುಕೊಂಡು ಶಾತವಾಹನ ರಾಜನು ಮಹಾಕ್ಷತ್ರಪ ರುದ್ರದಾಮನಿಂದ ಅವಮಾನವನ್ನು ಪಡೆದ ತರುವಾಯ ಸಾಮಂತ ರಾಜರು ಸ್ವತಂತ್ರರಾಗಲು ಹವಣಿಸಿದರು. ಶಕ ಕುಲಸ್ಥರಿಗಿಡುರಾಗಿ **ಆಭೀರರೆಂಬ** ಕುಲಸ್ಥರಿದ್ದರು. ರುದ್ರದಾಮನ ತರುವಾಯ ಪಟ್ಟವನ್ನೇರಿದ ಕ್ಷತ್ರಪರನ್ನು ಹೇಗಾದರೂ ಓಡಿಸಬೇಕೆಂದು ಈ ಆಭೀರರು ಪ್ರಯತ್ನಮಾಡುತ್ತಲಿದ್ದು, ಕಡೆಗೆ ಸು. 236ರಲ್ಲಿ ಸುರಾಷ್ಟ್ರ ಮತ್ತು ಮಾಳವ ಪ್ರಾಂತಗಳಲ್ಲಿ ಕ್ಷತ್ರಪರ ಆಧಿಪತ್ಯವನ್ನು ಕೊನೆಗಾಣಿಸಿದರು. ಆಭೀರ ಪ್ರಮುಖನಾಗಿದ್ದ **ಈಶ್ವರ ಸೇನನು** ಶಕ ಕುಲಜರನ್ನು ಸೋಲಿಸಿ ಪ್ರಸಿದ್ಧನಾದನು. ಈ ರೀತಿಯಲ್ಲಿ ಕ್ಷಹರಾತಕುಲದ ರಾಜ್ಯವು ನಷ್ಟವಾಯಿತು. ಆ ಕುಲಸ್ಥರು ಹಿನ್ನಟ್ಟಿ ಕೌಂತೀ (ಕಚ್ಛ) ಮತ್ತು ಸಿಂಧು ಪ್ರಾಂತಗಳಲ್ಲಿ ಮಾತ್ರ ಆಳುತ್ತ ತೃಪ್ತರಾಗಬೇಕಾಯಿತು. ಶಕರ ಅಧಿಪತ್ಯವು ಕ್ರಿ. ಶ. 236–39ರಲ್ಲಿ ಈ ರೀತಿಯಲ್ಲಿ ಸಂಕುಚಿತವಾಯಿತು. ಉತ್ತರದಲ್ಲಿ ಭಾರಶಿವ ವಂಶಜರು ಧರ್ಮೋದ್ಧಾರವನ್ನು ಕೈಕೊಂಡಂತೆಯೇ ಆಭೀರರೂ ಪ್ರವರ್ತಿಸಿ ಶಕವಂಶಜರ ಬಲವನ್ನು ಮುರಿದರು.

220–265

ಶಾತವಾಹನ ಸಾಮ್ರಾಜ್ಯದ ವಾಯುವ್ಯದಲ್ಲಿ ಆಭೀರರು ಪ್ರಬಲರಾದ ಕಾಲದಲ್ಲಿಯೇ ಇತರ ಪ್ರಾಂತಗಳಲ್ಲಿ ಸಾಮಂತರಾಗಿದ್ದವರು ಸ್ವತಂತ್ರರೂ ಪ್ರಬಲರೂ ಆದರು. ಗೋದಾವರೀ ಕೃಷ್ಣಾ ನದಿಗಳ ಕೆಳಭಾಗದಲ್ಲಿ (ಆಂಧ್ರದೇಶ) ಶಾತವಾಹನರ ಸಂಬಂಧವನ್ನೇ ಪಡೆದಿದ್ದ **ಇಕ್ಷ್ವಾಕು ಕುಲದವರೆಂಬುವರು** ಸ್ವತಂತ್ರರಾಗಿ ಮೂರನೆ ಶತಮಾನದಲ್ಲಿ ಪ್ರಸಿದ್ಧಿ ಪಡೆದರು. ಕ್ರಿ. ಶ. 220ರಿಂದ 265ರವರೆಗೆ ಆಳಿದ ಇಕ್ಷ್ವಾಕು ಕುಲಜರು ಹೆಸರುವಾಸಿಯಾದವರು. ಇವರ ರಾಣಿಯರು ಬೌದ್ಧಮತದಲ್ಲಿ ಆಸಕ್ತಿ

ತೋರಿ ನಾಗಾರ್ಜುನಕೊಂಡ, ಅಮರಾವತಿ ಎಂಬೆಡೆಗಳಲ್ಲಿ ವಿಖ್ಯಾತವಾದ ಬೌದ್ಧ ಮಂದಿರಗಳನ್ನು ನಿರ್ಮಿಸಿದರು. ಕೃಷ್ಣಾ ನದಿಗೆ ದಕ್ಷಿಣದಲ್ಲಿ ಕುಂತಲ ಅಥವಾ ಬನವಾಸಿ ಪ್ರಾಂತದಲ್ಲಿ ಶಾತವಾಹನರ ಶಾಖೆಯೇ ಆದ **ಚುಟುಕುಲ**ದವರು ಆಧಿಪತ್ಯಮಾಡುತಲಿದ್ದು ಕ್ರಮೇಣ ಸ್ವತಂತ್ರರಾದರು.

ಬ್ರಾಹ್ಮಣರ ನೆಲೆ

ಈ ರೀತಿಯಲ್ಲಿ ವಾಕಾಟಕ ವಂಶದವರು ಪ್ರಬಲರಾಗುತ್ತಿದ್ದ ವೇಳೆಯಲ್ಲಿ ದಖನ್ನಿನಲ್ಲಿ ಆಭೀರರು, ಇಕ್ಷ್ವಾಕು ವಂಶದವರು ಮತ್ತು ಚುಟುವಂಶದವರು ವಾಯುವ್ಯ, ಈಶಾನ್ಯ ಮತ್ತು ಮಧ್ಯ ಭಾಗಗಳಲ್ಲಿ ಸ್ವತಂತ್ರ ರಾಗಿದ್ದರು; ದಕ್ಷಿಣದಲ್ಲಿ ಅಥವಾ ದ್ರವಿಡ ದೇಶದಲ್ಲಿ ಚೋಳ ಪಾಂಡ್ಯ ಕೇರಲ ದೇಶಗಳು ಇದ್ದವು. ಆ ವೇಳೆಗಾಗಲೇ ಬ್ರಾಹ್ಮಣರು ಪ್ರಬಲರಾಗಿದ್ದರು. ಶಾತವಾಹನ ವಂಶಜರೇ ಬ್ರಾಹ್ಮಣರಾಗಿದ್ದು ಗೌತಮ, ವಸಿಷ್ಠ, ಮಾಠರ ಮತ್ತು ಹಾರೀತ ಗೋತ್ರಜರ ಸಂಬಂಧಗಳನ್ನು ಕಟ್ಟಿದ್ದರು. ಶಾತವಾಹನ ಸಾಮ್ರಾಜ್ಯವು ಕ್ಷೀಣವಾದ ತರುವಾಯ ಬ್ರಾಹ್ಮಣ ಕುಲಗಳವರೇ ರಾಜಸಂತತಿಗಳನ್ನು ಸ್ಥಾಪಿಸಿ ಪ್ರಾಬಲ್ಯವನ್ನು ಪಡೆದರು. ಕೌಂಡಿನ್ಯ, ಭಾರದ್ವಾಜ, ಮಾನವ್ಯ, ಕಾಣ್ವಾಯನ ಗೋತ್ರಜರೇ ಪ್ರಭುಗಳಾದರು; ಅವರ ಪ್ರೋತ್ಸಾಹದಿಂದ ಆರ್ಯ ಧರ್ಮವು ವಿಸ್ತಾರವೂ ದೃಢವೂ ಆಯಿತು.

ವಾಕಾಟಕ ಪ್ರವರಸೇನ I 284—344

ಶಾತವಾಹನ ಸಾಮ್ರಾಜ್ಯವು ಈ ರೀತಿಯಲ್ಲಿ ಒಡೆದ ಕಾಲದಲ್ಲಿಯೇ ವಿಂಧ್ಯಕ ವಂಶದಲ್ಲಿ ಹುಟ್ಟಿ ಪ್ರಖ್ಯಾತನಾದ **ಪ್ರವರಸೇನ**ನು 284ರಲ್ಲಿ ಪಟ್ಟಾಭಿಷಿಕ್ತನಾದನು. ಭಾರಶಿವ ವಂಶದವರ ಪ್ರಾಬಲ್ಯವನ್ನು ಆತನು ಸುಲಭವಾಗಿ ಪಡೆದುಕೊಂಡು ಉತ್ತರದಲ್ಲಿ ಸಾಮ್ರಾಜ್ಯವನ್ನು ರಚಿಸಲು ಸನ್ನಾಹಮಾಡಿದನು. ತುಖಾರ ಅಥವಾ ಕುಶೀಕುಲದ ರಾಜನು (ದೈವಪುತ್ರ) ಸು. 301-309ರಲ್ಲಿ ತನ್ನ ಪೂರ್ವಜರ ಆಧಿಪತ್ಯವನ್ನು ಸಂಪಾದಿಸಿಕೊಳ್ಳಲು ಕೃತಪ್ರಯತ್ನನಾದನು; ಪ್ರವರ ಸೇನನು ಆತನನ್ನು ಸೋಲಿಸಿ ಮೇರೆಯಿಂದ ಹೊರಗೆ ಅಟ್ಟಿದನು. ತುಖಾರ ರಾಜನು ಈ ಪರಾಭವದಿಂದ ಇರಾನೀ ದೊರೆಯಾಗಿದ್ದ **ಇಮ್ಮಡಿ**

**ಹಾರ್ಮುಜ್ದ್** (Hormuzd II) ಎಂಬಾತನ ಸ್ನೇಹವನ್ನು ಕಟ್ಟುವ ಉದ್ದೇಶದಿಂದ ಆತನಿಗೆ ತನ್ನ ಮಗಳನ್ನು ಕೊಟ್ಟು ಮದುವೆಮಾಡಿದನು. ಭಾರತವರ್ಷವನ್ನು ಆಕ್ರಮಿಸುವ ಶಕ್ತಿಯಾಗಲಿ ಉದ್ದೇಶವಾಗಲಿ ಇರಾನೀ ಪ್ರಭುಗಳಲ್ಲಿರಲಿಲ್ಲ; ಆ ಕಾರಣದಿಂದ ತುಖಾರ ರಾಜನ ಪ್ರಯತ್ನವು ವ್ಯರ್ಥವೇ ಆಯಿತು. ತುಖಾರರನ್ನು ಈ ಬಗೆಯಲ್ಲಿ ಭಂಗಪಡಿಸಿದ ಬಳಿಕ ಪ್ರವರಸೇನನು ಶತದ್ರು ತೀರದಲ್ಲಿದ್ದ ರಾಜಕುಲಗಳನ್ನು ಸಾಮಂತರನ್ನಾಗಿ ಗೌರವಿಸಿ, ತುಖಾರರಿಗೆ ಪುನಃ ಆಸ್ಪದ ದೊರೆಯದಂತೆ ನೆರವೇರಿಸಿ ಮೂಡಲದಿಕ್ಕಿಗೆ ತಿರುಗಿದನು. ಮಗಧದೇಶವನ್ನು ಶಾತವಾಹನರು 50 ವರ್ಷಕಾಲ ಆಳಿದ್ದರು; ಆ ತರುವಾಯ ಲಿಚ್ಛವಿ ಕುಲಸ್ಥರು ಪಾಟಲಿಪುತ್ರವನ್ನು ವಶಪಡಿಸಿಕೊಂಡು ಪ್ರಬಲರಾಗಿದ್ದರು. ಪ್ರವರಸೇನನು ಲಿಚ್ಛವಿ ಕುಲದವರನ್ನು ಯುದ್ಧಕ್ಕೆ ಕರೆದು ಸೋಲಿಸಿಬಿಟ್ಟನು; ಆ ಕುಲಸ್ಥರು ಪಾಟಲಿಪುತ್ರವನ್ನು ಬಿಟ್ಟುಕೊಟ್ಟು ನೇಪಾಲ ರಾಷ್ಟ್ರದ ಕಡೆಗೆ ಹಿಮ್ಮೆಟ್ಟಿದರು.

ವಿಂಧ್ಯಕ ಕುಲದವರ ಸಾಮ್ರಾಜ್ಯವು ಈ ಬಗೆಯಲ್ಲಿ ಸಿದ್ಧವಾಯಿತು. ಭಾರಶಿವ ಕುಲಸ್ಥರು ನೆರವೇರಿಸಲು ಮೊದಲು ಮಾಡಿದ್ದ ಕೆಲಸವು ವಿಂಧ್ಯಕ ಕುಲದ ಪ್ರವರಸೇನನಿಂದ ಪೂರಯಿಸಿತು. ಭಾರಶಿವ ವಂಶದ ಭವನಾಗ ಮಹಾರಾಜನು ಈ ಪ್ರಾಬಲ್ಯವನ್ನೊಪ್ಪಿಕೊಂಡು ಪ್ರವರಸೇನನ ಪುತ್ರನಿಗೆ ಮಗಳನ್ನು ಕೊಟ್ಟು ಸಾಮ್ರಾಜ್ಯ ಪದವಿಯನ್ನೊಪ್ಪಿಸಿದನು. ಸಮ್ರಾಟ ಪ್ರವರಸೇನನು ನಾಲ್ಕು ಅಶ್ವಮೇಧಗಳನ್ನು ನಡೆಸಿ ಆರ್ಯಧರ್ಮೋದ್ಧಾರಕನೆನಿಸಿದನು. ಸಂಸ್ಕೃತ ಸಾಹಿತ್ಯದಲ್ಲಿಯೂ ಪ್ರವರಸೇನನು ಕೀರ್ತಿವಂತನೆನಿಸಿದ್ದಾನೆ.

ಪ್ರವರಸೇನನ ತರುವಾಯ ಆತನ ಮಗ ಗೌತಮೀಪುತ್ರನು ಪಟ್ಟವನ್ನೇರಲಿಲ್ಲ. 284ರಿಂದ 344ರವರೆಗೆ ಆಳಿದ ಪ್ರವರಸೇನನ ಕಾಲದಲ್ಲಿಯೇ ಆತನು ಮೃತಪಟ್ಟಂತೆ ಕಾಣುತ್ತದೆ. ಪ್ರವರಸೇನನ ಮರಣಾನಂತರ ಇನ್ನೂ ಚಿಕ್ಕವಯಸ್ಸಿನಲ್ಲಿಯೇ ಇದ್ದ **ರುದ್ರಸೇನನು** ಪಟ್ಟವನ್ನೇರಬೇಕಾಯಿತು. ರುದ್ರಸೇನನ ಕಾಲಕ್ಕೆ ಮೂಡಲ ಪ್ರಾಂತಗಳಲ್ಲಿ ಮತ್ತೊಂದು ರಾಜವಂಶವು ಪ್ರಬಲವಾಗುತ್ತಿತ್ತು.

ರುದ್ರಸೇನ I
344–348

**ಪಾಟಲಿಪುತ್ರ**

ಮಗಧದೇಶದಲ್ಲಿ ಲಿಚ್ಛವಿಯುವರು ಆಧಿಪತ್ಯವನ್ನು ಕೆಲಕಾಲ ಮಾತ್ರ ನಡೆಸಿದರು. ಪ್ರವರಸೇನನಿಂದ ಅವರು ಪರಾಜಿತರಾದ ಮೇಲೆ ಪಾಟಲಿಪುತ್ರದಲ್ಲಿ **ಕೋತಕುಲ**ವೆಂಬ ಒಂದು ರಾಜಕುಲವು ಪ್ರಾಯಶಃ ಪ್ರವರಸೇನನ ಸಮ್ಮತಿಯಿಂದಲೇ ಸ್ಥಾಪಿತವಾಗಿತ್ತು; ಈ ವಂಶದ **ಸುಂದರವರ್ಮ**ನೆಂಬಾತನು ಪಾಟಲಿಪುರದಲ್ಲಿ ಆಳುತ್ತ ಬಹು ಕಾಲ ಸಂತತಿ ಹೀನನಾಗಿದ್ದುದರಿಂದಲೋ ಏನೋ, ನೆರೆಯಲ್ಲಿ ಪ್ರಯಾಗದ ಬಳಿ ನೆಲೆಸಿದ್ದ ಗುಪ್ತವಂಶದ **ಚಂದ್ರಗುಪ್ತ**ನೆಂಬಾತನನ್ನು ದತ್ತುಮಗನನ್ನಾಗಿ ಸ್ವೀಕರಿಸಿದನು. ಈ ಗುಪ್ತವಂಶದವರು ಮದ್ರದೇಶದಲ್ಲಿದ್ದು ಸು. 250ರಲ್ಲಿ ಪ್ರಯಾಗದ ಬಳಿಗೆ ಬಂದು ಸಾಮಂತ ರಾಜರಾಗಿದ್ದರು; ಚಂದ್ರಗುಪ್ತನು ಆ ವಂಶಕ್ಕೆ ಮೂರನೆಯವನು. ಸುಂದರವರ್ಮ ರಾಜನಿಗೆ ಪುತ್ರ ಸಂತಾನವಾಯಿತು; ಆ ಮಗುವನ್ನು **ಕಲ್ಯಾಣವರ್ಮ**ನೆಂದು ಕರೆದರು. ಈ ಸಂಗತಿಯಿಂದ ಚಂದ್ರಗುಪ್ತನಿಗೆ ಆಶಾಭಂಗವಾಯಿತು; ಹೇಗಾದರೂ ಪಾಟಲಿಪುತ್ರವನ್ನು ಆಕ್ರಮಿಸಬೇಕೆಂದಿದ್ದ ಆತನು ಲಿಚ್ಛವಿಯುವರ ಸ್ನೇಹವನ್ನು ಸಂಪಾದಿಸಿ, ಅವರ ಕುಲದಲ್ಲಿ ಹುಟ್ಟಿದ **ಕುಮಾರದೇವಿ**ಯೆಂಬ ವಧುವನ್ನು ಮದುವೆಯಾಗಿ, ಅವರ ಸಹಾಯದಿಂದ ಪಾಟಲಿಪುರವನ್ನು ಮುತ್ತಿದನು. ನಡೆದ ಯುದ್ಧದಲ್ಲಿ ವೃದ್ಧರಾಜ ಸುಂದರವರ್ಮನು ಹತನಾದನು. ರಾಜಭಕ್ತರಾಗಿದ್ದ ಮಂತ್ರಿಗಳು ಕೆಲವರು ಕಲ್ಯಾಣವರ್ಮನನ್ನು ಕಾಪಾಡಿ, ಅಲ್ಲಿಂದ ತಪ್ಪಿಸಿಕೊಂಡು ವಿಂಧ್ಯಕರಾಜನ ಆಶ್ರಯವನ್ನು ಸೇರಿ ಕಿಷ್ಕಿಂಧೆಯಲ್ಲಿ ಪಂಪಾಸರಸ್ಸಿನ ಬಳಿ ಆ ರಾಜಕುಮಾರನನ್ನು ಇಟ್ಟುಕೊಂಡು ಪೋಷಿಸಿದರು. ಚಂದ್ರಗುಪ್ತನು ಈ ರೀತಿಯಲ್ಲಿ ಪಾಟಲಿಪುತ್ರವನ್ನು ಅಪಹಾರಮಾಡಿ ಆ ನಗರದಲ್ಲಿ ಪ್ರಸಿದ್ಧವಾದ **'ಸುಗಾಂಗ'**ವೆಂಬ ಅರಮನೆಯಲ್ಲಿ ನೆಲೆಸಿದನು.

**ಚಂದ್ರಗುಪ್ತ I**
**320—340**

ಕೃತಕ ಪುತ್ರನಾದರೂ ತಾನೇ ರಾಜ್ಯಕ್ಕೆ ಅಧಿಕಾರಿಯೆಂಬ ನೆಪವನ್ನು ತೋರಿ, ದುರಾಸೆಯಿಂದ ವೃದ್ಧ ರಾಜನ ಮೇಲೆ ಕೈಮಾಡಿದ ಚಂದ್ರಗುಪ್ತನು ಚಂಡಸೇನನೆಂದು ಕೌಮುದೀ ಮಹೋತ್ಸವವೆಂಬ ಒಂದಾನೊಂದು ಸಂಸ್ಕೃತ ನಾಟಕದಲ್ಲಿ ಹೆಸರಾಗಿದ್ದಾನೆ.

## ಗುಪ್ತವಂಶಜರು

ಸಮುದ್ರಗುಪ್ತ
340—375

ಗುಪ್ತವಂಶಜರು * ಆ ನಾಟಕದಲ್ಲಿ ಕಾರಸ್ಕರರೆಂದು ತಿರಸ್ಕೃತ ರಾಗಿದ್ದಾರೆ. ಪ್ರಾಯಶಃ ಅವರು ಕ್ಷತ್ರಿಯರಲ್ಲಿ ಕೀಳು ಜಾತಿಗೆ ಸೇರಿದ್ದರು. ಹೀನ ಜಾತಿಯವ ರಾಗಿದ್ದುದೂ, ಚಂದ್ರಗುಪ್ತನು ಲಿಚ್ಛವಿಯರ ಸಂಬಂಧಿಯಾಗಿದ್ದುದೂ, ಅನ್ಯಾಯದಿಂದ ರಾಜ್ಯ ವನ್ನು ಅಪಹರಿಸಿದುದೂ ಮಗಧ ದೇಶದವರಿಗೆ ರುಚಿಸಲಿಲ್ಲ. ಚಂದ್ರಗುಪ್ತನು ಅವರಲ್ಲಿ ಪ್ರಮುಖರನ್ನು ಹಿಂಸೆಗೆ ಗುರಿಮಾಡಿದನು. ಇದರಿಂದ ಆ ಪ್ರಜಾ ಮುಖ್ಯರು ಕ್ರುದ್ಧರಾಗಿ ಸಮಯಕಾಯಿದ್ದು ಚಂದ್ರಗುಪ್ತನು ಯಾವುದೋ ಯುದ್ಧಕ್ಕೆ ಹೋಗಿದ್ದಾಗ ದಂಗೆಯೆದ್ದು ಸಭೆಯಲ್ಲಿ ಆತನ ಅಯೋಗ್ಯತೆ ಯನ್ನು ನಿಷ್ಕರ್ಷಿಸಿ, ದೂರದಲ್ಲಿದ್ದ ಕಲ್ಯಾಣವರ್ಮನನ್ನು ಬರಮಾಡಿ ಕೊಂಡು ಆತನಿಗೇ ಪಟ್ಟಕಟ್ಟಿದರು. ಚಂದ್ರಗುಪ್ತನು ಭಗ್ನಮನೋ ರಥನಾಗಿ ಲಿಚ್ಛವಿಯವರ ಪ್ರಾಂತವನ್ನು ಸೇರಿಕೊಂಡು ತನ್ನ ಮಗ **ಸಮುದ್ರಗುಪ್ತ**ನಿಗೆ "ನೀನೇ ಮಾನ್ಯ! ಇನ್ನುಮುಂದೆ ರಾಜ್ಯವನ್ನು ರೂಢಿಸಿಕೊಳ್ಳುವ ಕರ್ತವ್ಯ ನಿನ್ನದು" ಎಂದು ಉಸುರಿ ಖೇದದಿಂದಲೇ ಮೃತಿಪಟ್ಟನು. ಸಮುದ್ರಗುಪ್ತನು ಲಿಚ್ಛವೀ ದೌಹಿತ್ರನಾಗಿದ್ದುದರಿಂದ **ಸಾಕೇತ ಪ್ರಾಂತ**ವು ಲಭಿಸಿತು. ಆ ಪ್ರಾಂತದಲ್ಲಿಯೇ **ಅಯೋಧ್ಯಾ ನಗರ**ವಿದ್ದಿತು. ಅಲ್ಲಿಯ ವಿದ್ವಾಂಸರ ಸಂಗವನ್ನು ಪಡೆದ ಸಮುದ್ರ ಗುಪ್ತನು ವಿಷ್ಣುಭಕ್ತನಾಗಿ, ಗೋಬ್ರಾಹ್ಮಣರನ್ನೂ ವರ್ಣಾಶ್ರಮ ಧರ್ಮ ವನ್ನೂ ಸಂಸ್ಕೃತ ವ್ಯಾಸಂಗ ಸಾಹಿತ್ಯಗಳನ್ನೂ ಪೋಷಿಸಿ ಉದ್ಧರಿಸುವ ಸಂಕಲ್ಪಮಾಡಿಕೊಂಡನು. ಸಮುದ್ರಗುಪ್ತನು ಸು. 340ರಲ್ಲಿ ಅಯೋಧ್ಯಾ ಪತಿಯಾಗುವ ವೇಳೆಗೆ ಪ್ರವರಸೇನನು ವೃದ್ಧಾಪ್ಯದಲ್ಲಿದ್ದನು.

ಭಾರಶಿವ ಮತ್ತು ವಾಕಾಟಕ ವಂಶಜರು ಶಿವಭಕ್ತರಾಗಿ ತುಖಾರರ ಆಧಿಪತ್ಯವನ್ನು ನಾಶಗೊಳಿಸಿದ್ದರು. ಪ್ರಲಯವಾದ ಮೇಲೆ ಉದ್ಧಾರವೂ

---

* ಗುಪ್ತವಂಶಕ್ಕೆ ಮೂಲಪುರುಷನು ಶ್ರೀಗುಪ್ತ ; ಎರಡನೆಯವನು ಘಟೋತ್ಕಚ ಗುಪ್ತ ; ಮೂರನೆಯವನೇ ಚಂದ್ರಗುಪ್ತ.

ರಕ್ಷಣೆಯೂ ನಡೆಯತಕ್ಕದ್ದೆಂಬ ಒಂದು ನ್ಯಾಯದ ಅನುಸಾರವಾಗಿ ಸಮುದ್ರಗುಪ್ತನು ವಿಷ್ಣುಪೂಜಕನಾಗಿ ಸಾಮ್ರಾಜ್ಯವನ್ನು ಬಂಧಿಸುವ ಕಾರ್ಯದಲ್ಲಿ ನಿರತನಾಗಿ ಯುದ್ಧಸನ್ನದ್ಧನಾದನು. ಮಗಧ ರಾಜ್ಯವನ್ನು ಮೊದಲು ವಶಪಡಿಸಿಕೊಳ್ಳಬೇಕೆಂದು ಪಾಟಲಿಪುರವನ್ನು ಮುತ್ತಲು ಒಂದು ಸೇನೆಯನ್ನು ಕಳುಹಿಸಿದನು. ತಮ್ಮವನಾದ ಕಲ್ಯಾಣವರ್ಮನಿಗೆ ಒದಗಿದ ವಿಪತ್ತನ್ನು ನಿವಾರಿಸಲು ವಾಕಾಟಕ ಸಮ್ರಾಟನ ಸಾಮಂತರಾಗಿ ಅಹಿಚ್ಛತ್ರ, ಮಧುರಾ ಮತ್ತು ಪದ್ಮಾವತೀ ನಗರಗಳಲ್ಲಿ ಅಧಿಕಾರಮಾಡುತ್ತಿದ್ದ ಉಪರಾಜರು ಸೇನೆಗಳನ್ನು ಸೇರಿಸಿಕೊಂಡು ಹೊರಟರು. ಇವರ ಸೈನ್ಯಗಳನ್ನು ಸಮುದ್ರಗುಪ್ತನೇ ಸ್ವಂತವಾಗಿ **ಕೌಶಾಂಬಿ**ಯ ಬಳಿ ಪ್ರತಿಭಟಿಸಿ ಸಾಹಸದಿಂದ ಯುದ್ಧವನ್ನು ನಡೆಸಿ ಆ ಮೂವರನ್ನೂ ಸಂಹರಿಸಿದನು. ವೃದ್ಧ ಸಮ್ರಾಟ ಪ್ರವರಸೇನನೂ ಅದೇ ವೇಳೆಯಲ್ಲಿಯೇ ಮೃತಿಹೊಂದಲು ವಾಕಾಟಕ ಕುಲದವರಿಗೆ ಸಮಯವು ಪ್ರತಿಕೂಲವಾಗಿತ್ತು. ಸಮುದ್ರಗುಪ್ತನು ಜಯಶಾಲಿಯಾಗಿ ಮಗಧವನ್ನು ಆಕ್ರಮಿಸಿಕೊಂಡು ನೆರೆಯಲ್ಲಿ ವಾಕಾಟಕ ಸಾಮ್ರಾಜ್ಯದ ಭಾಗವಾಗಿದ್ದ ಮೇಕಲಾ ಪ್ರಾಂತವೆಂಬುದನ್ನು ಮಾತ್ರ ವಶಪಡಿಸಿಕೊಂಡನು. ಕೋಸಲ, ಮಗಧ, ದಕ್ಷಿಣ ಕೋಸಲಗಳನ್ನು ಈ ರೀತಿ ಪಡೆದ ಸಮುದ್ರಗುಪ್ತನು ವಾಕಾಟಕ ರುದ್ರಸೇನನಮೇಲೆ ಕೈಮಾಡದೆ ದಕ್ಷಿಣಕ್ಕೆ ಸೈನ್ಯಗಳನ್ನು ನಡೆಸಿದನು. ದಿಗ್ವಿಜಯವೆಂದು ಹೆಸರಾದ ಈತನ ವಿಜಯಗಳಲ್ಲಿ ಕೌಶಾಂಬಿಯ ಕದನವೆನ್ನಬಹುದಾದ ಇದೇ ಮೊದಲಿನದು.

**ಕೌಶಾಂಬಿಯ ಯುದ್ಧ**
344—45

ದಕ್ಷಿಣಾಪಥದಲ್ಲಿ ಆಭೀರರು, ಇಕ್ಷ್ವಾಕು ವಂಶಜರು ಮತ್ತು ಚುಟುಕುಲಜರು ವಾಯುವ್ಯ, ಈಶಾನ್ಯ ಮತ್ತು ಮಧ್ಯಭಾಗಗಳಲ್ಲಿದ್ದರಷ್ಟೆ! ಪ್ರವರಸೇನಸಮ್ರಾಟನು ವಿಂಧ್ಯಕ ಕುಲದ ಆಧಿಪತ್ಯವನ್ನು ಉತ್ತರದಲ್ಲಿ ವಿಸ್ತರಿಸಿದ ಕಾಲದಲ್ಲಿಯೇ ದಕ್ಷಿಣಾಪಥದಲ್ಲಿಯೂ ವಿಸ್ತಾರ ಕಾರ್ಯವು ನಡೆದಿತ್ತು. ವಾಕಾಟಕ ವಂಶದ ಕಿರಿಯ ಶಾಖೆಯುವರು **ಪಲ್ಲವ**ರೆಂಬ ಹೆಸರನ್ನು ಧರಿಸಿ, ಈಶಾನ್ಯದಲ್ಲಿ ಇಕ್ಷ್ವಾಕು ಕುಲಜ

ಪಲ್ಲವರ ಏಳಿಗೆ
ಸು. 250—350

ರನ್ನೂ ಬನವಾಸಿಯ ಚುಟುಕುಲದವರನ್ನೂ ಕೊನೆಗಾಣಿಸಿ **ಕಾಂಚೀನಗರ**ವನ್ನೂ ಆಕ್ರಮಿಸಿಕೊಂಡು, ಆ ನಗರವನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡು ಉತ್ತರದಲ್ಲಿ ಕಾಶಿಯು ಹೇಗಿದ್ದಿತೋ ಹಾಗೆಯೇ ದಕ್ಷಿಣದಲ್ಲಿ ಕಾಂಚೀನಗರವನ್ನು ಪವಿತ್ರಗೊಳಿಸುತ್ತಿದ್ದರು. ಗೋದಾವರೀ ಕೃಷ್ಣಾ ನದಿಗಳ ನಡುವಣ **ವೆಂಗಿಮಂಡಲ** (ಆಂಧ್ರದೇಶ)ಕ್ಕೂ ಕಾಂಚೀನಗರಕ್ಕೂ ಅಧಿಪತಿಗಳಾಗಿ ಕಿರಿಯ ವಾಕಾಟಕರಾಗಿದ್ದ ಈ ಪಲ್ಲವರು ಪ್ರಬಲರಾಗಿದ್ದುದರಿಂದ ಕಲ್ಯಾಣವರ್ಮನ ಪರವಾಗಿ ಸಂಧಾನ ಸನ್ನಾಹಗಳನ್ನು ಮಾಡುವ ಸಂಭವವಿತ್ತು. ಇವರ ಸನ್ನಾಹವನ್ನು ಆರಂಭದಲ್ಲಿಯೇ ಮುರಿಯಬೇಕೆಂದು ಸಮುದ್ರಗುಪ್ತನು ಹವಣಿಸಿ, ವೇಗವಾಗಿ ತನ್ನ ಸೈನ್ಯವನ್ನು ಕಳಿಂಗ ದೇಶದಲ್ಲಿ ನಡೆಸಿ ವೆಂಗಿಮಂಡಲದಲ್ಲಿ ಕಾಣಿಸಿಕೊಂಡನು.

ಕುರಾಳಯುದ್ಧ
345–46

ಇದೇ ಪ್ರಖ್ಯಾತವಾದ ದಕ್ಷಿಣ ದಂಡಯಾತ್ರೆ. ಸಮುದ್ರಗುಪ್ತನ ಆಗಮನವನ್ನು ಕೇಳಿ ಅಲ್ಲಿಯ ಉಪರಾಜರೂ, ಸಾಮಂತರೂ, ಕ್ಷೇತ್ರಪಾಲಕರೂ ಒಟ್ಟುಗೂಡಿದರು. ಅವರ ಹೆಸರುಗಳೂ ಅಧಿಕಾರ ಕ್ಷೇತ್ರಗಳೂ* ಒಂದಾನೊಂದು ಶಾಸನದಲ್ಲಿ ಲಬ್ಧವಾಗಿವೆ. ಕೌರಾಳಕ **ಮಂಟರಾಜ**ನೆಂಬಾತನೂ ಕಾಂಚೇಯಕ **ವಿಷ್ಣುಗೋಪ**ನೆಂಬಾತನೂ ಪ್ರಮುಖರಾಗಿ, **ಕುರಾಳ** ಅಥವಾ **ಕೊಲ್ಲೇರು** ಬಳಿ ಯುದ್ಧವನ್ನು ನಡೆಸಿದರು. ವೇಗದಿಂದ ಸಂಚರಿಸಿ ಸಾಹಸದಿಂದ ಯುದ್ಧ ಮಾಡುತ್ತ ಸಮುದ್ರಗುಪ್ತನು ಈ ವ್ಯೂಹವನ್ನು ಭಂಗಿಸಿ ಜಯಶಾಲಿಯಾದನು. ಕುರಾಳಯುದ್ಧವೆನ್ನಬಹುದಾದ ಈ ಕದನದ ಫಲವಾಗಿ ಸಮುದ್ರಗುಪ್ತನು ತನ್ನ ಶ್ರೇಷ್ಠತೆಯನ್ನು ಸ್ಥಾಪಿಸಿದನು. ಸೋತುಹೋದ ರಾಜರು ತನ್ನ ಒಡೆತನವನ್ನು ಮಾತ್ರ ಸ್ವೀಕರಿಸಿದರೆ ಸಾಕೆಂದು ಸಮುದ್ರ

---

* ಪ್ರಸಿದ್ಧವಾದ ಅಲಹಾಬಾದ್ ಶಾಸನದಲ್ಲಿ ಈ ಉಪರಾಜರ ಹೆಸರುಗಳು ಈ ರೀತಿಯಲ್ಲಿವೆ: "ಕೌಸಲಕ ಮಹೇಂದ್ರ, ಮಹಾಕಾಂತಾರಕ ವ್ಯಾಘ್ರರಾಜ, ಕೌರಾಳಕ ಮಂಟರಾಜ, ಪಿಷ್ಟಪುರಕ ಮಹೇಂದ್ರಗಿರಿಕ ಕೌಟ್ಟೂರಕ ಸ್ವಾಮಿದತ್ತ, ಐರಂಡಪಲ್ಲಕ ದಮನ, ಕಾಂಚೇಯಕ ವಿಷ್ಣುಗೋಪ, ಅವಮುಕ್ತಕ ನೀಲರಾಜ, ವೈಂಗೇಯಕ ಹಸ್ತಿವರ್ಮ, ಪಾಲಕ್ಕಕ ಉಗ್ರಸೇನ, ದೈವರಾಷ್ಟ್ರಕ ಕುಬೇರ, ಕೌಸ್ಥಲಪುರಕ ಧನಂಜಯ." ಈ ಸ್ಥಲಗಳೆಲ್ಲವೂ ಸರಿಸುಮಾರಾಗಿ ಈಗಿನ ಉತ್ತರ ಸರ್ಕಾರಗಳೆಂಬ ಭಾಗಗಳಲ್ಲಿವೆ.

ಗುಪ್ತನು ಕ್ಷತ್ರಿಯ ಧರ್ಮವನ್ನೇ ಅನುಸರಿಸಿದನು. ಈ ಯುದ್ಧದಿಂದ ಮೇಕಲಾ ಪ್ರಾಂತದ ಒಡೆತನವು ಭದ್ರವಾದುದಲ್ಲದೆ ಆಂಧ್ರದೇಶದ ಒಡೆತನವೂ ಲಭಿಸಿತು.

**ಐರಿಕಿಣ ಕದನ**

348

ಕುರಾಳ ಕದನವಾದ ಬಳಿಕ ಸಮುದ್ರಗುಪ್ತನು ವಿಂಧ್ಯಪರ್ವತಕ್ಕೆ ಉತ್ತರದಲ್ಲಿ ಸೈನ್ಯಗಳನ್ನು ನಡೆಸಬೇಕಾಯಿತು. ಯಮುನಾ ನದಿಗೂ ವಿದಿಶಾ ಪ್ರಾಂತಕ್ಕೂ ಮಧ್ಯೆ ಬುಂದೇಲಖಂಡವೆನಿಸಿರುವ ಪ್ರದೇಶವೇ ವಾಕಾಟಕ ವಂಶಸ್ಥರ ಸ್ವಂತ ಕ್ಷೇತ್ರವಾಗಿತ್ತು. ಪ್ರವರಸೇನನ ತರುವಾಯ ಪಟ್ಟಾಭಿಷಿಕ್ತನಾಗಿದ್ದ ರುದ್ರಸೇನ ಅಥವಾ ರುದ್ರದೇವನು ಸಾಮಂತರೊಡಗೂಡಿ ಸಮುದ್ರಗುಪ್ತನ ಬಲವನ್ನು ವಿರೋಧಿಸಲು ಸಿದ್ಧನಾಗುತ್ತಿದ್ದನು. ಸಮುದ್ರಗುಪ್ತನು ವೇಗವಾಗಿ ಸಂಚರಿಸಿ **ಐರಿಕಿಣ ಅಥವಾ ಏರಣ**ವೆಂಬಲ್ಲಿ ರುದ್ರಸೇನನ ಸೈನ್ಯವನ್ನು ತಾಗಿ ಅತಿಸಾಹಸದಿಂದ ಹೋರಾಡಿ ಜಯವನ್ನು ಪಡೆದನು. ರುದ್ರಸೇನನು ಯುದ್ಧದಲ್ಲಿಯೇ ಹತನಾದನು. ಸಮುದ್ರಗುಪ್ತನು ಕಾದಿದ ಕದನಗಳಲ್ಲೆಲ್ಲ ಈ ಐರಿಕಿಣ ಕದನವೇ ಕಠಿನವಾಗಿತ್ತು. ಜಯಲಾಭವಾದ ಕೂಡಲೆ ಸಮುದ್ರಗುಪ್ತನು ಜಯಸ್ಮಾರಕವಾದ ವಿಷ್ಣುದೇವಾಲಯವೊಂದನ್ನು ಆ ಸ್ಥಳದಲ್ಲಿ ನಿರ್ಮಿಸಿದನು. ಆ ದೇವಾಲಯದ ಭಾಗದಲ್ಲಿರುವ ಒಂದಾನೊಂದು ಶಿಲ್ಪಕ್ರಿಯೆಯಲ್ಲಿ ರುದ್ರಸೇನನ ಮರಣ ಸೂಚನೆಯುಂಟೆಂದು ಅನುಮಾನಪಡಲು ಆಸ್ಪದವಿದೆ.

**ಸಾಮ್ರಾಜ್ಯ ವಿಸ್ತಾರ**

ಈ ಯುದ್ಧದ ತರುವಾಯ ಸಮುದ್ರಗುಪ್ತನು ಯಮುನಾ ನದಿಯನ್ನು ದಾಟಿ, ಪಂಚನದ ಕ್ಷೇತ್ರದ ಪೂರ್ವಭಾಗದಲ್ಲಿದ್ದ ವಾಕಾಟಕ ಸಾಮಂತರನ್ನೂ ಆಕ್ರಮಿಸಿ ಯುದ್ಧವನ್ನು ನಡೆಸಿದ್ದರೂ ನಡೆಸಿರಬಹುದು. ಕೌಶಾಂಬಿ, ಕುರಾಳ, ಐರಿಕಿಣ ಕದನಗಳಲ್ಲಿ ಏಕಪ್ರಕಾರವಾಗಿ ಲಭಿಸಿದ ವಿಜಯಗಳ ಸುದ್ದಿಯು ಎಲ್ಲೆಲ್ಲಿಯೂ ಹರಡಿ, ಕದನ ಪ್ರಚಂಡನೆನಿಸಿದ ಸಮುದ್ರಗುಪ್ತನ ಬಳಿಗೆ ಸೇರಿಯಲ್ಲಿದ್ದ ರಾಜರೂ ದೂರದೇಶಗಳಲ್ಲಿದ್ದ ಪ್ರಭುಗಳೂ ತಾವೇ ಮುಂದಾಗಿ ದೂತರನ್ನು ಕೊಟ್ಟು ಕಳುಹಿಸಿ ಆತನ ಚಕ್ರಾಧಿಪತ್ಯವನ್ನೊಪ್ಪಿಕೊಂಡರು. ಸುಂದರವನವೆಂದು ಈಗ ಹೆಸ

ಕಾಗಿರುವ ಸಮತಟ ಪ್ರದೇಶವನ್ನು ಸಮುದ್ರಗುಪ್ತನು ತನ್ನ ಮೂಡಲ ಪ್ರಾಂತದಲ್ಲಿ ಸೇರಿಸಿಬಿಟ್ಟನು; ಉಳಿದ ಭಾಗಗಳಲ್ಲಿದ್ದ ರಾಜರನ್ನೂ ಗಣ ಮುಖ್ಯರನ್ನೂ ಗೌರವಿಸಿ ಸಾಮಂತಪದವಿಯನ್ನು ಕೊಟ್ಟು ವಿಸ್ತಾರವಾದ ಸಾಮ್ರಾಜ್ಯವನ್ನು ಸ್ಥಾಪಿಸಿದನು. **ದವಾಕ, ಕಾಮರೂಪ, ನೇಪಾಲ** ಮತ್ತು **ಕರ್ತೃಪುರ**ಗಳೆಂಬ ರಾಜ್ಯಗಳು ಸೆರೆ ರಾಜ್ಯಗಳಾಗಿದ್ದುವು; ಬ್ರಹ್ಮ ಪುತ್ರಾನದಿಯ ತೀರಪ್ರದೇಶಗಳಲ್ಲಿಯೂ ಹಿಮವತ್ಪರ್ವತದ ಸಾನುಪ್ರದೇಶ ದಲ್ಲಿಯೂ ಇದ್ದ ಆ ರಾಜ್ಯಗಳ ಪ್ರಭುಗಳು ತಾವಾಗಿಯೇ ವಶ್ಯತೆಯನ್ನೊಪ್ಪಿ ಕೊಂಡರು. ವಾಯುವ್ಯದಲ್ಲಿ ಚಂದ್ರಭಾಗಾನದಿಯ ಪಶ್ಚಿಮಕ್ಕೆ ದೈವ ಪುತ್ರನೆಂಬ ಹೆಸರನ್ನಿಟ್ಟುಕೊಂಡು, ಇರಾನಿನ ಸಾಸಾನೀ ಪ್ರಭುಗಳ ಸಹಾಯವನ್ನು ಬಯಸುತ್ತಲಿದ್ದ **ತುಖಾರ ಕುಲ**ದರಸರು ಭಯಪಟ್ಟು ಅಧೀನರಾಗಿ (ಆತ್ಮನಿವೇದನ) ಕಾಣಿಕೆಗಳನ್ನು ಸಮರ್ಪಿಸಿ (ಉಪಾಯನ-ಕನ್ಯಾದಾನ), ತಮ್ಮ ಸ್ವಂತ ರಾಜ್ಯದ ಆಳ್ವಿಕೆಗೆ ಸಮ್ರಾಟನ ಅನುಮತಿ ಯನ್ನೂ, ಅಧೀನರಾಗಿದ್ದು ನಾಣ್ಯ ಮುದ್ರಣ ಮಾಡಿಕೊಳ್ಳುವ ಅಧಿಕಾರ ವನ್ನೂ ಯಾಚಿಸಿದರು. ಕಾಸ್ಸೀ (ಕಚ್ಛ) ಮತ್ತು ಸಿಂಧುದೇಶಗಳಲ್ಲಿ ಉಳಿದುಕೊಂಡಿದ್ದ **ಶಕಕುಲಜರೂ** ಹೀಗೆಯೇ ವಶ್ಯತೆಯನ್ನು ಸೂಚಿಸಿದರು. ವಶ್ಯತೆಯಿಂದ ತೃಪ್ತನಾಗಿ ಸಮುದ್ರಗುಪ್ತನು ಮ್ಲೇಚ್ಛರೆನಿಸಿದ್ದ ಈ ರಾಜರನ್ನು ಮನ್ನಿಸಿದನು.

ಈ ಔದಾರ್ಯವು ಸಮುದ್ರಗುಪ್ತನಲ್ಲಿ ಭೂಷಣದಂತೆ ತೋರ ಬಹುದಾದರೂ ಪರಿಣಾಮದಲ್ಲಿ ತೊಂದರೆಯನ್ನುಂಟುಮಾಡಿತು. ಮ್ಲೇಚ್ಛರ ಸರ್ವನಾಶವನ್ನು ಬಯಸಿದ್ದರೆ ಸಮುದ್ರಗುಪ್ತ ಸಾರ್ವಭೌಮನು ಕಾಶ್ಮೀರ ಗಾಂಧಾರಗಳಲ್ಲಿ ಆಳುತ್ತಿದ್ದ ತುಖಾರ ಕುಲಜರನ್ನೂ ಸಿಂಧು ಪ್ರಾಂತದಲ್ಲಿದ್ದ ಶಕಕುಲಸ್ಥರನ್ನೂ ನಿರ್ಮೂಲನಮಾಡಬಹುದಾಗಿತ್ತು. ತುಖಾರರ ಸಂಬಂಧ ಕಟ್ಟಿದ ಇರಾನೀ ಪ್ರಭುವನ್ನೂ ಮನಸ್ಸುಮಾಡಿದ್ದರೆ ಅಡಗಿಸಿ ವಾಯುವ್ಯ ದಲ್ಲಿ ಭಾರತವರ್ಷವನ್ನು ವಿಸ್ತರಿಸಬಹುದಾಗಿತ್ತು. ಸಾರ್ವಭೌಮನು ಅಂತಹ ದುರಾಸೆಯನ್ನು ತೋರಲಿಲ್ಲ; ಭಾರತವರ್ಷದ ಬಿಡುಗಡೆಯಿಂದ ತೃಪ್ತನಾದನು. ತುಖಾರಕುಲಸ್ಥರು ಈತನೆದುರಿನಲ್ಲಿ ಕಟ್ಟಿಕೊಂಡ ಅವಮಾನಕ್ಕೆ ಪ್ರತೀಕಾರಮಾಡಲು ಈತನ ತರುವಾಯ ಸಿದ್ಧರಾದರು.

ವಿಂಧ್ಯಕ ವಂಶದವರ ರಾಜ್ಯಕ್ಕೆ ಪಶ್ಚಿಮದಲ್ಲಿಯೂ ವಾಯುವ್ಯದಲ್ಲಿಯೂ ನೆಲೆಸಿದ್ದ ಗಣಪ್ರಮುಖರು ಸಮುದ್ರಗುಪ್ತನ
345 ಒಡೆತನವನ್ನೊಪ್ಪಿಕೊಂಡು ತೆರಿಗೆಗಳನ್ನು ತೆತ್ತು ವಿಧೇಯರಾಗಿರಲೊಪ್ಪಿದರು. ಅವರಲ್ಲಿ **ಮಾಲವರು**, **ಆರ್ಜುನಾಯ**ನರು, **ಯೌಧೇಯರು**, **ಮಾದ್ರಕರು** ಈಗಣ ರಾಜಸ್ಥಾನದಲ್ಲಿಯೂ ಶತದ್ರುನದಿಯ ಪಾರ್ಶ್ವದಲ್ಲಿಯೂ ನೆಲೆಯಾಗಿದ್ದರು. **ಆಭೀರ**ರೆಂಬುವವರು ಸುರಾಷ್ಟ್ರದಲ್ಲಿ ಪ್ರಬಲರಾಗಿದ್ದು ಮಿತ್ರ ಕುಲಗಳು, ಪ್ರಾರ್ಜುನರು, ಸಹಸಾನೀಕರು ಮುಂತಾದ ಗಣಗಳೊಡನೆ ಸಾರ್ವಭೌಮನ ಅಧಿಕಾರವನ್ನೊಪ್ಪಿಕೊಂಡು ಆತನ ಅಧಿಕಾರಿವರ್ಗದವರಲ್ಲಿ ಗಣ್ಯರಾದರು. ದಕ್ಷಿಣಾಪಥದಲ್ಲಿ ಪೂರ್ವ ತೀರಪ್ರದೇಶದಲ್ಲಿ ಕಾಂಚಿಯ ವರೆಗೂ ಪ್ರಬಲರಾಗಿದ್ದ ಪಲ್ಲವರು ಮೊದಲೇ ವಶರಾಗಿದ್ದರು. ಮಧ್ಯಭಾಗದಲ್ಲಿ ವಿದರ್ಭ, ನಿಷಧ ಮುಂತಾದ ಭಾಗಗಳಲ್ಲಿ ರುದ್ರಸೇನನ ತರುವಾಯ ಪಟ್ಟವನ್ನೇರಿದ ವಾಕಾಟಕ ವಂಶದ **ಪೃಥಿವೀಷೇಣ**ನು ಸಾಮಂತಪದವಿಯನ್ನೊಪ್ಪಿಕೊಂಡು ಸಾರ್ವಭೌಮ ಭಕ್ತನಾಗಿದ್ದನು. ಬನವಾಸಿ ಕ್ಷೇತ್ರದಲ್ಲಿ ವಾಕಾಟಕಾನುಜರಾದ ಪಲ್ಲವರಿಂದ ಪದಚ್ಯುತರಾಗಿದ್ದ ಚುಟುಕುಲದ ವಂಶಸ್ಥರು **ಕದಂಬ**ರೆಂಬ ಹೆಸರನ್ನು ತಾಳಿ ರಾಜ್ಯವನ್ನು ಕಟ್ಟಿದ್ದರು. ಮಯೂರಶರ್ಮನೆಂಬ ಆ ಕುಲಸ್ಥನು ಕಾಂಚಿಯಲ್ಲಿ ವಿದ್ಯಾಭ್ಯಾಸ ನಿರತನಾಗಿದ್ದು ಪಲ್ಲವರೊಡನೆ ವ್ಯಾಜ್ಯವಾಡಿ ಸೈನ್ಯಗೂಡಿಸಿ ಬನವಾಸಿಯಲ್ಲಿ ರಾಜ್ಯಕಟ್ಟಿದ್ದನು. ಆತನ ತರುವಾಯ ಪಟ್ಟವನ್ನೇರಿದ **ಕನಕವರ್ಮ** ಅಥವಾ **ಕಂಗವರ್ಮ**ನು ಶೂರನಾಗಿದ್ದು ಸಮುದ್ರಗುಪ್ತನ ಒಡೆತನವನ್ನು ಒಪ್ಪಿಕೊಳ್ಳದಿದ್ದನು. ಸಾಮಂತರಲ್ಲಿ ಅಗ್ರಗಣ್ಯನೇ ಆಗಿದ್ದ ಪೃಥಿವೀಷೇಣನು ಈ ಕನಕವರ್ಮನ ಮೇಲೆ ದಂಡೆತ್ತಿ ಸೋಲಿಸಿಬಿಟ್ಟನು; ಕನಕವರ್ಮನು ವ್ಯಸ್ತನಾಗಿ ರಾಜ್ಯಾಧಿಕಾರವನ್ನು ಮಗನಿಗೆ ಕೊಟ್ಟುಬಿಟ್ಟು ತಾನು ನಿವೃತ್ತನಾಗಿಯೇ ಕಾಲ ಕಳೆದನು.

ಈ ರೀತಿಯಲ್ಲಿ ಸಮುದ್ರಗುಪ್ತನು ಸಮಸ್ತ ಭಾರತವರ್ಷಕ್ಕೂ ಒಡೆಯನೆನಿಸಿದನು. ಆತನ ಕೀರ್ತಿಯು ಎಲ್ಲೆಲ್ಲಿಯೂ ವಿಶ್ರುತವಾಗಿ, ಸಿಂಹಳರಾಜನೂ ಬಂಗಾಳಾಕೊಲ್ಲಿಯ ಆಚೆ ರಾಜ್ಯಕಟ್ಟಿಕೊಂಡಿದ್ದ

ಆರ್ಯವಂಶದ ರಾಜರೂ ರಾಯಭಾರಗಳನ್ನು ಕಳುಹಿಸಿದರು. ಸಿಂಹಳದ **ಮೇಘವರ್ಣರಾಜನು** ತನ್ನ ದೇಶದಿಂದ ಗಯಾಯಾತ್ರೆಗೆಂದು ಹೊರಟವರ ಅನುಕೂಲಕ್ಕಾಗಿ ಒಂದು ವಿಹಾರವನ್ನು ಗಯೆಯ ಬಳಿ ಕಟ್ಟಿಸಲು ಸಾರ್ವಭೌಮನ ಅನುಮತಿಯನ್ನು ಬೇಡಿದನು. ಬೃಹತ್ತರ ಭಾರತವೆಂಬ ಕ್ಷೇತ್ರಗಳಲ್ಲಿಯೂ ಚೀನಾ ಸಾಮ್ರಾಜ್ಯದಲ್ಲಿಯೂ ಭಾರತವರ್ಷದ ಸಾರ್ವಭೌಮನ ಸುದ್ದಿಯು ಹರಡಿ ಆ ಸಾರ್ವಭೌಮನ ಆರ್ಯಧರ್ಮೋದ್ಧಾರದ ವಿವರವೂ ವಿಶ್ರುತವಾಯಿತು. ದ್ವೀಪಾಂತರಗಳಲ್ಲಿ ನೆಲೆಸಿದ್ದ ಭಾರತೀಯರು ತಮ್ಮ ಭಾರತೀಯತ್ವದಲ್ಲಿಯೂ ಆರ್ಯಧರ್ಮದಲ್ಲಿಯೂ ಹೆಮ್ಮೆಗೊಂಡರು.

**ಸಾರ್ವಭೌಮನ ಯಶಸ್ಸು** ದಿಗ್ವಿಜಯ ಮುಗಿದ ಕೂಡಲೆ ಸಮುದ್ರಗುಪ್ತ ಚಕ್ರವರ್ತಿಯು ಅಶ್ವಮೇಧ ಯಾಗವನ್ನು ಪಕ್ರಮಿಸಿ ಸಾಂಗವಾಗಿ ನಡೆಸಿದನು. ಯಾಗವು ಅತಿಸಂಭ್ರಮದಿಂದ ನೆರವೇರಿತು. ಆ ತರುವಾಯ ಈತನ ಆಸ್ಥಾನ ಕವಿಯೆನಿಸಿ ಆಪ್ತ ಸಚಿವನಂತಿದ್ದ **ಹರಿಷೇಣನೆಂಬಾತನು** ಚಕ್ರವರ್ತಿಯ ವಿಜಯ ವಿಸ್ತಾರಗಳನ್ನು ಒಂದು ಶಾಸನರೂಪದಲ್ಲಿ ಸಿದ್ಧಗೊಳಿಸಿದನು. ಆ ಲೇಖನವೇ ಇಲಾಹಾಬಾದಿನಲ್ಲಿ ಸ್ತಂಭವಮೇಲೆ ಲಿಖಿತವಾಗಿ ಪ್ರಸಿದ್ಧವಾಗಿರುವುದು. ಅಜೇಯನೆಂದು ಯಶಸ್ವಿಯಾದರೂ ಸಮುದ್ರಗುಪ್ತನ ಕೀರ್ತಿಗೆ ಆತನ ಶೌರ್ಯ ಸಾಹಸಗಳು ಮಾತ್ರವೇ ಆಧಾರವಲ್ಲ. ಆತನ ಆಸ್ಥಾನವು ಸಾಮಂತ ಪ್ರಭುಗಳಿಂದಲೂ ಮಂತ್ರಿ ದಳಪತಿಗಳಿಂದಲೂ ತುಂಬಿದ್ದುದಲ್ಲದೆ ಕವಿಜನರಿಂದಲೂ ವಿದ್ವಾಂಸರಿಂದಲೂ ತುಂಬಿತ್ತು; ವಸುಬಂಧುವೆಂಬ ಪ್ರಸಿದ್ಧ ವಿದ್ವಾಂಸನಲ್ಲಿ ವ್ಯಾಸಂಗಮಾಡಿ ಸ್ವತಃ ವಿದ್ವಾಂಸನಾಗಿದ್ದ ಈ ಸಾರ್ವಭೌಮನು ವಿದ್ವತ್ಸಹವಾಸವನ್ನೇ ಬಯಸುತ್ತ ಅವರನ್ನು ಪ್ರೋತ್ಸಾಹಿಸುತ್ತಲಿದ್ದನು. ಕವಿಜನರಿಗೂ ಶಾಸ್ತ್ರಜ್ಞರಿಗೂ



23. ಸಮುದ್ರಗುಪ್ತನ ನಾಣ್ಯ—ಅಶ್ವ

ಉದಾರವಾದ ಆಶ್ರಯವನ್ನು ನೀಡುತ್ತಿದ್ದನು. ವಿದ್ಯಾಭಿಮಾನವೇ ಅಲ್ಲದೆ ಈತನಲ್ಲಿ ಕಲಾಭಿರುಚಿಯೂ ನೆಲೆಸಿತ್ತು. ಆತನ ಕಾಲದ ಕೆಲವು ನಾಣ್ಯಗಳಲ್ಲಿ ವೇದಿಕೆಯ ಮೇಲೆ ಕುಳಿತು ವೀಣೆಯನ್ನು ಬಾಜಿಸುತ್ತಿರುವ ಆತನ ಚಿತ್ರವು ಅಚ್ಚಾಗಿರುವುದು. ನಾಣ್ಯವೂ ಸುಂದರ, ಚಿತ್ರವೂ ಮನೋಹರವಾದ ಸನ್ನಿವೇಶವನ್ನು ಸೂಚಿಸತಕ್ಕದ್ದು. ಸಹಜಗಂಭೀರನಾಗಿ ಪ್ರತಾಪಶಾಲಿಯೂ ವಿದ್ಯಾಪಕ್ಷಪಾತಿಯೂ ಕಲಾಲೋಲನೂ ಆದ ಸಮುದ್ರಗುಪ್ತನು ಸೌಕುಮಾರ್ಯ, ಔದಾರ್ಯಾದಿ ರಾಜಗುಣಗಳಿಂದ ಶೋಭಿಸಿ ರಾಜಪುರುಷರಲ್ಲಿ ಆದರ್ಶನೆನಿಸಿದ್ದಾನೆ. ಸನಾತನ ಧರ್ಮೋದ್ಧಾರಕನಾಗಿ ವಿಷ್ಣುಭಕ್ತನೆನಿಸಿ ಸೂರ್ಯ ಚಂದ್ರ ವಂಶಗಳ ಸಾರ್ವಭೌಮರ ಗತಿಯನ್ನನುಸರಿಸಿದ ಈ ಚಕ್ರೇಶ್ವರನಿಗೆ **ಬಾಲಾದಿತ್ಯ, ಪರಮಭಟ್ಟಾರಕ** ಮುಂತಾದ ಬಿರುದುಗಳು ಸಲ್ಲುತ್ತಿದ್ದವು. ಈತನ ಆಳ್ವಿಕೆಯು ಸು. 375ರಲ್ಲಿ ಕೊನೆಗಂಡಿತು.



24. ಸಮುದ್ರಗುಪ್ತನ ನಾಣ್ಯ—ವೀಣೆ

ರಾಮಗುಪ್ತ

ಸಮುದ್ರಗುಪ್ತನು **ದತ್ತಾದೇವಿ**ಯೆಂಬಾಕೆಯನ್ನು ಮದುವೆಯಾಗಿದ್ದನು. ಆತನಿಗೆ **ರಾಮಗುಪ್ತ, ಚಂದ್ರಗುಪ್ತ**ರೆಂಬ ಇಬ್ಬರು ಕುಮಾರರಿದ್ದರು. ಹಿರಿಮಗನಾಗಿದ್ದ ರಾಮಗುಪ್ತನೇ ಪಟ್ಟವನ್ನೇರಿದನು; ಆದರೆ ಹೇಡಿಯಾಗಿದ್ದುದರಿಂದ ಅವಮಾನವನ್ನು ಕಟ್ಟಿಕೊಳ್ಳುವುದರಲ್ಲಿದ್ದನು. ಸಮುದ್ರಗುಪ್ತನು ಕಾಲವಾದ ಕೂಡಲೆ ತುಖಾರ ರಾಜನು ತನಗೆ ಸಮಯ ಪ್ರೊದಗಿತೆಂದು ತಿಳಿದು ಧೂರ್ತತನದಿಂದ ರಾಮಗುಪ್ತನಲ್ಲಿಗೆ ದೂತರನ್ನು ಕಳುಹಿಸಿ, ಹಿಂದೆ ತನ್ನ ವಂಶಸ್ಥರು ಸಮುದ್ರಗುಪ್ತನಿಗೆ ಉಪಾಯನ–ಕನ್ಯಾದಾನಗಳನ್ನು ಮಾಡಿದುದಕ್ಕೆ ಪ್ರತಿಯಾಗಿ ರಾಮಗುಪ್ತನು ತನಗೆ ಕಾಣಿಕೆಯನ್ನು ಸಮರ್ಪಿಸಬೇಕೆಂದು ಉದ್ದುರುಟುತನವನ್ನು ತೋರಿದನು.

ಹೇಡಿಯಾದ ರಾಮಗುಪ್ತನು ಯುದ್ಧವನ್ನೊಲ್ಲದೆ ಒಪ್ಪಿಕೊಂಡನು; ಚಂದ್ರಗುಪ್ತನಿಗೆ ಇದು ಸ್ವಲ್ಪವಾದರೂ ಸಹಿಸಲಿಲ್ಲ. ಪರಮ ಸಾಹಸವನ್ನು ತೋರಿ ತಾನೇ ಗೋಪ್ಯವಾಗಿ ಹೊರಟು

ಚಂದ್ರಗುಪ್ತ II
375—413

ಆ ತುಖಾರ ರಾಜನನ್ನು ಆತನ ಪಟ್ಟಣದಲ್ಲಿಯೇ ಸಂಹರಿಸಿ ಆತನ ಬಲವನ್ನು ಮುರಿದು ಹಿಂತಿರುಗಿ ಬಂದನು. ಇದನ್ನು ಕಂಡು ಮಂತ್ರಿ ಸೇನಾಪತಿಗಳು ಬಹಳವಾಗಿ ಮೆಚ್ಚಿಕೊಂಡು, ಹೇಡಿ ರಾಮಗುಪ್ತನು ಸಿಂಹಾಸನದಲ್ಲಿರಲು ಅಯೋಗ್ಯನೆಂದು ನಿಶ್ಚಯಿಸಿ, ಅವನನ್ನು ಭ್ರಷ್ಟನನ್ನಾಗಿ ಮಾಡಿ ಚಂದ್ರಗುಪ್ತನನ್ನು ವರಿಸಿ ಪಟ್ಟದಲ್ಲಿ ಕುಳ್ಳಿರಿಸಿದರು.

ತಂದೆಗೆ ತಕ್ಕ ಮಗನಾಗಿ ಶೋಭಿಸಿದ ಚಂದ್ರಗುಪ್ತನು **ಉಜ್ಜಯಿನಿ**ಯಲ್ಲಿ ರಾಜಧಾನಿಯನ್ನು ಸ್ಥಿರ್ಪಿಸಿದನು.

ವಿಕ್ರಮಾದಿತ್ಯನ ಆಸ್ಥಾನ

ಸಾಮ್ರಾಜ್ಯದ ಆಡಳಿತ ವ್ಯವಸ್ಥೆಯು ರೂಢಿಗೊಂಡು ರಾಜಾಸ್ಥಾನವೂ ಸಾಮಂತರ ಅಧಿಕಾರವೂ ಪ್ರಜಾಕ್ಷೇಮವೂ ಆದರ್ಶಪ್ರಾಯವಾಗಿ ಪರಿಣಮಿಸಿದವು. ಪ್ರಾಚೀನಕಾಲದಿಂದ ವ್ಯಾಪಾರಕ್ಕೂ ವಿದ್ಯಾನಿಲಯಗಳಿಗೂ ಹಿರಿದೆನಿಸಿದ್ದ ಉಜ್ಜಯಿನಿಯು ಈ ಚಕ್ರವರ್ತಿಯ ಆಸ್ಥಾನದಿಂದ ಮತ್ತಷ್ಟು ಪ್ರಖ್ಯಾತವಾಯಿತು. ಚಂದ್ರಗುಪ್ತನು ಅಲ್ಲಿ ಓಲಗಮಾಡುತ್ತ ಕವಿಜನರನ್ನೂ ವಿದ್ವಜ್ಜನರನ್ನೂ ಕರೆಸಿಕೊಂಡನು. ಆತನ ಆಸ್ಥಾನದಲ್ಲಿ ಕವಿಶ್ರೇಷ್ಠರೂ ದಿಗ್ದಂತಿಗಳಾದ ಪಂಡಿತರೂ ಗುಂಪು ಕೂಡಿದ್ದರೆಂಬ ವೃತ್ತಾಂತವು ನಮ್ಮಲ್ಲಿ ಚಿರಸ್ಥಾಯಿಯಾಗಿದೆ. **ಕಾಳಿದಾಸ ಕವಿ**ಯು ಈತನ ಆಸ್ಥಾನದಲ್ಲಿದ್ದನು. **ಅಮರಸಿಂಹ, ಘಟಕರ್ಪರ, ಕ್ಷಪಣಕ** ಮುಂತಾಗಿ **ನವರತ್ನ**ಗಳೆನಿಸಿದ ಪಂಡಿತವರ್ಯರು ಈತನ ಆಸ್ಥಾನದಲ್ಲಿ ಭೂಷಣಪ್ರಾಯರಾಗಿದ್ದರಂತೆ. ವಿಕ್ರಮಾದಿತ್ಯನೆಂಬ ಬಿರುದನ್ನು ವಹಿಸಿದ ಈ ಚಂದ್ರಗುಪ್ತ ಚಕ್ರವರ್ತಿಯ ಆಸ್ಥಾನವು ಮೌರ್ಯ ಚಂದ್ರಗುಪ್ತ ಚಕ್ರವರ್ತಿಯ ಆಸ್ಥಾನಕ್ಕಿಂತಲೂ ಸಂಸ್ಕೃತವಾಗಿತ್ತು.

ಸಾಮಂತಪ್ರಮುಖನಾಗಿದ್ದ ಪೃಥಿವೀಷೇಣನನ್ನು ಈ ಚಕ್ರವರ್ತಿಯು ಸತ್ಕರಿಸಿ ಆತನ ಮಗ **ಇಮ್ಮಡಿ ರುದ್ರಸೇನ**ನಿಗೆ **ಪ್ರಭಾವತೀದೇವಿ**ಯೆಂಬ

ತನ್ನ ಮಗಳನ್ನು ಕೊಟ್ಟು ಸಂಭ್ರಮದಿಂದ ವಿವಾಹಮಾಡಿದನು. ಈ ಮದುವೆಯ ಪರಿಣಾಮವಾಗಿ ವಾಕಾಟಕ ಗುಪ್ತ ವಂಶಗಳು ಒಟ್ಟು ಸೇರಿದವು; ಗುಪ್ತ ವಂಶಜರು ಕೀಳು ಜಾತಿಯವರೆಂಬ ಕಳಂಕವು ದೂರವಾಯಿತು. ಅಳಿಯನಾದ ರುದ್ರಸೇನನು ವೈಷ್ಣವಮತವನ್ನು ಅವಲಂಬಿಸಿದನು. ವಿಂಧ್ಯಪರ್ವತಕ್ಕೆ ಉತ್ತರದಲ್ಲಿ ಗುಪ್ತ ಚಕ್ರೇಶ್ವರರು ತೋರಿದ ನೀತಿಯನ್ನೇ ದಕ್ಷಿಣದಲ್ಲಿ ವಾಕಾಟಕ ಕುಲಸ್ಥರು ತೋರಿದರು. ಆದ್ದರಿಂದ ಕಾಳಿದಾಸನ ಕಾಲವೆನ್ನಬಹುದಾದ ಈ ಕಾಲವೆಲ್ಲಕ್ಕೂ ವಿಂಧ್ಯಕ-ಗುಪ್ತ ಸಾಮ್ರಾಜ್ಯದ ಕಾಲವೆಂಬ ಹೆಸರು ರೂಢಿಯಾಗಿದೆ.

ಪ್ರಭಾವತೀ ಪರಿಣಯ

ಇಮ್ಮಡಿ ಚಂದ್ರಗುಪ್ತ ಅಥವಾ ವಿಕ್ರಮಾದಿತ್ಯನ ನಾಣ್ಯಗಳಲ್ಲಿ ಧನುರ್ಧಾರಿಯಾಗಿ ನಿಂತಿರುವ ಚಕ್ರವರ್ತಿಯ ದೃಶ್ಯವು ಮನೋರಂಜಕವಾಗಿದೆ. ಪರಾಕ್ರಮ ಶಾಲಿಯಾದ ಈತನು ಅನೇಕ ಜನ ಕವಿಗಳನ್ನೂ ವಿದ್ವಾಂಸರನ್ನೂ ಅಲ್ಲದೆ ಕಲಾವಿದರನ್ನೂ ಪೋಷಿಸಿದನು. **ಉದಯಗಿರಿ** ಎಂಬೆಡೆಯಲ್ಲಿ ಈತನ ಅನುಜ್ಞೆಯಿಂದ ನಿರ್ಮಿತವಾದ ಗುಹಾಂತರ್ದೇವಾಲಯವು ಅದ್ಭುತವಾದುದು. ಅಲ್ಲಿ ಕೆತ್ತಿರುವ **ವರಾಹಮೂರ್ತಿಯ** ದೃಶ್ಯವು ಗಂಭೀರವಾಗಿದೆ. ಹಿಂದೆ ಪೃಥ್ವಿಯನ್ನೆತ್ತಿ ಹಿಡಿದು ಜಗತ್ತನ್ನು ಉದ್ಧರಿಸಿದ ವರಾಹದಂತೆಯೇ ಗುಪ್ತ ಚಕ್ರೇಶ್ವರರು ಭಾರತಭೂಮಿಯನ್ನು ಮ್ಲೇಚ್ಛರಿಂದ ಬಿಡುಗಡೆಮಾಡಿ ಆರ್ಯ ಧರ್ಮವನ್ನು ಉದ್ಧರಿಸಿದ ಅಂಶವು ಆ ಶಿಲ್ಪದಲ್ಲಿ ಸೂಚಿತವಾಗಿದೆ. ಪೌರುಷದ್ಯೋತಕವಾಗಿರುವ ಆ ಶಿಲ್ಪವು ಚಂದ್ರಗುಪ್ತ ವಿಕ್ರಮಾದಿತ್ಯನ ಕಾಲದ ಜನರ ಹುರುಪನ್ನು ಪ್ರಕಟಗೊಳಿಸುತ್ತದೆ.

ಆಳ್ವಿಕೆಯ ಪ್ರೌಢಿಮೆ



25. ಚಂದ್ರಗುಪ್ತ ನಾಣ್ಯ

ಚಂದ್ರಗುಪ್ತ ಚಕ್ರವರ್ತಿಯ ಆಳ್ವಿಕೆಯು ಕ್ರಿ. ಶ. 413ರಲ್ಲಿ ಕೊನೆಗಂಡಿತು. ಆತನ ತರುವಾಯ ಆತನ ಮಗ

ಕುಮಾರಗುಪ್ತ 413—455

**ಕುಮಾರಗುಪ್ತ**ನೆಂಬಾತನು ಅಭಿಷಿಕ್ತನಾದನು. 455 ರವರೆಗಾಳಿದ ಆತನೂ ಶೂರನಾಗಿದ್ದು ಅಶ್ವಮೇಧಯಾಗವನ್ನು ಸಾಂಗವಾಗಿ ನೆರವೇರಿಸಿದನು. ತಂದೆಯಂತೆಯೇ ಆತನೂ ಉದಾರಿಯಾಗಿಯೂ ವಿದ್ವಜ್ಜನ ವಿಲಾಸಿ



**26. ಉದಯಗಿರಿ—ವರಾಹಮೂರ್ತಿ**

ಯಾಗಿಯೂ ಇದ್ದನು. ಆತನಿಗೆ **ಮಹೇಂದ್ರಾದಿತ್ಯ**ನೆಂಬ ಬಿರುದಿದ್ದಂತೆ ಕಾಣುವುದು; ಪ್ರಸಿದ್ಧವಾದ **ನಾಲಂದಾ ವಿಹಾರ**ವು ಸ್ಥಾಪಿತವಾದುದು ಆತನಿಂದಲೇ. ಈತನು ಪಟ್ಟವನ್ನೇರಿದಾಗ ಈತನ ತಂಗಿ ಪ್ರಭಾವತೀದೇವಿಯೇ ವಿಂಧ್ಯಕರಾಜ್ಯವನ್ನು ಪರಿಪಾಲಿಸುತ್ತಿದ್ದಳು. ಇಮ್ಮಡಿ ರುದ್ರಸೇನನು ಅಲ್ಪಾಯುವಾಗಿ 395ರಲ್ಲಿ ತೀರಿಹೋದನು; ಸಣ್ಣ ವಯಸ್ಸಿನ ಮಕ್ಕಳು ವಯಸ್ಕರಾಗುವವರೆಗೆ ಪ್ರಭಾವತೀದೇವಿಯೇ ರಾಜ್ಯ ಸೂತ್ರಗಳನ್ನು ವಹಿಸಿದ್ದು 415ರಲ್ಲಿ ತನ್ನ ಎರಡನೆಯ ಮಗ ಪ್ರವರಸೇನನಿಗೆ ರಾಜ್ಯವನ್ನೊಪ್ಪಿಸಿದಳು. ಈ **ಇಮ್ಮಡಿ ಪ್ರವರಸೇನ**ನೆಂಬಾತನು 435ರವರೆಗೆ ಆಳಿದನು. ಕುಮಾರಗುಪ್ತ ಮತ್ತು ಪ್ರವರಸೇನರಿಬ್ಬರೂ ಯೋಗ್ಯತೆಯಿಂದಲೇ ವರ್ತಿಸಿ ತಮ್ಮ ವಂಶಸ್ಥರು ಆರಂಭಿಸಿದ್ದ ಕಾರ್ಯವನ್ನು ಮುಂದರಿಸಿದರು.

ವಾಕಾಟಕ ವಂಶ 435—520

ಇಮ್ಮಡಿ ಪ್ರವರಸೇನನು **ಪ್ರವರಪುರ**ವೆಂಬ ನೂತನ ರಾಜಧಾನಿಯನ್ನು ನಿರ್ಮಿಸಿದನು. ಅಲ್ಲಿ 435ರಲ್ಲಿ **ನರೇಂದ್ರಸೇನ**ನೆಂಬ ಆತನ ಪುತ್ರನು ಸಣ್ಣ ವಯಸ್ಸಿನಲ್ಲಿಯೇ ಅಭಿಷಿಕ್ತನಾಗಿ ಕೆಲಕಾಲದಮೇಲೆ ಕದಂಬ ಕುಲದ ರಾಜಪುತ್ರಿಯನ್ನು ಮದುವೆಯಾದನು. ಈತನ ಕಾಲದಲ್ಲಿ ದಕ್ಷಿಣಾಪಥವೆಲ್ಲವೂ ನೆಮ್ಮದಿಯನ್ನು ಪಡೆದಿತ್ತು. ಪಶ್ಚಿಮ ಭಾಗದಲ್ಲಿ ಮಾತ್ರ ತ್ರೈಕೂಟಕರೆಂಬವರು ಸ್ವಲ್ಪ ತೊಂದರೆ ಕೊಟ್ಟರು; ಅವರು ಸೋತು ನಮ್ರರಾದರು. ಈ ನರೇಂದ್ರಸೇನನ ಕಾಲದಲ್ಲಿಯೇ ಕುಮಾರಗುಪ್ತನು ತೀರಿಕೊಂಡನು (455); ಮಹಾಸೇನ ಅಥವಾ **ಸ್ಕಂದಗುಪ್ತ**ನೆಂಬ ಆತನ ಮಗನು ಪಟ್ಟವನ್ನೇರಿ ಆಗತಾನೇ ವಾಯವ್ಯದಲ್ಲಿ ನುಗ್ಗುತ್ತ ಬಂದ ಹೂಣಜನರನ್ನು ಅಡಗಿಸಲು ಸಿದ್ಧನಾದನು. ನರೇಂದ್ರಸೇನನು 470ರವರೆಗೂ ಆಳಿದನು. ಆ ತರುವಾಯ ಅಭಿಷಿಕ್ತರಾದ **ಇಮ್ಮಡಿ ಪೃಥಿವೀಷೇಣ** (470-485) ಮತ್ತು **ದೇವಸೇನ** (480-490) ರೆಂಬುವವರಲ್ಲಿ ದೇವಸೇನನು ಸುಖಾಪೇಕ್ಷೆಯುಳ್ಳವನಾಗಿ ರಾಜ್ಯಭಾರವನ್ನೇ ಬಿಟ್ಟುಕೊಟ್ಟನು. ಈ ದೇವಸೇನನ ಆಳ್ವಿಕೆಯಲ್ಲಿ ರಾಜ್ಯದ ಬಿಗಿ ತಪ್ಪಿತು. 490ರಲ್ಲಿ ಪಟ್ಟವನ್ನೇರಿದ **ಹರಿಷೇಣ**ನು

ಕುಂತಲ, ಅವನ್ತಿ, ಕಳಿಂಗ, ಕೋಸಲ, ತ್ರಿಕೂಟ, ಲಾಟ, ಆಂಧ್ರ ಪ್ರಾಂತಗಳನ್ನು ಪುನಃ ಗೆದ್ದು ರಾಜ್ಯವನ್ನು ಕಟ್ಟಿದನು. ಹರಿಷೇಣನ ಪ್ರಾಬಲ್ಯದ ದೆಸೆಯಿಂದಲೇ ಹೂಣಜನರು ದಕ್ಷಿಣಕ್ಕೆ ಬರಲು ಆಸ್ಪದವಿಲ್ಲದಾಯಿತು. ಮೂವತ್ತು ವರ್ಷಕಾಲ ದರ್ಪದಿಂದ ಆಳಿದ ಹರಿಷೇಣನ ಮಂತ್ರಿಯಾಗಿದ್ದ **ಹಸ್ತಿಭೋಜ**ನೆಂಬಾತನು ಅಜಂತಾ ಗುಹೆಗಳಲ್ಲಿ ಸುಂದರವೆನಿಸಿರುವ ಒಂದು ಗುಹೆಯನ್ನು ನಿರ್ಮಿಸಿದನು.

ಸ್ಕಂದಗುಪ್ತ
455—480

455ರಲ್ಲಿ ಕುಮಾರಗುಪ್ತನು ಕಾಲಗತಿಯನ್ನು ಹೊಂದಿದಾಗ **ಪುರಗುಪ್ತ**ನೆಂಬೊಬ್ಬ ಮಗನು **ಸ್ಕಂದಗುಪ್ತ**ನೆಂಬ ಮತ್ತೊಬ್ಬ ಮಗನ ಮೇಲೆ ಕತ್ತಿಗಟ್ಟಿದನು. ಸ್ಕಂದಗುಪ್ತನು ಇವನನ್ನು ಸುಲಭವಾಗಿಯೇ ಅಡಗಿಸಿದನು. ಅಣ್ಣತಮ್ಮಂದಿರ ಜಗಳವು **ಹೂಣ**ರೆಂಬ ರೂಕ್ಷ ಜನರಿಗೆ ಆಸ್ಪದವನ್ನೊದಗಿಸಿತು. ಯುವರಾಜನಾಗಿದ್ದಾಗಲೇ ಸ್ಕಂದಗುಪ್ತನು ಆ ಜನರನ್ನು ಸೋಲಿಸಿ ಯಶಸ್ವಿಯಾಗಿದ್ದನು. ಆ ಅಸಭ್ಯ ಜನರು ಪುನಃ ವಾಯುವ್ಯ ಮೇರೆಯನ್ನು ದಾಟಿ ಬರಲು ಸ್ಕಂದಗುಪ್ತನು ಪುನಃ ಅವರನ್ನು ಸೋಲಿಸಿ ಸಾಮ್ರಾಜ್ಯವನ್ನು ರಕ್ಷಿಸಿದನು. ಆತನ ಆಳ್ವಿಕೆಯೂ ಪಿತಪಿತಾಮಹರ ಆಳ್ವಿಕೆಯಂತೆಯೇ ದಕ್ಷತೆಯಿಂದ ಕೂಡಿತ್ತು. **ಸುದರ್ಶನ** ಸರೋವರದ ಒಂಧವು ಪುನಃ ಒಡೆದಿತ್ತು; ಚಕ್ರವರ್ತಿಯ ಅಧಿಕಾರಿಯಾಗಿದ್ದ **ಪರ್ಣದತ್ತ**ನೆಂಬಾತನು ಅದನ್ನು ಜೀರ್ಣೋದ್ಧಾರಗೊಳಿಸಿದನು. ಮೂರಾವರ್ತಿ ಜೀರ್ಣೋದ್ಧಾರ ಪಡೆದ ಆ ಸರೋವರವು ಮತ್ತೆ ಯಾವಾಗಲೋ ಒಡೆದುಹೋಯಿತು. ಸ್ಕಂದಗುಪ್ತ ಚಕ್ರವರ್ತಿಯು 480ರಲ್ಲಿ ಹೂಣರ ಅವಾಂತರದಲ್ಲಿ ಸಿಕ್ಕಿ ಕಾಲವಾದನು. ಆತನನ್ನೇ ಗುಪ್ತವಂಶಜ ಚಕ್ರವರ್ತಿಗಳಲ್ಲಿ ಕಡೆಯವನೆಂದು ಭಾವಿಸಬಹುದು.

ಸ್ವರ್ಣಕಾಲ

**ವಿಂಧ್ಯಕ-ಗುಪ್ತಕಾಲ**ವೆಂಬುದು ಎಲ್ಲ ರೀತಿಗಳಲ್ಲಿಯೂ ಅಮೋಘವೆನಿಸುತ್ತದೆ. ಭಾರಶಿವರು ಪ್ರಾರಂಭಿಸಿದ ಕರ್ತವ್ಯವನ್ನು ವಾಕಾಟಕರೂ ಗುಪ್ತವಂಶೀಯರೂ ಜಗವೇ ಮೆಚ್ಚುವಂತೆ ಮುಂದರಿಸಿ ಭಾರತವರ್ಷವನ್ನು ಕಟ್ಟಿದರು. ಅವರ ಕಾಲದಲ್ಲಿಯೇ ಸಂಸ್ಕೃತ ಭಾಷೆಯು ರಾಜಭಾಷೆಯಾಗಿ

ಪ್ರೋತ್ಸಾಹವನ್ನು ಪಡೆಯಿತು. ಸಮುದ್ರಗುಪ್ತನ ವಿಜಯಲಾಭವೂ ಅಪಾರವಾದ ಐಶ್ವರ್ಯವೂ ಈ ಕಾಲದ ಭಾರತೀಯರಲ್ಲಿ ಅತಿಪ್ರೌಢವಾದ ಧ್ಯೇಯಗಳನ್ನು ಕಲ್ಪಿಸಿದವು. ರಾಜ್ಯಭಾರ ನಿರ್ವಹಣದಲ್ಲಿ, ಸಾಹಿತ್ಯ ಪುಷ್ಟಿಯಲ್ಲಿ, ಧರ್ಮಪ್ರಚಾರದಲ್ಲಿ, ಶಾಸ್ತ್ರ ವ್ಯಾಸಂಗದಲ್ಲಿ, ಬೃಹತ್ತರ ಭಾರತವೆಂಬ ವಿಸ್ತಾರದಲ್ಲಿ, ಕುಶಲ ಕಲೆಗಳಲ್ಲಿ ಮತ್ತು ಲಲಿತ ಕಲಾ ಪ್ರಪಂಚದಲ್ಲಿ ಈ ಕಾಲದ ಮಹಿಮೆಯು ಪ್ರದರ್ಶವಾಯಿತು. ಸರ್ವತೋಮುಖವಾದ ಔನ್ನತ್ಯವನ್ನು ಎತ್ತಿ ತೋರುವ ಈ ಕಾಲವನ್ನೇ(300–500) ಇತಿಹಾಸಜ್ಞರು **ಸ್ವರ್ಣಕಾಲ**ವೆಂದು ಕರೆಯುವುದು. ಅಮೂಲ್ಯ ನಿಧಿ ನಿಕ್ಷೇಪಗಳೆನಿಸಿದ ರಾಮಾಯಣ ಮಹಾಭಾರತ ಭಾಗವತಾದಿ ಮಹಾ ಗ್ರಂಥಗಳೂ, ಭಾಸ ಕಾಲಿದಾಸಾದಿ ಕವಿಶ್ರೇಷ್ಠರ ಕಾವ್ಯಗಳೂ, ಅಜಂತಾ



27. ಘಾರಾಪುರಿಯ ಗುಹೆ

ಘಾರಾಪುರಿ (Elephanta) ಉದಯಗಿರಿ ಮುಂತಾದೆಡೆಗಳಲ್ಲಿ ಲೋಕೋತ್ತರವೆನಿಸಿರುವ ಕಲಾಸೃಷ್ಟಿಯೂ ಆ ಕಾಲವು ಕೊಟ್ಟ ಫಲಗಳು. **ಭಾರತೀಯತ್ವ**

ವೆನ್ನುವುದೇ ಈ ಕಾಲದಲ್ಲಿ ರೂಪಸಿದ್ಧಿಯನ್ನು ಪಡೆಯಿತು; ಭಾರತೀಯ ಸಂಸ್ಕೃತಿ ಅಥವಾ ನಾಗರಿಕತೆ ಅಥವಾ ಸಭ್ಯತಾ ಸಾಧನೆಗಳೆಂದು ಯಾವುದನ್ನು ಕರೆಯುತ್ತೇವೆಯೋ ಆ ಮಹಾವೃಕ್ಷದ ಮೂಲಗಳು ವೈದಿಕ ಕಾಲದಲ್ಲಿಯೇ ತೋರಿಕೊಂಡಿದ್ದಾಗ್ಗೂ ಸ್ಕಂಧಭಾಗವು ವಾಕಾಟಕ–ಗುಪ್ತಕಾಲದಲ್ಲಿ ದೃಢವಾಗಿ ಮುಂದಿನ ಕಾಲದಲ್ಲಿ ಶಾಖೋಪಶಾಖೆಗಳನ್ನು ಪಡೆಯಿತು. ಆ ಕಾಲವೇ ಆರ್ಯ ಧರ್ಮದ ಇತಿಹಾಸದಲ್ಲಿ ಮಧ್ಯಸ್ಥಾನ; ಹಿಂದಿನ ಕಾಲಗತಿಯ ಆಂದೋಲನಗಳೆಲ್ಲವೂ ಸ್ವರ್ಣಕಾಲದಲ್ಲಿ ಪರಿಣಾಮವನ್ನು ಪಡೆದವು; ಸ್ವರ್ಣಕಾಲದ ಆದರ್ಶಗಳು ಸ್ಥಿರವಾಗಿ ನಿಂತು ಮುಂದೆ ಮಹತ್ಪರಿಣಾಮಕಾರಕಗಳಾಗಿ ನಿಂತವು. ಕಾಲಮಹಿಮೆಯು ಅದ್ಭುತವಾಗಿದ್ದುದರಿಂದಲೇ ಭಾರತೀಯರು ಹೆಮ್ಮೆಗೊಂಡು

"ಗಾಯನ್ತಿ ದೇವಾಃ ಕಿಲ ಗೀತಿಕಾನಿ ।
ಧನ್ಯಾಸ್ತುತೇ ಭಾರತಭೂಮಿ ಭಾಗೇ ।
ಸ್ವರ್ಗಾಪವರ್ಗಾಸ್ಪದ ಭೂಮಿ ಭಾಗೇ ।
ಭವನ್ತಿ ಭೂಯಃ ಪುರುಷಾಸ್ಸುರತ್ವಾತ್ ॥"

ಎಂದು ಪಠಿಸುವವರಾದರು.



**28. ಕಾಶಿ–ಮಣಿಕರ್ಣಿಕಾಘಟ್ಟ**

ಗುಪ್ತ ವಂಶ

ಸ್ಕಂದಗುಪ್ತನ ತರುವಾಯ **ನರಸಿಂಹಗುಪ್ತ**ನೆಂಬಾತನು ಬಾಲಾದಿತ್ಯನೆಂಬ ಬಿರುದಿನಿಂದ 467ರಿಂದ 472ರ ವರೆಗಾಳಿದನು. ನಾಲಂದಾನಿಲಯಕ್ಕೆ ಆತನು ವಿಶೇಷವಾದ ದಾನಗಳನ್ನು ಮಾಡಿ ಯಶಸ್ವಿಯಾದನು. ಆತನ ತರುವಾಯ ಆಳಿದ **ಇಮ್ಮಡಿ ಕುಮಾರಗುಪ್ತ** ಮತ್ತು **ಬುಧಗುಪ್ತ**ರು (477–495) ಹೂಣರೊಂದಿಗೆ ಹೆಣಗಾಡಬೇಕಾಯಿತು. ಬುಧಗುಪ್ತನ ತರುವಾಯ ಆತನ ಇಬ್ಬರು ಮಕ್ಕಳು ಸಾಮ್ರಾಜ್ಯಕ್ಕಾಗಿ ಕಲಹಮಾಡಿ ರಾಜ್ಯ ವಿಭಾಗವನ್ನು ಮಾಡಿಕೊಂಡರು. ಕಾಶೀಭಾಗದಲ್ಲಿ ಇಮ್ಮಡಿ ಬಾಲಾದಿತ್ಯನೆಂಬ ಬಿರುದಿನಿಂದ **ಭಾನುಗುಪ್ತ**ನೆಂಬೊಬ್ಬ ಮಗನು ಆಳಲು ಪ್ರಾರಂಭಿಸಿದನು. ರಾಜವಂಶದ ಈ ಒಡಕು ಹೂಣರಿಗೆ ಸಮಯವನ್ನೊದಗಿಸಿತು. ಹೂಣರ ನಾಯಕ **ಗೋಪರಾಜ**ನೆಂಬಾತನು (ತೋರಮಾನ?) ಮುತ್ತಿಬಂದು ಭಾನುಗುಪ್ತನನ್ನು **ಎರಾನ್** ಎಂಬಲ್ಲಿ ಸು. 502ರಲ್ಲಿ ಸೋಲಿಸಿಬಿಟ್ಟು ಅವನ ಮಗನನ್ನು ಸೆರೆಹಿಡಿದನು. ತರುವಾಯ ಆ ಗೋಪರಾಜನು ಸೆರೆಯಲ್ಲಿದ್ದ ಆ ಬಾಲಕನಿಗೇ ಕಾಶಿಯಲ್ಲಿ ಪಟ್ಟಕಟ್ಟಿದನು. ಆ ಬಾಲಕನೇ **ಪ್ರಕಟಾದಿತ್ಯ**ನೆಂಬ ಹೆಸರಿನಿಂದ 54 ವರ್ಷಗಳ ಕಾಲ ಆಳಿದನು. ಗೋಪರಾಜನೂ ಅದೇ ವರ್ಷ ಆಕಸ್ಮಿಕವಾಗಿ ಕಾಲವಾದನು; ಮಿಹಿರಗುಲನೆಂಬ ದುಷ್ಟನು ಹೂಣರ ನಾಯಕನಾದನು. ಅಂತೂ ಗುಪ್ತ ಸಾಮ್ರಾಜ್ಯವು ಭ್ರಾತೃಕಲಹದಿಂದಲೂ ಹೂಣರ ಅಪಾಂತರದಿಂದಲೂ ಕ್ಷಯಿಸಿತು. ಪ್ರಕಟಾದಿತ್ಯನ ಕಾಲದಲ್ಲಿಯೇ ಸಾಮ್ರಾಜ್ಯವು ಭಿನ್ನ ಭಿನ್ನವಾಯಿತು.

## ಹೂಣಜನರು

ಗುಪ್ತರ ಕ್ಷಯ

ಪಂಚನದ ಮುಂತಾದ ವಾಯವ್ಯ ಪ್ರಾಂತಗಳಲ್ಲಿ ರಾಜ್ಯಗಳನ್ನು ಕಟ್ಟಿಕೊಂಡಿದ್ದ ಕುಶೀಕುಲದ ಅರಸರು ದುರ್ಬಲರಾಗಿದ್ದುದರಿಂದ ರೂಕ್ಷಜನರ ಪ್ರವೇಶಕ್ಕೆ ಅನುಕೂಲವಾಗಿತ್ತು. **ಹೂಣ**ರೆಂಬ ಮಂಗೋಲ ಕುಲದ ಗುಂಪಿನವರು ಮಧ್ಯ ಏಷ್ಯ ಪ್ರದೇಶಗಳನ್ನು ನಾಲ್ಕನೆ ಶತಮಾನ

ದಂತ್ಯದಲ್ಲಿ ಬಿಟ್ಟು ಹೊರಟು ಭಾರತಭೂಮಿಯ ಸರಹದ್ದನ್ನು 400–410 ರಲ್ಲಿ ಸಮೀಪಿಸಿದರು. ಅವರು ಕುರೂಪಿಗಳಾಗಿಯೂ ಕ್ರೂರಿಗಳಾಗಿಯೂ ಇದ್ದರು. ಅವರಲ್ಲೊಂದು ಭಾಗದವರು ಪಶ್ಚಿಮಕ್ಕೆ ಹೊರಟು ಯೂರೋಪು ಖಂಡದಲ್ಲಿ ಪ್ರವೇಶಿಸಿ, ಅನೇಕ ತೊಂದರೆಗಳನ್ನು ಇತರರಿಗೆ ಕೊಟ್ಟು ತಾವೂ ಅನುಭವಿಸಿ, ಕಡೆಗೆ ಹಂಗೆರಿ (Hungary) ಯೆಂಬ ರಾಷ್ಟ್ರದಲ್ಲಿ ನೆಲೆಯಾದರು. ಪೂರ್ವದಿಕ್ಕಿನಲ್ಲಿಯೇ ಉಳಿದ ಭಾಗದವರು ಪಾರ್ಥಿಯ ಅಥವಾ ಫಾರ್ಸಿಸ್ಥಾನದ ಜನರಿಗೆ ತೊಂದರೆಯನ್ನು ಕೊಟ್ಟು ಕಾಬೂಲ್, ತಕ್ಷಶಿಲೆ ಪ್ರಾಂತಗಳಲ್ಲಿದ್ದ ತುರುಷ್ಕ ಕುಲದ ಹಿಂದೂರಾಜರನ್ನು ಧ್ವಂಸ ಮಾಡಿ, 455–460ರಲ್ಲಿ ಪಂಚನದ ಪ್ರದೇಶದಲ್ಲಿ ನುಗ್ಗಿ ಗುಪ್ತ ಸಾಮ್ರಾಜ್ಯದ ಮೇರೆಯಲ್ಲಿ ಕಾಣಿಸಿಕೊಂಡರು. ಮೊದಲು ಸ್ಕಂದಗುಪ್ತನು ಇವರನ್ನು ಸೋಲಿಸಿ ತಡೆದನು. ಆದರೆ ಹಿಂದಿನಿಂದ ಇತರ ಹೂಣ ಗುಂಪುಗಳು ನುಗ್ಗಿ ಬರುತ್ತಲೇ ಇದ್ದವು. ಇವುಗಳನ್ನು ಸೋಲಿಸಿ ತಡೆಯಲು ಆತನ ತರುವಾಯ ಆಳಿದವರು ಅಸಮರ್ಥರಾದರು. ಹೂಣರು ಪಂಚನದ ರಾಜಪುತ್ರಸ್ಥಾನಗಳನ್ನು ಸ್ವಾಧೀನಗೊಳಿಸಿಕೊಂಡು ರಾಜ್ಯವನ್ನೇ ಸ್ಥಾಪಿಸುವವರಾದರು. **ತೋರಮಾನ**ನೆಂಬ ಹೂಣನಾಯಕನು ಅವರೆಲ್ಲರನ್ನೂ ಒಟ್ಟುಗೂಡಿಸಿ ರಾಜ್ಯಾಧಿಪತಿಯಾದನು. ಹೂಣರೂ ಕ್ರಮವಾಗಿ ಸಭ್ಯತೆಯನ್ನು ಸಂಪಾದಿಸಿಕೊಂಡರು. ಸ್ಕಂದಗುಪ್ತನ ಅನಂತರ ಗುಪ್ತ ಸಮ್ರಾಟರು ಮಾಳವ ಪ್ರಾಂತವನ್ನು ಹೂಣರಿಗೆ ಬಿಟ್ಟುಕೊಟ್ಟರು. ಗುಪ್ತ ಸಾಮ್ರಾಜ್ಯವು ಹೂಣರ ಆಕ್ರಮಣದಿಂದಲೇ ಒಡೆದು ಕ್ಷೀಣವಾಗಲು ಮೊದಲಾಯಿತು. ಆರ್ಯಾವರ್ತದ ವಾಯುವ್ಯ ಭಾಗಗಳಲ್ಲಿ ಹೂಣರೂ, ಹೂಣರೊಡನೆ ಹೆಣಗಾಡುತಲಿದ್ದ ಚಿಕ್ಕ ಚಿಕ್ಕ ರಾಜರೂ, ಇತರ ಭಾಗಗಳಲ್ಲಿ ಪರಸ್ಪರವಾಗಿ ಸ್ಪರ್ಧಿಸುತ್ತಿದ್ದ ಅಧಿಪತಿಗಳೂ ಪ್ರಬಲರಾಗುವಂತಾಯಿತು.

**ಹೂಣರ ಪರಿಣಾಮ**

**ತೋರಮಾನ**ನು 502ರಲ್ಲಿ ಕಾಲವಾದನು. ಆತನ ಪದವಿಗೇರಿದ **ಮಿಹಿರಗುಲ**ನೆಂಬ ಆತನ ಮಗನು ಮಹಾಕ್ರೂರ ಸ್ವಭಾವದವನಾಗಿದ್ದನು. ಇತರರನ್ನು ಹಿಂಸಿಸಿ ಬಾಧೆಗೊಳಿಸುವುದರಲ್ಲಿ ಆತನಿಗೆ ಪರಮಸಂತೋಷ. ಬೌದ್ಧ ಸಂನ್ಯಾಸಿಗಳನ್ನು ಕೊಲೆಮಾಡಿಸುತ್ತ ಪಿಶಾಚನಂತೆ ವರ್ತಿಸುತ್ತಿದ್ದ

ಆತನನ್ನು ಎಲ್ಲರೂ ದ್ವೇಷಿಸುತ್ತಿದ್ದರು. ಆನೆಗಳನ್ನು ಕೋಡುಗಲ್ಲಿನ ತುದಿಯಿಂದ ತಳ್ಳಿಸಿ ಅವುಗಳು ಚೀತ್ಕಾರಮಾಡುತ್ತ ತಲೆಕೆಳಕಾಗಿ ಹಳ್ಳಕ್ಕೆ ಬಿದ್ದು ಪ್ರಾಣಬಿಡುತ್ತಿದ್ದುದನ್ನು ನೋಡುವುದೇ ಆತನಿಗೆ ವಿನೋದಕರ ವಾಗಿತ್ತು. ಇಂತಹ ಪಾಷಾಣ ಹೃದಯನ ಆಳ್ವಿಕೆಯಲ್ಲಿ ದಯಾದಾಕ್ಷಿಣ್ಯ ಗಳು ಲೇಶಮಾತ್ರವೂ ಇರಲಿಲ್ಲ. ಅವನನ್ನು ನಿಗ್ರಹಿಸಲು ಮಾಳವ ಪ್ರಾಂತದಲ್ಲಿ ರಾಜ್ಯಕಟ್ಟಿಕೊಂಡಿದ್ದ **ಯಶೋಧರ್ಮ**ನೆಂಬ ರಾಜನೂ ಗುಪ್ತವಂಶದವರೂ ಸಂಕಲ್ಪ ಮಾಡಿಕೊಂಡರು. ನೆರೆಹೊರೆಯ ಇತರ ರಾಜರನ್ನೂ ಕರೆದು ಮಿಹಿರಗುಲನೊಡನೆ ಯುದ್ಧಕ್ಕೆ ಹೊರಟರು. ನಡೆದ ಯುದ್ಧದಲ್ಲಿ ಮಿಹಿರಗುಲನು ಪೂರಾ ಸೋತು ಸೆರೆಯಾಗಿ ಶರಣಾಗತ ನಾದನು. ಧರ್ಮಬುದ್ಧಿಯಿಂದ ಯಶೋಧರ್ಮನು ಅವನ ಪ್ರಾಣವನ್ನುಳಿಸಿ ಬಿಡುಗಡೆಮಾಡಿಸಿದನು. ಈ ಕದನವು 528ರಲ್ಲಿ ನಡೆಯಿತು. ಹೂಣರ ಪ್ರಾಬಲ್ಯವು ಅದರಿಂದ ಮುರಿಯಿತು.

ಮಿಹಿರಗುಲನಿಗೆ ಸ್ವಂತ ಬಂಧುಗಳೇ ವಿರೋಧಿಗಳಾಗಿದ್ದರು. ಯುದ್ಧಭೂಮಿಯಿಂದ ಓಡಿ ಆತನು ರಾಜಧಾನಿಯಾದ **ಶಾಕಲ**ನಗರವನ್ನು ತಲಪಿದಾಗ ಅಲ್ಲಿ ಆತನ ತಮ್ಮನು ಪಟ್ಟಭದ್ರನಾಗಿದ್ದನು; ಯಾವ ಆಸರೆಯೂ ಅಲ್ಲಿ ದೊರೆಯದಾಯಿತು. ಅಲ್ಲಿಂದ ಮಿಹಿರಗುಲನು ತಲೆತಪ್ಪಿಸಿ ಕೊಂಡು **ಕಾಶ್ಮೀರ** ರಾಜ್ಯಕ್ಕೆ ಓಡಿ ಅಲ್ಲಿಯ ರಾಜನ ಆಶ್ರಯವನ್ನು ಬೇಡಿದನು. ಕಾಶ್ಮೀರ ರಾಜನು ಅವನನ್ನು ತನ್ನ ಅತಿಥಿಯೆಂದು ಭಾವಿಸಿ ಔದಾರ್ಯದಿಂದ ಕಾಣುತ್ತಿರಲು ನೀಚಬುದ್ಧಿಯುಳ್ಳ ಮಿಹಿರಗುಲನು ಅಲ್ಲಿ ಒಂದು ಪಿತೂರಿಯನ್ನು ಕಟ್ಟಿದನು. ಈ ದ್ರೋಹಿಯನ್ನು ರಾಜ್ಯದಲ್ಲಿಟ್ಟು ಕೊಳ್ಳಬಾರದೆಂದು ಜನರೂ ರಾಜಾಧಿಕಾರಿಗಳೂ ಒಂದಾಗಿ ಅಲ್ಲಿಂದ ಅವನನ್ನು ಅಟ್ಟಿಬಿಟ್ಟರು. ಅಲ್ಲಿಂದ ಆ ಕಿರಾತನು ನೆರೆಯ ರಾಷ್ಟ್ರಗಳಲ್ಲಿ ಓಡಾಡಿ ಕೊನೆಗೆ ಎಲ್ಲಿಯೋ ಪ್ರಾಣಬಿಟ್ಟನು. ಅವನು ಸಾಯುವ ಕಾಲಕ್ಕೆ ಹೂಣರು ಅಸಭ್ಯತೆಯನ್ನು ನೀಗಿದವರಾಗಿ ಹಿಂದೂ ಮತವನ್ನು ಸ್ವೀಕಾರ ಮಾಡಿ ಶಾಂತತೆಯ ಜೀವನವನ್ನು ಪಡೆದಿದ್ದರು. ಹೊರಗಡೆ ಅವರ ಪ್ರಾಬಲ್ಯವು ತುರುಷ್ಕ ಕುಲಗಳ ದೆಸೆಯಿಂದ ನಾಶವಾಗಿತ್ತು. ಹಿಂದೂ ಧರ್ಮವನ್ನು ಸ್ವೀಕರಿಸಿದ ಮೇಲೆ ಹೂಣರೂ, ಹೂಣರಂತೆಯೇ ಇದ್ದ

ಇತರ ಗುಂಪುಗಳವರೂ ಅಲ್ಲಲ್ಲಿಯೇ ನೆಲೆಸುತ್ತ ಸಣ್ಣ ರಾಜ್ಯಗಳನ್ನು ಮಾತ್ರ ಕಟ್ಟಿಕೊಂಡರು.

ಗುಪ್ತರ ಕಾಲ

ಹೂಣಜನರ ಆವಾಂತರವು 450ರಿಂದ 530ರವರೆಗೆ ನಡೆಯಿತೆನ್ನಬಹುದು. ಯಮುನಾ ಚರ್ಮಣ್ವತೀ ನದಿಗಳ ಪಶ್ಚಿಮಕ್ಕಿರುವ ಭಾಗಗಳಲ್ಲಿಯೇ ಅವರ ಹಾವಳಿಯು ನಡೆದುದು. ಕಾಲಕ್ರಮದಲ್ಲಿ ಅವರೂ ಇತರರಂತೆ ಧರ್ಮ ಪ್ರಜ್ಞೆಯನ್ನು ಪಡೆದು ಭಾರತೀಯರಲ್ಲಿ ಒಂದಾದಾಗ್ಯೂ ಅವರು ಕಂಟಕರಾಗಿದ್ದ ಕಾಲದಲ್ಲಿ ಅವರಿಂದ ಅನಾಹುತಗಳೇ ಸಂಭವಿಸಿದವು. ಗುಪ್ತ ಸಾಮ್ರಾಜ್ಯದ ವಿಸ್ತಾರ ಪ್ರಾಬಲ್ಯಗಳು ಅವರಿಂದಲೇ ನಷ್ಟವಾದವು. 4ನೆ, 5ನೆ ಶತಮಾನಗಳಲ್ಲಿ ಆದರ್ಶ ಸಾಮ್ರಾಜ್ಯವಾಗಿದ್ದ **ಗುಪ್ತ** ಸಾಮ್ರಾಜ್ಯವು 5ನೆ ಶತಮಾನದ ಅಂತ್ಯದಲ್ಲಿ ಅವರಿಂದಲೇ ಕ್ಷೀಣವಾಯಿತು. ಹೂಣರು ಪ್ರವೇಶ ಮಾಡುವುದಕ್ಕೆ ಹಿಂದೆ ಪ್ರಸಿದ್ಧ ಗುಪ್ತ ಚಕ್ರವರ್ತಿಗಳು ಆಳಿದ ಕಾಲವನ್ನು ಸ್ವರ್ಣಯುಗವೆಂದು ಕರೆಯುವುದು ಇತಿಹಾಸಕಾರರಲ್ಲಿ ವಾಡಿಕೆ. **ಕಾಲಿದಾಸನ ಕಾಲ**ವೆನ್ನುವುದೂ ಅದೇ. ಆ ಕಾಲದ ಸ್ಥಿತಿಗಳ ವಿವರವು ಒಬ್ಬಾನೊಬ್ಬ ಚೀನಾ ಯಾತ್ರಿಕನ ದೆಸೆಯಿಂದ ಪೂರ್ಣವಾಗಿ ಲಭ್ಯವಾಗಿದೆ.

## ಬೌದ್ಧ ಪ್ರಚಾರಕರು

ಕುಶೀಕುಲದವರ ಸಾಮ್ರಾಜ್ಯವು ನಷ್ಟವಾದ ತರುವಾಯ **ಚೀನಾ** ದೇಶದವರೊಡನೆ ಸಂಬಂಧ ವ್ಯವಹಾರಗಳು ತಗ್ಗಲಿಲ್ಲ. ಒಂದನೆಯ ಶತಮಾನದಲ್ಲಿಯೇ **ಕಶ್ಯಪಮತಂಗ**ನೆಂಬ ಬೌದ್ಧ ಪಂಡಿತನು **ಚೀನಾ** ದೇಶದಲ್ಲಿ ಮತಪ್ರಚಾರ ಮಾಡಲು ಉಪಕ್ರಮಿಸಿದ್ದನಷ್ಟೆ! ಆತನ ಹಿಂದೆಯೇ ಇತರ ಬೌದ್ಧ ಪಂಡಿತರೂ ಚೀನಾ ದೇಶಕ್ಕೆ ಹೊರಟರು. ಎರಡನೆ, ಮೂರನೆ ಶತಮಾನಗಳಲ್ಲಿ **ಮಹಾಬಲ, ಧರ್ಮಕಾಲ** ಮುಂತಾದ ಭಿಕ್ಷುಗಳೂ ಅಲ್ಲಿಗೆ ಹೊರಟು ಮತಪ್ರಚಾರದಲ್ಲಿ ಕೃತಪ್ರಯತ್ನರಾದರು. ಚೀನೀ ಚಿತ್ರಲಿಪಿಯ ಅಕ್ಷರಮಾಲೆಯು ಭಯಂಕರವಾಗಿಯೇ ಇತ್ತು; ಭಾಷೆಯು ತೀರ ಹೊಸದು. ಇವರು ಆಡುತ್ತಿದ್ದ ಸಂಸ್ಕೃತವು **ಚೀನಾ**

ದೇಶದಲ್ಲಿ ಯಾರಿಗೆ ತಿಳಿಯಬೇಕು! ಆದರೂ ಉತ್ಸಾಹದಿಂದ ಇವರೇ ಚೀನೀ ಭಾಷೆಯನ್ನು ಕಲಿತು ಬೌದ್ಧ ಗ್ರಂಥಗಳನ್ನು ಚೀನೀ ಭಾಷೆಯಲ್ಲಿ ಬರೆಯುವುದಕ್ಕೂ ವಿವರಿಸುವುದಕ್ಕೂ ಮೊದಲಿಟ್ಟರು. ನಾಲ್ಕನೆ ಶತಮಾನ ದಲ್ಲಿ ಒಬ್ಬ ಮಹಾಪುರುಷನೇ ಹುಟ್ಟಿ ಈ ಕೆಲಸವನ್ನು ನಿರ್ವಹಿಸಿದನು. **ಕುಮಾರಜೀವ**ನೆಂದು ಪ್ರಸಿದ್ಧನಾದ ಆತನು ಕಾಶ್ಮೀರದ ಉತ್ತರ ಭಾಗದಲ್ಲಿ ಹುಟ್ಟಿ, ಕಾಶ್ಮೀರದಲ್ಲಿಯೂ ಕ್ಯಾಷ್ಗಾರಿನಲ್ಲಿಯೂ ವಿದ್ಯಾಭ್ಯಾಸವನ್ನು ಮಾಡಿ, ಸಂಸ್ಕೃತ ಭಾಷೆಯಲ್ಲಿ ಪ್ರೌಢ ಪಾಂಡಿತ್ಯವನ್ನು ಸಂಪಾದಿಸಿದನು. ಆತನ ಕೀರ್ತಿಯು ಚೀನಾ ದೇಶದಲ್ಲಿಯೂ ಹರಡಿತು. 401ರಲ್ಲಿ ಚೀನಾ ಚಕ್ರವರ್ತಿಯಾಗಿದ್ದ **ಯಾಔಚಿಂಗ್** ಎಂಬಾತನು ಆತನನ್ನು ಕರೆಸಿಕೊಂಡನು. ಕ್ಯಾಂಟನ್ ಸಮೀಪದಲ್ಲಿ ಬೌದ್ಧರು ಒಂದು ವಿಹಾರವನ್ನು ಕಟ್ಟಿ ಕೊಂಡಿದ್ದರು. ಕುಮಾರಜೀವನು ಅಲ್ಲಿ ನೆಲೆಸಿ ಚೀನೀ ಭಾಷೆಯನ್ನು ಅಭ್ಯಾಸಮಾಡಿ ಅನೇಕ ಗ್ರಂಥಗಳನ್ನು ತಾನೇ ಬರೆದನು. ಆತನ ಸಾಮರ್ಥ್ಯ ದಿಂದ ನೂರು ಗ್ರಂಥಗಳು ಸಂಸ್ಕೃತದಿಂದ ಚೀನೀ ಭಾಷೆಗೆ ಭಾಷಾಂತರ ವಾದುವಂತೆ. ಬರಿಯ ಭಾಷಾಂತರವೇ ಅಲ್ಲ; ಆತನ ಬರೆವಣಿಗೆಯಲ್ಲಿ ಉತ್ಕೃಷ್ಟ ವಾದ ಶೈಲಿಯು ನೆಲೆಸಿತ್ತು. ಆದ್ದರಿಂದ ಚೀನೀ ಸಾಹಿತ್ಯದಲ್ಲಿ ಕುಮಾರ ಜೀವನು ಮಹಾಕವಿಗಳಲ್ಲಿ ಎಣಿಕೆಯಾಗಿದ್ದಾನೆ; ಈಗಲೂ ಆತನ ಗ್ರಂಥ ಗಳನ್ನು ಚೀನೀ ಸಾಹಿತ್ಯ ವಿದ್ಯಾರ್ಥಿಗಳು ಓದುತ್ತಾರೆ. ಕುಮಾರ ಜೀವ ಮುಂತಾದವರಲ್ಲಿ ಚಕ್ರವರ್ತಿಯೂ ಅಧಿಕಾರಿಗಳೂ ಆದರ ವಿಶ್ವಾಸಗಳನ್ನು ತೋರುತ್ತಿದ್ದಾಗ್ಯೂ ಮತಪ್ರಚಾರವು ಸುಲಭವಾಗಿರಲಿಲ್ಲ. ಚೀನೀ ಜನರು ಅನುಸರಿಸುತ್ತಿದ್ದ ಪೂರ್ವ ಮತಗಳು ಪ್ರಬಲವಾಗಿಯೇ ಇದ್ದವು. ಇವುಗಳ ಮಧ್ಯೆ ಅಪೂರ್ವ ಪಾಂಡಿತ್ಯದಿಂದಲೂ ಶುಚಿಯಾದ ಜೀವನದಿಂದಲೂ ಶೋಭಿಸುತ್ತಿದ್ದ ಭಾರತೀಯ ಬೌದ್ಧ ಪಂಡಿತರಲ್ಲಿ ಚೀನೀ ಯರಿಗೆ ಭಕ್ತಿಯು ಕ್ರಮವಾಗಿ ಬೆಳೆಯಿತು. ಅವರ ಶಿಷ್ಯವೃಂದವು ವೃದ್ಧಿ ಯಾಯಿತು. ಪುಣ್ಯಭೂಮಿಯೆಂದು ಈ ಪಂಡಿತರು ಕೊಂಡಾಡುತ್ತಿದ್ದ ದೇಶವನ್ನು ಕಣ್ಣಾರೆ ಕಂಡು ಬೌದ್ಧ ಗ್ರಂಥಾದಿಗಳನ್ನು ಸಂಪಾದಿಸಲು ಚೀನೀಯರಲ್ಲಿ ಕುತೂಹಲವುಂಟಾಯಿತು. ಪುಣ್ಯಭೂಮಿಯ ಯಾತ್ರೆ ಮಾಡಬೇಕೆಂದು ಹಲಕೆಲವರು ಸಾಹಸಪಟ್ಟರು. ಹೀಗೆ ಹೊರಟ ಚೀನೀ

ಯಾತ್ರಿಕರ ಮೊದಲನೆ ಗುಂಪುಗಳಲ್ಲಿ ಫಾಹಿಯನ್ ಎಂಬಾತನು ಕಾರಣಾಂತರದಿಂದ ಸುಪ್ರಸಿದ್ಧನಾಗಿದ್ದಾನೆ.

## ಚೀನಾ ಯಾತ್ರಿಕ ಫಾಹಿಯನ್

ಫಾಹಿಯನ್ ಕುಮಾರಜೀವನ ಶಿಷ್ಯವರ್ಗದಲ್ಲಿ ಸೇರಿದವನಾಗಿದ್ದನು.

ಪ್ರವಾಸ

ಪುಣ್ಯಭೂಮಿಯ ಯಾತ್ರೆಯನ್ನು ಎಷ್ಟು ಕಷ್ಟವಾದರೂ ಮಾಡಿಯೇತೀರಬೇಕೆಂಬ ಆಸೆಯೂ ಸಂಕಲ್ಪವೂ ಆತನ ಮನಸ್ಸಿನಲ್ಲಿ ಉತ್ಕಟವಾಯಿತು. ಕೆಲವರು ಸಹವಾಸಿಗಳೊಡನೆ ಆತನು ಚೀನಾ ದೇಶದಿಂದ 399ರಲ್ಲಿ ಹೊರಟನು. ಆರು ವರ್ಷಕಾಲ ಸಂಚಾರಮಾಡಿ ತಕ್ಷಶಿಲೆಯನ್ನು ತಲಪಿ ಆನಂದಪಟ್ಟನು. ಅಲ್ಲಿಂದ ಹೊರಟು ಗಾಂಧಾರ, ಉದ್ಯಾನ ಪ್ರಾಂತಗಳಲ್ಲಿದ್ದ ವಿಹಾರಸ್ತೂಪಗಳನ್ನು ನೋಡಿಕೊಂಡು ಮಧುರಾ, ಕನ್ಯಾಕುಬ್ಜ, ಶ್ರಾವಸ್ತಿ, ಸಾರನಾಥ, ಕಪಿಲವಸ್ತು, ವೈಶಾಲಿ, ಪಾಟಲಿಪುತ್ರ, ರಾಜಗೃಹ, ಗಯಾ, ವಾರಣಾಸಿಗಳನ್ನು ನೋಡುತ್ತ ತಾಮ್ರಲಿಪ್ತಿ ಪಟ್ಟಣವನ್ನು ಸೇರಿದನು. ಅಲ್ಲಿಂದ ಹಡಗುಗಳು ಸಿಂಹಳ ದ್ವೀಪಕ್ಕೂ ಜವದ್ವೀಪದ ಮಾರ್ಗವಾಗಿ ಚೀನಾ ದೇಶಕ್ಕೂ ಕ್ರಮವಾಗಿ ಹೊರಡುತ್ತಿದ್ದವು. ವಿನಯಪಿಟಕದ ಮೂಲ ಪ್ರತಿಯು ಸಿಂಹಳ ದ್ವೀಪದಲ್ಲಿ ಲಭ್ಯವೆಂದು ಕೇಳಿದ ಫಾಹಿಯನ್ನನು ಸಿಂಹಳ ದ್ವೀಪಕ್ಕೆ ಹಡಗಿನ ಪ್ರಯಾಣ ಮಾಡಿದನು. ಅಲ್ಲಿ ದೊರೆತ ಗ್ರಂಥಗಳನ್ನು ಶೇಖರಿಸಿಕೊಂಡು ಪುನಃ ಹಡಗನ್ನು ಹತ್ತಿ ಜವದ್ವೀಪಕ್ಕೂ ಅಲ್ಲಿಂದ ಚೀನಾ ದೇಶಕ್ಕೂ ಪ್ರಯಾಣ ಮಾಡಿದನು. **ಕ್ಯಾಂಟನ್** ನಗರವನ್ನು 414ರಲ್ಲಿ ಸುಖವಾಗಿ ತಲಪಿದನು. ದೇಶವನ್ನು ಬಿಟ್ಟು 15 ವರ್ಷಗಳು ಕಳೆದಿದ್ದವು; ಅವುಗಳಲ್ಲಿ ಏಳೆಂಟು ವರ್ಷಗಳನ್ನು ಪುಣ್ಯಭೂಮಿಯಲ್ಲಿಯೇ ಆತನು ಕಳೆದಿದ್ದನು. ತನ್ನ ವಿಹಾರವನ್ನು ಸೇರಿದ ಮೇಲೆ ಫಾಹಿಯನ್ನನೂ ಆತನ ಜತೆಗಾರರೂ ತಮ್ಮ ಪ್ರಯಾಣದ ವರದಿಯನ್ನು ಸಂಕ್ಷೇಪವಾಗಿ ಬರೆದು ತಮ್ಮ ಗುರುಗಳಿಗೊಪ್ಪಿಸಿದರು. ಆ ವರದಿಯಲ್ಲಿ ಸಂದರ್ಭವಶಾತ್ ನಮ್ಮ ದೇಶದ ಸ್ಥಿತಿಗತಿಗಳ ವಿವರವು ಅಲ್ಲಲ್ಲಿ ಕಾಣುವುದು. ಸ್ವರ್ಣಕಾಲದ ವರ್ಣನೆಗೆ ಆ ವಿವರವು

ಅತ್ಯಂತ ಉಪಯುಕ್ತವಾದುದು ; ವಿದೇಶೀ ಯಾತ್ರಿಕನ ವಿವರವಾದುದರಿಂದ ಅದು ನಿಷ್ಪಕ್ಷಪಾತವಾದುದೆನಿಸಿ ಪ್ರಮಾಣತಮವಾಗಿದೆ. ಅದರ ಉಪಯುಕ್ತತೆಯ ದೆಸೆಯಿಂದ ಫಾಹಿಯನ್ನನು ಪ್ರಸಿದ್ಧನಾಗಿದ್ದಾನೆ.

**ಫಾಹಿಯನ್ನನ ವಿವರ**

ಪಾಟಲಿಪುತ್ರದಲ್ಲಿ ಮೂರು ವರ್ಷಗಳನ್ನೂ ತಾಮ್ರಲಿಪ್ತಿಯಲ್ಲಿ ಎರಡು ವರ್ಷಗಳನ್ನೂ ವ್ಯಾಸಂಗದಲ್ಲಿ ಕಳೆದ ಈ ಯಾತ್ರಿಕನು ಬೌದ್ಧ ಧರ್ಮವಿಚಾರಗಳಲ್ಲಿಯೇ ಆಸಕ್ತನಾಗಿದ್ದುದರಿಂದ ರಾಜಪುರುಷರ ಗೋಜಿಗೆ ಹೋಗಲಿಲ್ಲ. ಆತನು ಯಾತ್ರೆ ಮಾಡಿದಾಗ ಉಜ್ಜಯಿನಿಯಲ್ಲಿ ವಿಕ್ರಮಾದಿತ್ಯನು ಪಟ್ಟಭದ್ರನಾಗಿದ್ದನು. ತನ್ನ ವಿವರದಲ್ಲಿ ಗುಪ್ತ ಸಾಮ್ರಾಜ್ಯವನ್ನು ಮಧ್ಯರಾಜ್ಯವೆಂದೇ ಸೂಚಿಸುವನು. "ಅಲ್ಲಿ ಜನರು ಕ್ಷೇಮದಿಂದಲೂ ಸುಖದಿಂದಲೂ ಇದ್ದು ಅಭಿವೃದ್ಧಿ ಪಡೆಯುತ್ತಾರೆ; ಅವರು ತಮ್ಮ ಮನೆಗಳನ್ನು ಅಧಿಕಾರಿಗಳ ಕಡತಗಳಲ್ಲಿ ಬರೆಸಬೇಕಾಗಿಲ್ಲ; ಅಧಿಕಾರಿಗಳಿಗಾಗಲಿ ಅವರ ನಿಬಂಧನೆಗಳಿಗಾಗಲಿ ಹೆದರಬೇಕಾಗಿಲ್ಲ. ಭೂಮಿಯನ್ನು ವ್ಯವಸಾಯ ಮಾಡುವವರು ಮಾತ್ರ ಆದಾಯದಲ್ಲಿ ಒಂದು ಪಾಲನ್ನು ತೆರಬೇಕಾಗಿರುವುದು. ಜನರು ಹೋಗುವ ಇಷ್ಟ ಬಂದಾಗ ಎಲ್ಲಿಗೆ ಬೇಕಾದರೂ ಹೊರಡುವರು ; ಇರುವುದು ಇಷ್ಟವಾದರೆ ಅಲ್ಲಿಯೇ ಇರುವರು. ಅವರಿಗೆ ಯಾವ ಆತಂಕವೂ ಇರುವುದಿಲ್ಲ.

**ಆಡಳಿತ**

ಮರಣ ದಂಡನೆಯೆಂಬುದೇ ಇಲ್ಲದೆ ದೇಹಖಂಡನೆಯನ್ನೂ ಮಾಡಿಸದೆ ಅಲ್ಲಿಯ ಪ್ರಭುವು ಆಳುತ್ತಾನೆ. ಅಪರಾಧಕ್ಕೆ ತಕ್ಕಂತೆ ಅಲ್ಪವಾಗಿಯೋ ಹೆಚ್ಚಾಗಿಯೋ ದಂಡದ ಹಣವನ್ನು ಮಾತ್ರ ವಿಧಿಸುತ್ತಾನೆ. ದುಷ್ಟರೆಂದು ಹೆಸರಾಗಿ ಪದೇ ಪದೇ ಕಂಟಕರಾದವರ ಬಲಗೈಗಳನ್ನು ಮಾತ್ರ ಛೇದಿಸುತ್ತಾರೆ. ರಾಜನ ಅಂಗರಕ್ಷಕರಿಗೂ ಪರಿವಾರದವರಿಗೂ ನಿಯಮಿತವಾದ ಸಂಬಳಗಳು ಸಲ್ಲುತ್ತವೆ.

ದೇಶದಲ್ಲಿ ಎಲ್ಲಿಯೂ ಜನರು ಜೀವವುಳ್ಳ ಪ್ರಾಣಿಮಾತ್ರವನ್ನು ಕೊಲ್ಲುವುದಿಲ್ಲ ; ಮಾದಕರಸಗಳನ್ನು ಪಾನಮಾಡುವುದಿಲ್ಲ; ಈರುಳ್ಳಿಯನ್ನಾಗಲಿ ಬೆಳ್ಳುಳ್ಳಿಯನ್ನಾಗಲಿ ಭಕ್ಷಿಸುವುದಿಲ್ಲ; ಇದಕ್ಕೆ ತಪ್ಪಿ

ನಡೆಯುವವರು ಚಂಡಾಲರೊಬ್ಬರೇ. ಕ್ಷುದ್ರರೂ ಬಾಹಿರರೂ ಎನಿಸಿ ಇತರರಿಂದ ದೂರವಾಗಿ ವಾಸಮಾಡುವವರಿಗೆ ಆ ಹೆಸರು ಸಲ್ಲುತ್ತದೆ. ಅವರು ಪಟ್ಟಣವನ್ನಾಗಲಿ ಪೇಟೆಯನ್ನಾಗಲಿ ಸಮೀಪಿಸಿದಾಗ ಮರದ ಹಲಿಗೆಗಳೆರಡನ್ನು ಹಿಡಿದು ಶಬ್ದಮಾಡುತ್ತ ಬರುವರು. ಆ ಶಬ್ದವನ್ನು ಕೇಳಿದೊಡನೆಯೇ ಇತರರು ದೂರವಾಗಿ ಸರಿಯುವರು. ದೇಶದಲ್ಲಿ ಹಂದಿಗಳನ್ನಾಗಲಿ ಕೋಳಿಗಳನ್ನಾಗಲಿ ಸಾಕುವುದಿಲ್ಲ; ಜೀವ ಸಹಿತವಾದ ದನಗಳನ್ನು ಮಾರುವುದಿಲ್ಲ. ಪೇಟೆಗಳಲ್ಲಿ ಕಟುಕರ ಅಂಗಡಿಗಳೂ ಇಲ್ಲ; ಮದ್ಯದ ಅಂಗಡಿಗಳೂ ಇಲ್ಲ. ಚಂಡಾಲರು ಮಾತ್ರ ಮೀನನ್ನು ಹಿಡಿಯುವುದರಲ್ಲಿಯೂ ಬೇಟೆಯಾಡಿ ಮಾಂಸವನ್ನು ಉಪಯೋಗಿಸುವುದರಲ್ಲಿಯೂ ಆಸಕ್ತರಾಗಿರುತ್ತಾರೆ.''

ಜನಜೀವನ

ಪ್ರಯಾಣಿಕರಿಗಿದ್ದ ಸೌಕರ್ಯಗಳನ್ನು ಕಂಡು ಫಾಹಿಯನ್ನನು ಮುಗ್ಧನಾದನು. ಸತ್ರಗಳೂ ಉಚಿತವಾಗಿ ಜನಸೇವೆ ಮಾಡುತ್ತಿದ್ದ ಚಿಕಿತ್ಸಾಲಯಗಳೂ ಯಥೇಚ್ಛವಾಗಿದ್ದವು. ಒಂಭತ್ತು ವರ್ಷಕಾಲ ಊರಿಂದೂರಿಗೆ ಸಂಚಾರಮಾಡಿದಾಗ್ಯೂ ಯಾತ್ರಿಕರಿಗೆ ಒಂದು ತಡವೆಯಾದರೂ ಕಳ್ಳರ ಸುಳಿವೇ ತೋರಲಿಲ್ಲ. ಮಗಧ ದೇಶದಲ್ಲಿ ಬೌದ್ಧ ಪಂಡಿತರ ಘನವಾದ ಪಾಂಡಿತ್ಯವನ್ನೂ ನಿಷ್ಠೆಯನ್ನೂ ಕಂಡು ಫಾಹಿಯನ್ನನು ಮೆಚ್ಚಿಕೊಂಡನು. ದೇಶದಲ್ಲೆಲ್ಲಿಯೂ ಕ್ಷೇಮ ಸಮೃದ್ಧಿಗಳು ನೆಲೆಯಾಗಿದ್ದವು; ಜನರಲ್ಲಿ ಶಾಂತಿ ಸುಖಗಳೊಡನೆ ಆದರಾತಿಥ್ಯವೂ ಉದಾರತೆಯೂ ತಾಳ್ಮೆಯೂ ಸಹಜ ಗುಣಗಳೆನಿಸಿ ಎಲ್ಲರಲ್ಲಿಯೂ ಸಾಮಾನ್ಯ ಗುಣಗಳಾಗಿ ನೆಲೆಸಿದ್ದವು. ಬ್ರಾಹ್ಮಣ ವಿದ್ವಾಂಸರು ಬೌದ್ಧ ತತ್ವಗಳನ್ನು ಉಪದೇಶಮಾಡುತ್ತಿದ್ದರು; ಒಂದೇ ವಿಹಾರದಲ್ಲಿ ಭಿನ್ನ ಭಿನ್ನ ತತ್ತ್ವೋಪಾಸಕರು ಪರಸ್ಪರ ಸೌಹಾರ್ದದಿಂದ ಇರುತ್ತಿದ್ದರು. ಆಡಳಿತವು ಸಮರ್ಥವಾದುದಾಗಿಯೂ ಉದಾರವಾದುದಾಗಿಯೂ ಇತ್ತು; ತೆರಿಗೆಗಳು ನ್ಯಾಯ ಸಮ್ಮತವಾಗಿಯೂ ಹಗುರವಾಗಿಯೂ ಇದ್ದವು; ದುಷ್ಟರು ಅಲ್ಪರಾಗಿದ್ದರು; ಶಿಕ್ಷೆಯು ಕೃಪಾಪೂರಿತವಾಗಿ ಲಘುವಾಗಿತ್ತು.

ಸುಖಶಾಂತಿಗಳು

ದೇಶದಲ್ಲಿ ಅನೇಕಾನೇಕ ವಿಹಾರಗಳಿದ್ದವು. ಉನ್ನತವಾದ ಕಟ್ಟಡಗಳುಳ್ಳ ಅವುಗಳು ರಮ್ಯವಾದ ಉದ್ಯಾನಗಳಿಂದಲೂ, ಫಲಪುಷ್ಪಭರಿತಗಳಾದ ತರುಲತಾದಿಗಳಿಂದಲೂ, ತಾವರೆಗಳಿಂದ ಶೋಭಿಸುತ್ತಿದ್ದ ಕಾಸಾರಗಳಿಂದಲೂ ಮನೋಹರಗಳಾಗಿ ಕಂಗೊಳಿಸುತ್ತಿದ್ದವು. ಕಪಿಲವಸ್ತು ಮತ್ತು ಗಯಾ ಕ್ಷೇತ್ರಗಳು ಪಾವನತಮಗಳಾದಾಗ್ಯೂ ಅವುಗಳಲ್ಲಿ ಜನಬಾಹುಳ್ಯವಿರಲಿಲ್ಲ. ಅಲ್ಲಲ್ಲಿ ಬೌದ್ಧಮತದ ಕ್ಷೀಣತೆಯ ಕುರುಹುಗಳು ಕಾಣುತ್ತಿದ್ದವು. ಪಾಟಲಿಪುತ್ರವನ್ನು ಬಿಟ್ಟು ಅಯೋಧ್ಯೆ, ಕೌಶಾಂಬಿ, ಉಜ್ಜಯಿನೀ ನಗರಗಳನ್ನು ರಾಜಧಾನಿಗಳನ್ನಾಗಿ ಗುಪ್ತಚಕ್ರವರ್ತಿಗಳು ನೆರವೇರಿಸಿಕೊಂಡಿದ್ದುದೂ ಪಾಟಲಿಪುತ್ರದ ಕ್ಷೀಣತೆಯನ್ನು ಸೂಚಿಸುತ್ತದೆ.

ಬೌದ್ಧರು

## ಇತರ ರಾಜವಂಶಗಳು

ಹೂಣಜನರ ಹಾವಳಿಯ ದೆಸೆಯಿಂದ ಗುಪ್ತಸಾಮ್ರಾಜ್ಯವು ಕ್ಷಯವಾಯಿತು. ಗಂಗಾನದಿಯ ಮುಖಭಾಗದಲ್ಲಿ **ಸಮತಟ**ದೇಶವೂ, ಅದರ ಈಶಾನ್ಯದಲ್ಲಿ **ದವಾಕ ಕಾಮರೂಪಗಳೂ,** ವಾಯುವ್ಯದಲ್ಲಿ **ನೇಪಾಲ ಕರ್ತೃಪುರಗಳೂ** ಬೇರೆಬೇರೆಯಾದವು. ಪಂಚನದ ಪ್ರದೇಶದಲ್ಲಿಯೂ ರಾಜಪುತ್ರಸ್ಥಾನದಲ್ಲಿಯೂ **ಯೌಧೇಯ, ಮದ್ರಕ, ಮಾಳವ, ಅರ್ಜುನಾಯನ, ಆಭೀರ** ಮೊದಲಾದ ಗಣಗಳು ಗುಪ್ತಚಕ್ರವರ್ತಿಗಳಿಗೆ ಪೊಗದಿ ಕೊಡುತ್ತಲಿದ್ದವು. ಸ್ಕಂದಗುಪ್ತನ ತರುವಾಯ ಇವರೇ ಹೂಣರೊಡನೆ ಹೆಚ್ಚಾಗಿ ಹೆಣಗಾಡಬೇಕಾಗಿತ್ತು. ಹೂಣರ ಪ್ರಾಬಲ್ಯವು ಬಹುಕಾಲ ನಡೆಯದೆ 528ರಲ್ಲಿ ಧ್ವಂಸವಾದ ತರುವಾಯ ಹೂಣರು ಶಾಂತರಾಗಿ ಅಲ್ಲಲ್ಲಿ ನೆಲೆಸಿದರು. ಕೆಲವರು ಮಾತ್ರ ಇನ್ನೂ ಧೀರರಾಗಿ ಸಣ್ಣ ರಾಜ್ಯಗಳನ್ನು ಕಟ್ಟಿಕೊಂಡಿದ್ದರು. ಭರತವರ್ಷದ ಹೊರಗಡೆ ಹೂಣರ ವಿರೋಧಿಗಳಾಗಿದ್ದ ತುರುಷ್ಕರು ಪಾರ್ಸೀಸ್ಥಾನದ **ಖುಸ್ರೂ ಅನೂಷೀರ್ವಾನ**ನೆಂಬ ಪ್ರಖ್ಯಾತನಾದ ಪ್ರಭುವಿನ ಸಹಾಯದಿಂದ ಹೂಣಜನರನ್ನು ಧ್ವಂಸಮಾಡಿದರು. ಹೂಣಜನರು ಈ ರೀತಿ ಶಕ್ತಿ ನೀಗಿಕೊಂಡ

ರಾಜ್ಯಗಳು

ಮೇಲೂ ಗುಪ್ತ ಸಾಮ್ರಾಜ್ಯವು ಪೂರ್ವದ ಚೈತನ್ಯವನ್ನು ಪಡೆಯ ಲಾಯಿತು.

ಪ್ರಕಟಾದಿತ್ಯನು ಪಟ್ಟವನ್ನೇರಿದ ವೇಳೆಗೇ ಗುಪ್ತವಂಶಜರ ಸಾಮ್ರಾಜ್ಯ ಪದವಿಯು ನಷ್ಟವಾಗಿದ್ದಿತು.

ಯಶೋಧರ್ಮ

ಮಿಹಿರಗುಲನನ್ನು ಸೋಲಿಸಿದ **ಯಶೋಧರ್ಮ ರಾಜನೇ** ಆ ತರುವಾಯ ಪ್ರಬಲನಾದಾತನು. **ವಿಷ್ಣುವರ್ಧನನೆಂದೂ ವಿಕ್ರಮಾದಿತ್ಯನೆಂದೂ** ಹೆಸರಾದ ಆತನು ಯಮುನಾ ನದಿಯ ಪ್ರದೇಶದಲ್ಲಿ ಆಳುತ್ತಿದ್ದು ಆರ್ಯಾವರ್ತದಲ್ಲಿ ಹೂಣರ ಹಾವಳಿಯನ್ನು ಕೊನೆಗಾಣಿಸಿದನು. ಆತನು ಶೂರನಾಗಿಯೂ ಧರ್ಮಿಷ್ಠ ನಾಗಿಯೂ ಆಳಿದುದರಿಂದ ಸಾಮ್ರಾಜ್ಯ ಪದವಿಯು ಗುಪ್ತವಂಶದವರ ತರುವಾಯ ಆತನಿಗೇ ಸಂದಿತೆಂದು ದೃಢವಾಗಿದೆ. ಆತನ ವಂಶದವರು ಎಲ್ಲಿ ರಾಜ್ಯವಾಳುತ್ತಿದ್ದರೋ ಸ್ಪಷ್ಟವಾಗಿ ತಿಳಿದಿಲ್ಲ.

ಪಾಂಚಾಲ

ಸಾಮ್ರಾಜ್ಯ ಪದವಿಯು ಯಶೋಧರ್ಮನ ತರುವಾಯ ಪಾಂಚಾಲ ದೇಶದಲ್ಲಿ ಕನ್ಯಾಕುಬ್ಜವನ್ನು ರಾಜಧಾನಿಯನ್ನಾಗಿ ನೆರವೇರಿಸಿಕೊಂಡು ಆಳಿದ **ಮೌಖರೀವಂಶ** ದವರಿಗೆ ಸೇರಿತು. ಆ ವಂಶದಲ್ಲಿ **ಈಶಾನವರ್ಮ** ನೆಂಬಾತನು ಪ್ರಸಿದ್ಧನಾಗಿ ಹೂಣರನ್ನೂ ಗುಪ್ತವಂಶದವರನ್ನೂ ಸೋಲಿಸಿ ಪ್ರಾಚೀನಕಾಲದ ಮಧ್ಯದೇಶವೆಲ್ಲಕ್ಕೂ ಅಧಿಪತಿಯೆನಿಸಿದನು. ಗುಪ್ತವಂಶದ ಶಾಖೆಯವರು ಕಾಶಿಗೆ ಮೂಡಲಲ್ಲಿ ಆಳುತ್ತಲೇ ಇದ್ದು ಮೌಖರೀವಂಶದವ ರೊಡನೆ ಸ್ಪರ್ಧಿಸುತ್ತಲಿದ್ದರು. ಗುಪ್ತವಂಶದವರು **ಗೌಡದೇಶದಲ್ಲಿ** ಪ್ರಬಲರಾಗಿ ಮೌಖರೀ ಕುಲದವರನ್ನು ಸೋಲಿಸುವವರಾಗಲು ಮೌಖರೀ ಕುಲಸ್ಥರಿಗೂ ಸಾಮ್ರಾಜ್ಯ ಪದವಿಯು ಸ್ಥಿರವಾಗಿ ನಿಲ್ಲದಾಯಿತು.

ವಲ್ಲಭಿ

ಪಾಂಚಾಲದಲ್ಲಿ ಮೌಖರೀ ಕುಲಸ್ಥರು ಪ್ರಬಲರಾದ ಕಾಲದಲ್ಲಿಯೇ ಸೌರಾಷ್ಟ್ರದಲ್ಲಿ ಪ್ರಸಿದ್ಧಿಗೇರಿದ ಮತ್ತೊಂದು ರಾಜವಂಶವು ನಡೆಯುತ್ತಿತ್ತು. ಸ್ಕಂದಗುಪ್ತ ಚಕ್ರವರ್ತಿಯ ದಳಪತಿಯಾಗಿದ್ದ **ಭಟ್ಟಾರಕ** ನೆಂಬಾತನೇ ಪ್ರಾಯಶಃ ಆ ಪ್ರಾಂತದಲ್ಲಿ ತನ್ನ ವಂಶವನ್ನು ಸ್ಥಾಪಿಸಿ

**ವಲ್ಲಭಿ**ಯೆಂಬ ರಾಜಧಾನಿಯನ್ನು ಕಟ್ಟಿದನು (ಸು. 490). ಈ ವಂಶವೇ **ಮೈತ್ರಕವಂಶ**ವೆಂಬ ಹೆಸರನ್ನು ಪಡೆಯಿತು. ಅವರ ಆಳ್ವಿಕೆಯಲ್ಲಿ ವಲ್ಲಭಿ ನಗರಿಯು ವಿದ್ವಾಂಸರಿಗೆ ಆಶ್ರಯವಾಗಿ ಪ್ರಖ್ಯಾತವಾಯಿತು. ಮೂಡಲಲ್ಲಿ ನಾಲಂದಾನಿಲಯವು ಬೌದ್ಧರಿಗೆ ವಿದ್ಯಾಕ್ಷೇತ್ರವಾಗಿದ್ದಂತೆ ವಲ್ಲಭಿಯು ಪಡುವಲಲ್ಲಿ ಜೈನರಿಗೆ ಕ್ಷೇತ್ರವಾಯಿತು. ರಾಜಪುತ್ರ ಕುಲಗಳಲ್ಲಿ ಅಗ್ರಗಣ್ಯವಾಗಿರುವ ಶಿಶೋದಿಯ ಅಥವಾ ಘೇಲತ ವಂಶವು ಮೈತ್ರಕ ಸಂಬಂಧವುಳ್ಳುದೆಂದು ಅನುಮಾನವುಂಟು. ಸೌರಾಷ್ಟ್ರದ ನೆರೆಯಲ್ಲಿ ಭರುಕಚ್ಛ ಪ್ರದೇಶದಲ್ಲಿ ಈ ಕಾಲದಲ್ಲಿಯೇ **ಗೂರ್ಜರ**ರೆಂಬ ಜನರು ನೆಲೆಸಿದರು; ಹೂಣರ ಹಿಂದೆಯೇ ಆ ಪಂಗಡದವರು ಬಂದವರೆಂದು ಅನುಮಾನವುಂಟು. ಗೂರ್ಜರ ರಾಷ್ಟ್ರ ಅಥವಾ ಗುಜರಾಥವೆಂಬ ಹೆಸರು ಅವರಿಂದಲೇ ಬಂದುದು. ರಾಜಪುತ್ರಸ್ಥಾನದಲ್ಲಿಯೂ **ಭಿನ್ಮಾಲ**ವೆಂಬಲ್ಲಿ ಗೂರ್ಜರರು ಒಂದು ಸಣ್ಣ ರಾಜ್ಯವನ್ನು ಪ್ರಾರಂಭಿಸಿದರು.

ಸ್ಥಾನೇಶ್ವರ

ಮೌಖರೀ ಕುಲದವರು ಕಳೆದುಕೊಂಡ ಸಾಮ್ರಾಜ್ಯ ಪದವಿಯು **ಸ್ಥಾನೇಶ್ವರ**ವೆಂಬಲ್ಲಿ ಸಿದ್ಧವಾಗಿದ್ದ ರಾಜ್ಯಕ್ಕೆ ಸೇರುವಂತಾಯಿತು. ಪ್ರಸಿದ್ಧ ಯಶೋಧರ್ಮನ ತರುವಾಯ ಆತನ ವಂಶದಲ್ಲಿ ಹುಟ್ಟಿ **ಆದಿತ್ಯವರ್ಧನ**ನೆಂಬಾತನು ಸ್ಥಾನೇಶ್ವರದರಸಾಗಿದ್ದು ಗುಪ್ತವಂಶದ ಕುಮಾರಿಯೊಬ್ಬಾಕೆಯನ್ನು ವಿವಾಹವಾದನು. ಆತನ ಮಗ **ಪ್ರಭಾಕರವರ್ಧನ**ನೆಂಬಾತನ ಕಾಲದಲ್ಲಿ ಈ ರಾಜ್ಯವು ಬಲಗೊಂಡಿತು. ಹೂಣರು, ಗೂರ್ಜರರು ಮುಂತಾದ ಜನರ ತೊಂದರೆಯು ಕಡಿಮೆಯಾಯಿತು. ಪ್ರಭಾಕರವರ್ಧನನಿಗೆ **ರಾಜ್ಯವರ್ಧನ, ಹರ್ಷವರ್ಧನ**ರೆಂಬ ಇಬ್ಬರು ಪುತ್ರರೂ ರಾಜ್ಯಶ್ರೀಯೆಂಬ ಕುವರಿಯೂ ಇದ್ದರು. **ರಾಜ್ಯಶ್ರೀ**ಯನ್ನು ಮೌಖರೀ ವಂಶದ **ಗೃಹವರ್ಮ**ನೆಂಬಾತನು ಮದುವೆಯಾಗಿದ್ದನು.

ಕ್ರಿ. ಶ. 606ರಲ್ಲಿ ರಾಜ್ಯವರ್ಧನ ಹರ್ಷವರ್ಧನರು ಸೈನ್ಯದೊಡನೆ ಪರ್ವತ ಪ್ರಾಂತಗಳಲ್ಲಿ ಸೇರಿಕೊಂಡಿದ್ದ ಅಸಭ್ಯ ಕುಲಸ್ಥರನ್ನು ಅಡಗಿಸಲು ಹೊರಟಿದ್ದ ವೇಳೆಯಲ್ಲಿ ಪ್ರಭಾಕರವರ್ಧನನು ವ್ಯಾಧಿಗ್ರಸ್ತನಾಗಿ ಅಕಾಲ ಮರಣವನ್ನು ಪಡೆದನು. ರಾಜ್ಯಶ್ರೀಯು ಕನ್ಯಾಕುಬ್ಜದಲ್ಲಿದ್ದಳು. ಸಮಾಚಾರ

ವನ್ನು ಕೇಳಿದೊಡನೆಯೇ ಜ್ಯೇಷ್ಠಪುತ್ರನಾದ ರಾಜ್ಯವರ್ಧನನು ರಾಜಧಾನಿಗೆ ಬಂದು ತಂದೆಗೆ ಉತ್ತರಕ್ರಿಯೆಗಳನ್ನು ಮಾಡಿದನು. ಆತನ ತಾಯಿಯು ಸಹಗಮನವನ್ನು ನೆರವೇರಿಸಿದಳು. ಇಂತಹ ದುಃಖ ಸಮಯದಲ್ಲಿ ಗುಪ್ತ ವಂಶದವನಾದ **ದೇವೀಸಿಂಹ**ನೆಂಬ ಮಾಳವ ರಾಜನು ಮೌಖರೀ ವಂಶಸ್ಥರಲ್ಲಿ ಹಿಂದಿನಿಂದಲೂ ನಡೆದುಬಂದಿದ್ದ ಹಗೆತನದಿಂದ ಗೃಹವರ್ಮನನ್ನು ವಧೆಮಾಡಿಸಿ ರಾಜ್ಯಶ್ರೀಯನ್ನು ಸೆರೆಮಾಡಿ ಒಯ್ದನೆಂಬ ವಾರ್ತೆಯು ಬಂದಿತು. ರಾಜ್ಯವರ್ಧನನು ಅಭಿಷಿಕ್ತನಾಗುವುದಕ್ಕೆ ಮೊದಲೇ ತಂಗಿಯ ಪಕ್ಷವನ್ನು ಹಿಡಿದು ಮಾಳವ ರಾಜನನ್ನು ನಿಗ್ರಹಿಸಲು ಹೊರಟನು. ಈಗ ಬಂಗಾಳವೆನಿಸಿರುವ ಭಾಗದಲ್ಲಿ **ಕರ್ಣಸುವರ್ಣ**ವೆಂಬ ರಾಜ್ಯಕಟ್ಟಿಕೊಂಡು ಪ್ರಬಲನಾಗಿ **ಶಶಾಂಕ** ಅಥವಾ **ನರೇಂದ್ರಗುಪ್ತ**ನೆಂದು ಹೆಸರಾಗಿದ್ದಾತನು ರಾಜ್ಯವರ್ಧನನಿಗೆ ನೆರವಾದನು. ಇಬ್ಬರೂ ಸೇರಿ ಮಾಳವರಾಜನನ್ನು ಸೋಲಿಸಿ ನಿಗ್ರಹಿಸಿದರು. ರಾಜ್ಯಶ್ರೀಯನ್ನು ಹುಡುಕಿ ಬಿಡಿಸುವ ಮೊದಲೇ ಏನೋ ಕಾರಣದಿಂದ ಶಶಾಂಕರಾಜನು ಕಪಟದಿಂದ ರಾಜ್ಯವರ್ಧನನನ್ನು ಕೊಲ್ಲಿಸಿದನು. ರಾಜ್ಯಶ್ರೀಯು ಗತಿತೋರದೆ ಸೆರೆಯಿಂದ ಓಡಿಹೋಗಿ ಎಲ್ಲಿಯೋ ವಿಪಿನ ಪ್ರಾಂತಗಳಲ್ಲಿ ಅಲೆಯುತ್ತಿದ್ದಳು.

ರಾಜ್ಯವರ್ಧನ

## ಹರ್ಷವರ್ಧನ

ಇಂತಹ ದುಃಖಾತಿಶಯದ ಸಮಯದಲ್ಲಿ ಹರ್ಷವರ್ಧನನು ಇನ್ನೂ ಹದಿನಾರು ವರ್ಷದವನಾಗಿದ್ದಾಗಲೇ ರಾಜ್ಯಭಾರವನ್ನು ವಹಿಸಬೇಕಾಯಿತು. ಇನ್ನೂ ತರುಣನೆಂದು ಕೆಲವರು ರಾಜಬಂಧುಗಳೂ ಮಂತ್ರಿಸಾಮಂತರೂ ಆಕ್ಷೇಪಿಸಿದರು. ಬಲಿಷ್ಠನಾಗಿದ್ದ **ಭಾಣ್ಡಿರಾಜ**ನೆಂಬ ರಾಜಬಂಧುವು ಹರ್ಷನಿಗೇ ಅಭಿಷೇಕವಾಗಬೇಕೆಂದು ವಾದಿಸಿದನು. ಆತನ ಸಹಾಯದಿಂದ ಹರ್ಷನು 606–7 ರಲ್ಲಿಯೇ ರಾಜ್ಯಾಧಿಕಾರಿಯಾದನು. ಮೊದಲು ರಾಜ್ಯಶ್ರೀಯನ್ನು ಹುಡುಕಿ ಸುರಕ್ಷಿತವಾಗಿ ಕರೆದುಕೊಂಡು ಬರಬೇಕಾಗಿತ್ತು; ಅನಂತರ ಶಶಾಂಕರಾಜನನ್ನು ಶಿಕ್ಷಿಸಬೇಕಾಗಿತ್ತು. ವಿಂಧ್ಯಪರ್ವತ

ಹರ್ಷನ ಪಟ್ಟ

ಪ್ರಾಂತದ ಅರಣ್ಯದಲ್ಲಿ ರಾಜ್ಯಶ್ರೀಯು ತಪ್ಪಿಸಿಕೊಂಡು ಸಂಚರಿಸುತ್ತ ಕಡೆಗೆ ನಿರಾಶೆಪಟ್ಟವಳಾಗಿ ಅಗ್ನಿಪ್ರವೇಶಮಾಡುವುದೇ ಗತಿಯೆಂದು ಚಿತಿಯನ್ನು ಸಿದ್ಧಗೊಳಿಸಿಕೊಂಡಿದ್ದಳು. ಆ ಸಮಯದಲ್ಲಿಯೇ ಹರ್ಷನು ಆಕೆಯನ್ನು ಕಂಡು ಸಂತೈಸಿ ರಾಜಧಾನಿಗೆ ಕರೆದುಕೊಂಡು ಬಂದನು. ಕನ್ಯಾಕುಬ್ಜವು ಆಕೆಯದೇ ಆಗಿತ್ತು; ಹರ್ಷನೂ ರಾಜ್ಯಶ್ರೀಯೂ ಇಬ್ಬರೂ ಒಟ್ಟಾಗಿದ್ದು ಕೊಂಡು ವಿಸ್ತಾರಪಡೆದ ರಾಜ್ಯವನ್ನು ಆಳಲು ಮೊದಲಿಟ್ಟರು.

ರಾಜ್ಯಶ್ರೀ

ರಾಜ್ಯಶ್ರೀಯು ಸುರಕ್ಷಿತೆಯಾದ ಕೂಡಲೆ ಹರ್ಷನು ಶಶಾಂಕರಾಜನನ್ನು ದಂಡಿಸಲು ಸೈನ್ಯಗೂಡಿ ಹೊರಟನು. ಶಶಾಂಕನು ಸನಾತನ ಧರ್ಮವನ್ನವಲಂಬಿಸುತ್ತ ಬ್ರಾಹ್ಮಣ ಗುರುಗಳನ್ನು ಗೌರವಿಸುತ್ತಿದ್ದನು. ಗೌಡ ದೇಶದ ಗುಪ್ತವಂಶಜರು ದುರ್ಬಲರಾಗಿದ್ದುದೇ ಆತನ ಸಾಹಸಕ್ಕೆ ಆಸ್ಪದವನ್ನು ಒದಗಿಸಿತ್ತು. ಪುಂಡ್ರವರ್ಧನವೆಂಬೆಡೆಯ ಹೊರಗೆ ಹರ್ಷನಿಗೂ ಶಶಾಂಕನಿಗೂ ಯುದ್ಧವು ನಡೆಯಿತು. ಶಶಾಂಕನು ಸೋತನು; ಆದರೂ ಸಮರ್ಥನಾಗಿಯೇ ಇದ್ದನು. ಹರ್ಷನು ತನ್ನ ಶ್ರೇಷ್ಠತೆಯನ್ನು ಮಾತ್ರ ನೆಲೆಗೊಳಿಸಿ ಪುಂಡ್ರವರ್ಧನ (ವಂಗದೇಶ) ಪ್ರಾಂತವನ್ನು ಬಿಟ್ಟು ಹೊರಡಬಾರದೆಂಬ ಕಟ್ಟಳೆಯನ್ನು ಮಾತ್ರ ಶಶಾಂಕನಿಗೆ ವಿಧಿಸಿ ತೃಪ್ತನಾದನು. ಶಶಾಂಕನು ವಂಗದೇಶದಲ್ಲಿ ಪ್ರಬಲನಾಗಿಯೇ ಆಳಿದನು. ಬೌದ್ಧಮತಸ್ಥರು ಮಿಹಿರಗುಲನನ್ನೂ ಶಶಾಂಕನನ್ನೂ ಒಂದು ರಾಶಿಯೆಂದು ಎಣಿಸಿದ್ದಾರೆ. ಮಿಹಿರಗುಲನು ಗಾಂಧಾರದೇಶದಲ್ಲಿ ಬೌದ್ಧ ವಿಹಾರ ಮಂದಿರಗಳನ್ನು ನಾಶಗೊಳಿಸಿ ಬೌದ್ಧ ವಿರೋಧಿಯಾದಂತೆಯೇ ಶಶಾಂಕರಾಜನೂ ಕೂಡ ಮಗಧದಲ್ಲಿ ಬೌದ್ಧ ವಿಹಾರಾದಿಗಳನ್ನು ಕೆಡಿಸಿದನೆಂದು ಹೇಳುತ್ತಾರೆ. ಶಶಾಂಕರಾಜನ ಕಾಲದಲ್ಲಿ ಮಗಧ, ವಂಗದೇಶಗಳಲ್ಲಿ ಸನಾತನ ಮತಕ್ಕೆ ಸಂಬಂಧಿಸಿದ ಮಂದಿರಗಳೂ ಗ್ರಂಥಗಳೂ ಆಚರಣೆಗಳೂ ಉಜ್ಜೀವನಗೊಂಡವು. ಹರ್ಷವರ್ಧನನ ದೆಸೆಯಿಂದ ಸೋತಮೇಲೆ ಶಶಾಂಕನು ಸಾಮಂತರಾಜನಂತೆಯೇ ಇರುತ್ತಿದ್ದನು.

ಶಶಾಂಕ

ಸಾಮ್ರಾಜ್ಯ ಸ್ಥಾಪನೆ

ಹಿಂದಿನ ಕಾಲದಲ್ಲಿ ಕುರು ಪಾಂಚಾಲಗಳೆನಿಸಿದ್ದ ರಾಷ್ಟ್ರಗಳು ಹರ್ಷನಿಗೆ ಸ್ವಾಧೀನವಾಗಿದ್ದುದಲ್ಲದೆ ಪೂರ್ವ ಪ್ರಾಂತದಲ್ಲಿಯೂ ಗಂಗಾನದಿಯ ದಕ್ಷಿಣ ಪ್ರದೇಶದಲ್ಲಿಯೂ ದಂಡಯಾತ್ರೆಗಳನ್ನು ನಡೆಸಿದ್ದುದರಿಂದ ಆ ಪ್ರದೇಶಗಳೂ ಅಧೀನವಾಗಿದ್ದವು. ಶಶಾಂಕರಾಜನ ವಶ್ಯತೆಯು ಸಿದ್ಧವಾದಮೇಲೆ ಹರ್ಷನು ಆರ್ಯಾವರ್ತದಲ್ಲೆಲ್ಲ ದಂಡಯಾತ್ರೆಗೈದು ಏಕಚ್ಛತ್ರಾಧೀಶ್ವರನೆನ್ನಿಸಬೇಕೆಂಬ ಸಂಕಲ್ಪಮಾಡಿದನು. ಕನ್ಯಾಕುಬ್ಜವೇ ರಾಜಧಾನಿಯಾಯಿತು. ರಾಜ್ಯಶ್ರೀದೇವಿಯು ಆಡಳಿತವನ್ನು ನಿರ್ವಹಿಸುವುದರಲ್ಲಿ ಭಾಗಿಯಾಗಿದ್ದಳು. ಆಗ ಹರ್ಷನು ದೊಡ್ಡ ಸೈನ್ಯವನ್ನು ಸೇರಿಸಿಕೊಂಡು ಚತುರ್ದಿಕ್ಕುಗಳಲ್ಲಿಯೂ ವಿಜಯ ಯಾತ್ರೆಗಳನ್ನು ಮೂವತ್ತು ವರ್ಷಕಾಲ ನಡೆಸಿದನು. ಶತದ್ರು ನದಿಯಿಂದ ಬ್ರಹ್ಮಪುತ್ರಾ ನದಿಯವರೆಗೂ ಮತ್ತು ಹಿಮಾಚಲದಿಂದ ನರ್ಮದಾ ನದಿಯವರೆಗೂ ದಂಡಯಾತ್ರೆಗಳನ್ನು ನಡೆಸಿ ಹರ್ಷನು ಸಾಮ್ರಾಜ್ಯವನ್ನು ಕಟ್ಟಿದನು. ನೇಪಾಲ ಮುಂತಾದ ದುಸ್ಸಾಧ್ಯ ರಾಜ್ಯಗಳ ರಾಜರು ಹರ್ಷನಲ್ಲಿ ಮೈತ್ರಿಯನ್ನು ಬೆಳೆಸಿದರು; ಉಳಿದವರು ಕಪ್ಪಕಾಣಿಕೆಗಳನ್ನು ಕೊಡಲೊಪ್ಪಿ ಹರ್ಷನನ್ನು ಚಕ್ರವರ್ತಿಯೆಂದು ಗೌರವಿಸಿದರು. ಇಪ್ಪತ್ತು ರಾಜರು ಈ ರೀತಿ ಹರ್ಷನ ಸಾಮಂತರಾದರು.

ವಲ್ಲಭಿ

ವಲ್ಲಭಿಯಲ್ಲಿ ಭಟ್ಟಾರಕನಿಂದ ಸ್ಥಾಪಿತವಾಗಿದ್ದ ವಂಶದಲ್ಲಿ ಈ ಕಾಲದಲ್ಲಿ **ಧ್ರುವಸೇನ** ಅಥವಾ **ಧ್ರುವಭಟ** ನೆಂಬಾತನು ಭೂಷಣಪ್ರಾಯನಾಗಿದ್ದು ಅತಿ ಸಮರ್ಥನಾಗಿದ್ದನು. ಏಕಚಕ್ರಾಧೀಶ್ವರನಾಗುವ ಪ್ರಯತ್ನದಲ್ಲಿ ಹರ್ಷನು ಈತನನ್ನು ಸೋಲಿಸಬೇಕಾಗಿದ್ದಿತು. ಇಬ್ಬರಿಗೂ ಯುದ್ಧವು ನಡೆಯಿತೋ ಇಲ್ಲವೋ ಸಂದೇಹವಾಗಿದೆ. ಪರಿಣಾಮವಾಗಿ ಹರ್ಷಚಕ್ರವರ್ತಿಯು ತನ್ನ ಮಗಳನ್ನು ಧ್ರುವಸೇನನಿಗೆ ಮದುವೆ ಮಾಡಿಕೊಟ್ಟು ಆತನ ಸಂಬಂಧವನ್ನು ಕಟ್ಟಿದನು. ಹರ್ಷನಿಗೆ ಗಂಡುಮಕ್ಕಳಿರಲಿಲ್ಲ; ಒಬ್ಬಳೇ ಮಗಳಿದ್ದಳು. ಧ್ರುವಸೇನನು ಪ್ರಬಲನಾಗಿಯೇ ಇದ್ದು ಹರ್ಷನಿಗೆ ಸಹಾಯ ಮಾಡಿದನು.

ಹರ್ಷನ ತರುವಾಯ ಧ್ರುವಸೇನನ ಸಂತತಿಯವರೇ ಸಾಮ್ರಾಜ್ಯ ಪದವಿಗೆ ಅರ್ಹರಾದರು.

**ನರ್ಮದಾ ಸಂಧಿ**

ನರ್ಮದಾ ನದಿಯನ್ನು ದಾಟಿ ಸಮುದ್ರಗುಪ್ತ ಸಾರ್ವಭೌಮನಂತೆ ದಖನ್ನಿನ ರಾಜರನ್ನು ಗೆದ್ದು ಸಾಮ್ರಾಜ್ಯವನ್ನು ವಿಸ್ತಾರಪಡಿಸಬೇಕೆಂದು ಹರ್ಷನು ಸು. 639ರಲ್ಲಿ ನರ್ಮದಾ ನದಿಯ ತಟವನ್ನು ಸಮೀಪಿಸಿದನು. ಅದೇ ಕಾಲದಲ್ಲಿಯೇ ದಖನ್ನಿನ ಪ್ರಸ್ಥಭೂಮಿ ಭಾಗವೆಲ್ಲವನ್ನೂ ರೂಢಿಸಿಕೊಂಡು ವಿಶಾಲವಾದ ಚಾಲುಕ್ಯ ಸಾಮ್ರಾಜ್ಯವನ್ನು **ಇಮ್ಮಡಿ ಪುಲಿಕೇಶಿ**ಯೆಂಬ ಪ್ರತಾಪಶಾಲಿಯು ಆಳುತ್ತಲಿದ್ದು ಹರ್ಷನಿಗೆದುರಾಗಿ ಬಂದನು. ಉತ್ತರದ ಮತ್ತು ದಕ್ಷಿಣದ ಸಮ್ರಾಟರಿಬ್ಬರೂ ಈ ರೀತಿ ನರ್ಮದಾ ತಟದಲ್ಲಿ ಎದುರಾದುದು ಅತಿಗಂಭೀರವಾದ ದೃಶ್ಯವಾಗಿದ್ದಿರಬೇಕು. ಇಬ್ಬರೂ ಏನು ಯುದ್ಧಗಳನ್ನು ನಡೆಸಿದರೋ ತಿಳಿದಿಲ್ಲ; ಫಲಿತಾಂಶವು ಮಾತ್ರ ತಿಳಿದಿದೆ. ಫಲಿತಾಂಶವಾಗಿ ಇಬ್ಬರು ಸಮ್ರಾಟರೂ ನರ್ಮದಾ ನದಿಯನ್ನೇ ತಮ್ಮ ಸಾಮ್ರಾಜ್ಯಗಳ ಮೇರೆಯಾಗಿರತಕ್ಕುದೆಂದು ನಿಶ್ಚಯಮಾಡಿಕೊಂಡು ಪರಸ್ಪರ ಸೌಹಾರ್ದವನ್ನು ನೆಲೆಗೊಳಿಸಿಕೊಂಡರು.

**ಹರ್ಷನ ಕೀರ್ತಿ**

ಯುದ್ಧವಿದ್ಯೆಯಲ್ಲಿ ಪಂಡಿತನಾಗಿದ್ದ ಹರ್ಷನು ಇತರ ವಿದ್ಯೆಗಳಲ್ಲಿಯೂ ಪಂಡಿತನಾಗಿದ್ದನು. ಕವಿಜನರಲ್ಲಿಯೂ ವಿದ್ವಾಂಸರಲ್ಲಿಯೂ ಕಲಾನಿಪುಣರಲ್ಲಿಯೂ ಆತನಿಗೆ ಅತಿಯಾದ ವಿಶ್ವಾಸವಿದ್ದಿತು. ಸ್ವಯಂ ಕವಿಯಾಗಿ ಸಾಹಿತಿಯಾಗಿದ್ದನು. ರತ್ನಾವಲಿ, ನಾಗಾನಂದ ಮತ್ತು ಪ್ರಿಯದರ್ಶಿಕಾ ಎಂಬ ಸಂಸ್ಕೃತ ನಾಟಕಗಳು ಆತನೇ ಬರೆದವು. ಆತನ ಆಸ್ಥಾನದಲ್ಲಿ ಪ್ರಸಿದ್ಧನಾದ **ಬಾಣಕವಿ**ಯು ಇದ್ದನು. ಬಾಣಕವಿಯು ಕಾದಂಬರಿಯನ್ನಲ್ಲದೆ ಹರ್ಷಚರಿತೆಯನ್ನೂ ಬರೆದನು. ಹರ್ಷವರ್ಧನನು ಎಲ್ಲ ಮತಸ್ಥರನ್ನೂ ಸಮಾನವಾಗಿ ಆದರಿಸಿ ನಿಷ್ಪಕ್ಷಪಾತತೆಯಿಂದ ನಡೆದುಕೊಳ್ಳುತ್ತಿದ್ದುದರಿಂದ ಪ್ರತಿ ಮತಸ್ಥರೂ ತಮ್ಮ ಮತದಲ್ಲಿಯೇ ಚಕ್ರವರ್ತಿಯು ಹೆಚ್ಚು ವಿಶ್ವಾಸವುಳ್ಳವನೆಂದು ಆಡಿಕೊಳ್ಳಬಹುದಾಗಿತ್ತು. ರಾಜ್ಯಶ್ರೀದೇವಿಯ ಸಹಾಯದಿಂದ ಆಳುತ್ತ ಈ ಚಕ್ರವರ್ತಿಯು ಪದೇಪದೇ ರಾಜ್ಯದಲ್ಲಿ ಸಂಚರಿಸಿ ದುಷ್ಟರನ್ನು

ಶಿಕ್ಷಿಸುತ್ತಲೂ ವಿದ್ವಜ್ಜನರಿಗೆ ದಾನಮಾಡುತ್ತಲೂ ಇದ್ದು ಕೀರ್ತಿವಂತನಾದನು. ಪ್ರಾಯಶಃ ಈತನಿಗೆ ಹೀನಯಾನದಲ್ಲಿ ಸ್ವಲ್ಪ ಪಕ್ಷಪಾತವಿತ್ತು; ಏಕೆಂದರೆ ಈತನು ಯಜ್ಞಯಾಗಾದಿಗಳನ್ನು ನಡೆಸಲಿಲ್ಲ. ಸತ್ರಗಳನ್ನೂ ಚಿಕಿತ್ಸಾಲಯಗಳನ್ನೂ ಜಲಾಶಯಗಳನ್ನೂ ನಿರ್ಮಿಸುತ್ತ ಧರ್ಮಪ್ರಚಾರಕ್ಕೆ ವಿಶೇಷವಾದ ಪ್ರೋತ್ಸಾಹವನ್ನು ಕೊಡುತ್ತಲಿದ್ದನು.

## ಹಿಯುನ್ತ್ಸಾಂಗನ ಯಾತ್ರೆ

ಪ್ರವಾಸ

ಶಿಲಾದಿತ್ಯನೆಂದು ಪ್ರಸಿದ್ಧನಾದ ಹರ್ಷಚಕ್ರವರ್ತಿಯ ಕಾಲದಲ್ಲಿಯೇ ಚೀನಾಯಾತ್ರಿಕರಲ್ಲಿ ಅತಿಪ್ರಸಿದ್ಧನಾದ **ಯುವನ್ಚ್ವಾಂಗ**ನೆಂಬಾತನು (Hiouen Tsang—Yuan Chwang) ಭರತಭೂಮಿಯಲ್ಲಿ ಯಾತ್ರೆಗೈದನು. ತರುಣ ವಯಸ್ಸಿನಲ್ಲಿಯೇ ಸಂನ್ಯಾಸ ಸ್ವೀಕಾರಮಾಡಿದ್ದ ಈತನು ಸಂಸ್ಕೃತ ಭಾಷಾ ವ್ಯಾಸಂಗವನ್ನೂ ಬೌದ್ಧಗ್ರಂಥಗಳ ಸಂಪಾದನೆಯನ್ನೂ ಭರತಭೂಮಿಯಲ್ಲಿಯೇ ನೆರವೇರಿಸಬೇಕೆಂದು ನಿಶ್ಚಯಮಾಡಿಕೊಂಡು ಖೋಟಾನ್ ಮಾರ್ಗವಾಗಿ ಪ್ರಯಾಣಮಾಡಿ ಸು. 629ರಲ್ಲಿ ನಮ್ಮ ದೇಶದ ಸರಹದ್ದನ್ನು ಕಂಡನು. ಅಲ್ಲಿಂದ ಗಾಂಧಾರ ದೇಶದಲ್ಲಿದ್ದ ವಿಹಾರಗಳೆಲ್ಲವನ್ನೂ ಕಂಡು ತಕ್ಷಶಿಲೆ, ಮಥುರಾ, ಕನ್ಯಾಕುಬ್ಜ ನಗರಗಳನ್ನು ನೋಡಿಕೊಂಡು ಈ ಯಾತ್ರಿಕನು ಉತ್ತರದಲ್ಲಿಯೂ ದಕ್ಷಿಣದಲ್ಲಿಯೂ ಅವಿರತನಾಗಿ ಸಂಚರಿಸಿ ವಿದ್ಯಾಸ್ಥಾನಗಳನ್ನೂ ವಿಹಾರಾದಿ ಮಂದಿರಗಳನ್ನೂ ಕಂಡನು. ಈ ಬಗೆಯಲ್ಲಿ ದೇಶವನ್ನೆಲ್ಲ ಕಂಡು ವಿದ್ವಾಂಸರ ಪರಿಚಯವನ್ನು ಪಡೆದಮೇಲೆ ಯುವನ್ಚ್ವಾಂಗನು ನಾಲಂದಾನಿಲಯದಲ್ಲಿ ಯೋಗಶಾಸ್ತ್ರವನ್ನು ವ್ಯಾಸಂಗ ಮಾಡುವ ಉದ್ದೇಶದಿಂದ ಎರಡು ವರ್ಷಕಾಲ ನಿಂತನು. ಪರಮ ಪಂಡಿತನೂ ಪವಿತ್ರನೂ ಆದ ಯಾತ್ರಾರ್ಥಿಯು ದೇಶದಲ್ಲಿ ಸಂಚರಿಸುತ್ತಿರುವನೆಂಬ ಸುದ್ದಿಯು ರಾಜಪುರುಷರಿಗೂ ಕೇಳಿಸಿತು. ಹರ್ಷಚಕ್ರವರ್ತಿಯು ಅದನ್ನು ಕೇಳಿದ ಕೂಡಲೆ ತನ್ನ ಆಸ್ಥಾನಕ್ಕೆ ಬರಬೇಕೆಂದು ಯಾತ್ರಿಕನ ಬಳಿಗೆ ತನ್ನ ದೂತರನ್ನಟ್ಟಿದನು. ಅದಕ್ಕೆ ಮೊದಲೇ ಕಾಮರೂಪ ರಾಜನಾಗಿದ್ದ **ಭಾಸ್ಕರವರ್ಮ**ನೆಂಬಾತನ ದೂತರು ಯುವನ್ಚ್ವಾಂಗನನ್ನು

ಕಂಡು ತಮ್ಮ ರಾಜನ ಆತಿಥ್ಯವನ್ನು ಸ್ವೀಕರಿಸತಕ್ಕುದೆಂದು ಹೇಳಿಕೊಂಡಿದ್ದರು. ಅದಕ್ಕೊಪ್ಪಿದ್ದ ಯಾತ್ರಿಕನು ಅದನ್ನು ವಿವರಿಸಿ ತಿಳುಹಿಸಲು ಚಕ್ರವರ್ತಿಯು ಕಾಮರೂಪರಾಜನಿಗೇ ಯಾತ್ರಿಕನನ್ನು ಕರೆದುತರಬೇಕೆಂದು ಆಜ್ಞೆಮಾಡಿದನು. ಆ ರಾಜನು "ನನ್ನ ತಲೆ ಮೊದಲು ಹೋಗಲಿ. ತರುವಾಯ ನನ್ನ ಅತಿಥಿಯನ್ನು ಬಿಟ್ಟು ಕೊಡಲಾಗುವುದು" ಎನ್ನಲು ಚಕ್ರವರ್ತಿಯು "ಹಾಗೆಯೇ ಆಗಲಿ. ಮೊದಲು ನಿನ್ನ ತಲೆಯನ್ನೂ ಆ ತರುವಾಯ ಅತಿಥಿಯನ್ನೂ ಕಳುಹಿಸಬಹುದು" ಎಂದು ಉತ್ತರವಿತ್ತನಂತೆ. ಚಕ್ರವರ್ತಿಯ ಮಾತನ್ನು ಗೌರವಿಸಿ ಭಾಸ್ಕರವರ್ಮನು ಯುವಸ್ಟಂಗನನ್ನು ಕರೆದುಕೊಂಡು ಗಂಗಾನದಿಯ ಎಡದಡದಲ್ಲಿ **ಕನ್ಯಾಕುಬ್ಜಕ್ಕೆ** ಪ್ರಯಾಣಮಾಡಿದನು. ಹರ್ಷವರ್ಧನಚಕ್ರವರ್ತಿಯೂ ಮತ್ತೊಂದು ದಡದಲ್ಲಿ ಪ್ರಯಾಣ ನಡೆಸಿ

**ಚಕ್ರವರ್ತಿಯ ಆದರ**

ರಾಜಧಾನಿಯಲ್ಲಿ ಯಾತ್ರಿಕನನ್ನು ವಿಶೇಷವಾದ ಗೌರವದಿಂದ ಕಂಡು ಅತಿಶಯವಾಗಿ ಸತ್ಕರಿಸಿದನು. ರಾಜಸಭೆಯಲ್ಲಿ ಅನೇಕ ಸಾಮಂತ ರಾಜರಲ್ಲದೆ ಬೌದ್ಧ ಜೈನ ಬ್ರಾಹ್ಮಣ ಮತಗಳ ವಿದ್ವಾಂಸರಿದ್ದರು. ಯಾತ್ರಿಕನು ಈ ವಿದ್ವಾಂಸರೊಡನೆ ವಾಕ್ಯಾರ್ಥಗಳನ್ನು ನಡೆಸಿ ಚರ್ಚೆಮಾಡಿ ತನ್ನ ಪಾಂಡಿತ್ಯವನ್ನು ಪ್ರದರ್ಶಿಸಿದನು. ಕೆಲದಿನಗಳು ಕಳೆಯುವುದರಲ್ಲಿಯೇ ರಾಜಾಧಿರಾಜರೂ ವಿದ್ವಾಂಸರೂ ಎಲ್ಲರೂ **ಪ್ರಯಾಗಕ್ಷೇತ್ರದಲ್ಲಿ** ನಡೆಯಬೇಕಾಗಿದ್ದ ಮಹೋತ್ಸವಕ್ಕೆಂದು ಹೊರಟರು. ಮೂರುತಿಂಗಳು ಕಾಲ ಎಡೆಬಿಡದೆ ದೇವತಾ ಉತ್ಸವಗಳೂ ಸಭೆಗಳೂ ನಡೆದವು. ಅವುಗಳಲ್ಲಿ ಒಂದು ಮಹಾಸಭೆಯಲ್ಲಿ ಚಕ್ರವರ್ತಿಯು ತನ್ನ ಬೊಕ್ಕಸದಲ್ಲಿ ನಿಲುವಳಿಯಾಗಿ ಐದು ವರ್ಷಗಳಿಂದ ಶೇಖರವಾಗಿದ್ದ ಧನರಾಶಿಯನ್ನೆಲ್ಲವನ್ನೂ ಪ್ರಜೆಗಳಿಗೇ ಹಿಂತಿರುಗಿ ಕೊಡುವ ಉದ್ದೇಶದಿಂದ ವಿದ್ವಾಂಸರಿಗೂ ಬಡಬಗ್ಗರಿಗೂ ದಾನಮಾಡಿದನು. ಆ ವೇಳೆಯಲ್ಲಿ ಹರ್ಷ ಚಕ್ರವರ್ತಿಯು ತಾನು ತೊಟ್ಟಿದ್ದ ರತ್ನಾಭರಣಗಳನ್ನೂ ಧರಿಸಿದ್ದ ವಸ್ತ್ರಗಳನ್ನೂ ದಾನಮಾಡಿದುದನ್ನು ನೋಡಿ ಯುವಸ್ಟಂಗನು ಅತಿವಿಸ್ಮಿತನಾಗಿ ಇದೇನೆಂದು ಕೇಳಿದನು. ಆಗ ಚಕ್ರವರ್ತಿಯು "ಪ್ರಜೆಗಳು ಸಲ್ಲಿಸುವ ಧನವನ್ನು ಅವರ ಶಾಂತಿ ಸೌಭಾಗ್ಯಗಳಿಗಾಗಿಯೇ ನಾನು

ಉಪಯೋಗಿಸುತ್ತಿದ್ದರೂ ಬೊಕ್ಕಸದಲ್ಲಿ ಉಳಿತಾಯವಾಗಿ ನಿಲ್ಲುತ್ತದೆ. ಐದು ವರ್ಷಗಳಿಗೊಮ್ಮೆ ಆ ಧನವನ್ನು ಪ್ರಜೆಗಳಿಗೇ ಈ ರೀತಿ ಉತ್ಸವದಲ್ಲಿ ದಾನರೂಪವಾಗಿ ಸಲ್ಲಿಸಿಬಿಡು ವುದು ನಮ್ಮ ಪದ್ಧತಿ. ಇದು ನನ್ನ ಕಾಲದ ಆರನೆ ಉತ್ಸವ'' ಎಂದು ಹೇಳಿದನು. ಎಷ್ಟು ಧರ್ಮನಿಷ್ಠನಾದ ಪ್ರಭುವೀತನೆಂದು ಆಶ್ಚರಿಗೊಂಡು ಯುವನ್ಸ್ಟಂಗನು ಸ್ವದೇಶಕ್ಕೆ ಹಿಂತಿರುಗಿ ಪ್ರಯಾಣ ಮಾಡುವ ಆಲೋಚನೆಮಾಡಿದನು. ಚಕ್ರವರ್ತಿಯೇ ಆದಿಯಾಗಿ ಎಲ್ಲರೂ ಇಲ್ಲಿಯೇ ಇರಬೇಕೆಂದು ಎಷ್ಟು ಹೇಳಿದರೂ ಆತನು ಕೇಳಲಿಲ್ಲ. ಅಲ್ಲದೆ ಆತನ ಕೀರ್ತಿಯು ಚೀನಾ ಸಾಮ್ರಾಜ್ಯದಲ್ಲಿಯೂ ಹರಡಿದ್ದುದರಿಂದ ಅಲ್ಲಿಯ ಚಕ್ರವರ್ತಿಯು ಆತುರನಾಗಿ ಯಾತ್ರಿಕನನ್ನು ಬೇಗನೆ ಸ್ವದೇಶಕ್ಕೆ ಕಳುಹಿಸಿ ಕೊಡಬೇಕೆಂಬುದಾಗಿ ಹರ್ಷವರ್ಧನನ ಬಳಿಗೆ ರಾಯಭಾರಿಗಳನ್ನು ಕಳುಹಿಸಿ ಕೊಟ್ಟಿದ್ದನು. ಯಾತ್ರಿಕನು ಹೊರಡಲು ಸಿದ್ಧನಾದನು. ಎಲ್ಲರೂ ಆತನನ್ನು ಆದರ ವಿಶ್ವಾಸಗಳಿಂದ ಬೀಳ್ಕೊಟ್ಟರು. ಜಾಲಂಧರದವರೆಗೂ ಒಬ್ಬ ಸಾಮಂತರಾಜನು ಆತನೊಡನೆ ಹೋಗಿ ಸರಹದ್ದನ್ನು ಸೇರಿಸಿದನು. ಗಾಂಧಾರ ಖೋಟಾನ್ ಪ್ರಾಂತಗಳ ಮಾರ್ಗವಾಗಿ ಸಂಚರಿಸಿ ಯುವನ್ಸ್ಟಂಗನು ಸ್ವದೇಶವನ್ನು ಸೇರಿ ಪಿಕಿನ್ ನಗರದ ಬಳಿ ಒಂದು ವಿಹಾರದಲ್ಲಿದ್ದು ಕೊಂಡು, ತಾನು ತಂದಿದ್ದ ಗ್ರಂಥರಾಶಿಯನ್ನು ಭದ್ರಗೊಳಿಸಿಕೊಂಡು ಚೀನೀ ಭಾಷೆಯಲ್ಲಿ ಬೌದ್ಧಮತ ವಿಷಯಕವಾಗಿ ಎಪ್ಪತ್ತು ಗ್ರಂಥಗಳನ್ನು ರಚಿಸಿದನು. ಆತನಿಗೆ ಅನೇಕ ಶಿಷ್ಯರಾದರು. ಅವರಲ್ಲಿ ಕೆಲವರು ಆತನ ಚರಿತ್ರೆಯನ್ನೂ ಆತನ ಯಾತ್ರಾ ವಿವರವನ್ನೂ ಬರೆದರು. ಆತನೇ ಅಲ್ಲಲ್ಲಿ ತನ್ನ ಯಾತ್ರೆಯ ಅನುಭವವನ್ನು ವಿವರಿಸಿದನು. ಇವುಗಳಿಂದ ಏಳನೆ ಶತಮಾನದ ಸ್ಥಿತಿಗತಿಗಳ ವಿವರವು ನಮಗೆ ದೊರಕಿದೆ.

ನಿಶೇಷೋತ್ಸವ

ಪ್ರಯಾಣ

644ರಲ್ಲಿ ಯುವನ್ಸ್ಟಂಗನು ಭರತವರ್ಷವನ್ನು ಬಿಟ್ಟು ಹೊರಟನು. 646ರಲ್ಲಿಯೇ ಹರ್ಷವರ್ಧನನು ಕೀರ್ತಿಶೇಷನಾದನು. ವಿಸ್ತಾರ ವಾದ ಸಾಮ್ರಾಜ್ಯವನ್ನು ಸ್ವಂತ ಸಾಹಸ ಸಾಮರ್ಥ್ಯಗಳಿಂದ ಕಟ್ಟಿ ಮೂವತ್ತು ವರ್ಷಕಾಲವಾಳಿದ ಹರ್ಷವರ್ಧನನು ಸಾರ್ವಭೌಮರಲ್ಲಿ

ಗಣ್ಯನಾದವನು

ಆತನ ಸಾಮ್ರಾಜ್ಯದಲ್ಲಿ ಮೌರ್ಯ ಸಾಮ್ರಾಜ್ಯದ ಬಿಕ್ಕಟ್ಟಿರಲಿಲ್ಲ. ಆ ಸಾಮ್ರಾಜ್ಯವು ಆತನು ಮೃತಿ ಹೊಂದಿದ ಅತ್ಯಲ್ಪಕಾಲದಲ್ಲಿಯೇ ಒಡೆದು ಹೋಯಿತು. ಆತನ ತರುವಾಯ ಸಾಮ್ರಾಜ್ಯವನ್ನು ರೂಢಿಸಿಕೊಂಡು ಆಳುವ ಪುತ್ರರಿರಲಿಲ್ಲ.

ರಾಜ್ಯಾಪಹಾರ ಪ್ರಯತ್ನ

**ಅರ್ಜುನ**ನೆಂಬೊಬ್ಬ ಮಂತ್ರಿಯು ಕನ್ಯಾಕುಬ್ಜವನ್ನು ಸ್ವಾಧೀನಪಡಿಸಿಕೊಂಡು ರಾಜ್ಯವನ್ನಪಹರಿಸಲು ಪ್ರಯತ್ನಿಸಿದನು. ಆದರೆ ಅದೇ ವೇಳೆಗೆ ಚೀನಾ ಚಕ್ರವರ್ತಿಯಿಂದ ರಾಯಭಾರವನ್ನು ಹೊತ್ತು ಬಂದಿದ್ದ **ವಂಗ್ಹಿಯೆಂಚೆ** (Wanghientse) ಯೆಂಬಾತನು ಇದನ್ನು ಸಹಿಸದೆ ನೇಪಾಲರಾಜನಲ್ಲಿ ಹೇಳಿಕೊಂಡು ಆತನ ಸಹಾಯವನ್ನೂ, ತಿಬ್ಬತ್ತಿನಲ್ಲಿ ಮಹಾಪರಾಕ್ರಮಿಯಾಗಿ ಆಳುತ್ತಿದ್ದ **ಸ್ರಾಂಗ್ ಚಾನ್ ಗಾಂಪೊ** (Srong tsan Gampo) ಎಂಬ ಪ್ರಭುವಿನ ಸಹಾಯವನ್ನೂ ಪಡೆದು ಅರ್ಜುನನ ದೌಷ್ಟ್ಯವನ್ನು ಕೊನೆಗಾಣಿಸಿ ಸ್ವದೇಶಕ್ಕೆ ಹಿಂತಿರುಗಿದನು.

ಏಳನೆ ಶತಮಾನದ ಪೂರ್ವಾರ್ಧ

ಏಳನೆ ಶತಮಾನದ ಪೂರ್ವಾರ್ಧ ಭಾಗದಲ್ಲಿ ನರ್ಮದಾನದಿಗೆ ಉತ್ತರದಲ್ಲಿ **ಹರ್ಷವರ್ಧನನ ಸಾಮ್ರಾಜ್ಯವು** ಶೋಭಿಸಿದಂತೆಯೇ ದಕ್ಷಿಣದಲ್ಲಿ **ಚಾಲುಕ್ಯ ಸಾಮ್ರಾಜ್ಯವೂ ಪಲ್ಲವರ ಸಾಮ್ರಾಜ್ಯವೂ** ರಂಜಿಸಿದವು. **ಹರ್ಷವರ್ಧನ**, ಚಾಲುಕ್ಯವಂಶದ **ಇಮ್ಮಡಿ ಪುಲಿಕೇಶಿ**, ಪಲ್ಲವರಲ್ಲಿ **ಮಹಾಮಲ್ಲ**ನೆನಿಸಿದ **ಹಿರೇನರಸಿಂಹವರ್ಮರು** ಮೂವರೂ ಮಹಾಶೂರರಾಗಿಯೂ ಧರ್ಮನಿಷ್ಠರಾಗಿಯೂ ಸರಿಸುಮಾರು ಏಕಕಾಲದಲ್ಲಿ ಭಾರತವರ್ಷದಲ್ಲಿ ಬೆಳಗಿದವರು. ವಾಕಾಟಕ ಸಂತತಿಯವರು ಗುಪ್ತಸಾರ್ವಭೌಮರಿಗೆ ಸಮಕಾಲಿಕರಾಗಿ ಅವರ ಸಂಬಂಧವನ್ನು ಕಟ್ಟಿಕೊಂಡು 250ರಿಂದ 520ರವರೆಗೆ ದಖನ್ನಿನ ಉತ್ತರ ಭಾಗದಲ್ಲಿ ಪ್ರಬಲರಾಗಿದ್ದರಷ್ಟೆ. ಇವರ ರಾಜ್ಯಕ್ಕೆ ಪಶ್ಚಿಮದಲ್ಲಿ ಆಭೀರ ತ್ರೈಕೂಟರೂ ಮೂಡಲಲ್ಲಿ ಅನೇಕ ರಾಜವಂಶಗಳೂ ಆಗ್ನೇಯದಲ್ಲಿ ಪಲ್ಲವರೂ ಇದ್ದರು. **ಹರಿಷೇಣ**ನೆಂಬಾತನೇ (500–530) ವಾಕಾಟಕ ವಂಶಜರಲ್ಲಿ ಕಡೆಯವನು. ಆತನ ತರುವಾಯ ಕಲಚೂರ್ಯವಂಶದವರೂ ರಾಷ್ಟ್ರಕೂಟರೆಂದು ಪ್ರಸಿದ್ಧರಾದ

**ರಾಷ್ಟ್ರೀಕರೂ** ಆತನ ರಾಜ್ಯವನ್ನು ಆಕ್ರಮಿಸಿಕೊಂಡರು. ನರ್ಮದಾ ನದಿಯಿಂದ ಕೃಷ್ಣಾನದಿಯವರೆಗಿದ್ದ ವಾಕಾಟಕ

**ವಾಕಾಟಕ ಹರಿಷೇಣ**

ರಾಜ್ಯವು 6ನೆ ಶತಮಾನದ ಆದಿಯಲ್ಲಿಯೇ ಒಡೆಯಿತೆಂದು ಹೇಳಬಹುದು. 6ನೆ ಶತಮಾನದಲ್ಲಿ ದಖನ್ನಿನಲ್ಲಿ ಅನೇಕ ರಾಜವಂಶಗಳು ರಾಜ್ಯ ಸಾಮ್ರಾಜ್ಯಗಳಿಗಾಗಿ ಸ್ಪರ್ಧಿಸಿದವು; ಕೆಲಕಾಲದ ಮೇಲೆ ದಖನ್ನಿನಲ್ಲಿ **ಚಾಲುಕ್ಯ**ರೆಂಬ ಕುಲಸ್ಥರು ಮೇಲ್ಭಾಗದಲ್ಲಿಯೂ, ಪಲ್ಲವರೆಂಬುವರು ತೀರಪ್ರದೇಶದಲ್ಲಿಯೂ ರಾಜ್ಯಕಟ್ಟಿ ಸ್ಪರ್ಧೆಗೆ ತೊಡಗಿದರು.

## ಪಲ್ಲವ ಚಾಲುಕ್ಯ ದ್ವಂದ್ವ

ಮೂರು ಶತಮಾನಗಳ ದೀರ್ಘಕಾಲವಾಳಿದ್ದ ವಾಕಾಟಕ ವಂಶಜರ ಆಳ್ವಿಕೆಯಲ್ಲಿ ದಖನ್ನಿನಲ್ಲಿ ವ್ಯಾಪಾರೋದ್ಯೋಗ

**ದಖನ್ನಿನ ಎರಡು ಭಾಗಗಳು**

ಗಳು ಅಭಿವೃದ್ಧಿಯಾಗಿ ಅನೇಕ ನಗರಗಳು ಹುಟ್ಟಿಕೊಂಡಿದ್ದವು. ಜನರು ಸೌಭಾಗ್ಯ ಸಂಪನ್ನರಾಗಿದ್ದರು. ದೇಶವು ಸ್ವಾಭಾವಿಕವಾಗಿಯೇ ಪ್ರಸ್ಥಭೂಮಿಯೆಂದೂ ಪೂರ್ವದಲ್ಲಿರುವ ತೀರಪ್ರದೇಶವೆಂದೂ ಎರಡು ಭಾಗಗಳಾಗಿದೆ. ಉತ್ತರದಲ್ಲಿದ್ದಂತೆಯೇ ಇಲ್ಲಿಯೂ ರಾಜರಲ್ಲಿ ಸಾಮ್ರಾಜ್ಯ ಸ್ಥಾಪನೆಯ ಸನ್ನಾಹ ಪ್ರಯತ್ನಗಳು ಅನಿವಾರ್ಯವಾದ ಕರ್ತವ್ಯಗಳಾಗಿದ್ದವು. ಆಳಿದ ರಾಜವಂಶಗಳಲ್ಲಿ ಪರಸ್ಪರವಾಗಿ ಸಾಮ್ರಾಜ್ಯಕ್ಕಾಗಿ ನಡೆದ ಸ್ಪರ್ಧೆಯೇ ರಾಜಕೀಯ ಚರಿತ್ರೆಯಲ್ಲಿ ಮುಖ್ಯವಾದ ಲಕ್ಷಣ. ದಖನ್ನಿನ ಚರಿತ್ರೆಯಲ್ಲಿ ಆ ಕಾರಣದಿಂದ ಪ್ರಸ್ಥಭೂಮಿಯ ರಾಜರಿಗೂ ತೀರಪ್ರದೇಶದ ರಾಜರಿಗೂ ಸಾಮ್ರಾಜ್ಯ ಸ್ಪರ್ಧೆಯು ಸಾಮಾನ್ಯವಾಗಿತ್ತು. ಈ ಸ್ಪರ್ಧೆಯನ್ನು ರಾಜರು ತಮ್ಮ ತಮ್ಮಲ್ಲಿ ನಡೆಸುತ್ತಿದ್ದ ಮಲ್ಲಯುದ್ಧಗಳೆಂದು ಭಾವಿಸಬೇಕು.

ನಾಗಕುಲದ ಸಂಬಂಧವನ್ನು ಪಡೆದ **ವೀರಕೂರ್ಚ** ಅಥವಾ **ವೀರವರ್ಮ**ನೇ ವಾಕಾಟಕಾನುಜರೆಂದು ನಿಶ್ಚಿತರಾದ ಪಲ್ಲವರಲ್ಲಿ ರಾಜ್ಯ ಕಟ್ಟಿದವನು. ವಾಕಾಟಕ ಸಾಮ್ರಾಜ್ಯವನ್ನು ವಿಸ್ತಾರಗೊಳಿಸುತ್ತ ಶಾತ

ವಾಹನರ ಇಳಿಗಾಲದಲ್ಲಿ ಸ್ಥಾಪಿತರಾಗಿದ್ದ ರಾಜವಂಶಗಳನ್ನು ಗೆಲ್ಲುತ್ತ ಈ ಪಲ್ಲವರು **ಕಾಂಚೀನಗರ**ದಲ್ಲಿಯೂ **ವೆಂಗಿಮಂಡಲ**ದಲ್ಲಿಯೂ ಅಧಿಷ್ಠಿತರಾದರು. ವಿಂಧ್ಯಪರ್ವತದ ಉತ್ತರದಲ್ಲಿ ವಾಕಾಟಕ ವಂಶಜರು ಕೈಕೊಂಡ ಕಾರ್ಯವನ್ನೇ ಪಲ್ಲವರು ದಕ್ಷಿಣಾಪಥದಲ್ಲಿ ಕೈಕೊಂಡರು. ವಾಕಾಟಕರಂತೆಯೇ ಪಲ್ಲವರೂ ಶಿವಭಕ್ತರು, ಭಾರದ್ವಾಜ ಗೋತ್ರಜರು ಮತ್ತು ಸಂಸ್ಕೃತ ಪ್ರಿಯರು. ಮೊದಮೊದಲು ಆಳಿದ ಪಲ್ಲವರಾಜರ ಶಾಸನಗಳು ಪ್ರಾಕೃತದಲ್ಲಿಯೇ ಇದ್ದರೂ ಅವರನ್ನು ಸಂಸ್ಕೃತ ಪ್ರಿಯರೆಂದೇ ಕರೆಯಬೇಕು. ಪಲ್ಲವರ ಆಸ್ಥಾನವು ವಾಕಾಟಕ ಪ್ರವರಸೇನನ ಆಸ್ಥಾನದ ಪ್ರತಿಬಿಂಬವಾಗಿತ್ತು. ಕಾಂಚೀನಗರವನ್ನು ದಕ್ಷಿಣಾಪಥದ ವಾರಣಾಸಿಯಂತೆ ಎಸಗಿದ ಈ ಪಲ್ಲವರ ವಂಶಜರು ಕೊಲ್ಲೇರು ಕದನದಲ್ಲಿ ಸೋತು ಗುಪ್ತ ಸಾರ್ವಭೌಮರಿಗೆ ಅಧೀನರಾಗಿದ್ದು ಆರನೆ ಶತಮಾನದಲ್ಲಿ ಸ್ವತಂತ್ರರೂ ಪ್ರಬಲರೂ ಆದರು. ಸು. 575ರಲ್ಲಿ ಆಳಿದ **ಸಿಂಹವಿಷ್ಣು**ವೆಂಬಾತನು ದಕ್ಷಿಣದಲ್ಲಿ ಚೋಳರನ್ನೂ ಪಾಂಡ್ಯರನ್ನೂ ಸೋಲಿಸಿ ದಕ್ಷಿಣದ ಎಲ್ಲೆಯನ್ನು ಭದ್ರಗೊಳಿಸಿದನು. ಸು. 600ರಲ್ಲಿ ಪಟ್ಟಾಭಿಷಿಕ್ತನಾದ ಆತನ ಮಗ **ಹಿರೇಮಹೇಂದ್ರವರ್ಮ**ನು ವಿದ್ವಾಂಸರಲ್ಲಿ ಅಮಿತವಾದ ವಿಶ್ವಾಸವನ್ನೂ ಕಲಾಚತುರರಲ್ಲಿ ಔದಾರ್ಯವನ್ನೂ ತೋರಿದನು. ತಿರುಚನಾಪಳ್ಳಿ, ಪಲ್ಲವರ, ಮಾಮಂಡೂರು ಮುಂತಾದ ಸ್ಥಲಗಳಲ್ಲಿ ಕಾಣುವ ಶಿಲಾನಿರ್ಮಿತ ದೇವಾಲಯಗಳು ಆತನು ಕಟ್ಟಿಸಿದವುಗಳು. ಜಲಾಶಯಗಳನ್ನೂ ಆತನು ಅನೇಕವಾಗಿ ನಿರ್ಮಿಸಿದನು. ಸಂಗೀತ ಶಾಸ್ತ್ರದಲ್ಲಿ ಈ ರಾಜನು ಪ್ರಸಿದ್ಧ ಪಂಡಿತನೆನಿಸಿದ್ದನು. ಈತನು ಮೊದಲು ಜೈನನಾಗಿದ್ದು ನಾಯನಾರರೆಂದು ಹೆಸರಾದ ಶೈವಯತಿಗಳಲ್ಲಿ ಗಣ್ಯನಾದ ಅಪ್ಪರ್ ಎಂಬ ಯತಿಯ ಶಿಷ್ಯನಾಗಿ ಶೈವಮತವನ್ನವಲಂಬಿಸಿದನಂತೆ. ಇಷ್ಟು ಸದ್ಗುಣಭೂಷಿತನಾಗಿದ್ದೂ ಮಹೇಂದ್ರವರ್ಮನು ಯುದ್ಧದಲ್ಲಿ ಸೋಲನ್ನನುಭವಿಸಬೇಕಾಯಿತು.

**ತುಂಡೀರ ವಿಷಯ**ವೆಂಬ ತಮ್ಮ ರಾಜ್ಯವನ್ನು ಕಾಂಚೀನಗರದಿಂದ ರೂಢಿಸಿಕೊಂಡು ಪಲ್ಲವರು ಆಳ್ವಿಕೆಯನ್ನು ಭದ್ರಗೊಳಿಸುತ್ತ ಆರ್ಯಧರ್ಮ

ಪಲ್ಲವ ವಂಶ

ವನ್ನು ಪ್ರಚಾರಪಡಿಸುತ್ತ ಇದ್ದ ಕಾಲದಲ್ಲಿ ಘಟ್ಟಗಳ ಮೇಲ್ಭಾಗದಲ್ಲಿ ಬನವಾಸಿಯ ಕದಂಬ ಕುಲದವರೂ (ಮಾನವ್ಯ ಗೋತ್ರಜರು), ಕುವಲಾಲ (ಕೋಲಾರ) ದಲವನಪುರಿ (ತಲಕಾಡು)ಗಳ ಗಂಗರಸರೂ* ರಾಜ್ಯ ಕಟ್ಟಿ ವಿರೋಧಿಗಳೆನಿಸಿದ್ದರು.

**ಚಾಲುಕ್ಯ ವಂಶ**

ವಾಕಾಟಕ ಪ್ರಭುಗಳು ಪ್ರಬಲರಾಗಿದ್ದವರೆಗೆ ಪಲ್ಲವರಿಗೂ ಪ್ರಬಲ ವಿರೋಧಿಗಳಿರಲಿಲ್ಲ; ಹರಿಷೇಣನ ತರುವಾಯ ಕೃಷ್ಣಾ ಗೋದಾವರೀ ನದಿಗಳ ಮೇಲ್ಭಾಗದಲ್ಲಿ ಪ್ರಾಬಲ್ಯಪಡೆದ ರಾಷ್ಟ್ರೀಕರು ಸ್ವಲ್ಪ ಕಾಲದಲ್ಲಿಯೇ ರಾಜ್ಯವನ್ನು ನೀಗಿದರು. ಆರನೆ ಶತಮಾನದ ಆದಿಯಲ್ಲಿ **ಜಯಸಿಂಹ**ನೆಂಬ ಚಾಲುಕ್ಯ ಕುಲಸ್ಥನು ರಟ್ಟರನ್ನು ಸೋಲಿಸಿ ರಾಜ್ಯಕಟ್ಟಿದನು. ಆತನ ತರುವಾಯ ಆಳಿದ **ಹಿರೇ ಪುಲಿಕೇಶಿಯು** (550) ರಾಜ್ಯವನ್ನು ವಿಸ್ತಾರಪಡಿಸಿ **ವಾತಾಪಿಪುರ**ವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅನೇಕ ದೇವಾಲಯಗಳನ್ನು ಕಟ್ಟಿಸಿದನು; **ಸತ್ಯಾಶ್ರಯ, ಪೃಥ್ವೀವಲ್ಲಭ** ಎಂಬ ಬಿರುದುಗಳನ್ನು ಧರಿಸಿದನು. ಆತನ ಅನಂತರ ಪಟ್ಟವನ್ನು ಪಡೆದ **ಒಂದನೆ ಕೀರ್ತಿವರ್ಮ**ನು (566–597) ಯುದ್ಧಾತುರನಾಗಿದ್ದು ಅನೇಕ ರಾಜರನ್ನು ಸೋಲಿಸಿ ಕೇರಲ ದೇಶದಿಂದ ಗುಜರಾಥಿನವರೆಗೂ ಇರುವ ಪಶ್ಚಿಮ ತೀರಪ್ರದೇಶವೆಲ್ಲವನ್ನೂ ತನ್ನ ಅಧೀನಮಾಡಿಕೊಂಡನು. 597ರಲ್ಲಿ ಕೀರ್ತಿವರ್ಮನು ಕಾಲಗತಿಯನ್ನು ಪಡೆದನು; ಆತನ ಮಗನು ಇನ್ನೂ ಚಿಕ್ಕವನಾಗಿದ್ದುದರಿಂದ ಆತನ ತಮ್ಮ **ಮಂಗಳೇಶ**ನೆಂಬಾತನು ರಾಜ್ಯವನ್ನಾಳುತಲಿದ್ದು ಕೆಲಕಾಲದ ಮೇಲೆ ಸ್ವಂತ ಮಗನಿಗೇ ಪಟ್ಟವಾಗುವಂತೆ ನಡೆಸಬೇಕೆಂಬ ದ್ರೋಹ ಚಿಂತನೆಯನ್ನು ಮಾಡಿದನು. ರಾಜಕುವರನಾಗಿದ್ದ ಪುಲಿಕೇಶಿಗೂ ಚಿಕ್ಕಪ್ಪನಾದ ಮಂಗಳೇಶನಿಗೂ ವಿರೋಧ ಹುಟ್ಟಿ ಬೆಳೆದು ಕಡೆಗೆ ಇಬ್ಬರಿಗೂ ಯುದ್ಧವೇ ಆಯಿತು. ಮಂಗಳೇಶನು ಯುದ್ಧದಲ್ಲಿಯೇ ಅಸುವನ್ನು

---

ಗಂಗರಸರು ಕಾಣ್ವಾಯನ ಗೋತ್ರಜರು. ಕಾಣ್ವಾಯನ ಸಂತತಿಯ ಸುಶರ್ಮನು ಸೆರೆಯಾಳಾಗಿ ದಕ್ಷಿಣಾಪಥಕ್ಕೆ ಬಂದ ಸಂಗತಿಯು ಇವರ ಮೂಲವನ್ನು ಸೂಚಿಸತಕ್ಕದ್ದಾಗಿರಬಹುದು. ಕದಂಬರೂ ಗಂಗರೂ ಪಲ್ಲವ ವಿರೋಧಿಗಳಾಗಿದ್ದು ವಿವಾಹ ಸಂಬಂಧಗಳನ್ನು ಪರಸ್ಪರವಾಗಿ ಬೆಳೆಸಿಕೊಂಡಿದ್ದರು. ಎರಡು ಸಂತತಿಯವರೂ ಚಾಲುಕ್ಯರಿಗೆ ಅಧೀನರಾಗಿ ಘಟ್ಟಗಳಮೇಲೆ ಹುಟ್ಟಿದ ಸಾಮ್ರಾಜ್ಯದ ಸಾಮಂತರಾಗಿದ್ದರು.

ತೋರಿದನು. ಜಯಶಾಲಿಯಾದ **ಪುಲಿಕೇಶಿಯು** 609ರಲ್ಲಿ ಪಟ್ಟಾಭಿಷಿಕ್ತನಾಗಿ ಚಾಲುಕ್ಯರಲ್ಲೆಲ್ಲ ಮೊದಲಿಗನೆನಿಸಿದನು. ಮಹಾಶೂರನಾಗಿದ್ದ ಆತನು ಮಂಗಳೇಶನ ಮರಣದ ತರುವಾಯ ಕೆಲವು ಚಿಕ್ಕ ಚಿಕ್ಕ ರಾಜರೊಡನೆ ಹೋರಾಡಬೇಕಾಯಿತು.

**ಇಮ್ಮಡಿ ಪುಲಿಕೇಶಿ**

ಈ ಸಂದರ್ಭದಲ್ಲಿಯೇ ತಮಗೆ ಸಮಯ ಸಿಕ್ಕಿತೆಂದು ರಟ್ಟರು (ರಾಷ್ಟ್ರೀಕರು) ಮೊದಲು ಮುಂದಾಗಿ ಸ್ವತಂತ್ರರಾಗುವ ಯತ್ನದಲ್ಲಿದ್ದರು. ಪುಲಿಕೇಶಿಯು ಅವರನ್ನು ಅಡಗಿಸಿ ಆ ತರುವಾಯ ಕದಂಬ ರಾಜರನ್ನು ಶಿಕ್ಷಿಸಿದನು. ಇದನ್ನು ತಿಳಿದ ಕೂಡಲೆ ತಲೆಕಾಡಿನ ಗಂಗರಸರೂ ತೀರಪ್ರದೇಶದ ಆಳುಪಕುಲದರಸರೂ ತಾವಾಗಿಯೇ ಬಂದು ಪುಲಿಕೇಶಿಯ ಮೈತ್ರಿಯನ್ನು ಬೇಡಿದರು. ಕೊಂಕಣ, ಲಾಟ, ಗೂರ್ಜರ ಪ್ರದೇಶಗಳೂ ಆತನಿಗೆ ವಶವಾದವು. ಗೂರ್ಜರ ರಾಷ್ಟ್ರದಲ್ಲಿ ಜಯಪ್ರತಿಷ್ಠೆಮಾಡಿದ ಮೇಲೆ ಪುಲಿಕೇಶಿಯು ತನ್ನ ತಮ್ಮನೊಬ್ಬನನ್ನು ಅಲ್ಲಿ ತನ್ನ ಪ್ರತಿನಿಧಿಯಾಗಿರುವಂತೆ ನಿಯಮಿಸಿ ಆ ತರುವಾಯ ಸೈನ್ಯದೊಡನೆ ಪೂರ್ವತೀರದ ಕಡೆಗೆ ನುಗ್ಗಿದನು. ಪಲ್ಲವರಿಗೆ ಸೇರಿದ್ದ ವೆಂಗಿಮಂಡಲವನ್ನು ಗೆದ್ದು ಅಲ್ಲಿಯೂ ತನ್ನ ತಮ್ಮ **ಕುಬ್ಜ ವಿಷ್ಣುವರ್ಧನ**ನನ್ನು ಉಪರಾಜನನ್ನಾಗಿ ಗೊತ್ತುಮಾಡಿ, ಅಲ್ಲಿಂದ ಮುಂದೆ ಹೊರಟು ಎದುರಾಗಿಬಂದ ಮಹೇಂದ್ರವರ್ಮ ರಾಜನನ್ನು ಸೋಲಿಸಿ ಆತನನ್ನು ಅಟ್ಟಿಸಿಕೊಂಡು ಕಾಂಚೀಪುರಕ್ಕೂ ಹೊರಟನು. ಮಹೇಂದ್ರವರ್ಮನ ವಶ್ಯತೆಯಿಂದಲೇ ತೃಪ್ತನಾಗದೆ **ರಣವಿಕ್ರಾಂತ**ನೆನಿಸಿದ ಪುಲಿಕೇಶಿಯು ಕಾವೇರೀತೀರದವರೆಗೂ ಸೈನ್ಯಗಳನ್ನು ನಡೆಸಿದನು. ಚೋಳ ಪಾಂಡ್ಯ ಕೇರಲ ದೇಶಗಳ ಅರಸರೂ ಆತನಲ್ಲಿಗೆ ದೂತರನ್ನಟ್ಟಿ ಸ್ನೇಹವನ್ನು ಪ್ರಾರ್ಥಿಸಿದರು. ಈ ರೀತಿಯಲ್ಲಿ ನರ್ಮದಾ ನದಿಯಿಂದ ಕಾವೇರಿಯವರೆಗೂ ಇರುವ ಭಾಗವೆಲ್ಲವನ್ನೂ ಸ್ವಸಾಮರ್ಥ್ಯದಿಂದ ಜಯಿಸಿ, ದಕ್ಷಿಣದ ಸಮಸ್ತ ಭಾಗಗಳನ್ನೂ ತನ್ನ ಅಧಿಕಾರದಲ್ಲಿ ಸೇರಿಸಿಕೊಂಡು **ದಕ್ಷಿಣಾಪಥೇಶ್ವರ** ಮತ್ತು **ಪರಮೇಶ್ವರ** ಎಂಬ ಬಿರುದುಗಳನ್ನು ಈತನು ವಹಿಸಿದನು. ಈ ಚಕ್ರಾಧಿಪತಿಯೇ 639ರಲ್ಲಿ ನರ್ಮದಾ ತಟದಲ್ಲಿ ಹರ್ಷವರ್ಧನನನ್ನು

ಎದುರಿಸಿ ಎರಡು ಸಾಮ್ರಾಜ್ಯಗಳಿಗೂ ಆ ನದಿಯೇ ಮೇರೆಯಾಗಿರಲೆಂದು ಸಂಧಿಮಾಡಿಕೊಂಡದ್ದು.

ಇಂತಹ ಚಕ್ರೇಶ್ವರನ ಕೀರ್ತಿಯು ಸಹಜವಾಗಿ ವಿಶಾಲವಾಗಿ ಹರಡಿ ದೂರದೇಶಗಳಲ್ಲಿಯೂ ವಿಶ್ರುತವಾಯಿತು. ಫಾರ್ಸೀಸ್ಥಾನದಲ್ಲಿ ಸತ್ಕೀರ್ತಿಯುತನಾಗಿ ಆಳುತ್ತಿದ್ದ **ಖುಸ್ರೂ ಅನೂಷೀರ್ವಾನ**ನು ಈತನ ಬಳಿಗೆ



29. ಇಮ್ಮಡಿ ಪುಲಿಕೇಶಿ

ರಾಯಭಾರಿಗಳನ್ನು ಕಳುಹಿಸಿದನು. ಆ ರಾಯಭಾರಿಗಳು ಪುಲಿಕೇಶಿಯ ಆಸ್ಥಾನವನ್ನು ಪ್ರವೇಶಿಸಿದ ದೃಶ್ಯವೇ ಅಜಂತದಲ್ಲಿ ಚಿತ್ರಿತವಾಗಿದೆಯೆಂದು ಸಿದ್ಧಾಂತವಾಗಿದೆ. ಯುವಸ್ಟಂಗ್ ಯಾತ್ರಿಕನು ಈತನ ರಾಜಧಾನಿಯಾದ ವಾತಾಪಿಪುರಕ್ಕೆ ಬಂದು ಕೆಲಕಾಲವಿದ್ದು ತನ್ನ ವಿವರದಲ್ಲಿ ಪುಲಿಕೇಶಿಯ ಶೌರ್ಯ ಪರಾಕ್ರಮಗಳನ್ನೂ ಔದಾರ್ಯವನ್ನೂ ಹೊಗಳಿದ್ದಾನೆ. ಧರ್ಮಿಷ್ಠನಾಗಿ ಆಳಿದ ಇಮ್ಮಡಿ ಪುಲಿಕೇಶಿಯು ಮತದಲ್ಲಿ ಬ್ರಾಹ್ಮಣ ಮತದ ಅಥವಾ ಹಿಂದೂಮತದ ಅನುಯಾಯಿಯಾಗಿದ್ದನು. ವಿದ್ವಾಂಸರಿಗೂ ಯತಿಜನರಿಗೂ ಹೇರಳವಾಗಿ ದಾನಮಾಡಿ ಅಶ್ವಮೇಧ ಯಜ್ಞವನ್ನೂ ಮಾಡಿದನು.

ಇರಾನೀ ರಾಯಭಾರ

ವೈಭವೋಪೇತವಾದ ಪುಲಿಕೇಶಿಯ ಆಳ್ವಿಕೆಯ ಕೊನೆಗಾಲವು ವಿಷಾದಾಂತವಾಯಿತು. ಅವಮಾನಕ್ಕೆ ಗುರಿಯಾದುದಲ್ಲದೆ ಕೃಷ್ಣಾ ಗೋದಾವರೀ ನದಿಗಳ ನಡುವಣ ಪ್ರದೇಶವಾದ ವೆಂಗಿಮಂಡಲವನ್ನೂ ಕಳೆದುಕೊಂಡು ತಪಿಸುತ್ತಿದ್ದ ಪಲ್ಲವರಲ್ಲಿ ಮಹೇಂದ್ರವರ್ಮನ ತರುವಾಯ 630ರಲ್ಲಿ ರಾಜ್ಯಾಧಿಕಾರವನ್ನು ವಹಿಸಿದ **ನರಸಿಂಹವರ್ಮನು** ಚಾಲುಕ್ಯರ ಮೇಲೆ ಪ್ರತೀಕಾರಮಾಡುವ ಮನಸ್ಸುಳ್ಳವನಾಗಿದ್ದನು. ಸ್ವತಃ ಶೂರನಾಗಿದ್ದ ಆತನು ಚೋಳ ಪಾಂಡ್ಯ ಕೇರಲರನ್ನು ಪದೇ ಪದೇ ಸೋಲಿಸಿ ಅವರ ಮೇಲೆ ತನ್ನ ಅಧಿಕಾರವನ್ನು ಪ್ರತಿಷ್ಠಿಸಿ, ಸು. 640ರಲ್ಲಿ ದೊಡ್ಡ ಸೇನೆಯೊಡನೆ ಚಾಲುಕ್ಯ ಸಾಮ್ರಾಜ್ಯದ ಮೇಲೆ ದಂಡೆತ್ತಿದನು. ಅತಿವೇಗವಾಗಿ ಸಂಚರಿಸುತ್ತ ನರಸಿಂಹವರ್ಮನು ವಾತಾಪಿಪುರವನ್ನು ಮುತ್ತಿ ಅದನ್ನು ಧ್ವಂಸಮಾಡಿದನು. ಹಟಾತ್ತಾಗಿ ಬಂದ ಶತ್ರುವನ್ನು ತಕ್ಕಂತೆ ಇದುರಿಸಲಾರದೆಯೋ ಬೇರೆ ಬಗೆಯ ದೌರ್ಬಲ್ಯದಿಂದಲೋ ಪುಲಿಕೇಶಿಯು ಈತನೊಡನೆ ಹೋರಾಟದಲ್ಲಿ ಸಮಬಲನೂ ಆಗದೆ ಹೋದನು; ಹೋರಾಟದಲ್ಲಿ ತನ್ನ ಪ್ರಾಣಗಳನ್ನೇ ಅರ್ಪಿಸಿದನು (642). ನರಸಿಂಹವರ್ಮನ ದಾಳಿಯು ಭಯಂಕರವಾಗಿಯೇ ನಡೆಯಿತು. ಅದರ ದೆಸೆಯಿಂದ ಪುಲಿಕೇಶಿಯ ಮಗ **ಒಂದನೆ ವಿಕ್ರಮಾದಿತ್ಯ**

ಮಹಾಮಲ್ಲ ನರಸಿಂಹವರ್ಮ

ನೆಂಬಾತನು ರಾಜ್ಯವನ್ನು ಪಡೆಯುವುದೇ ಕಷ್ಟವಾಗಿ 13 ವರ್ಷಕಾಲ ಕಳೆದು ಅನುಕೂಲವಾಗುವವರೆಗೂ ಪಟ್ಟಾಭಿಷಿಕ್ತನಾಗದೆಯೇ ಇರಬೇಕಾಯಿತು. ಇಷ್ಟು ಘೋರವಾದ ರೀತಿಯಲ್ಲಿ ಶತ್ರುಗಳನ್ನು ಶಿಕ್ಷಿಸಿದ ನರಸಿಂಹ ವರ್ಮನು ದಕ್ಷಿಣದಲ್ಲೆಲ್ಲ ಅಗ್ರಗಣ್ಯನಾದನು. **ಮಹಾಮಲ್ಲ**ನೆಂಬ ಬಿರುದಿಗೆ ಪಾತ್ರನಾದನು. ಈತನ ಸಹಾಯವನ್ನು ಬಯಸಿ ಸಿಂಹಳದ್ವೀಪದಿಂದ ಭ್ರಷ್ಟನಾಗಿದ್ದ ರಾಜಕುಮಾರನೊಬ್ಬಾತನು ಕಾಂಚೀಪುರಿಗೆ ಬಂದನು. ಮಹಾಮಲ್ಲನು ಆತನನ್ನು ಸತ್ಕರಿಸಿ ಕೆಲವು ತಿಂಗಳ ತರುವಾಯ ಸ್ವಲ್ಪ ಸೈನ್ಯವನ್ನು ಕೊಟ್ಟು ಸ್ವರಾಜ್ಯ ಸಾಧನೆಗೆ ಕಳುಹಿಸಿದನು. ಆ ರಾಜ ಕುಮಾರನು ಸಿಂಹಳಕ್ಕೆ ಅರಸನಾಗಿ ಈತನಲ್ಲಿ ಕೃತಜ್ಞನಾಗಿಯೇ ಇರು ತ್ತಿದ್ದನು. ಮಹಾಮಲ್ಲನು ಒಂದು ನೌಕಾಪಡೆಯನ್ನೂ ಕಟ್ಟಿದನು; ಸಿಂಹಳದ್ವೀಪದ ಮೇಲೆ ಎರಡುಸಲ ಆತನ ಹಡಗು ಪಡೆಯು ಹೊರಟಿತ್ತು. **ಮಹಾಮಲ್ಲಪುರ**ವೆಂಬುದು ಆತನಿಂದಲೇ ರೇವುಪಟ್ಟಣವಾಯಿತು. ಶೈವಮತಸ್ಥನಾದ ಈ ಶೂರರಾಜನು ಕಲಾನಿಪುಣರಲ್ಲಿ ಔದಾರ್ಯತೋರಿ ಮಾಮಲ್ಲಪುರದಲ್ಲಿ ಇಂದಿಗೂ ಆಶ್ಚರ್ಯಕರವಾಗಿ ಕಾಣುವ ಶಿಲಾ ನಿರ್ಮಿತ ಗಳಾದ ಸಪ್ತ ದೇವಾಲಯಗಳನ್ನು ಕಟ್ಟಿಸಿದನು. ಯುವನ್ಚ್ವಾಂಗನು ಈತನ ಕಾಲದಲ್ಲಿಯೇ ಕಾಂಚೀಪುರವನ್ನು ಕಂಡು ಈತನ ಆಳ್ವಿಕೆಯಲ್ಲಿ ದೇಶವು ಫಲವತ್ತಾಗಿತ್ತೆಂದೂ ಪ್ರಜೆಗಳು ಧೈರ್ಯದಿಂದಲೂ ವಿದ್ವತ್ತಿನಿಂದಲೂ ಶೋಭಿಸುತ್ತಿದ್ದರೆಂದೂ ವಿವರಿಸಿರುವನು. ವಾತಾಪಿಯಲ್ಲಿ ಆಳಿದ ಚಾಲುಕ್ಯ ರಲ್ಲಿ ಇಮ್ಮಡಿ ಪುಲಿಕೇಶಿಯು ಹೇಗೋ ಕಾಂಚಿಯಲ್ಲಿ ಆಳಿದ ಪಲ್ಲವರಲ್ಲಿ ಮಹಾಮಲ್ಲನು ಹಾಗೆಯೇ ಯುದ್ಧದಲ್ಲಿಯೂ ಶಾಂತಿಯಲ್ಲಿಯೂ ಅಗ್ರ ಗಣ್ಯನು. 668ರಲ್ಲಿ ನರಸಿಂಹವರ್ಮನು ಕಾಲಗತಿಯನ್ನೈದಿದನು. ಆತನ ಮಗ **ಇಮ್ಮಡಿ ಮಹೇಂದ್ರವರ್ಮ**ನು ಅರಸನಾಗಿ ಸ್ವಲ್ಪಕಾಲ ಮಾತ್ರವೇ ಆಳಿದನು. ಆ ತರುವಾಯ ಪಟ್ಟವನ್ನೇರಿದ **ಒಂದನೆ ಪರಮೇಶ್ವರ ವರ್ಮ**ನ ಕಾಲದಲ್ಲಿ ಪಲ್ಲವರಿಗೂ ಚಾಲುಕ್ಯರಿಗೂ ದ್ವಂದ್ವವು ಪುನಃ ಮೊದ ಲಾಯಿತು. **ಒಂದನೆ ವಿಕ್ರಮಾದಿತ್ಯ**ನು ಉರಗಪುರ ಅಥವಾ ಉರೈ ಯೂರುವರೆಗೂ ದಂಡೆತ್ತಿಕೊಂಡು ಹೋದನು. ಆತನನ್ನು ತಡೆಯಲು ತಮಿಳು ನಾಡಿನ ಎಲ್ಲ ರಾಜರೂ ಒಟ್ಟುಗೂಡಬೇಕಾಯಿತು.

ದ್ವಂದ್ವದ ಪರಿಣಾಮ

ತರುವಾಯವೂ ಅನೇಕ ಕಾಲ ಚಾಲುಕ್ಯ ಪಲ್ಲವರ ಪರಸ್ಪರ ವಿರೋಧವು ಪ್ರಬಲವಾಗಿಯೇ ನಡೆಯಿತು. ಚಾಲುಕ್ಯ ಚಕ್ರೇಶ್ವರರಾದ ಒಂದನೆ ವಿನಯಾದಿತ್ಯ, ವಿಜಯಾದಿತ್ಯ ಮತ್ತು ಎರಡನೆ ವಿಕ್ರಮಾದಿತ್ಯರೆಂಬುವರು ಕ್ರಮವಾಗಿ ಎರಡನೆ ನರಸಿಂಹವರ್ಮ, ನಂದಿವರ್ಮ ರಾಜರ ಪ್ರತಿಕಕ್ಷಿಗಳಾಗಿ ಹೋರಾಡಿದರು. **ಇಮ್ಮಡಿ ವಿಕ್ರಮಾದಿತ್ಯ**ನು ಸಾಹಸಿಯಾಗಿದ್ದುದರಿಂದ ನಂದಿವರ್ಮನ ಬಲವನ್ನು ಮುರಿದು ಕಾಂಚೀಪುರಿಯಲ್ಲಿ ತಾನೇ ಕೆಲಕಾಲ ಬಿಡಾರಮಾಡಿದನು. ಅನಂತರ ಇಬ್ಬರ ಪ್ರಾಬಲ್ಯವೂ ನಷ್ಟವಾಯಿತು. ವಾತಾಪಿಪುರದ ಚಾಲುಕ್ಯರ ರಾಜ್ಯಭಾರವನ್ನು ರಟ್ಟರು ಅಥವಾ ರಾಷ್ಟ್ರಕೂಟರು 753ರಲ್ಲಿ ಕೊನೆಗಾಣಿಸಿ ತಮ್ಮ ರಾಜ್ಯವನ್ನೇ ಪಡೆದು ಮಾನ್ಯಖೇಟದಲ್ಲಿ ರಾಜಧಾನಿಯನ್ನು ಕಟ್ಟಿದರು. ಪಲ್ಲವರು ಪಾಂಡ್ಯನಾದ **ವರಗುಣ**ನೆಂಬಾತನೊಡನೆಯೂ ಚೋಳವಂಶದ **ಆದಿತ್ಯ ಚೋಳ**ನೆಂಬಾತನೊಡನೆಯೂ ಹೆಣಗಾಡುತ್ತಿದ್ದು ತಮ್ಮ ಪ್ರಾಬಲ್ಯವನ್ನು ನೀಗಿಕೊಂಡರು. 755ರ ತರುವಾಯ ದಖನ್ನಿನ ಸಾಮ್ರಾಜ್ಯ ದ್ವಂದ್ವವು ರಾಷ್ಟ್ರಕೂಟರಿಗೂ ಪಲ್ಲವರಿಗೂ ನಡೆಯುವಂತಾಯಿತು.

ಕಾಲಸ್ಥಿತಿ

ವಾತಾಪಿಪುರದಲ್ಲಿ ಚಾಲುಕ್ಯರೂ ಕಾಂಚೀಪುರದಲ್ಲಿ ಪಲ್ಲವರೂ ಆಳುತಲಿದ್ದ ಕಾಲವೇ ದಖನ್ನಿನಲ್ಲಿ ಶೌರ್ಯವು ತೋರಿಕೊಂಡ ಕಾಲ. ಪಲ್ಲವರು ಮೊದಲು ಬೌದ್ಧ ಜೈನ ಮತಗಳನ್ನೂ ತರುವಾಯ ಶೈವಮತವನ್ನೂ ಅವಲಂಬಿಸಿ ಅನೇಕ ದೇವಾಲಯಗಳನ್ನು ಕಟ್ಟಿಸಿದರು. ಚಾಲುಕ್ಯರು ಹಿಂದೂ ಮತಸ್ಥರಾಗಿ ಬ್ರಹ್ಮ ವಿಷ್ಣು ಮಹೇಶ್ವರರಿಗೆ ದೇವಾಲಯಗಳನ್ನು ಕಟ್ಟಿಸುತ್ತಲೂ ಜೈನಮತಸ್ಥರಿಗೆ ವಿಶೇಷವಾಗಿ ಸಹಾಯಮಾಡುತ್ತಲೂ ಇದ್ದರು. ಇಬ್ಬರ ಆಳ್ವಿಕೆಯಲ್ಲಿಯೂ ಸಂಸ್ಕೃತ ಸಾಹಿತ್ಯವು ವೃದ್ಧಿಯಾಯಿತು. ಸಿಂಹವಿಷ್ಣು ಮುಂತಾದ ಪಲ್ಲವ ಪ್ರಭುಗಳ ಆಸ್ಥಾನದಲ್ಲಿ **ಭಾರವಿ, ದಂಡಿ** ಮುಂತಾದ ಕವಿಗಳಿದ್ದರು. ಮಹೇಂದ್ರವರ್ಮನೇ ಸಂಗೀತದಲ್ಲಿ ಪ್ರವೀಣನಾಗಿದ್ದುದಲ್ಲದೆ ಕವಿಯೂ ಆಗಿ **ಮತ್ತವಿಲಾಸ ಪ್ರಹಸನ**ವೆಂಬ ಗ್ರಂಥವನ್ನು ರಚಿಸಿದನು. ಇಮ್ಮಡಿ **ಪುಲಿಕೇಶಿ**ಯ

ಆಸ್ಥಾನದಲ್ಲಿ **ರವಿಕೀರ್ತಿ**ಯೆಂಬ ಕವಿಯಿದ್ದನು. ಸಂಸ್ಕೃತ ವಿದ್ಯೆಗೆ ಪ್ರೋತ್ಸಾಹವನ್ನು ಕೊಡುತ್ತಿದ್ದಾಗ್ಗೂ ಚಾಲುಕ್ಯರು ಕನ್ನಡ ಭಾಷೆಯನ್ನಾಡುತ್ತಿದ್ದರು. ಚಾಲುಕ್ಯರ ಶಾಸನಗಳು ಕನ್ನಡದಲ್ಲಿಯೇ ಇವೆ. ಪಲ್ಲವರೂ ಕ್ರಮವಾಗಿ ತಮಿಳು ಭಾಷೆಯನ್ನು ರೂಢಿಮಾಡಿಕೊಂಡರು.

**ಹಿಯನ್ತ್ಸಾಂಗನ ವಿವರ**

ಉತ್ತರದಲ್ಲಿ ಸಾಮ್ರಾಜ್ಯ ಕಟ್ಟಿದ ಹರ್ಷವರ್ಧನನನ್ನು ಪುಲಿಕೇಶಿಯು ತಡೆದುದೂ, ಪುಲಿಕೇಶಿಯನ್ನು ಮಹಾಮಲ್ಲನು ನಿಗ್ರಹಿಸಿದುದೂ ಮರೆಯತಕ್ಕುದಲ್ಲ. ಏಕಕಾಲದಲ್ಲಿ ಮೂವರು ಮಹಾಪ್ರಭುಗಳು ಭಾರತವರ್ಷವನ್ನು ಆಳಿದರು. ಮೂವರ ಆಸ್ಥಾನಗಳನ್ನೂ ಯುವನ್ತ್ಸಾಂಗನು ಕಂಡು ಕಾಲಸ್ಥಿತಿಯನ್ನು ವರ್ಣನೆಮಾಡಿದ್ದಾನೆ. ಫಾಹಿಯನ್ನನ ವಿವರವು ಐದನೆ ಶತಮಾನದ ಆದಿ ಭಾಗದ ಸ್ಥಿತಿಯನ್ನು ವರ್ಣಿಸಿದಂತೆ ಯುವನ್ತ್ಸಾಂಗನ ವಿವರವು ಏಳನೆ ಶತಮಾನದ ಪೂರ್ವಾರ್ಧದ ಸ್ಥಿತಿಯನ್ನು ವರ್ಣಿಸುವುದು.

"ಸಾಮಾನ್ಯ ಜನರಲ್ಲಿ ವಿಲಾಸ ಪ್ರೀತಿಯಿದ್ದರೂ ಎಲ್ಲರೂ ನ್ಯಾಯಪರರಾಗಿಯೂ ಮಾನವಂತರಾಗಿಯೂ ಇರುತ್ತಾರೆ. ಹಣದ ವಿಚಾರದಲ್ಲಿ ಅವರು ಮೋಸವನ್ನರಿಯರು. ನ್ಯಾಯವನ್ನು ಸ್ಥಾಪಿಸುವುದರಲ್ಲಿ ಅವರು ದಯಾಪರರಾಗಿಯೇ ಇರುತ್ತಾರೆ. ಪರಲೋಕದಲ್ಲಿ ಸಂಭವಿಸುವ ಶಿಕ್ಷೆಯನ್ನು ಸ್ಮರಿಸಿ ಅವರು ಇಹಲೋಕದ ವಿಷಯಗಳನ್ನು ಹಗುರಮಾಡಿ ನೋಡುತ್ತಾರೆ. ಅವರು ಮೋಸವನ್ನಾಗಲಿ ದ್ರೋಹವನ್ನಾಗಲಿ ಮಾಡತಕ್ಕವರಲ್ಲ. ನುಡಿದಂತೆ ನಡೆದುಕೊಳ್ಳುತ್ತಾರೆ. ರಾಜ್ಯಭಾರದ ನೀತಿಯಲ್ಲಿ ಧರ್ಮವೇ ನೆಲೆಸಿರುತ್ತದೆ. ಜನರ ನಡತೆಯಲ್ಲಿ ಮಾರ್ದವವೂ ಮಾಧುರ್ಯವೂ ತುಂಬಿರುತ್ತವೆ.

ಧರ್ಮ ತತ್ವಗಳನ್ನೇ ಆಡಳಿತದಲ್ಲಿ ಆಚರಿಸುವುದರಿಂದ ಸರ್ಕಾರವು ಸರಳವಾದುದು. ಮನೆಗಳ ಲೆಕ್ಕವನ್ನು ಕಡತಗಳಲ್ಲಿ ದಾಖಲೆಮಾಡುವ ಪದ್ಧತಿಯಿಲ್ಲ. ಜನರನ್ನು ನಿರ್ಬಂಧಗೊಳಿಸಿ ಚಾಕರಿಮಾಡಿಸುವುದೂ ಇಲ್ಲ. ರಾಜನ ಆದಾಯವು ನಾಲ್ಕು ಪಾಲಾಗಿರುತ್ತದೆ. ಒಂದು ಪಾಲು ಆಸ್ಥಾನದ ವೆಚ್ಚಕ್ಕಾಗುವುದು; ಎರಡನೆ ಪಾಲು ಮಂತ್ರಿಗಳ ಮತ್ತು

ಅಧಿಕಾರಿಗಳ ವೇತನಗಳಿಗಾಗುವುದು ; ಮೂರನೆಯ ಪಾಲು ವಿದ್ಯಾವಂತರ ಮತ್ತು ಕಲಾಕುಶಲಿಗಳ ಪ್ರೋತ್ಸಾಹಕ್ಕಾಗಿ ವೆಚ್ಚವಾಗುವುದು ; ನಾಲ್ಕನೆಯದು ದಾನಧರ್ಮಕ್ಕೆ ಉಪಯುಕ್ತವಾಗುವುದು. ಈ ರೀತಿಯಲ್ಲಿ ತೆರಿಗೆಗಳು ಹಗುರವಾಗಿರುತ್ತವೆ; ಜನಗಳು ಹೆಚ್ಚಾಗಿ ದುಡಿಯಬೇಕಾಗಿರುವುದಿಲ್ಲ. ಎಲ್ಲರೂ ಶಾಂತಿಮಯವಾದ ಜೀವನವನ್ನು ನಡೆಸುತ್ತಾರೆ; ಎಲ್ಲರೂ ಭೂಮಿಯನ್ನು ಸಾಗುವಳಿಮಾಡುತ್ತಾರೆ. ಭೂವ್ಯವಸಾಯ ಮಾಡುವವರು ಆರರಲ್ಲಿ ಒಂದು ಪಾಲನ್ನು ರಾಜನಿಗೆ ಕಂದಾಯವಾಗಿ ಸಲ್ಲಿಸುತ್ತಾರೆ. ವ್ಯಾಪಾರದಲ್ಲಿ ನಿರತರಾದ ವರ್ತಕ ಜನರು ಪ್ರಯಾಣ ಮಾಡುತ್ತಲೇ ಇರುತ್ತಾರೆ. ಸೇತುವೆಗಳಲ್ಲಿಯೂ ಸುಂಕದ ಕಟ್ಟೆಗಳಲ್ಲಿಯೂ ಅಲ್ಪವಾದ ಶುಲ್ಕವನ್ನು ತೆಗೆದುಕೊಂಡು ಮಾರ್ಗವನ್ನು ಬಿಟ್ಟುಕೊಡುತ್ತಾರೆ. ಸಮಯದಲ್ಲಿ ಕೆಲಸವನ್ನು ಒತ್ತಾಯದಿಂದ ಮಾಡಿಸಿದರೂ ಕೆಲಸಕ್ಕೆ ತಕ್ಕಂತೆ ವರಮಾನವನ್ನು ಕೊಡಿಸುತ್ತಾರೆ.

ಸರಹದ್ದಿನ ಪ್ರಾಂತಗಳಲ್ಲಿ ಸೈನ್ಯಗಳು ಕಾವಲಿದ್ದುಕೊಂಡು ದುಷ್ಟರನ್ನು ಅಡಗಿಸುತ್ತಲಿರುತ್ತವೆ. ರಾತ್ರಿ ವೇಳೆಯಲ್ಲಿ ಅರಮನೆಯ ಸುತ್ತಲೂ ಸೈನಿಕರು ಕಾವಲಿರುತ್ತಾರೆ. ಅವಶ್ಯವಿದ್ದಂತೆ ಸೈನ್ಯದಲ್ಲಿ ಭಟರನ್ನು ಸೇರಿಸಿಕೊಳ್ಳುತ್ತಾರೆ ; ಅವರಿಗೆ ಸಂಬಳಗಳು ಗೊತ್ತಾಗಿರುತ್ತವೆ.''

ಫಾಹಿಯನ್ನನ ಕಾಲಕ್ಕೂ ಯುವನ್ಚ್ವಂಗನ ಕಾಲಕ್ಕೂ ಇನ್ನೂರು ವರ್ಷಗಳ ಅಂತರವುಂಟು. ಕೆಲವು ಅಂಶಗಳಲ್ಲಿ ಭೇದ ತೋರಿಕೊಂಡರೂ ಸಾಮಾನ್ಯವಾಗಿ ಅವರಿಬ್ಬರ ವರ್ಣನೆಯೂ ಅನೇಕಾಂಶಗಳಲ್ಲಿ ಒಂದೇ ಆಗಿದೆ. ಆಡಳಿತ, ಜನಜೀವನದ ಸೌಭಾಗ್ಯ, ಭಾರತೀಯರ ಗುಣ ವಿಶೇಷಗಳು, ವಿದ್ಯಾರ್ಜನೆ, ಧಾರ್ಮಿಕ ಸ್ಥಿತಿಗಳ ವಿವರದಲ್ಲಿ ಅವರಿಬ್ಬರ ವರ್ಣನೆಯಿಂದಲೂ ಉತ್ತಮ ಸ್ಥಿತಿಯು ನೆಲೆಸಿದ್ದಿತೆಂದು ಸ್ಪಷ್ಟವಾಗುತ್ತದೆ. ಗುಪ್ತಸಾಮ್ರಾಜ್ಯ ಸ್ಥಾಪನೆಯ ಕಾಲದಿಂದ ಕ್ರಿ. ಶ. 650ರವರೆಗೆ ನಡೆದ

ಕಾಲಭೇದ

ಕಾಲದಲ್ಲಿ ಹೂಣರ ಅವಾಂತರವು ನಡೆದು ಸ್ವಲ್ಪ ಕಾಲ ದೇಶದ ವಾಯುವ್ಯ ಭಾಗದಲ್ಲಿ ನೆಮ್ಮದಿಗೆ ಭಂಗ ತೋರಿದ್ದರೂ ಒಟ್ಟಿನಲ್ಲಿ ಉನ್ನತಿಯ ಸ್ಥಿತಿಯೇ ನೆಲೆಸಿದ್ದಿತೆಂದು ಹೇಳಬೇಕಾಗಿದೆ. ಗುಪ್ತ ಸಾರ್ವಭೌಮರ ಕಾಲಸ್ಥಿತಿಗೂ

ಹರ್ಷವರ್ಧನನ ಕಾಲಸ್ಥಿತಿಗೂ ವ್ಯತ್ಯಾಸಗಳು ಕೆಲವುಂಟು; ಆದ್ದರಿಂದ ಗುಪ್ತರ ಕಾಲವನ್ನು ಸ್ವರ್ಣಯುಗವೆಂದು ಕರೆಯುವುದು. ಒಟ್ಟಿನಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ವಿದ್ಯಾರ್ಜನೆಯ ಸ್ಥಿತಿಗಳಲ್ಲಿ ಅತಿಪ್ರೌಢಸ್ಥಿತಿಯು ತೋರುವುದು. ಅಲ್ಲದೆ ಬೃಹತ್ತರ ಭಾರತವೆನ್ನುವುದು ವೈಶಾಲ್ಯವನ್ನೂ ಭದ್ರತೆಯನ್ನೂ ಈ ಕಾಲದಲ್ಲಿಯೇ ಪಡೆಯಿತು.

## ಬೃಹತ್ತರ ಭಾರತ

ದೂರವ್ಯಾಪಾರ

ವ್ಯಾಪಾರವು ಈ ಕಾಲದಲ್ಲಿ ಉತ್ತೇಜನವನ್ನು ಪಡೆಯಿತು. ಕ್ರಿ. ಶ. 300ರ ತರುವಾಯ ರೋಮುಕ ಪಟ್ಟಣದೊಡನೆ ವ್ಯಾಪಾರವು ಕುಗ್ಗಿ 476ರಲ್ಲಿ ರೋಮುಕ ಸಾಮ್ರಾಜ್ಯದ ಪಶ್ಚಿಮಾರ್ಧವು ನಾಶವಾದಮೇಲೆ ಕ್ಷಯವಾಯಿತು. ಪೂರ್ವಭಾಗದ ಸಾಮ್ರಾಜ್ಯ (ರಾಜಧಾನಿ—ಕಾನ್‌ಸ್ಟಾಂಟಿನೋಪಲ್) ದೊಂದಿಗೆ ಮಾತ್ರ ವ್ಯಾಪಾರವು ನಾಶವಾಗದೆ ನಿಂತಿತು. ಪಶ್ಚಿಮ ಕ್ಷೇತ್ರಗಳಲ್ಲಿ ನಿಂತುಹೋದ ವ್ಯಾಪಾರಕ್ಕೆ ಬದಲಾಗಿ ಈ ಕಾಲದಲ್ಲಿ ಪೂರ್ವದಿಕ್ಕಿನಲ್ಲಿ ವ್ಯಾಪಾರವು ಅಭಿವೃದ್ಧಿ ಪಡೆಯಿತು. ಪಶ್ಚಿಮ ತೀರದ ರೇವುಗಳಿಂದ ಪಾರ್ಸೀಸ್ಥಾನಕ್ಕೂ ಕೆಂಪುಕಡಲಿನ ತೀರಕ್ಕೂ ವ್ಯಾಪಾರದ ಸರಕು ಹೊರಡುತ್ತಿದ್ದುದಲ್ಲದೆ ಪೂರ್ವದಿಕ್ಕಿನಲ್ಲಿ ಮಲಯ ದ್ವೀಪಗಳ ಕಡೆಗೂ ಸಮುದ್ರಮಾರ್ಗಗಳಲ್ಲಿ ವರ್ತಕರು ಹೊರಡುತ್ತಿದ್ದರು. ಪೂರ್ವತೀರದ ರೇವುಗಳಿಂದ ಆ ಪ್ರಯಾಣವು ಇನ್ನೂ ಸುಲಭವಾಗಿತ್ತು. **ಜವ, ಸುಮಾತ್ರ** ದ್ವೀಪಗಳಿಗೂ **ಮಲಯ, ಶ್ಯಾಮ, ಕಾಂಬುಜ** ಕ್ಷೇತ್ರಗಳಿಗೂ ಇನ್ನೂರು ಮಂದಿಯನ್ನೇರಿಸಿಕೊಂಡ ಹಡಗುಗಳು ಕ್ರಮವಾಗಿ ಹೊರಡುತ್ತಿದ್ದವು. ಕೌಂಡಿನ್ಯ ಗೋತ್ರಜರು ಶಾತವಾಹನ ಕಾಲದಲ್ಲಿಯೇ ಕ್ಷೇತ್ರಾಂತರಗಳ ನಿವಾಸಿಗಳಾಗಿದ್ದರು. ಗುಪ್ತಸಾಮ್ರಾಜ್ಯವು ಸ್ಥಾಪನೆಯಾದ ಮೊದಲೇ ವರ್ತಕರು ಆ ದೂರ ಕ್ಷೇತ್ರಗಳಲ್ಲಿ ಮನೆಗಳನ್ನು ಮಾಡಿಕೊಂಡಿದ್ದರು. ಗುಪ್ತಸಾರ್ವಭೌಮರ ಕಾಲದ ಉತ್ತೇಜನದಿಂದಲೂ ಹೂಣಜನರ ಹಾವಳಿಯಿಂದಲೂ ಹೆಚ್ಚು ಹೆಚ್ಚಾಗಿ

ಜನರು ಆ ಕ್ಷೇತ್ರಾಂತರಗಳಿಗೆ ಹೊರಟರು. ರಾಜ್ಯಗಳನ್ನು ಕಳೆದು ಕೊಂಡ ಕ್ಷತ್ರಿಯ ಕುಲಸ್ಥರು ಹೊರಟು ಅಲ್ಲಿ ರಾಜ್ಯಗಳನ್ನು ಕಟ್ಟಿ ಕೊಂಡರು. 5ನೆ ಶತಮಾನದಲ್ಲಿ ಕಾಂಬುಜದಲ್ಲಿ ಹಿಂದೂ ರಾಜ್ಯವು ಸ್ಥಾಪಿತವಾಗಿ ಕಾಲಗತಿಯಲ್ಲಿ ಪ್ರಬಲವಾಯಿತು; ಸುಮಾತ್ರದಲ್ಲಿ ಏಳನೆ ಶತಮಾನದಲ್ಲಿ ಹಿಂದೂ ರಾಜ್ಯವು ಉನ್ನತಿಯನ್ನು ಪಡೆಯಿತು. ಕ್ಷತ್ರಿಯ ಕುಲದವರಾದ ಈ ಪ್ರಭುಗಳು ಬ್ರಾಹ್ಮಣ ಮಂತ್ರಿಗಳನ್ನೂ ಬ್ರಾಹ್ಮಣ ಪುರೋಹಿತರನ್ನೂ ಕರೆಸಿಕೊಂಡು ಅವರ ಮಾತನ್ನು ಗೌರವಿಸಿ ಹಿಂದೂ ಧರ್ಮವನ್ನು ಅನುಸರಿಸಿದರು. ಸಂಸ್ಕೃತ ಭಾಷೆಯು ರೂಢಿಯಾಯಿತು; ಅನೇಕ ದೇವಾಲಯಗಳು ನಿರ್ಮಿತವಾದವು. ವ್ಯಾಪಾರ ಸಂಬಂಧವೊಂದೇ ಅಲ್ಲದೆ ಈ ಕ್ಷೇತ್ರಗಳೊಂದಿಗೆ ಸಾಂಸ್ಕೃತಿಕ ಸಂಬಂಧಗಳೂ ಬೆಳೆದವು. ಫಾಹಿಯನ್ನನ ಪ್ರಯಾಣವೇ ಅದನ್ನು ಸೂಚಿಸುತ್ತದೆ. ಅದರಂತೆಯೇ **ಗುಣವರ್ಮ**ನೆಂದು ಪ್ರಖ್ಯಾತನಾದ ಬೌದ್ಧ ಗುರುವಿನ ಪ್ರಯಾಣವೂ ಈ ಕಾಲದ ಒಂದು ಲಕ್ಷಣವನ್ನು ಸ್ಪಷ್ಟಗೊಳಿಸುತ್ತದೆ.

ಕ್ಷೇತ್ರಾಂತರ ಸಾಧನೆ

ಕಾಶ್ಮೀರ ದೇಶದ ಸಮೀಪದಲ್ಲಿ ಒಂದು ರಾಜವಂಶದಲ್ಲಿ ಗುಣವರ್ಮನು ಹುಟ್ಟಿದ್ದನು. ಆತನ ತಂದೆತಾಯಿಗಳು ದ್ರೋಹಿಗಳ ದ್ವೇಷಕ್ಕೆ ಸಿಕ್ಕಿ ರಾಜ್ಯಭ್ರಷ್ಟರಾಗಿ ಗುಣವರ್ಮನ ಜನನ ಕಾಲದಲ್ಲಿ ವನವಾಸಿಗಳಾಗಿದ್ದರು. ತಂದೆಯು ಬೌದ್ಧ ಧರ್ಮದಲ್ಲಿ ವಿಶೇಷ ಭಕ್ತಿಯುಳ್ಳವನಾಗಿ ಪಂಡಿತನಾಗಿದ್ದನು; ಗುಣವರ್ಮನಿಗೆ ಸುಶಿಕ್ಷಣವನ್ನು ಕೊಟ್ಟು ವಿದಗ್ಧನನ್ನಾಗಿ ಮಾಡಿದನು. ಗುಣವರ್ಮನಿಗೆ ಮೂವತ್ತು ವರ್ಷ ತುಂಬಿದಾಗ ರಾಜ್ಯದಲ್ಲಿ ರಾಜನಿಲ್ಲದಂತಾಗಿ ಮಂತ್ರಿ ಸೇನಾಪತಿಗಳು ಈತನನ್ನು ಹುಡುಕಿಕೊಂಡು ಬಂದು ರಾಜಧಾನಿಗೆ ನಡೆದು ಸಿಂಹಾಸನವನ್ನೇರಬೇಕೆಂದು ಬೇಡಿಕೊಂಡರು. ಸಂನ್ಯಾಸವನ್ನು ತಾಳಿ ಬೇರೆ ಕರ್ತವ್ಯಗಳನ್ನು ಕುರಿತು ಯೋಚಿಸುತ್ತಿದ್ದ ಗುಣವರ್ಮನು ರಾಜ್ಯ ಬೇಡವೆಂದನು. ಬೌದ್ಧ ಧರ್ಮವನ್ನು ಶುದ್ಧಿಗೊಳಿಸಬೇಕೆಂದೂ ಪ್ರಚಾರಮಾಡಬೇಕೆಂದೂ ಆತನು ಕಾತರನಾಗಿದ್ದನು. ರಾಜ್ಯವನ್ನು ತೃಣೀಕರಿಸಿ ಈತನು ಕಾಶ್ಮೀರ ಪ್ರಾಂತವನ್ನು ಬಿಟ್ಟು ಸಿಂಹಳಕ್ಕೆ

ಗುಣವರ್ಮ

ಪ್ರಯಾಣಮಾಡಿದನು ; ಅಲ್ಲಿಂದ ಜವದ್ವೀಪಕ್ಕೆ ಹೊರಟು ಅಲ್ಲಿ ಬೌದ್ಧ ಧರ್ಮ ಪ್ರಚಾರವನ್ನು ಮಾಡಿದನು. ಈತನ ಕೀರ್ತಿಯು ಈ ಮೊದಲೇ ಚೀನೀಯರಿಗೆ ಶ್ರುತವಾಗಿತ್ತು ; ಅಲ್ಲಿಯ ಬೌದ್ಧ ಪಂಡಿತರು ಗುಣವರ್ಮನನ್ನು ಕರೆಸುವಂತೆ ತಮ್ಮ ಚಕ್ರವರ್ತಿಯನ್ನು ಪ್ರಾರ್ಥಿಸಿದರು. ಆತನನ್ನು ಕರೆಯಲು ಬಂದ ದೂತರು ಕಾಶ್ಮೀರದಲ್ಲಿ ಆತನನ್ನು ಕಾಣದೆ ಸಮಾಚಾರವನ್ನು ತಿಳಿದುಕೊಂಡು ಆತನ ಹಿಂದೆಯೇ ಸಿಂಹಳದ್ವೀಪಕ್ಕೆ ಹೊರಟರು. ಅಲ್ಲಿಗೆ ಬರುವ ವೇಳೆಗೆ ಗುಣವರ್ಮನು ಜವದ್ವೀಪಕ್ಕೆ ಹೊರಟಿದ್ದನು. ಅವರು ಜವದ್ವೀಪಕ್ಕೂ ಬಂದರು. ಗುಣವರ್ಮನಿಗೂ ಆ ವಿಧವಾದ ಯೋಚನೆಯೇ ಇದ್ದುದರಿಂದ ಅವರೊಡನೆ ಕ್ಯಾಂಟನ್ ಪಟ್ಟಣಕ್ಕೆ ಹೊರಟು ಅಲ್ಲಿಂದ ನಾನ್ಕಿಂಗ್ ಪಟ್ಟಣಕ್ಕೆ ಪ್ರಯಾಣಮಾಡಿದನು. ಅಲ್ಲಿ ಅನೇಕ ಗ್ರಂಥಗಳನ್ನು ಚೀನೀಭಾಷೆಗೆ ಭಾಷಾಂತರಮಾಡಿ, ಬೌದ್ಧ ಸಂಘವನ್ನು ಉದ್ಧಾರಮಾಡಿ ಚೀನೀಯರಿಗೆ ಅಮೋಘವಾದ ಉಪಕಾರ ಮಾಡಿ, ಅಲ್ಲಿಯೇ ಕಾಲವಾದನು. ಗುಣವರ್ಮನಂತೆಯೇ ಇತರರು ಅನೇಕರಾಗಿದ್ದರು. ಕ್ರಿಸ್ತ ಶಕದ ಆರಂಭದಿಂದ 9ನೆ ಶತಮಾನದವರೆಗೆ ಬೌದ್ಧ ಪಂಡಿತ ಶ್ರೇಷ್ಠರು ಚೀನೀದೇಶಕ್ಕೆ ಹೊರಡುವುದು ಸಾಧಾರಣವಾಗಿತ್ತು. ಚೀನೀಯರು ಪುಣ್ಯಭೂಮಿಯ ಯಾತ್ರೆಗಾಗಿ ಬರುವುದೂ ಸಾಧಾರಣವಾಗಿತ್ತು. **ಪರಮಾರ್ಥ, ಬೋಧಿಧರ್ಮ, ಪರಮತಿ** ಮುಂತಾದ ಭಾರತೀಯ ಬೌದ್ಧ ಗುರುಗಳು ಹೀಗೆಯೇ ಗುಣವರ್ಮನಂತೆ ಚೀನಾದೇಶಕ್ಕೆ ಹೊರಟವರು.

ಬೃಹತ್ತರ ಭಾರತ

ಆಗ್ನೇಯ ಕ್ಷೇತ್ರಗಳಲ್ಲಿ ಕ್ರಿ. ಶ. 78ರಲ್ಲಿ **ಶಕಪ್ರತೀಪ**ನೆಂಬ ಆರ್ಯ ರಾಜನು ಜವದ್ವೀಪದಲ್ಲಿ ನೆಲೆಸಿದ್ದನಂತೆ. ಈಗ ಬಂಗಾಳ ಕೊಲ್ಲಿಯೆಂಬ ಸಮುದ್ರ ಭಾಗವನ್ನು ಹಿಂದೆಯೇ ಭಾರತೀಯರು ದಾಟಿದ್ದರು. ಅಶೋಕನ ಕಾಲದಲ್ಲಿಯೇ ಬೌದ್ಧಭಿಕ್ಷುಗಳು ಬರ್ಮಾದೇಶಕ್ಕೆ ಹೊರಟು ಅಲ್ಲಿ ತಮ್ಮ ಪ್ರಚಾರ ಕಾರ್ಯವನ್ನು ನೆರವೇರಿಸಿದ್ದರು. ಅಲ್ಲಿ ತಾರಕ್ಷೇತ್ರವೆಂಬುದೂ ಸದ್ಧರ್ಮನಗರವೆಂಬುದೂ ಈ ಕಾಲಕ್ಕೆ ಹಿಂದೆಯೇ ಹೆಸರು ಪಡೆದಿದ್ದವು. 3–4ನೆ ಶತಮಾನಗಳಲ್ಲಿ ಕಳಿಂಗದೇಶದವರು ಹೊರಟು

ಜವದ್ವೀಪದಲ್ಲಿ ನೆಲೆಸಿದರು. ಇತರರೂ ಹೊರಟು ಮಲಯ ಪರ್ಯಾಯ ದ್ವೀಪದ ಮುಂದಿರುವ ಶ್ಯಾಮ, ಕಾಂಬುಜ ದೇಶಗಳಲ್ಲಿ ನೆಲೆಸಿದರು. **ಕೌಂಡಿನ್ಯ**ನೆಂಬ ಬ್ರಾಹ್ಮಣನು ಆ ಕ್ಷೇತ್ರಗಳಲ್ಲಿ ಸನಾತನ ಧರ್ಮವನ್ನು ನೆಲೆಗೊಳಿಸಿದನಂತೆ. ಅಲ್ಲಿ ನೆಲೆಸಿದ ಕ್ಷತ್ರಿಯ ಕುಮಾರರು ಅವುಗಳನ್ನು ಉಪಭಾರತವರ್ಷಗಳಂತೆಸಗಿ ಮಾತೃಭೂಮಿಯನ್ನು **ಆರ್ಯದೇಶ**ವೆಂದು ಸ್ಮರಿಸುತ್ತಿದ್ದರು. **ಜವ, ಸುಮಾತ್ರ, ಬಾಲಿ, ಭೋಜ** ದ್ವೀಪಗಳಲ್ಲಿ ಪ್ರಬಲವಾದ ರಾಜ್ಯಗಳು ಉದ್ಭವಿಸಿದವು. ಚಂಪಾಕ್ಷೇತ್ರವೂ ಭಾರತೀಯರದಾಯಿತು. ಆ ತರುವಾಯ ಪೀತಸಮುದ್ರವನ್ನು ದಾಟಿ ಜಪಾನಿಗೂ ಭಾರತೀಯರು ಹೊರಡುವವರಾದರು. ಜಪಾನಿನ ತೀರವನ್ನು ಸೇರಿಕೊಂಡ ಒಬ್ಬಾನೊಬ್ಬ ಬ್ರಾಹ್ಮಣನಿಂದಲೇ ಅಲ್ಲಿಯವರಿಗೆ ಹತ್ತಿಯ ಗಿಡವನ್ನು ಬೆಳೆಯಿಸುವ ವಿವರವು ದೊರಕಿತಂತೆ. ಚೀನಾದೇಶದಿಂದಲೂ ಜಪಾನಿಗೆ ಬೌದ್ಧಗುರುಗಳು ಹೊರಟರು. ಚೀನಾ ಜಪಾನುಗಳಲ್ಲಿ ಬೌದ್ಧಮತವೇ ಹರಡಿಕೊಂಡಿತು. ಆಗ್ನೇಯ ಕ್ಷೇತ್ರಗಳಲ್ಲಿ ಬೌದ್ಧ ಮತವು ವಿಶೇಷವಾಗಿ ಪ್ರಚಾರವಾಗಲಿಲ್ಲ. ಅಲ್ಲಿ ನೆಲೆಸಿದ್ದ ಬ್ರಾಹ್ಮಣರು ಸನಾತನ ಮತವನ್ನೇ ಹರಡಿದರು. ಜವ, ಸುಮಾತ್ರ, ಶ್ಯಾಮ (Siam), ಕಾಂಬುಜ (Cambodia), ಚಂಪಾ (Annam) ಕ್ಷೇತ್ರಗಳಲ್ಲಿ ಹಿಂದೂ ಮತವೇ ದೃಢವಾಯಿತು. ಭರತವರ್ಷದಲ್ಲಿ ರಾಮಾಯಣ ಮಹಾಭಾರತ ಗಳು ಜನಶಿಕ್ಷಣವನ್ನು ನಡೆಸಿಕೊಟ್ಟಂತೆಯೇ ಇಲ್ಲಿಯೂ ಆ ಮಹಾಕಾವ್ಯ ಗಳು ಜನಸಾಮಾನ್ಯರಿಗೆ ಪ್ರಿಯವಾಗಿ ಮತವನ್ನು ಉಪದೇಶಿಸತಕ್ಕ ವಾದುವು. ಬೌದ್ಧಮತ ತತ್ವಗಳೂ ಆಚಾರಗಳೂ ಹಿಂದೂಮತದಲ್ಲಿಯೇ ಸೇರಿಹೋದವು. ಆದ್ದರಿಂದ ಧಾರ್ಮಿಕ ಸ್ಥಿತಿಗತಿಗಳಲ್ಲಿ ಈ ಆಗ್ನೇಯ ದೇಶಗಳು ಮಾತೃಭೂಮಿಯ ಪ್ರತಿಬಿಂಬಗಳಂತೆಯೇ ಇದ್ದು **ಉಪಭಾರತ ವರ್ಷ**ಗಳಾಗಿ ಪರಿಣಮಿಸಿದವು. ಪುರಾಣಗಳಲ್ಲಿ ಭಾರತವರ್ಷವು ನವಭೇದಗಳುಳ್ಳದೆಂದು ವರ್ಣಿತವಾಗಿ **ನವದ್ವೀಪ**ಯುಕ್ತವೆಂದು ಪ್ರಸಿದ್ಧವಾಯಿತು.

ಮಹಾಯಾನದಲ್ಲಿ ನಾಸ್ತಿಕ್ಯ ತೊಲಗಿ ಆಸ್ತಿಕ್ಯವು ನೆಲೆಸಿದುದೂ ಸಾಮಾನ್ಯಜನರಲ್ಲಿ ಉತ್ಸವಾದಿ ಆಚರಣೆಗಳು ವೃದ್ಧಿಯಾದುದೂ ಸಂಸ್ಕೃತ




ರಾಜಗೋಪಾಲ್ ಫೋಟೋ ಜಿಂಕೊ ಆಫೀಸ್, ಬೆಂಗಳೂರು ಸಿಟಿ

ವ್ಯಾಸಂಗವು ಪ್ರಬಲಗೊಂಡುದೂ ಹಿಂದೆಯೇ ಲಕ್ಷಣಗಳಾಗಿದ್ದವು.

**ಹಿಂದೂ ಮತ**

ಹಾಗೆಯೇ ಬ್ರಾಹ್ಮಣ ಮತದಲ್ಲಿ ಬೌದ್ಧನೀತಿಯು ತೋರಿಕೊಂಡು ಎರಡೂ ಒಂದಾದವು. ಎರಡೂ ಒಟ್ಟಿಗೆ ಸೇರಿ ಹಿಂದೂಮತವೆಂಬ ಮತಧರ್ಮವು ಸಿದ್ಧವಾಯಿತು. ಇಬ್ಬರಿಗೂ ಇದ್ದ ವ್ಯತ್ಯಾಸಗಳು ನಷ್ಟವಾಗುತ್ತ ಬಂದವು; ಭಿನ್ನ ತತ್ವಗಳನ್ನು ಅವಲಂಬಿಸಿದವರು ಪ್ರತ್ಯೇಕತೆಯನ್ನು ತೋರಿದಾಗ್ಯೂ ಶಾಂತಿಯೇ ಎಲ್ಲರಿಗೂ ಪರಮ ಧ್ಯೇಯವಾಗಿದ್ದುದರಿಂದ ಭಿನ್ನ ಮತಸ್ಥರಲ್ಲಿ ಪರಸ್ಪರ ಗೌರವವು ನೆಲೆಸಿತು. ಬೌದ್ಧ ಮತಸ್ಥರಿಗೆ ಹಿಂಸೆಕೊಟ್ಟ ಮಿಹಿರಗುಲ ಶಶಾಂಕರಾಜರು ಅಲ್ಪ ಸಂಖ್ಯೆಯವರಾಗಿದ್ದರು; ಶಾಂತಿ, ಸಹನ, ಗೌರವಗಳೇ ಆಸೇತುಹಿಮಾಚಲ ಪರ್ಯಂತ ಮುಖ್ಯ ಲಕ್ಷಣಗಳಾಗಿದ್ದವು. ಫಾಹಿಯನ್ನನ ವಿವರದಲ್ಲಿ ವಿದ್ಯಾಪೀಠಗಳಲ್ಲಿಯೂ ವಿಹಾರಗಳಲ್ಲಿಯೂ ಪರಸ್ಪರ ಗೌರವವು ಎಷ್ಟು ಸ್ಥಿರವಾಗಿದ್ದಿತೆಂದು ಸ್ಪಷ್ಟವಾಗಿ ಆಶ್ಚರ್ಯ ತೋರುವುದು. ಬ್ರಾಹ್ಮಣ ಗುರುಗಳು ಬೌದ್ಧ ತತ್ವಗಳನ್ನೂ ನೀತಿಯನ್ನೂ ಉಪದೇಶಿಸುತ್ತಿದ್ದರು; ಬೌದ್ಧ ವಿದ್ವಾಂಸರೂ ಯತಿಗಳೂ ಸಂಸ್ಕೃತ ಭಾಷೆಯನ್ನೂ ಪುರಾತನ ತತ್ವಗ್ರಂಥಗಳನ್ನೂ ಹೇಳಿಕೊಡುತ್ತಿದ್ದರು. ಬೌದ್ಧವಿಹಾರಗಳೂ ದೇವಾಲಯಗಳೂ ಜನರ

**ವಿಹಾರಗಳ ಸ್ಥಾನ**

ಜೀವನದಲ್ಲಿ ಧರ್ಮವನ್ನು ಬೀರುತ್ತಿದ್ದುದಲ್ಲದೆ ಅನೇಕ ಬಗೆಯ ಉಪಕಾರಗಳನ್ನೂ ಒದಗಿಸುತ್ತಿದ್ದವು. ಪ್ರಾರ್ಥನೆ ಪೂಜೆಗಳಿಗವೇ ಸ್ಥಾನ; ಶಿಕ್ಷಣಕ್ಕೆ ಅವೇ ಸ್ಥಳ; ಪುರಾಣ ಶ್ರವಣಕ್ಕೂ ಸಭಾಕಾರ್ಯಕ್ಕೂ ಅವೇ ಎಡೆ; ತತ್ವಾರ್ಥ ವ್ಯಾಖ್ಯಾನಗಳಿಗೂ ಅಲ್ಲಿಯೇ ಇಂಬು; ಉತ್ಸವಾದಿ ವಿನೋದಗಳಿಗೂ ಕಲಾಪ್ರದರ್ಶನಗಳಿಗೂ ಅವೇ ತವರ್ಮನೆ; ಬಡಬಗ್ಗರು, ಅನಾಥರು, ಅಂಗಹೀನರು, ರೋಗಿಜನರು ಮುಂತಾದವರಿಗೆ ಅವೇ ಆಶ್ರಯ; ಯಾತ್ರೆಗಳಿಗೆ ಅವೇ ಲಕ್ಷ್ಯ.

ಚೀನೀ ಯಾತ್ರಿಕರ ದೆಸೆಯಿಂದ **ನಾಲಂದಾ ವಿಹಾರ**ದ ವರ್ಣನೆಯು ಲಬ್ಧವಾಗಿದೆ. "ಸುಂದರ ಶಿಲ್ಪ ವಿರಾಜಮಾನಗಳಾದ ಗೋಪುರಗಳಿಂದಲೂ ಗಿರಿಶೃಂಗಗಳನ್ನು ಧಿಕ್ಕರಿಸುವ ಶಿಖರಗಳಿಂದಲೂ ಅಭ್ರಂಕಷಗಳಾದ ಗೃಹ

ದರ್ಶನಶಾಲೆಗಳಿಂದಲೂ ಆ ವಿಹಾರವು ಶೋಭಿಸುತ್ತಿತ್ತು. ಭಿಕ್ಷುಗಳು ವಾಸವಾಗಿರಲು ನಾಲ್ಕಂತಸ್ತಿನ ಭವನಗಳಿದ್ದವು; ಅಲ್ಲಿಯ ಸ್ತಂಭಗಳೂ ವಿತಾನಗಳೂ ಶಿಲ್ಪ ಚಾತುರ್ಯದಿಂದ ರಂಜಿಸುತ್ತಿದ್ದವು. ಮೇಲಿನ ಹೆಂಚುಗಳು ಸೂರ್ಯರಶ್ಮಿಯಲ್ಲಿ ಚಿತ್ರವಿಚಿತ್ರಗಳಾದ ವರ್ಣಗಳನ್ನು ಬೀರುತ್ತಿದ್ದವು. ಗೋಪುರಗಳಿಗೆ ಎರಡು ಪಾರ್ಶ್ವಗಳಲ್ಲಿಯೂ ಚೈತ್ಯಗಳೂ ಆಲಯಗಳೂ ಇದ್ದವು. ಇವುಗಳ ಸುತ್ತಲೂ ಮನೋಹರಗಳಾದ ಸರಸ್ಸುಗಳೂ ಆಮ್ರವನಗಳೂ ಇದ್ದವು. ಕಾಸಾರಗಳಲ್ಲಿ ಸ್ವಚ್ಛವಾದ ನೀರಿನ ಮೇಲೆ ನೀಲೋತ್ಪಲಗಳೂ ರಕ್ತವರ್ಣದ ಕಣಕಪುಷ್ಪಗಳೂ ವಿಲಕ್ಷಣವಾದ ಕಾಂತಿಯನ್ನು ಕೊಡುತ್ತಲಿದ್ದವು. ಈ ವಿದ್ಯಾಪೀಠದಲ್ಲಿ ಶಿಕ್ಷಿತರಾಗಲು ಕೊರೆಯ, ಮಾಂಚೂರಿಯ, ಬಾಹ್ಲೀಕದೇಶಗಳಿಂದ ಅನೇಕರು ಬರುತ್ತಿದ್ದರು. ಇಲ್ಲಿ 10,000ಕ್ಕಿಂತ ಹೆಚ್ಚಾದ ಜನರಿದ್ದರು. ಇಲ್ಲಿಯ ಭಿಕ್ಷುಗಳು ಮಹಾ ಮೇಧಾಸಂಪನ್ನರು; ಅವರ ಪ್ರವರ್ತನೆಯು ನಿಷ್ಕಲಂಕವಾದುದು.'' ಈ ವಿದ್ಯಾನಿಲಯದಲ್ಲಿ ವಿಖ್ಯಾತವಾದ ಗ್ರಂಥಭಾಂಡಾಗಾರವೊಂದಿದ್ದಿತು. ಅದನ್ನು ರತ್ನಸಾಗರ, ರತ್ನೋದಧಿ, ರತ್ನರಂಜಕಗಳೆಂಬ ಮೂರು ದಿವ್ಯ ಭವನಗಳಲ್ಲಿಟ್ಟಿದ್ದರು. ಇಲ್ಲಿಯ ಆಚಾರ್ಯರಲ್ಲಿ ನಾಗಾರ್ಜುನ, ಅಶ್ವಘೋಷ, ವಸುಬಂಧು, ದಿಙ್ನಾಗ, ಕಮಲಶೀಲ, ಸಂಘಭದ್ರ, ಶಾಂತರಕ್ಷಿತ, ವೀರದೇವ, ಮಂಜುಶ್ರೀದೇವ, ಶ್ರೀಜ್ಞಾನ ಮುಂತಾದವರು ವಿಖ್ಯಾತರು. ಮಹಾಯಾನದರ್ಶನಗಳು, ವೇದಗಳು, ಹೇತುವಿದ್ಯಾ, ಶಬ್ದವಿದ್ಯಾ, ಚಿಕಿತ್ಸಾ, ತಂತ್ರ, ಸಾಂಖ್ಯ ಮೊದಲಾದವು ಇಲ್ಲಿ ಅಭ್ಯಸ್ತವಾಗುತ್ತಿದ್ದವು. ರಾಜರೆಲ್ಲರೂ ಅನೇಕ ವಿಧವಾಗಿ ಈ ವಿಹಾರಕ್ಕೆ ಸಹಾಯವನ್ನು ಮಾಡುತ್ತಿದ್ದರು. ಏಳನೆ ಶತಮಾನದಲ್ಲಿ ಒಂದುನೂರು ಗ್ರಾಮಗಳ ಆದಾಯವು ಇದಕ್ಕೆ ಸಲ್ಲುತ್ತಿತ್ತು. ಆ ಗ್ರಾಮಗಳ ಜನರು ಅಕ್ಕಿ, ಹಾಲು, ಬೆಣ್ಣೆ, ಹಣ್ಣು ಮುಂತಾದ ಆಹಾರವಸ್ತುಗಳನ್ನು ಪ್ರತಿನಿತ್ಯವೂ ಕಳುಹಿಸಿಕೊಡುತ್ತಿದ್ದರು. 8ನೆ ಶತಮಾನದವರೆಗೂ ನಾಲಂದಾ ವಿದ್ಯಾಪೀಠವು ಇಡೀ ಏಷ್ಯಾಖಂಡಕ್ಕೇ ಕೇಂದ್ರವಾಗಿತ್ತು.

ನಾಲಂದಾ

ಗ್ರಾಮಗಳು, ಶ್ರೇಣಿಗಳು, ಜಾತಿಗಳು ತಮ್ಮ ವ್ಯವಹಾರಗಳನ್ನು ತಾವೇ ವ್ಯವಸ್ಥೆಗೊಳಿಸುತ್ತ ಅಭಿವೃದ್ಧಿಪಡೆಯುತ್ತಿದ್ದ ಈ ಕಾಲದಲ್ಲಿ ಆಡಳಿತವೆನ್ನುವುದು ಹಲಕೆಲವು ಕರ್ತವ್ಯಗಳನ್ನು ಮಾತ್ರ ನೆರವೇರಿಸುತ್ತ ಆರ್ಯ ರಾಷ್ಟ್ರನೀತಿಯನ್ನು ಪಾಲಿಸುತ್ತಿತ್ತು. ಚೀನೀ ಯಾತ್ರಿಕರಿಬ್ಬರೂ ವಿವರಿಸಿದಂತೆ ರಾಜಪುರುಷರು ಸರಹದ್ದುಗಳಲ್ಲಿ ಸೈನ್ಯವನ್ನಿಟ್ಟು ದುಷ್ಟರನ್ನೂ ಕಂಟಕರನ್ನೂ ಶಿಕ್ಷಿಸುತ್ತಿದ್ದು ಕ್ಷೇಮ ಸೌಕರ್ಯಗಳನ್ನು ನೆಲೆಗೊಳಿಸುತ್ತಿದ್ದರು. ನೆಲಗಂದಾಯರೂಪದಲ್ಲಿ ಷಡ್ಭಾಗವನ್ನೂ ಶುಲ್ಕ ದಂಡಗಳನ್ನೂ ಗ್ರಹಿಸುತ್ತ ಅವರು ಉಳಿದ ವಿಷಯಗಳನ್ನು ಪ್ರಜೆಗಳಿಗೇ ಬಿಡುತ್ತಿದ್ದರು. ರಾಜರಲ್ಲಿ ಕ್ರೌರ್ಯವಾಗಲಿ ದೌಷ್ಟ್ಯವಾಗಲಿ ಇರಲಿಲ್ಲ. ರಾಜಪುರುಷರು ದೇವಾಂಶ ಸಂಭೂತರೆಂದು ಭಕ್ತಿ ಪಾತ್ರರಾದಾಗ್ಯೂ ಅವರಿಗೆ ಬಂಧನಗಳು ವಿಶೇಷವಾಗಿಯೇ ಇದ್ದುದರಿಂದ ಅವರು ಇತರ ದೇಶಗಳಲ್ಲಿ ಹೆಸರು ಪಡೆದ ನಿರಂಕುಶ ಪ್ರಭುಗಳನ್ನು ಹೋಲುವುದಿಲ್ಲ. ಧರ್ಮಬೋಧಕರಾದ ಬ್ರಾಹ್ಮಣರನ್ನು ಅಥವಾ ಬೌದ್ಧ ವಿದ್ವಾಂಸರನ್ನು ಮಂತ್ರಿಗಳಾಗಿಯೂ ಗುರುಗಳಾಗಿಯೂ ಕಾಣುತ್ತಿದ್ದ ರಾಜರು ನೀತಿಬದ್ಧರಾಗಿ ವಿದ್ವಾಂಸರನ್ನು ಪ್ರೋತ್ಸಾಹಿಸುವುದರಲ್ಲಿಯೂ ಕಲಾ ಚತುರರನ್ನು ಸನ್ಮಾನ ಮಾಡುವುದರಲ್ಲಿಯೂ ತಮ್ಮ ಕೀರ್ತಿಯನ್ನು ಅರಸುತ್ತಿದ್ದರು. ಧರ್ಮಕಾರ್ಯಗಳು ಅಂದರೆ ಜಲಾಶಯ, ಮಂದಿರ, ಚಿಕಿತ್ಸಾಲಯ, ಸತ್ರಗಳನ್ನು ಕಟ್ಟಿಸುವುದು ರಾಜರಲ್ಲಿಯೂ ಶ್ರೀಮಂತರಲ್ಲಿಯೂ ಸಾಮಾನ್ಯವಾಗಿತ್ತು. ಶಾಂತಿ ಸೌಭಾಗ್ಯಗಳು ಅತಿಶಯವಾಗಿ ಅಭಿವೃದ್ಧಿಗೊಂಡ ಕಾಲವಾದುದರಿಂದ ಈ ಕಾಲದಲ್ಲಿ ಸಾಹಿತ್ಯ, ಸಂಗೀತ, ವಾಸ್ತು, ಶಿಲ್ಪ, ಚಿತ್ರ, ನಾಟ್ಯ, ನೃತ್ಯ, ಅಭಿನಯ ಮುಂತಾದ ಕಲೆಗಳು **ಅಪೂರ್ವ ತೇಜಸ್ಸಿ**ನಿಂದ ರಂಜಿಸಿದವು. ಬ್ರಾಹ್ಮಣ ವಿದ್ವಾಂಸರೂ ಬೌದ್ಧ ಪಂಡಿತರೂ ಅನ್ಯೋನ್ಯವಾಗಿ ವ್ಯಾಸಂಗಮಾಡಿದುದರಿಂದ ಧಾರ್ಮಿಕ ಗ್ರಂಥಗಳು ವಿಶೇಷವಾಗಿ ರಚಿತವಾದವು. ಧರ್ಮ ಪ್ರಚಾರವೂ ಜನಸಾಮಾನ್ಯ ಶಿಕ್ಷಣವೂ ಶಾಂತಿಮಯವಾದ ಮಾರ್ಗದಲ್ಲಿ ವಿಸ್ತಾರಗೊಂಡವು.

ಈ ಕಾಲದ ರಾಜಪುರುಷರಲ್ಲಿ ಮಹಾಶೂರರೂ ಧರ್ಮನಿಷ್ಠರೂ ಆಗಿ ಸೂರ್ಯ ಚಂದ್ರ ವಂಶಗಳ ಪ್ರಭುಗಳನ್ನು ನೆನಪಿಗೆ ತರುವಂತಹ

ಸಮುದ್ರಗುಪ್ತ, ಚಂದ್ರಗುಪ್ತ, ಪ್ರವರಸೇನ, ಕುಮಾರಗುಪ್ತ, ಹರ್ಷವರ್ಧನ, ಪುಲಿಕೇಶಿ, ಮಹಾಮಲ್ಲರಂತಹ ಮಹಾಪುರುಷರು ಕಾಣುವರು. ಆಳಿದ ರಾಜರು ಆ ಪುರಾತನ ಸಾರ್ವಭೌಮರನ್ನು ಅನುಕರಿಸಲು ಅವರ ಆಸ್ಥಾನಗಳಲ್ಲಿ ತಪ್ಪದೆ ಇರುತ್ತಿದ್ದ ಕವಿಶೇಖರರೂ ಕಾರಣರೇ. ತಮ್ಮ ಕೃತಿಗಳಲ್ಲಿ ಆದರ್ಶ ಪ್ರಭುವನ್ನು ತೋರಿ ಈ ಕವಿಗಳು ರಾಜರನ್ನು ಒಂದು ಬಗೆಯಾಗಿ ಶಿಕ್ಷಿಸುತ್ತಿದ್ದರು. ಕವಿಜನರ ಮನಸ್ಸನ್ನು ನೋಯಿಸಿದವನು ಅಸಭ್ಯನೆನಿಸುತ್ತಿದ್ದ ಈ ಕಾಲದಲ್ಲಿ ಕವಿಗಳಿಗೆ ಸ್ವಲ್ಪವಾದರೂ ಆಳಿದ ರಾಜರ ಭೀತಿಯಿರಲಿಲ್ಲ. ರಾಜರು ಕವಿಗಳಿಗೆ ಭಯಪಡಬೇಕಾಗಿತ್ತು. ಆದ್ದರಿಂದ ಈ ಕಾಲವನ್ನು **ಕಾಲಿದಾಸನ ಕಾಲ**ವೆಂದು ಕರೆಯುವುದು ವಿಹಿತ.

**ಆದರ್ಶ ಪುರುಷರು**

ಕವಿಸಾರ್ವಭೌಮನೆನಿಸಿದ ಆ ಮಹಾಪುರುಷನು ಸುಶಿಕ್ಷಿತನಾಗಿದ್ದನೆಂದೂ, ಭರತವರ್ಷವನ್ನು ಆಸೇತುಹಿಮಾಚಲ ಪರ್ಯಂತ ಕಣ್ಣಾರೆ ಕಂಡಿದ್ದನೆಂದೂ, ಕೆಲಕಾಲ ಉಜ್ಜಯಿನೀಪುರ ನಿವಾಸಿಯಾಗಿದ್ದನೆಂದೂ, ಪ್ರಾಯಶಃ ಚಂದ್ರಗುಪ್ತ ಕುಮಾರಗುಪ್ತ ಚಕ್ರವರ್ತಿಗಳ ಆಸ್ಥಾನದಲ್ಲಿದ್ದನೆಂದೂ ಧೈರ್ಯವಾಗಿ ಹೇಳಬಹುದೇ ವಿನಾ ಆತನ ಜೀವನ ಚರಿತ್ರೆಯನ್ನು ನಾವರಿಯೆವು. ಹಿಮಾಚಲ ಪ್ರಾಂತದಲ್ಲಿ ಆತನು ಸ್ವೇಚ್ಛೆಯಾಗಿ ಸಂಚಾರಮಾಡಿದ್ದನೆಂಬುದು ದೃಢ. ಆಸ್ಥಾನಿಕನಾಗಿದ್ದೂ ತನ್ನನ್ನು ಗೌರವಿಸಿದ ರಾಜನನ್ನು ಹೊಗಳಿ ಗ್ರಂಥವನ್ನು ರಚಿಸಿಲ್ಲನೆಂಬುದರಿಂದಲೇ ಕವಿಗಳ ಭೀತಿರಾಹಿತ್ಯವೂ ರಾಜರ ಗಾಂಭೀರ್ಯವೂ ಸ್ಪಷ್ಟವಾಗುವುದು. **ಋತುಸಂಹಾರ, ಮಾಲವಿಕಾಗ್ನಿಮಿತ್ರ** ಗ್ರಂಥಗಳು ಕಾಲಿದಾಸನ ತಾರುಣ್ಯ ಕಾಲದಲ್ಲಿ ರಚಿತವಾದವುಗಳು; **ಮೇಘದೂತ, ಕುಮಾರಸಂಭವ, ರಘುವಂಶ, ಶಾಕುಂತಲ, ವಿಕ್ರಮೋರ್ವಶೀಯ** ಗ್ರಂಥಗಳು ಪರಿಣತ ಕಾಲದಲ್ಲಿ ರಚಿತವಾದವುಗಳು. ಅವುಗಳಲ್ಲಿಯೇ ಈ ಕಾಲದ ಜನರ ಮನಸ್ಸಿನಲ್ಲಿ ನೆಲೆಸಿದ್ದ ಧ್ಯೇಯಗಳೂ ಕನಸುಗಳೂ ಚಿತ್ರಿತವಾಗಿವೆ. ಕಾಲಿದಾಸನಿಗೆ ಮಾತ್ರ ಎರಡನೆಯವರಾದ ಕವಿಶ್ರೇಷ್ಠರು ಇತರರು ಈ ಕಾಲದಲ್ಲಿ ವಿಶೇಷವಾಗಿಯೇ ಇದ್ದರು. **ದಂಡಿ,**

**ಕಾಲಿದಾಸ**

**ಭಾರವಿ, ಬಾಣ** ಕವಿಗಳು ಪ್ರಸಿದ್ಧರು. ಇವರು ಬರೆದುದು ಸಂಸ್ಕೃತ ಭಾಷೆಯಲ್ಲಿ; ಸುಲಲಿತವೂ ಸುಶ್ರಾವ್ಯವೂ ಆದ ಕಾವ್ಯ ಭಾಷೆಯಲ್ಲಿ.

ಗ್ರಂಥರಚನೆ

ಅದೇ ಭಾಷೆಯಲ್ಲಿಯೇ ಈ ಕಾಲದಲ್ಲಿ **ಪೂರ್ವದ ರಾಮಾಯಣ ಮಹಾಭಾರತ**ಗಳೂ **ಹರಿವಂಶಾದಿ ಪುರಾಣ**ಗಳೂ ಶುದ್ಧಿಯನ್ನೂ ವಿಸ್ತಾರವನ್ನೂ ಪಡೆದು ಸರ್ವತ್ರ ಪ್ರಚಾರವಾದವು. ಭಾರತಭೂಮಿಯಲ್ಲಿ ಎಲ್ಲ ವಿದ್ಯಾನಿಲಯಗಳಲ್ಲಿಯೂ ಮಹಾಕಾವ್ಯಗಳ ಒಂದೇ ಪಾಠವು ನಡೆಯುವಂತೆ ಒಂದೇ ಪ್ರತಿಯನ್ನು ಪ್ರಚಾರಗೊಳಿಸಲು **ಕಾಶಿ**ಯಲ್ಲಿಯೋ **ಉಜ್ಜಯಿನಿ**ಯಲ್ಲಿಯೋ ಧರ್ಮಿಷ್ಠನಾದ ರಾಜನ ಆಶ್ರಯದಲ್ಲಿ ವಿದ್ವಾಂಸರ ಗೋಷ್ಠಿಯು ಸೇರಿದಿರಬೇಕು. ಆ ಗೋಷ್ಠಿಯನ್ನು ಮನಸ್ಸಿನಲ್ಲಿ ಊಹಾಶಕ್ತಿಯಿಂದ ಚಿತ್ರಿಸಿಕೊಂಡು ಈ ಕಾಲದ ಚಿತ್ರವನ್ನು ಅನುಭವಿಸಬೇಕು. ಕವಿಗಳೂ, ವ್ಯಾಸರೂ, ಲೇಖಕರೂ ಸಾವಿರಗಟ್ಟಲೆಯಾಗಿದ್ದರು; ಅವರ ಸಂಗಡಲೇ ಭಾಷಾಶಾಸ್ತ್ರಗಳನ್ನೂ ಕೋಶಗಳನ್ನೂ, ಸಾಹಿತ್ಯ ಅಲಂಕಾರ ಶಾಸ್ತ್ರಗಳನ್ನೂ ಪರೀಕ್ಷೆಮಾಡಿ ಗ್ರಂಥಗಳನ್ನು ರಚಿಸಿದ ಪಂಡಿತರೂ ಇದ್ದರು. ಈ ಕಾಲದಲ್ಲಿಯೇ **ಅಮರಸಿಂಹ**ನ ಪ್ರಸಿದ್ಧ ಕೋಶವು ರಚಿತವಾಗಿ ಶಿಕ್ಷಣದ ಮೊದಲಿನಲ್ಲಿಯೇ ಉಪಯುಕ್ತವಾಗಲು ಮೊದಲಾಯಿತು. ಸಾಹಿತ್ಯ ಸಂಬಂಧವಾದ ಶಾಸ್ತ್ರಗಳಂತೆಯೇ ಇತರ ಕಲೆಗಳಲ್ಲಿಯೂ ಶಾಸ್ತ್ರ ಭಾಗವು ವಿಸ್ತಾರವಾಗಿ ಗ್ರಂಥರೂಪವನ್ನು ಪಡೆಯಿತು.

ಕಾವ್ಯಗಳು ಹೇಗೆ ಅಮೋಘವಾಗಿದ್ದವೋ ಹಾಗೆಯೇ ಇತರ ಕೃತಿಗಳೂ ಈ ಕಾಲದಲ್ಲಿ ಅಮೋಘವಾದವುಗಳು.

ವಾಸ್ತುಶಿಲ್ಪಗಳು

ಉತ್ತರದಲ್ಲಿ ಈ ಕಾಲದ ಕಟ್ಟಡ, ಪ್ರತಿಮೆ, ಚಿತ್ರಗಳು ತರುವಾಯ ನಾಶಕ್ಕೆ ಗುರಿಯಾದ ಕಾರಣದಿಂದ ಉತ್ತರ ಭಾಗದಲ್ಲಿ ನಿದರ್ಶನಗಳು ಹೆಚ್ಚಾಗಿಲ್ಲ; ದಖನ್ನಿನಲ್ಲಿ ತಕ್ಕಮಟ್ಟಿಗೆ ಕಾಣುವುವು. **ಉದಯಗಿರಿ, ದೇವಘುರ, ಗಹ್ವಾ, ಬಾಘು, ಔರಂಗಾಬಾದ್, ಬಾದಾಮಿ, ಪಟ್ಟದಕಲ್ಲು**ಗಳಲ್ಲಿ ಕಾಣುವ ಗುಹಾನಿರ್ಮಾಣಗಳು ಈ ಕಾಲದವು. ಶಾತವಾಹನರ ಕಾಲದಲ್ಲಿ ಪ್ರಾರಂಭವಾದ **ಅಜಂತಾಗುಹಾನಿರ್ಮಾಣ**ವು ಈ ಕಾಲದಲ್ಲಿ ಇನ್ನೂ ಮುಂದೆ ಸಾಗಿತು;

ಪೂರ್ವ ಗುಹೆಗಳು ಹೊಸ ಅಲಂಕಾರಗಳನ್ನು ಪಡೆದವು. ಹೊಸ ಗುಹೆಗಳು ಸಿದ್ಧವಾದವು. ಅಜಂತಾ ನಿರ್ಮಾಣದ ಕೀರ್ತಿಯು ವಾಕಾಟಕರಿಗೆ ಸೇರಿದುದು. **ಘಾರಾಪುರಿ** (ಎಲಿಫಾಂಟ) ಯಲ್ಲಿರುವ ಗುಹೆಗಳು ಶಿಥಿಲವಾಗಿದ್ದರೂ ಅದ್ಭುತವೆನಿಸಿರುವ ಅಲ್ಲಿಯ ಪ್ರತಿಮೆಗಳೂ ಈ ಕಾಲದವೇ. **ಮಾಮಲ್ಲಪುರ**ದಲ್ಲಿ ಕಾಣುವ ಶಿಲ್ಪ ನೈಪುಣ್ಯವೂ ಚಂಗಲ್ಪೇಟೆ ಜಿಲ್ಲೆಯಲ್ಲಿ ಕಾಣುವ ದೇವಾಲಯಗಳ ನಿರ್ಮಾಣ ಚಾತುರ್ಯವೂ ಈ ಕಾಲದ್ದೇ. ಇವುಗಳಲ್ಲದೆ ದಿಲ್ಲಿಯಲ್ಲಿ ನೆಟ್ಟಿರುವ ಕಬ್ಬಿಣದ ಕಂಬವೂ, ಈಗ ಬರ್ಮಿಂಘಾಂ ವಸ್ತುಶಾಲೆಯಲ್ಲಿರುವ ತಾಮ್ರನಿರ್ಮಿತ ಬುದ್ಧವಿಗ್ರಹವೂ ಈ ಕಾಲದ ಲೋಹಕರ್ಮ ಕೌಶಲವನ್ನು ತೋರುತ್ತವೆ. ಗುಪ್ತವಂಶದವರ ನಾಣ್ಯಗಳೇ ಸುಂದರಾಕೃತಿಗಳನ್ನುಂಟಾಗಿ ಉತ್ತಮ ರೀತಿಯ ಮುದ್ರಣವನ್ನು ಸೂಚಿಸುತ್ತವೆ. ನಾನಾಮುಖಗಳಾಗಿ ಕಲಾ ನೈಪುಣ್ಯವು ರಂಜಿಸಿತ್ತು; ಆದರೆ ಎಲ್ಲ ಕಲೆಗಳಲ್ಲಿಯೂ ದೈವಭಕ್ತಿಯು ಸಾಮಾನ್ಯ ಲಕ್ಷಣವಾಗಿ ಬೆಳೆಯಿತು. ಆ ವಿಧವಾದ ವೃದ್ಧಿಯಲ್ಲಿ ಕಲೆಯು ಅನೇಕ ಸಂಕೇತಗಳನ್ನೂ ನಿಯಮಗಳನ್ನೂ ಉಂಟಾಯಿತು.

ಧರ್ಮವ್ಯಾಪ್ತಿ

ವಾಸ್ತುಶಿಲ್ಪ ಚಿತ್ರ ಶಾಸ್ತ್ರಗಳಲ್ಲಿ ವೃದ್ಧಿಯಾದ ಸಂಕೇತಗಳು ಆಗಿನ ಜನಶಿಕ್ಷಣದಲ್ಲಿಯೂ ನೀತಿ ಪ್ರಚಾರದಲ್ಲಿಯೂ ಉಪಯುಕ್ತವಾದ ಸಂಕೇತಗಳೇ ಆಗಿದ್ದವು. **ಅಷ್ಟಾದಶ ಪುರಾಣ**ಗಳು ರಚಿತವಾದುದು ಗುಪ್ತವಂಶದವರ ಕಾಲದಲ್ಲಿ; ರಾಮಾಯಣ ಮಹಾಭಾರತಗಳಲ್ಲಿ ಅಲ್ಲಲ್ಲಿ ನೀತಿಬೋಧಕವಾದ ಪ್ರಸಂಗಗಳೂ ಪೂರ್ವಕಥೆಗಳೂ ಸಿಕ್ಷಿಪ್ತವಾದುದೂ ಈ ಕಾಲದಲ್ಲಿಯೇ. ಬೌದ್ಧ ಪಂಡಿತ ಶ್ರೇಷ್ಠರು ಚೀನಾದೇಶಕ್ಕೆ ಪ್ರಯಾಣಮಾಡಿ ಧರ್ಮಪ್ರಚಾರ ಮಾಡುತ್ತಿದ್ದಾಗ ಬ್ರಾಹ್ಮಣ ವಿದ್ವಾಂಸರು ಸಾಮಾನ್ಯ ಶಿಕ್ಷಣಕ್ಕೆ ಮಹಾಕಾವ್ಯಗಳನ್ನೂ ಪುರಾಣಗಳನ್ನೂ ಉಪಯೋಗಿಸಿಕೊಂಡು ಆರ್ಯಧರ್ಮವನ್ನು ಹರಡಿದರು. ದೇಶವನ್ನು ಪ್ರವೇಶಮಾಡಿದ್ದ ಅಸಭ್ಯ ಕುಲಗಳಿಗೂ, ಪೂರ್ವದಿಂದಲೂ ದೇಶದಲ್ಲಿಯೇ ಇದ್ದ ಅನಾಗರಿಕ ಜನರಿಗೂ ಈ ವಿಧವಾಗಿಯೇ ಸನಾತನ ಮತದ ದೀಕ್ಷೆಯನ್ನು ಕೊಟ್ಟರು. ಹಿಂದೂ ಮತವೆಂಬುದರಲ್ಲಿ ಶಾಂತಿ ಸಹನೆಗಳೇ ಪ್ರಧಾನವಾಗಿದ್ದುದರಿಂದ ಕುಲಾಚಾರ

ಗಳನ್ನೂ ಜಾತ್ಯಾಚಾರಗಳನ್ನೂ ರಕ್ಷಿಸಿಕೊಂಡು **ಆರ್ಯಧರ್ಮ**ವನ್ನು ಸ್ವೀಕರಿಸಿ ನಡೆಸುವ ಮಾರ್ಗವು ಸುಗಮ್ಯವಾಗಿತ್ತು. ಸಾಮಾಜಿಕ ರೀತಿ ನೀತಿಗಳಲ್ಲಿ ಉತ್ತಮವಾದವುಗಳನ್ನು ನೆಲೆಗೊಳಿಸಲು ಪೂರ್ವಕಾಲದ ಸ್ಮೃತಿ ಗ್ರಂಥಗಳು ಉದ್ಧೃತವಾಗಿ ವಿಶಾಲಗೊಂಡುದೂ ಗುಪ್ತರ ಕಾಲದಲ್ಲಿಯೇ. ಬ್ರಾಹ್ಮಣರು ಗ್ರಾಮಗಳಲ್ಲಿ ನೆಲೆಸಿದಂತೆ ಗ್ರಾಮಸ್ಥರಲ್ಲಿ ಹಿಂದೂ ನೀತಿಯೂ ಹಿಂದೂ ಧರ್ಮತತ್ವಗಳೂ ನೆಲೆಸಿ ಸಮಸ್ತ ದೇಶದಲ್ಲಿ ಸಾಂಸ್ಕೃತಿಕ



30. ಅಮರನಾಥ—ಮಾರ್ಗ

ರೂಪವಾದ ಐಕ್ಯತೆಯೂ ಸ್ಥಿರವಾಗುವಂತೆ ಸನ್ನಾಹವಾಯಿತು. **ತೀರ್ಥ ಯಾತ್ರೆಗಳ** ಆಚರಣೆಯೂ ಸಪ್ತ ಕುಲಾಚಲ, ಸಪ್ತ ನದೀ, ಸಪ್ತ ನಗರಗಳಿಂದ ಶೋಭಿಸುವ **ಪುಣ್ಯಭೂಮಿಯ** ಸ್ತವನವೂ ಎಲ್ಲೆಲ್ಲಿಯೂ ಸಾಮಾನ್ಯವಾದುದು ಈ ಕಾಲದಲ್ಲಿಯೇ ಎಂದು ದೃಢವಾಗಿ ಹೇಳಬಹುದು.

**ಶಾಸ್ತ್ರವೃದ್ಧಿ**

ಈ ಅಭ್ಯುದಯ ಕಾಲದಲ್ಲಿ ಶಾಸ್ತ್ರಗಳೂ ಅಪೂರ್ವವಾದ ಅಭಿವೃದ್ಧಿಯನ್ನು ಪಡೆದವು. **ಆರ್ಯಭಟ, ವರಾಹ ಮಿಹಿರ, ಬ್ರಹ್ಮಗುಪ್ತ**ರೆಂಬ ಪ್ರಖ್ಯಾತ ಜ್ಯೋತಿಷ್ಕರು ಗುಪ್ತಕಾಲದಲ್ಲಿದ್ದವರು. ಜ್ಯಾಮಿತಿ (Geometry), ಕುಟ್ಟಕ (Algebra), ತ್ರಿಕೋಣಮಿತಿ (Trigonometry) ಮುಂತಾದ ಗಣಿತದ ಭಾಗಗಳೂ, ರಸಾಯನ, ಚಿಕಿತ್ಸಾ, ವೈದ್ಯಶಾಸ್ತ್ರಗಳೂ ಅದ್ಭುತವಾದ ವೃದ್ಧಿಯನ್ನು ಪಡೆದವು. ದಶಮಾಂಶ, ಶಂಕು ಮುಂತಾದ ಗಣಿತಶಾಸ್ತ್ರ ವಿಧಾನಗಳೂ ಭೂಮಿಯ ವೃತ್ತಾಕೃತಿಯೂ ಈ ಖಗೋಳ ಶಾಸ್ತ್ರಜ್ಞರಿಗೆ ಸ್ಪಷ್ಟವಾಗಿದ್ದವು. ವೈದ್ಯವಿದ್ಯೆಯಲ್ಲಿಯೂ ಗಣಿತಶಾಸ್ತ್ರಗಳಲ್ಲಿಯೂ ಭಾರತೀಯರು 5ನೆ, 6ನೆ, 7ನೆ ಶತಮಾನಗಳಲ್ಲಿಯೇ ಅಗ್ರಗಣ್ಯರಾಗಿ ವಿಖ್ಯಾತರಾಗಿದ್ದರು. ಆದ್ದರಿಂದಲೇ 7ನೆ, 8ನೆ ಶತಮಾನಗಳಲ್ಲಿ ರಾಜ್ಯಗಳನ್ನು ಕಟ್ಟಿಕೊಂಡು ವೈಭವವನ್ನು ಸಂಪಾದಿಸಿದ ಅರಬ್ಬೀ ಜನರು ಭಾರತೀಯರ ಶಾಸ್ತ್ರಗಳನ್ನು ಕಲಿಯಲು ಕಾತರಪಟ್ಟು ಬಾಗದಾದಿಗೆ ಭಾರತೀಯ ಪಂಡಿತರನ್ನು ಬರಮಾಡಿಕೊಂಡರು.

**ಹೋಲಿಕೆ**

ಕ್ರಿ. ಶ. 300 ರಿಂದ 700ರ ವರೆಗೆನ್ನಬಹುದಾದ ಈ ಕಾಲದಲ್ಲಿ ನಮ್ಮ ದೇಶದ ರಾಜಪುರುಷರಲ್ಲಿ, ವಿದ್ವಾಂಸರಲ್ಲಿ, ಧರ್ಮಬೋಧಕರಲ್ಲಿ, ಕವಿಗಳಲ್ಲಿ, ಶಾಸ್ತ್ರಜ್ಞರಲ್ಲಿ, ಕಲಾವಿದರಲ್ಲಿ ಮಹಾಪುರುಷರು ತುಂಬಿಕೊಂಡಿದ್ದುದಲ್ಲದೆ ಅದ್ಭುತವಾದ ಅಭ್ಯುದಯವು ತೋರಿಕೊಂಡಿತು. ಅದೇ ವೇಳೆಯಲ್ಲಿ ಪಶ್ಚಿಮದಲ್ಲಿ ರೋಮಕ ಸಾಮ್ರಾಜ್ಯವು ಧ್ವಂಸವಾಗಿ ಯೂರೋಪು ಖಂಡವೇ ಅಸಭ್ಯಕುಲಗಳ ಅವಾಂತರಕ್ಕೆ ಸಿಕ್ಕಿ **ಅಂಧಕಾರಯುಗ**ವೆಂಬ ಕಾಲದಲ್ಲಿತ್ತು. ಉಳಿದಿದ್ದ ಪೂರ್ವಭಾಗದಲ್ಲಿಯೂ ಕೂಡ **ಜಸ್ಟಿನಿಯನ್ನೆಂ**ಬ ಹೆಸರಿನಿಂದ ಪ್ರಸಿದ್ಧನಾಗಿ ಕಾನ್‌ಸ್ಟಾಂಟಿನೋಪಲಿನಲ್ಲಿ ಆಳುತ್ತಿದ್ದ

ಕ್ರೈಸ್ತ ನರಪತಿಯು **ಆಥೆನ್ಸ್** ಪಟ್ಟಣದಲ್ಲಿದ್ದ ತತ್ವಜ್ಞರ ನಿಲಯಗಳನ್ನು ನಿರ್ಬಂಧದಿಂದ ಮುಚ್ಚಿಸಿದನು. ಅದರಿಂದ ವಿದ್ವಜ್ಜನರಿಗೂ ಶಾಸ್ತ್ರ ವ್ಯಾಸಂಗಿಗಳಿಗೂ ಅವಕಾಶವಿಲ್ಲವಾಗಿ ಜ್ಞಾನ ಸಾಧನೆಯನ್ನು ಹಾಳುಬಾವಿಯಲ್ಲಿ ಹೂತಿಟ್ಟಂತಾಯಿತು. ಗುಪ್ತರ ಕಾಲದಲ್ಲಿ ಅರಬ್ಬೀಸ್ಥಾನದಲ್ಲಿ ನಾಗರಿಕತೆಯಾಗಲಿ ಧರ್ಮವಾಗಲಿ ಸ್ವಲ್ಪವೂ ಇಲ್ಲದಿತ್ತು. ಹರ್ಷ ಚಕ್ರವರ್ತಿಯು ಆಳಿದ ಕಾಲದಲ್ಲಿ ಅರಬ್ಬೀಸ್ಥಾನದಲ್ಲಿ **ಪೈಗಂಬರ್ ಮುಹಮ್ಮದನು** ಧರ್ಮಸ್ಥಾಪನೆ ಮಾಡುತ್ತಿದ್ದನು. ಫಾರ್ಸೀಸ್ಥಾನವು ಮಾತ್ರ **ಸಾಸ್ಸಾನೀ** ಪ್ರಭುಗಳ ಆಳ್ವಿಕೆಯಲ್ಲಿ ನೆಮ್ಮದಿಯಲ್ಲಿತ್ತು. ಇತ್ತ ಪೂರ್ವ ಭಾಗದಲ್ಲಿ ಮಧ್ಯಪಶ್ಚಿಮದಿಂದ ಜಪಾನಿನವರೆಗೂ ಬ್ರಹ್ಮದೇಶದಿಂದ ಫಿಲಿಪೈನ್ ದ್ವೀಪಗಳವರೆಗೂ **ಬೃಹತ್ತರ ಭಾರತವೇ** ಆಗಿದ್ದಿತು. ರೋಮಕ ಸಾಮ್ರಾಜ್ಯವು ಅಸಭ್ಯ ಜಾತಿಯವರನ್ನು ಸ್ವಾಧೀನಗೊಳಿಸಿಕೊಳ್ಳಲಾರದೆ ಹೋಯಿತು; ಭರತವರ್ಷದಲ್ಲಿ ನುಗ್ಗಿದ ಹೂಣಜನರನ್ನು ಒಂದು ಶತಮಾನ ಕಾಲದಲ್ಲಿ ಭಾರತೀಯರು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಈ ರೀತಿಯಲ್ಲಿ 300-700ವರೆಗೆ ನಡೆದ ಕಾಲದಲ್ಲಿ ಇಡೀ ಪೃಥ್ವಿಯಲ್ಲಿಯೇ ಭರತವರ್ಷವು ಸುಖಸಮೃದ್ಧವಾಗಿ, ವೈಭವ ಯುಕ್ತವಾಗಿ, ಸೌಂದರ್ಯೋಪೇತವಾಗಿ, ಧರ್ಮಬೋಧಕವಾಗಿ ತೇಜಸ್ಸಿನಿಂದ ವಿರಾಜಿಸಿತು. ಇಡೀ ಪೃಥ್ವಿಯಲ್ಲಿ ನಾನಾಮುಖವಾದ ಚೈತನ್ಯ, ವಿಕಾಸಗಳ **ಭಂಡಾರದಂತೆ** ಭರತವರ್ಷವಿದ್ದಿತೆಂಬ ಚರಿತ್ರಕಾರರ ವಾಕ್ಯವು ಅದನ್ನೇ ಸೂಚಿಸುತ್ತದೆ.

ಧರ್ಮಶುದ್ಧಿ

ಭರತವರ್ಷದಲ್ಲಿ ಮೂವರು ಪ್ರಸಿದ್ಧ ಸಮ್ರಾಟರೂ ಫಾರ್ಸೀಸ್ಥಾನದಲ್ಲಿ ಖುಸ್ರೂ ಅನೂಷೀರ್ವಾನನೂ, ಅರಬ್ಬೀಸ್ಥಾನದಲ್ಲಿ ಪೈಗಂಬರ್ ಮುಹಮ್ಮದನೂ ತಮ್ಮ ಕರ್ತವ್ಯ ನಿರ್ವಾಹಮಾಡುತ್ತಿದ್ದ ಏಳನೆ ಶತಮಾನದಲ್ಲಿಯೇ ದಕ್ಷಿಣಾಪಥದಲ್ಲಿ ಮತಸಂಸ್ಕಾರಕರು ಇಬ್ಬರು ತಮ್ಮ ಕರ್ತವ್ಯವನ್ನು ಪಾಲಿಸಿದರು. ಮಹಾಯಾನ ಬೌದ್ಧ ಧರ್ಮವು ವಿಸ್ತಾರವಾಗುತ್ತ ಯೋಗಶಾಸ್ತ್ರಾಭ್ಯಾಸವೂ ರಹಸ್ಯ ಶಾಸ್ತ್ರಗಳ ವ್ಯಾಸಂಗವೂ ಹೆಚ್ಚಿತ್ತು. ದೇವಾಲಯ, ಮೂರ್ತಿಪೂಜೆ, ಉತ್ಸವಾದಿಗಳು ಹೆಚ್ಚಿ ಆಸ್ತಿಕ್ಯವು ದೃಢವಾಗಿ ವೃದ್ಧಿಪಡೆದು ಮೂಢವಾದ ಆಚಾರಗಳು ಜನರ ಮನಸ್ಸಿನಲ್ಲಿ

ಭದ್ರವಾಗಿ ನೆಲೆಗೊಳ್ಳುತ್ತಿದ್ದವು. ನಾನಾರೀತಿಗಳಲ್ಲಿ ಬೆಳೆದು ಭದ್ರಗೊಂಡಿದ್ದ ಮೌಢ್ಯವನ್ನು ದಾಕ್ಷಿಣಾತ್ಯರೇ ಆದ **ಕುಮಾರಿಲಭಟ್ಟ** ಮತ್ತು **ಶಂಕರಾಚಾರ್ಯ**ರೆಂಬ ಇಬ್ಬರು ಮಹಾಪುರುಷರು ನಾಶಗೊಳಿಸಿ ಮತವನ್ನು ಸಂಸ್ಕೃತಗೊಳಿಸಿದರು.

ದ್ರವಿಡಭೂಮಿ

ಮೌರ್ಯ ಸಾಮ್ರಾಜ್ಯವು ಒಡೆದಮೇಲೆ ದಕ್ಷಿಣದಲ್ಲಿ ಶಾತವಾಹನ ವಂಶಜರ ಮತ್ತು ಚೋಳ ಪಾಂಡ್ಯ ಕೇರಲರಾಜರುಗಳ ಅಧಿಕಾರವು ನಡೆಯಿತಷ್ಟೆ. ಅವರ ಕಾಲದಲ್ಲಿಯೂ ಸಹ್ಯಮಲಯ ಪರ್ವತಗಳ ಪ್ರದೇಶಗಳಲ್ಲಿ ಆಶ್ರಮಗಳನ್ನು ಕಟ್ಟಿಕೊಂಡಿದ್ದ ಬ್ರಾಹ್ಮಣ ಅಥವಾ ವೈದಿಕ ಧರ್ಮದವರು ಪ್ರಬಲರೇ ಆದರು. ಪಾಂಡ್ಯ ರಾಜಧಾನಿಯಾದ **ಮಧುರೆ**ಯು ವಿದ್ವದ್ಗೋಷ್ಠಿಗಳಿಗೆ ಹೆಸರಾಗಿತ್ತು. ಆದಾಗ್ಗೂ ವಿದ್ವಾಂಸನಾದವನು ಕೀರ್ತಿಶಾಲಿಯಾಗಲು ಉಜ್ಜಯಿನಿ ವಾರಣಾಸಿಗಳಿಗೇ ಹೊರಟು ಅಲ್ಲಿ ವಾದವಿವಾದಗಳಲ್ಲಿ ಭಾಗಿಯಾಗಲು ಆಕಾಂಕ್ಷೆಯುಳ್ಳವನಾಗಿದ್ದನು.



31. ನಾಸಿಕ ಕ್ಷೇತ್ರದ **ಬಳಿ** ಗೋದಾವರಿ

ಔತ್ತರೇಯರೂ ಕೂಡ ಶ್ರೀರಾಮಚಂದ್ರನ ಪಾದಸ್ಪರ್ಶದಿಂದ ಪವಿತ್ರವಾದ ಸ್ಥಳಗಳಿಗೆ ಯಾತ್ರೆಮಾಡುತ್ತ ದಕ್ಷಿಣದಲ್ಲಿ ಸಂಚಾರಮಾಡುತ್ತಿದ್ದರು.

ದಾಕ್ಷಿಣಾತ್ಯರಿಗೆ ಕೈಲಾಸ ಹರಿದ್ವಾರಗಳು ಹೇಗೋ, ಹಾಗೆಯೇ ಔತ್ತರೇಯರಿಗೆ ರಾಮೇಶ್ವರವು ಮುಖ್ಯ ಯಾತ್ರಾಸ್ಥಳವಾಯಿತು. ಯಾತ್ರೆಯ ಆಚರಣೆಯು ಸಾಮಾನ್ಯವಾದಂತೆಲ್ಲ ಔತ್ತರೇಯರಿಗೂ ದಾಕ್ಷಿಣಾತ್ಯರಿಗೂ ಸಂಪರ್ಕ ಸಂಬಂಧಗಳು ಹೆಚ್ಚಿ ಧರ್ಮವೆಂಬುದು ಸರ್ವತ್ರ ಏಕವಾಗಲು ಅನುಕೂಲವಾಯಿತು.

ಧರ್ಮ ವೃದ್ಧಿ

ದ್ರವಿಡದೇಶದಲ್ಲಿ ಕ್ರಿಸ್ತಶಕದ ಆದಿಯಲ್ಲಿಯೇ ಬ್ರಾಹ್ಮಣ ಮತವು ಪ್ರಚಾರವನ್ನು ಪಡೆದು ಕೃಷ್ಣ, ಬಲದೇವ, ಇಂದ್ರಾದಿ ದೇವತೆಗಳಿಗೆ ಪೂಜೆಯು ಸಲ್ಲುತ್ತಿತ್ತು. ಆದರೆ ದ್ರವಿಡದೇಶದಲ್ಲಿ ಮೊದಲಿನಿಂದಲೂ ಶೈವ ಪೂಜೆಯೇ ಪ್ರಧಾನವಾಗಿದ್ದಿತು. ಬ್ರಾಹ್ಮಣ ಜನರು ಶೈವಪೂಜೆಯನ್ನೇ ಸ್ವೀಕರಿಸಿ ಸುರೂಪಗೊಳಿಸಿ ಸಾಮಾನ್ಯ ಜನರೆಲ್ಲರಿಗೂ ಗುರುಗಳಾಗಿ ಭೂಸುರರೆನಿಸಿದ್ದರು. ಮೌರ್ಯಕಾಲಕ್ಕೆ ಮೊದಲೇ ಜೈನ ಬೌದ್ಧ ಗುರುಗಳು ದಕ್ಷಿಣದಲ್ಲಿ ತಮ್ಮ ಪ್ರಚಾರವನ್ನೂ ನಡೆಸಿದ್ದರು. ತಮಿಳು ಕನ್ನಡ ನಾಡುಗಳಲ್ಲಿ ಜೈನ ಮತವೂ ಪೂರ್ವ ತೀರಪ್ರದೇಶಗಳಲ್ಲಿ ಬೌದ್ಧ ಮತವೂ ವಿಶೇಷವಾದ ಪ್ರಚಾರವನ್ನು ಪಡೆದವು. ಜೈನಮತ ಗುರುಗಳಿಗೂ ಶೈವಮತ ಗುರುಗಳಿಗೂ ವಾದವಿವಾದಗಳು ನಡೆಯುತ್ತಿದ್ದವು; ಅದರಂತೆಯೇ ಬೌದ್ಧ ಮತಸ್ಥರಿಗೂ ಇತರರಿಗೂ ವಾದವಿವಾದಗಳೂ ನಡೆದವು. ಶೈವ ಮತವನ್ನು ಹೆಚ್ಚಾಗಿ ಪ್ರಚಾರಗೊಳಿಸಿದವರು **ನಾಯನಾರ**ರೆಂದು ಹೆಸರಾದ 63 ಯತಿಶ್ರೇಷ್ಠರು. ಅವರಲ್ಲಿ **ಅಪ್ಪರ್, ಸಂಬಂದರ್, ಸುಂದರರ್, ಮಾಣಿಕ್ಕವಾಶಗರ್** ಎಂಬ ನಾಲ್ವರು ಅತಿಪ್ರಸಿದ್ಧರು. ನಾಯನಾರರ ಪ್ರಭಾವದಿಂದ ಜೈನ ಬೌದ್ಧ ಮತಗಳಿಗೆ ಪ್ರಾಶಸ್ತ್ಯವು ಕಡಿಮೆಯಾಯಿತು. ಶೈವಮತದ ನಾಯನಾರರಂತೆಯೇ ವೈಷ್ಣವ ಮತವನ್ನು ಪ್ರಚಾರಗೊಳಿಸಿದ ಹನ್ನೆರಡು ಮಂದಿ ಆಳ್ವಾರರೆಂಬ ಭಕ್ತರು ದ್ರವಿಡದೇಶದಲ್ಲಿ ಪ್ರಸಿದ್ಧರಾಗಿದಾರೆ. ಕನ್ನಡ ನಾಡಿನಲ್ಲಿ ಕದಂಬ ಕುಲದವರು, ಬ್ರಾಹ್ಮಣ ಮತಾನುಯಾಯಿಗಳು; ಗಂಗರಸರು ಜೈನಮತಾವಲಂಬಿಗಳು; ಚಾಲುಕ್ಯರು ಬ್ರಾಹ್ಮಣ ಅಥವಾ ವೈದಿಕ ಧರ್ಮವನ್ನು ಅನುಸರಿಸಿದರು; ರಾಷ್ಟ್ರಕೂಟರು ಜೈನರೇ ಆಗಿದ್ದರು; ಪಲ್ಲವರಲ್ಲಿ ಕೆಲವರು

ವೈಷ್ಣವರೂ ಕೆಲವರು ಶೈವರೂ ಆಗಿದ್ದರು ; ಚೋಳಕುಲದವರು ಶೈವರೆಂದೇ ಪ್ರಸಿದ್ಧರು. ತಮಿಳು ನಾಡಿನಲ್ಲಿ ಶೈವಮತವೇ ಪ್ರಬಲವಾಗಿ ಪರಿಣಮಿಸಿತು.

**ಕುಮಾರಿಲಭಟ್ಟ**

**ಕುಮಾರಿಲಭಟ್ಟನು*** ಆಂಧ್ರದೇಶದವನೆಂದು ನಂಬಿಕೆಯುಂಟು. ಆತನ ಜೀವನ ಚರಿತ್ರೆಯು ದೊರೆತಿಲ್ಲ. ಬ್ರಾಹ್ಮಣನಾಗಿ ಹುಟ್ಟಿದ ಆತನು ಮೀಮಾಂಸಾ ದರ್ಶನ ಶಾಸ್ತ್ರದಲ್ಲಿ ಪಾರಂಗತನಾಗಿ ಜೈನರನ್ನೂ ಬೌದ್ಧರನ್ನೂ ವಾದದಲ್ಲಿ ಸೋಲಿಸಿ, ಸಾಮಾನ್ಯಜನರಲ್ಲಿ ಬೆಳೆಯುತ್ತಿದ್ದ ಮೌಢ್ಯವನ್ನೂ ದುರಾಚಾರಗಳನ್ನೂ ಖಂಡಿಸಿದನು. ರಹಸ್ಯ ರೂಪವನ್ನು ತಾಳಿದ್ದ ವಿದ್ಯೆಯನ್ನು ಆತನು ಉದ್ಘಾಟಿಸಿದನು. ಬೌದ್ಧರು ಆತನೆದುರಿಗೆ ವಾದಮಾಡಲಾರದೆ ಸೋತುಹೋದರು. ಕುಮಾರಿಲನ ಕಾರ್ಯವು ಮುಗಿಯುವ ವೇಳೆಗೆ ಶುದ್ಧವಾದ ವೈದಿಕ ತತ್ವಗಳನ್ನು ಉದ್ಧಾರಮಾಡಿ, ಶ್ರುತಿ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಬರೆದು, ಧರ್ಮ ಸಂಸ್ಕಾರ ಮಾಡಲು ಶಂಕರಾಚಾರ್ಯರು ಸಿದ್ಧರಾಗಿದ್ದರು. **ಶಂಕರಾಚಾರ್ಯರು** ಮಲೆಯಾಳದ ನಂಬೂದಿರಿ ಬ್ರಾಹ್ಮಣ ಕುಲದಲ್ಲಿ **ಕಾಲಟಿಗ್ರಾಮ**ದಲ್ಲಿ ಎಂಟನೆ ಶತಮಾನದ ಆದಿಯಲ್ಲಿ ಜನಿಸಿದರು. ಚಿಕ್ಕಂದಿನಲ್ಲಿಯೇ ಅಸಾಧಾರಣ ಪಾಂಡಿತ್ಯವನ್ನು ಪಡೆದು ಸಂನ್ಯಾಸವನ್ನು ತಾಳಿದರು. ದಕ್ಷಿಣದಲ್ಲಿ ಎಲ್ಲರಿಗಿಂತಲೂ ಮೇಲೆನಿಸಿ **ಕಾಶಿ**ಗೆ ಪ್ರಯಾಣಮಾಡಿ ಆ ಕ್ಷೇತ್ರದಲ್ಲಿ ವಾದ ವಿವಾದಗಳನ್ನು ಹೂಡಿ ಶುದ್ಧ ವೈದಿಕ ಮತವನ್ನು ಸ್ಥಾಪಿಸಿದರು. ಬ್ರಹ್ಮಸೂತ್ರಗಳು, ಉಪನಿಷತ್ತುಗಳು, ಭಗವದ್ಗೀತೆ ಎಂಬವು ಇಂದಿಗೂ

**ಶಂಕರಾಚಾರ್ಯ**

ಪ್ರಸ್ಥಾನತ್ರಯಗಳೆಂದು ಪ್ರಸಿದ್ಧ; ಆ ಪ್ರಮಾಣ ಗ್ರಂಥಗಳಿಗೆ ಶಂಕರಾಚಾರ್ಯರು ಭಾಷ್ಯಗಳನ್ನು ಬರೆದು ಪ್ರಚಾರಗೊಳಿಸಿದರು. ಅಷ್ಟೇ ಅಲ್ಲದೆ ಬೌದ್ಧರು ಸಂಘವೆಂಬುದನ್ನು ಕಟ್ಟಿಕೊಂಡು ಯಾವ ರೀತಿಯಲ್ಲಿ ಮತ

---

* ಕುಮಾರಿಲನ ಕಾಲವನ್ನು 650--700 ಎಂದು ಭಾವಿಸಬಹುದು. ಆತನು ಬೌದ್ಧ ಗುರುಗಳಿಂದಲೇ ಶಿಕ್ಷಿತನಾಗಿ ಬೌದ್ಧರನ್ನೇ ವಾದದಲ್ಲಿ ಪ್ರತಿಭಟಿಸಿ ಗುರುದ್ರೋಹ ಮಾಡಿದೆನೆಂದೆಂದುಕೊಂಡು ಅಗ್ನಿದಗ್ಧನಾದನಂತೆ. ಭವಭೂತಿ ಕವಿಯು ಆತನ ಶಿಷ್ಯನಾಗಿದ್ದನಂತೆ. ಕುಮಾರಿಲನನ್ನು ಹಿಂದೂ ಜನರು ಷಣ್ಮುಖನ ಅವತಾರವೆಂದು ಗೌರವಿಸುತ್ತಾರೆ.

ಪ್ರಚಾರವನ್ನು ಸೆರವೇರಿಸಿದರೋ ಅದರಂತೆಯೇ ಶಂಕರಾಚಾರ್ಯರೂ ಕೂಡ ಸಂನ್ಯಾಸಿಗಳ ಪರಂಪರೆಯು ನಡೆದುಬರುವಂತೆ ಮಠಗಳನ್ನು ಸ್ಥಾಪಿಸಿದರು. ಮೂರು ಸಲ ಸಮಸ್ತ ದೇಶ ಸಂಚಾರಮಾಡಿ ಪುಣ್ಯ ಕ್ಷೇತ್ರಗಳನ್ನು ದರ್ಶಿಸಿದ್ದೇ ಅಲ್ಲದೆ ಪ್ರಸಿದ್ಧ ವಿಹಾರಗಳಲ್ಲಿಯೂ ವಿದ್ಯಾ ಕ್ಷೇತ್ರಗಳಲ್ಲಿಯೂ ಬೌದ್ಧರನ್ನು ವಾದದಲ್ಲಿ ಸೋಲಿಸಿ, ಉತ್ತಮೋತ್ತಮ ಗ್ರಂಥಗಳನ್ನು ರಚಿಸಿ, ಇವರು ಮೂವತ್ತೆರಡನೆಯ ವಯಸ್ಸಿನಲ್ಲಿಯೇ **ಕೇದಾರನಾಥಾಶ್ರಮ**ದಲ್ಲಿ ದೇಹತ್ಯಾಗ ಮಾಡಿದರು. ಇವರ ಮೇಧಾ ಶಕ್ತಿಯು ವಿದ್ಯುಲ್ಲತೆಯನ್ನೇ ಹೋಲುವುದು; ಇಡೀ ಪೃಥ್ವಿಯ ಇತಿಹಾಸ ದಲ್ಲಿ ಶಂಕರಾಚಾರ್ಯರಿಗೆ ಸಮನಾದ ಬುದ್ಧಿಯ ತೇಜಸ್ಸನ್ನು ಪಡೆದವರು ಅತ್ಯಲ್ಪ ಸಂಖ್ಯಾಕರು. ಅರಿಸ್ಟಾಟಲ್, ಪ್ಲೇಟೋ ಮುಂತಾದ ಜಗದ್ವಿಖ್ಯಾತ ತತ್ವಜ್ಞರಿಗಿಂತಲೂ ಶಂಕರಾಚಾರ್ಯರು ಪ್ರಖರವೂ ತೀಕ್ಷ್ಣವೂ ಆದ ಬುದ್ಧಿ ಶಕ್ತಿ ಸಾಹಸಗಳನ್ನು ತೋರಿದರೆಂದು ಅನೇಕರ ಅಭಿಪ್ರಾಯವಾಗಿದೆ.

**ಬೌದ್ಧಮತದ ಪರಿಣಾಮ**

8ನೆ ಶತಮಾನದ ವೇಳೆಗೆ ಬೌದ್ಧಮತವು 'ಹಿಂದೂ' ಮತವೆಂದು ಹೆಸರಾಗಿರುವ ಸನಾತನ ಮತದಲ್ಲಿ ಸೇರಿ ಹೋಯಿತು. ಮಗಧ, ನೇಪಾಲ, ಕಾಮರೂಪ ಗಳಲ್ಲಿ ಮಾತ್ರ ಇನ್ನೂ ಪ್ರಬಲವಾಗಿತ್ತು. ಉಳಿದೆಡೆ ಗಳಲ್ಲಿ ಬೌದ್ಧಮತದ ಪ್ರತ್ಯೇಕ ರೂಪವೇ ಅಳಿಯಿತು; ಸನಾತನ ಧರ್ಮದಲ್ಲಿ ಬೌದ್ಧ ನೀತಿಯೂ ಆಚಾರವಿಚಾರಗಳೂ ಬಳಕೆಯಾದವು. ಅಶ್ವತ್ಥ ಪೂಜೆಯೇ ಬೋಧಿವೃಕ್ಷದ ಪೂಜೆಯೆಂದೂ ಭಿಕ್ಷುಣಿಯರ ರೂಪನೀತಿಗಳೇ ವೈಧವ್ಯ ಲಕ್ಷಣಗಳಾದುವೆಂದೂ ಪಂಡಿತರು ಕೆಲವರು ಅಭಿಪ್ರಾಯಪಡುವರು; ಅವುಗಳನ್ನೇ ಇದಕ್ಕೆ ದೃಷ್ಟಾಂತಗಳಾಗಿ ಭಾವಿಸಬಹುದು. ಆದ್ದರಿಂದ ಬೌದ್ಧಮತವು ಜನ್ಮಭೂಮಿಯಲ್ಲಿ ನಾಶ ವಾಯಿತೆನ್ನುವುದು ತಪ್ಪಾಗುವುದು. ನಾಶವೆಂಬುದು 12ನೆ ಶತಮಾನ ಗಳಲ್ಲಿ ತುರುಷ್ಕರು ಅಜ್ಞರಾಗಿ ನಡೆಸಿದ ಕಾರ್ಯಕ್ಕೆ ಮಾತ್ರ ಸಲ್ಲುವುದು. ಕುಮಾರಿಲ ಶಂಕರರ ಕಾರ್ಯವನ್ನು ಅಂತಹ ನಾಶವೆಂದು ಭಾವಿಸಲು ಆಸ್ಪದವಿಲ್ಲ. ಬೌದ್ಧ ಪಂಡಿತರು ಚೀನಾ ತಿಬ್ಬತ್ ದೇಶಗಳಿಗೆ ಹೊರಡು ತ್ತಿದ್ದುದು ಬೌದ್ಧರ ದೌರ್ಬಲ್ಯಕ್ಕೆ ಕಾರಣವೆಂದು ಒಂದು ವೇಳೆ ಭಾವಿಸಿ

ದಾಗ್ಯೂ ಬೌದ್ಧಮತದಲ್ಲಿ ನಾಸ್ತಿಕ್ಯವು ಮಾಯವಾದಂದಿನಿಂದಲೇ ಪ್ರತ್ಯೇಕತೆಯು ಮಾಯವಾಗಲು ಆರಂಭವಾಯಿತೆಂದು ಭಾವಿಸಬೇಕು. ಪುರಾತನ ಕಾಲದ ಮಹರ್ಷಿಗಳ ಬೋಧನೆಯನ್ನೂ ಸಾಧನೆಯನ್ನೂ ಸಾಮಾನ್ಯಜನರಿಗೆ ರೆಯುವುದೇ ಬೌದ್ಧಧರ್ಮದ ಕರ್ತವ್ಯವಾಗಿತ್ತು; ಆ ಕರ್ತವ್ಯವು ನೆರವೇರಿದ ತರುವಾಯ ಬೌದ್ಧಮತಕ್ಕೆ ಪ್ರತ್ಯೇಕತೆಯು ಅನವಶ್ಯವಾಗಿಯೇ ಪರಿಣಮಿಸಿತು.

# ರಾಜಪುತ್ರ ಕುಲರಾಷ್ಟ್ರಗಳು
## (700–1200)

1. ಕಾಲಗತಿ.
2. ಸಿಂಧುದೇಶ–ಇಸ್ಲಾಮಿ ಸಂಪರ್ಕ.
3. ರತ್ನಸಾನು ರಾಷ್ಟ್ರಗಳು.
4. ಪ್ರಸಿದ್ಧ ರಾಷ್ಟ್ರಗಳು (700–1030).
5. ಪಂಚನದ ಪ್ರತೀಹಾರರು.
6. ಪ್ರಸಿದ್ಧ ರಾಷ್ಟ್ರಗಳು (1030–1200).
7. ದಕ್ಷಿಣಾಪಥ (1000–1300).
8. ಸಾಮಾನ್ಯ ವಿಚಾರಗಳು.

### ಪ್ರಸಿದ್ಧ ಪುರುಷರು

| ಪ್ರಭುಗಳು. | ವೀರ ಪುರುಷರು. | ಇತರರು. |
|---|---|---|
| ಲಲಿತಾದಿತ್ಯ. | ದಾಹಿರ. | ಭವಭೂತಿ. |
| ಧರ್ಮಪಾಲ. | ಜಯಪಾಲ. | ಶ್ರೀ ರಾಮಾನುಜ. |
| ಮಿಹಿರಭೋಜ. | ಆನಂದಪಾಲ. | ಭಾಸ್ಕರಾಚಾರ್ಯ. |
| ಅಕಾಲವರ್ಷ ಕೃಷ್ಣ. | ಗಂಡರಾಜ. | ಶ್ರೀ ಮಧ್ವ. |
| ಮುಮ್ಮಡಿ ಗೋವಿಂದ. | ಪೃಥ್ವೀರಾಜ. | |
| ರಾಜರಾಜ ಚೋಳ. | ಜಯಚಂದ್ರ. | |
| ರಾಜೇಂದ್ರ ಚೋಳ. | ಮುಮ್ಮಡಿ ಬಲ್ಲಾಳ. | |
| ಭೋಜ (ಪರಮಾರ). | | |

## ಕಾಲಗತಿ

ಹರ್ಷವರ್ಧನನು ಕಟ್ಟಿದ ಸಾಮ್ರಾಜ್ಯವು ಆತನು ಮೃತಿಪಟ್ಟ ಅತ್ಯಲ್ಪ ಕಾಲದಲ್ಲಿಯೇ ಭಿನ್ನ ಭಿನ್ನವಾಯಿತು.

ಹರ್ಷನ ತರುವಾಯ ಆ ಸಾಮ್ರಾಜ್ಯಬಂಧವೂ ದೃಢವಾದುದಾಗಿರಲಿಲ್ಲ; ತಾತ್ಕಾಲಿಕವಾದುದಾಗಿತ್ತು. ಕಾಶ್ಮೀರ, ನೇಪಾಲ, ಕಾಮರೂಪ ರಾಜ್ಯಗಳು ಹರ್ಷ ಚಕ್ರವರ್ತಿಯು ಜೀವಂತನಾಗಿದ್ದಾಗ ಮೈತ್ರಿಯನ್ನೂ ವಶ್ಯತೆಯನ್ನೂ ತೋರುತ್ತಿದ್ದು ಕ್ಷಿಪ್ರತೆಯಿಂದ ಸ್ವತಂತ್ರವಾದವು. ಹಿಮವತ್ಪರ್ವತದ ಬತ್ತಿಸಲ್ಲಿರುವ ಆ ಮೂರು ರಾಷ್ಟ್ರಗಳ

ಸ್ವತಂತ್ರತೆಗೆ ಭಂಗಬರುವುದು ಪರಾಕ್ರಮಶಾಲಿಯಾದ ಸಮ್ರಾಟನು ಸಿದ್ಧನಾದಾಗಲೇ. ಇನ್ನು ಪಂಚನದ ಪ್ರದೇಶ, ಸಿಂಧುದೇಶ, ಸೌರಾಷ್ಟ್ರ, ಗುಜರಾಥ, ಮಾಳವ, ಮಗಧ, ವಂಗ, ಉತ್ಕಲ ಪ್ರಾಂತಗಳಲ್ಲಿ ಹರ್ಷನ ತರುವಾಯ ಮೊದಲಿದ್ದ ರಾಜವಂಶಗಳು ಸ್ವತಂತ್ರಗಳಾಗಿ ಪರಸ್ಪರ ಸ್ಪರ್ಧೆಯಲ್ಲಿ ತೊಡಗಿದವು. ಹಾಗೆ ನಡೆದ ಕೋಲಾಹಲದಲ್ಲಿ ನೂತನ ರಾಜ್ಯ ಸ್ಥಾಪನ ಪ್ರಯತ್ನಗಳನ್ನು ಸಾರ್ಥಕವಾಗಿಯೂ ಕೀರ್ತಿಕರವಾಗಿಯೂ ನಡೆಸಿದವರು ಕ್ಷತ್ರಿಯ ಕುಲದವರು; ಅವರಿಗೆ ರೂಢಿಯಲ್ಲಿ ರಾಜಪುತ್ರ ರೆಂಬ ಹೆಸರು ಸಲ್ಲುವುದು. **ರಾಜಪುತ್ರ, ರಾಜನ್ಯ** ಶಬ್ದಗಳು ಹೊಸವೇನೂ ಅಲ್ಲ; ಪುರಾತನ ಕಾಲದಿಂದಲೂ ಕ್ಷತ್ರಿಯರಿಗೆ ಸಲ್ಲುತ್ತಿದ್ದ ಹೆಸರುಗಳೇ. ಹರ್ಷನ ಅನಂತರ ಆರ್ಯಾವರ್ತದಲ್ಲಿ ಸ್ಥಾಪಿತವಾದ ರಾಜ್ಯಗಳಿಗೆ ರಾಜಪುತ್ರ ರಾಜ್ಯಗಳೆಂಬ ಹೆಸರು ವಾಡಿಕೆಯಾಗಿದೆ. ಆ ಕುಲಗಳವರು ಇಂದಿಗೂ ರಾಜಪುತ್ರರೆಂಬ ಹೆಸರನ್ನೇ ತಾಳುವರು.

**ರಾಜಪುತ್ರ ಕುಲ ಮೂಲಗಳು**

ಈ ರಾಜಪುತ್ರರ ಚರಿತ್ರೆಯು ಅತ್ಯಂತ ಮನೋರಂಜಕವಾಗಿದೆ. ಶೌರ್ಯ ಸಾಹಸಗಳಿಗೂ ಪರಂಪರಾಗತ ವೀರ್ಯೌದಾರ್ಯಗಳಿಗೂ ಮಾನಸಂಚಯಕ್ಕೂ ರಾಜಪುತ್ರರು ಇಡೀ ಪೃಥ್ವಿಯ ಇತಿಹಾಸದಲ್ಲಿಯೇ ಅಗ್ರಗಣ್ಯರಾಗಿದ್ದಾರೆ. ಅವರ ಚರಿತ್ರೆಯು ಪ್ರಚಂಡವಾದ ತೇಜಸ್ಸಿನಿಂದ ಬೆಳಗುವುದು. ಈ ಕಾರಣದಿಂದ ಅವರ ಉತ್ಪತ್ತಿಯು ಹೇಗೆ, ಎಲ್ಲಿ, ಯಾವಾಗ ಎಂಬ ಪ್ರಶ್ನೆಗಳು ಮುಖ್ಯವೆನಿಸಿ ಪಂಡಿತರ ಚರ್ಚೆಗೊಳಗಾದವು. ಆರ್ಯಾವರ್ತದಲ್ಲಿ ಗುಂಪುಗುಂಪಾಗಿ ಪ್ರವೇಶಿಸಿದ ಶಕ, ತುಖಾರ, ಗೂರ್ಜರ, ಹೂಣಕುಲಗಳ ವಂಶಸ್ಥರೇ ಅವರು ಎಂದು ಕೆಲವರು ವಾದಿಸಿದರು. ಕೆಲವರು ರಾಜಪುತ್ರರು ಸೂರ್ಯ ಚಂದ್ರ ವಂಶಗಳ ಪರಂಪರೆಯವರೆಂದೂ ಅವರಲ್ಲಿ ಮ್ಲೇಚ್ಛ ಸಂಪರ್ಕವು ಇಲ್ಲವೆಂದೂ ವಾದಿಸಿದರು. ಈಚೆಗೆ ಪಂಡಿತರು ರಾಜಪುತ್ರರಲ್ಲಿ ಅನೇಕರು ಮಹಾಭಾರತ ಕಾಲದಿಂದಲೂ ನಡೆದು ಬಂದ ಕ್ಷತ್ರಿಯ ಪರಂಪರೆಯವರೇ ಆಗಿರುವರೆಂದೂ, ಕೆಲ ಕುಲಗಳು ಮಾತ್ರ ಹಿಂದೂ ಧರ್ಮವನ್ನು ಸ್ವೀಕರಿಸಿ ಅಗ್ನಿಸಂಸ್ಕಾರ ಪೂರ್ವಕವಾಗಿ ಶುದ್ಧರಾದ ಪರಕೀಯ ಕುಲಗಳ ವಂಶಜ

| ರೋಮಕ | ಫಾರಸೀಸ್ಥಾನ | ಭಾರತವರ್ಷದ ಪ್ರಭುಗಳು | | | | ಚೀನಾ | ಉಪಭಾರತ ವರ್ಷಗಳು |
|---|---|---|---|---|---|---|---|
| 312 ಕಾನ್ಸ್ಟೆಂಟೈನ್ | 1260 ಷಾಪುರ್ | ಭಾರಶಿವ ವಂಶ (150–248) | | | | | |
| | | ತುಖಾರ ವಂಶ—ಗಣರಾಜ್ಯಗಳು | | ವಾಕಾಟಕ | ಗುಪ್ತ | 220 ಹಾನ್ ವಂಶದ ಕೊನೆ | |
| | | | | ಪ್ರವರಸೇನ | ಚಂದ್ರಗುಪ್ತ I | | ಜವ, ಸುಮಾತ್ರ |
| | | | | 284-344 | | ಕುಮಾರಜೀವ | ನೆಲಸುಗಳು |
| 392 ಥಿಯೊಡೋಸಿಯಸ್ | | | | ಪೃಥಿವೀಷೇಣ | 330 ಸಮುದ್ರಗುಪ್ತ | | |
| | | | | | | | ಶ್ಯಾಮ |
| | | | | 395 ರುದ್ರಸೇನ II | 380 ಚಂದ್ರಗುಪ್ತ II | 398 ಬುದ್ಧಭದ್ರ | |
| | | | | ಪ್ರಭಾವತೀದೇವಿ | | 400 ಫಾಹಿಯನ್ | ಕಾಂಬುಜ |
| | | | | | 413 ಕುಮಾರಗುಪ್ತ | 420 ಸಂಘವರ್ಮ | |
| 450 ಅಟ್ಟಿಲನ ಹಾವಳಿ | | | | | | | |
| 476 ರೋಮಕ ಧ್ವಂಸ | | | | | 455 ಸ್ಕಂದಗುಪ್ತ | | |
| ಪಶ್ಚಿಮ ಏಷ್ಯ | 484 ಫಿರೂಸ್ | | ಭಟ್ಟಾರಕ (ಸುರಾಷ್ಟ್ರ) | | | 424 ಗುಣವರ್ಮ | |
| 527 ಜಸ್ಟಿನಿಯನ್ | | | | | 467 ನರಸಿಂಹಗುಪ್ತ | | |
| | | 500 ತೋರಮಾನ | | | 477 ಬುಧಗುಪ್ತ | | |
| | | 528 ಮಿಹಿರಗುಲ | | ಹರಿಷೇಣ | ಭಾನುಗುಪ್ತ | | |
| | 531 ಖುಸ್ರೂ I | | | 490-520 | ಪ್ರಕಟಾದಿತ್ಯ | | ಚಂಪಾಕ್ಷೇತ್ರ |
| | | | | | | 518 ಸಂಗ್ಯನ್ | |
| ಅರಬ್ಬೀಸ್ಥಾನ | | ಚಾಲುಕ್ಯ | | ವಿಷ್ಣುವರ್ಧನ ಯಶೋಧರ್ಮ | | 526 ಬೋಧಿಧರ್ಮ | |
| 570 ಪೈಗಂಬರ್ ಜನನ | | 550 ಪುಲಿಕೇಶಿ I | | | ಮೌಖರಿ | 546 ಪರಮತಿ | |
| | | | | | ಆದಿತ್ಯವರ್ಮ | | |
| | 590 ಖುಸ್ರೂ II | 566 ಕೀರ್ತಿವರ್ಮ I | | 600 ಪ್ರಭಾಕರವರ್ಧನ | | | |
| | | | | | ಈಶಾನವರ್ಮ | | |
| 610 ಹಿರಾಕ್ಲಿಯಸ್ | | ಪುಲಿಕೇಶಿ II | | 606 ಹರ್ಷವರ್ಧನ | ಪಲ್ಲವ | | |
| ಚಕ್ರವರ್ತಿ | 622 ಹೆಜಿರ | | ಧ್ರುವಭಟ | | 600 ಮಹೇಂದ್ರವರ್ಮ I | 627 ತೈತ್ಸಂಗ್ ಚಕ್ರವರ್ತಿ | |
| | 632 ಪೈಗಂಬರನ ಮರಣ | ವಿಕ್ರಮಾದಿತ್ಯ I | | | 629 ಹಿಯನ್‌ತ್ಸಾಂಗ್ | | |
| | | | ಧರಸೇನ | | 630 ನರಸಿಂಹವರ್ಮ I | | |
| | ಖಲೀಫ ಅಬುಬಕರ್ | ವಿನಯಾದಿತ್ಯ | | | | | |
| | 634 ಉಮರ್ | | ಶಿಲಾದಿತ್ಯ | | 668 ಮಹೇಂದ್ರವರ್ಮ II | | |
| 645 ಹಿರಾಕ್ಲಿಯಸ್ ಮರಣ | ಜೆರುಸಲೆಂ ಜಯ | ವಿಜಯಾದಿತ್ಯ | | | | | |
| | 643 ಉಸ್ಮಾನ್ | | | ಗೌಡವಂಶ | 670 ಪರಮೇಶ್ವರವರ್ಮ | | |
| | | ವಿಕ್ರಮಾದಿತ್ಯ II | | ಆದಿತ್ಯಸೇನ | | | |
| | | | | | 690 ನರಸಿಂಹವರ್ಮ II | | |
| | | ಕೀರ್ತಿವರ್ಮ II | | 700 ದೇವಗುಪ್ತ | | | |
| ಅಂಧಕಾರ ಯುಗ | | 753 ರಾಷ್ಟ್ರಕೂಟರು | | ರಾಜಪುತ್ರ ಕುಲಗಳು | | | |

ರೆಂದೂ ತೀರ್ಮಾನಮಾಡಿಕೊಂಡಿದ್ದಾರೆ. ರಾಜಪುತ್ರವಂಶಗಳಲ್ಲಿಯೇ ಶ್ರೇಷ್ಠ ವರ್ಗ, ಮಿಶ್ರ ವರ್ಗಗಳಿರುವುದು ಈ ಅನುಮಾನಕ್ಕೆ ಬಲಕಾರಿ ಯಾಗಿರುವುದು. ಕ್ರಿ. ಪೂ. 1ನೆ ಶತಮಾನ ಕಾಲದಿಂದ ಕ್ರಿ. ಶ. 6ನೆ ಶತಮಾನದವರೆಗೂ ಯವನರ, ಪಾರ್ಥಿಯನರ, ಶಕರ, ಗೂರ್ಜರರ ಮತ್ತು ಹೂಣರ ಗುಂಪುಗಳು ಪಂಚನದ ಪ್ರದೇಶದಲ್ಲಿ ನುಗ್ಗಿ ಬರುತ್ತಿದ್ದಾಗ ರಾಜ್ಯಗಳನ್ನು ಕಳೆದುಕೊಂಡ ಕ್ಷತ್ರಿಯ ಕುಲಗಳವರು ನದೀಬಯಲು ಗಳನ್ನು ಬಿಟ್ಟು ಗುಡ್ಡಗಾಡು ಪ್ರದೇಶಗಳಲ್ಲಿ ಹೊಸ ರಾಜ್ಯಗಳನ್ನು ಕಟ್ಟಿ ಕೊಂಡರು. ಹರ್ಷವರ್ಧನನ ತರುವಾಯ ಇವರು ದೊರೆತ ಅವಕಾಶ ವನ್ನು ಉಪಯೋಗಿಸಿಕೊಂಡು ನದೀಪ್ರಾಂತಗಳಲ್ಲಿ ಪುನಃ ರಾಜ್ಯಸ್ಥಾಪನೆ ಮಾಡಿದರು. ಪರದೇಶೀಯ ರಾಜವಂಶಗಳೂ ಸಂಸ್ಕೃತರಾಗಿ ದೇಶೀಯರ ಸಂಬಂಧಗಳನ್ನು ಬೆಳೆಸಿ ಕ್ಷತ್ರಿಯರಲ್ಲಿ ಗಣ್ಯರಾದರು. ಈ ಎರಡು ಬಗೆ ಗಳಲ್ಲಿಯೂ ರಾಜಪುತ್ರ ಕುಲಗಳೂ ರಾಷ್ಟ್ರಗಳೂ ಉದ್ಭವಿಸಿದವು. ದಖ್ಖನ್ನಿ ನಲ್ಲಿ ಪ್ರಸಿದ್ಧಿಪಡೆದ **ಚಾಲುಕ್ಯ, ರಾಷ್ಟ್ರಕೂಟ, ಯಾದವ** ವಂಶಗಳವರೂ ಉತ್ತರದಲ್ಲಿ ಖ್ಯಾತಿಗೊಂಡ **ಶಿಶೋದಿಯ, ಕಚ್ಛಪಘಾತ, ಗಾಹಡವಾಲ, ಚಾಹುಮಾನ, ವಾಘೇಲ, ಚಂದೇಲ, ಪರಮಾರ, ಪ್ರತೀಹಾರ, ಹೈಹಯ** (ಅಹಿಹಯ), **ಚಾಪೋತ್ಕಟ** (ಚಾವಡ) ಮುಂತಾದ ಕುಲಗಳವರೂ ಈ ರೀತಿಯಲ್ಲಿ ರಾಜಪುತ್ರರೆನಿಸಿ ಪ್ರತ್ಯೇಕ ರಾಷ್ಟ್ರ ಗಳನ್ನು ಕಟ್ಟಿಕೊಂಡು ಆಳಲಾರಂಭಿಸಿದರು. ಮಹಾಭಾರತ ಕಾಲದಲ್ಲಿದ್ದಂತೆ ಈ ಕಾಲದಲ್ಲಿಯೂ **ಸಿಂಧು, ಪಂಚನದ, ಕುರು** (ದಿಲ್ಲೀ), **ಪಾಂಚಾಲ, ಚೇದಿ, ಮಗಧ, ಕಾಶ್ಮೀರ, ನೇಪಾಳ, ಕಾಮರೂಪ, ಮಾಳವ, ಸೌರಾಷ್ಟ್ರ, ಉತ್ಕಲ** ರಾಷ್ಟ್ರಗಳು ಹೆಸರುಗೊಂಡು ಪರಸ್ಪರವಾಗಿ ಸ್ಪರ್ಧಿಸಿದವು. ಆಳಿದ ರಾಜರು ಸಾಮಾನ್ಯವಾಗಿ ರಾಜಪುತ್ರರೆಂಬ ಹೆಸರನ್ನು ತಾಳಿದ ಕಾರಣದಿಂದ ಈ ಕಾಲವೆಲ್ಲವನ್ನೂ ರಾಜಪುತ್ರ ರಾಷ್ಟ್ರ ಗಳ ಕಾಲವೆಂದು ಕರೆಯುವುದು ರೂಢಿಯಾಗಿದೆ. ಕೆಲವು ರಾಷ್ಟ್ರಗಳಲ್ಲಿ ಬ್ರಾಹ್ಮಣರೇ ರಾಜ್ಯವನ್ನು ಕಟ್ಟಿಕೊಂಡು ಕ್ಷತ್ರಿಯ ಕರ್ತವ್ಯವನ್ನು ನಿರ್ವಾಹಮಾಡಿ ಕಾಲಾನಂತರದಲ್ಲಿ ಬ್ರಹ್ಮ ಕ್ಷತ್ರಿಯರೆಂದು ಹೆಸರನ್ನು ಪಡೆದುದು ಸ್ಮರಣೀಯವಾದ ಸಂಗತಿ.

ರಾಷ್ಟ್ರ ಸ್ಥಿತಿ

ಹರ್ಷನ ತರುವಾಯ ಅನೇಕ ಶತಮಾನಗಳವರೆಗೆ ಆರ್ಯಾವರ್ತವೆಲ್ಲವನ್ನೂ ಸ್ವಾಧೀನಗೊಳಿಸಿಕೊಂಡು ಏಕಚ್ಛತ್ರಾಧಿಪತ್ಯವನ್ನು ಸ್ಥಾಪಿಸಿದವರಾರೂ ಇಲ್ಲವಾಯಿತು. ರಾಷ್ಟ್ರಗಳ ಅಥವಾ ಕುಲಗಳ ಚರಿತ್ರೆಯು ಪ್ರತ್ಯೇಕವಾಗಿಯೇ ಪಠನೀಯವಾಗಿದೆ. ರಾಜಕೀಯವಾದ ಚರಿತ್ರೆಗೆ ಮಾತ್ರ ಉತ್ತರ ದಕ್ಷಿಣವೆಂಬ ಸಾಮಾನ್ಯ ವಿಭಾಗವನ್ನಲ್ಲದೆ ಹಿಮಾಲಯದ ಒತ್ತಿನಲ್ಲಿದ್ದ ರಾಷ್ಟ್ರಗಳು, ವಾಯುವ್ಯ ಸರಹದ್ದಿನ ರಾಷ್ಟ್ರಗಳು, ಗಂಗಾನದೀಬಯಲಿನ ರಾಷ್ಟ್ರಗಳು, ಇತ್ಯಾದಿಯಾಗಿ ಅನುಕೂಲಕ್ಕೆ ಮಾತ್ರ ವಿಂಗಡಿಸಿಕೊಳ್ಳಬಹುದು. ರಾಜಕೀಯ ರೀತಿಯಲ್ಲಿಯೂ ಕೂಡ ಪ್ರತ್ಯೇಕತೆಯೇ ಸದಾ ನೆಲೆಸಿರಲಿಲ್ಲ. ಬಲಿಷ್ಠರಾದ ರಾಜರು ಸಾಮ್ರಾಜ್ಯಕ್ಕಾಗಿ ಪ್ರಯತ್ನಿಸುತ್ತಲೇ ಇದ್ದರು ; ಆ ಸಂಗತಿಯು **ರಾಜಕೀಯೈಕ್ಯತೆಯ ನಿರಂತರ ಪ್ರಯತ್ನ**ದ ಸೂಚಕವಾದುದು. ರಾಷ್ಟ್ರಗಳು ಪರಸ್ಪರ ಸಂಬಂಧಗಳಿಲ್ಲದೆ ಇದ್ದವೆಂದು ಹೇಳಿದರೆ ಅದು ಬಹಳ ತಪ್ಪಾಗುವುದು. ಅನೇಕ ಮಾರ್ಗಗಳಲ್ಲಿ ಸಂಬಂಧಗಳು ನಡೆಯುತ್ತಲೇ ಇದ್ದವು. ಭಾರತೀಯ ಜನಜೀವನವು ದೇಶದಲ್ಲೆಲ್ಲಿಯೂ ಏಕರೀತಿಯಾಗಿದ್ದು ಐಕ್ಯತೆಯಿಂದ ಶೋಭಿಸುತ್ತ ನಾನಾಬಗೆಗಳಲ್ಲಿ ಅಭಿವೃದ್ಧಿಯಾಯಿತು. ನಾನಾ ರಾಜ್ಯಗಳಿದ್ದ ಕಾರಣಗಳಿಂದ ಜನಜೀವನವು ಭಿನ್ನಭಿನ್ನವಾಗಲಿಲ್ಲ. ಬಹಿರಾಚರಣೆಗಳಲ್ಲಿ ಭಿನ್ನತೆಯು ತೋರಿಕೊಂಡರೂ ಅಂತರ್ಯದಲ್ಲಿ ಐಕ್ಯತೆಯೇ ನೆಲೆಸಿದ್ದಿತೆಂಬುದನ್ನು ಮರೆಯಲಾಗದು. ನೀತಿ ಧರ್ಮಗಳೂ ವಿದ್ಯಾಸಾಧನೆಯೂ ಒಕ್ಕಟ್ಟಿನಿಂದಲೇ ನಡೆಯುತ್ತಿದ್ದ ಕಾರಣದಿಂದ ಏಳನೆ ಮತ್ತು ಎಂಟನೆ ಶತಮಾನಗಳಲ್ಲಿ ಏಷ್ಯಾಖಂಡದ ನೈರುತ್ಯಾಗ್ರದಲ್ಲಿ ಅಭಿವೃದ್ಧಿ ಪಡೆದ ಅರಬ್ಬೀಜನರಿಗೆ ವಿದ್ಯಾದಾನವನ್ನು ಭಾರತೀಯರೇ ಮಾಡುವವರಾದರು.

ಇಸ್ಲಾಂ

ಮಿಶ್ರದೇಶ, ಅಸ್ಸಿರಿಯ, ಬವೇರು, ಇರಾನ್ ದೇಶಗಳ ಪಕ್ಕದಲ್ಲಿಯೇ ಇರುವ ಅರಬ್ಬೀಸ್ಥಾನವು ಪ್ರಾಚೀನ ಕಾಲದಲ್ಲಿ ಪ್ರಸಿದ್ಧಿಯನ್ನೇ ಪಡೆಯಲಿಲ್ಲ. **ಪೈಗಂಬರ್ ಮುಹಮ್ಮದ**ನ ಉಪದೇಶಕ್ಕೆ ಮೊದಲು ಅಲ್ಲಿದ್ದ ಜನರು ದುರ್ನೀತಿಯುತರಾಗಿ ಪಾಪನಿರತರಾಗಿಯೇ ಇದ್ದರು. ಕ್ರಿ. ಶ.

570ರಲ್ಲಿ ಮಕ್ಕಾ ಪಟ್ಟಣದಲ್ಲಿ ಜನಿಸಿದ ಮಹಮ್ಮದನು ಧರ್ಮಸ್ಥಾಪನೆಗೆ ತೊಡಗಿದಾಗ ಕ್ರೂರ ಹಿಂಸೆಯನ್ನೇ ಅನುಭವಿಸಬೇಕಾಯಿತು. ಕ್ರಿ. ಶ. 622ರಲ್ಲಿ ಆತನು ಮಕ್ಕಾ ನಗರದಿಂದ ತಲೆ ತಪ್ಪಿಸಿಕೊಂಡು ಮದೀನಾ ನಗರ ಕ್ಕೋಡಬೇಕಾಗಿಬಂತು. ಎಷ್ಟು ತೊಂದರೆಗಳು ತೋರಿಕೊಂಡರೂ ಮಹಾ ಪುರುಷನಾದ ಪೈಗಂಬರನು ಅರಬ್ಬೀ ಜನರಿಗೆ ತಕ್ಕ ಧರ್ಮವನ್ನು ಬೋಧಿಸಿ ಅವರಲ್ಲಿ ನೀತಿಯನ್ನೂ ಐಕ್ಯತೆಯನ್ನೂ ಸ್ಥಾಪಿಸಿದನು. ಆತನು ಸ್ಥಾಪಿಸಿದ ಇಸ್ಲಾಂ ಮತವು ಸರಳವಾಗಿಯೂ ಸುಲಭವಾಗಿಯೂ ಇದ್ದು ಅರಬ್ಬೀ ಜನರಿಗೆ ಅನುಸರಣೀಯವಾಯಿತು. ಸಮಾಜ ಸಂಸ್ಕಾರವೂ ರಾಷ್ಟ್ರ ಸ್ಥಾಪನೆಯೂ ಧರ್ಮ ವ್ಯಾಪ್ತಿಯ ಬಲದಿಂದ ಸುಲಭವಾಗಿಯೂ ವೇಗ ವಾಗಿಯೂ ನೆರವೇರಿದವು.

## ಸಿಂಧುದೇಶ—ಇಸ್ಲಾಮೀ ಸಂಪರ್ಕ

ಹರ್ಷವರ್ಧನನು ಮೃತಪಡುವುದಕ್ಕೆ ಮೊದಲೇ ಕ್ರಿ. ಶ. 632ರಲ್ಲಿ ಅರಬ್ಬೀಸ್ಥಾನದಲ್ಲಿ ಪೈಗಂಬರ್ ಮುಹಮ್ಮದನು ತನ್ನ ಜೀವನ ಕರ್ತವ್ಯವನ್ನು ಮುಗಿಸಿ ಪರಲೋಕಪ್ರಾಪ್ತ ನಾಗಿದ್ದನು. ಆತನಿಂದ ರಾಷ್ಟ್ರೀಯ ಐಕ್ಯತೆ ಯನ್ನೂ, ಸಾಮಾಜಿಕ ಸಂಸ್ಕಾರವನ್ನೂ, ಧರ್ಮಸ್ಥಾಪನೆಯನ್ನೂ ಪಡೆದು ಉದ್ಧೃತರಾದ ಅರಬ್ಬೀ ಜನರು ಪರಮೋತ್ಸಾಹದಿಂದ ಚತುರ್ದಿಕ್ಕುಗಳಿಗೂ ಹೊರಟು ತಮ್ಮ ರಾಷ್ಟ್ರವನ್ನು ವಿಸ್ತರಿಸುವುದಕ್ಕೂ ಇಸ್ಲಾಮೀ ಧರ್ಮ ವನ್ನು ಹರಡುವುದಕ್ಕೂ ತೊಡಗಿದರು. ಕೆಲಕಾಲ **ದಮಾಸ್ಕಸ್** ನಗರವು ಇವರ ಖಲೀಫರಿಗೆ ರಾಜಧಾನಿಯಾಗಿತ್ತು. 750ರ ವರೆಗೆ ಈ ಪಟ್ಟಣದಲ್ಲಿ **ಉಮಾಯುದ್ ಖಲೀಫ**ರೆಂಬ ಮೊದಲಿನ ಖಲೀಫರು ಆಳಿದರು. ಈ ಜಯಗಳು ಅರಬ್ಬೀ ಜನರಿಗೆ ಏಳನೆಯ ಶತಮಾನದಲ್ಲಿಯೇ ಘಟಿಸಿದವು. ಅರಬ್ಬೀ ಜನರು ವ್ಯಾಪಾರಜೀವಿಗಳಾಗಿದ್ದುದರಿಂದ ನಮ್ಮ ದೇಶದ ದೂರ ಪರಿಚಯವು ಅವರಿಗಿದ್ದೇ ಇತ್ತು. ಫಾರ್ಸೀಸ್ಥಾನವು ವಶವಾಗುತ್ತಿದ್ದ ಕಾಲದಲ್ಲಿಯೇ ಅರಬ್ಬಿಗಳ ಒಂದು ಗುಂಪು **ಬಲೂಚಿಸ್ಥಾನ**ದವರೆಗೆ ನುಗ್ಗಿ ಬಂತು. ಬಲೂಚಿಸ್ಥಾನವು ಆಗ **ಸಿಂಧುದೇಶ**ದ ಭಾಗವಾಗಿತ್ತು.

ಇಸ್ಲಾಮೀ ವಿಸ್ತಾರ

ಬೌದ್ಧಮತಸ್ಥನಾದ **ದೀವಾಜಿ** ಎಂಬ ರಾಜನು ಅಲ್ಲಿಗೆ ಒಡೆಯನಾಗಿದ್ದನು.

ರಾಯ ಸಿಹಾರರು

ದೀವಾಜಿ ರಾಜನು ಅರಬ್ಬಿಯವರನ್ನು ಎದುರಿಸಿ ಯುದ್ಧಮಾಡುತ್ತ ಪ್ರಾಣಬಿಟ್ಟನು. ಅವನ ಮಗ **ಸಾಹಸೀ**ರಾಜನೂ ಕೂಡ 646ರಲ್ಲಿ ಅದೇ ವಿಧವಾದ ಮರಣವನ್ನು ಪಡೆದನು. ಅರಬ್ಬೀ ಜನರು ದೇಶವನ್ನಾಕ್ರಮಿಸಲು ಆಗ ಶಕ್ತರಾಗಿರಲಿಲ್ಲ. 664ರಲ್ಲಿ **ಮುಹಾಬಿಬ್** ಎಂಬ ಒಬ್ಬ ಮುಸಲ್ಮಾನ ಸರದಾರನು ದಂಡಿನೊಡನೆ ಬಂದು ಮೂಲ್ತಾನ ನಗರದವರೆಗೂ ನುಗ್ಗಿ ಪುನಃ ಹಿಂತಿರುಗಿದನು.

ದಾಹಿರ ರಾಜನ ಆತ್ಮಬಲಿ

ಈ ಗಡಿಬಿಡಿಯಲ್ಲಿ ಅರಮನೆಯಲ್ಲಿಯೇ ಒಂದು ಒಳತಂತ್ರವು ನಡೆಯಿತು. **ಚಛ**ನೆಂಬ ಬ್ರಾಹ್ಮಣ ಮಂತ್ರಿಯು ರಾಜ್ಯವನ್ನು ತಾನೇ ಆಕ್ರಮಣಮಾಡಿ ಹಿಂದಿನ ರಾಜವಂಶವನ್ನು ಮೂಲೆಗೆ ತಳ್ಳಿದನು. ಈ ಬ್ರಾಹ್ಮಣನ ಮಗ **ದಾಹಿರ** ರಾಜನು ಪಟ್ಟವನ್ನೇರಿದಾಗ **ವಲೀದ್** ಎಂಬಾತನು **ಬಗದಾದಿ**ನಲ್ಲಿ ಖಲೀಫನಾಗಿದ್ದನು. ಪೂರ್ವದಿಕ್ಕಿನಲ್ಲಿ ಆತನ ಸಾಮಂತನಾಗಿ **ಅಲ್‌ಹಜಾಜ್** ಎಂಬಾತನಿದ್ದನು. ಹೀಗಿರುವಲ್ಲಿ ಸಿಂಧುದೇಶದ **ದೇವಲ**(Daibul)ವೆಂಬ ಬಂದರಿನಲ್ಲಿ ಕೆಲವರು ಅರಬ್ಬೀ ವ್ಯಾಪಾರಸ್ಥರನ್ನು ಯಾರೋ ಕೆಲವರು ಕಳ್ಳರು ಹಿಡಿದು ಹೊಡೆದರು. ಹಜಾಜನು ದಾಹಿರ ರಾಜನಲ್ಲಿ ದೂರು ಹೇಳಿಕೊಳ್ಳಲು ರಾಜನು "ಕಳ್ಳರು ಯಾರೋ ಏನೋ, ನನ್ನಧಿಕಾರಕ್ಕೆ ಅವರೊಳಪಟ್ಟಿಲ್ಲ" ಎಂಬುದಾಗಿ ಉತ್ತರವಿತ್ತನು. ಹಜಾಜನಿಗೆ ಕೋಪಬಂದು **ಉಬಾಯಿದುಲ್ಲ** ಎಂಬ ಸರದಾರನನ್ನು ಸಿಂಧುದೇಶದ ಮೇಲೆ ಕಳುಹಿಸಿದನು. ದಾಹಿರ ರಾಜನು ಆತನನ್ನು ಚೆನ್ನಾಗಿ ಸೋಲಿಸಿ ಸಂಹರಿಸಿದನು. **ಬುದಯಿಲ್** ಎಂಬ ಮತ್ತೊಬ್ಬ ಸರದಾರನು ಬಂದು ಅದೇ ಗತಿಯನ್ನೇ ಅನುಭವಿಸಿದನು. ಆಗ ಹಜಾಜನು ತನ್ನ ಬಂಧುವೂ ಕಾಸಿಮನ ಮಗನೂ ಆಗಿದ್ದ **ಇಮಾಮುದ್ದೀನ್ ಮುಹಮ್ಮದ**ನೆಂಬ ಶೂರನನ್ನು ದಂಡಿನೊಡನೆ ಕಳುಹಿಸಿದನು. 712ರಲ್ಲಿ ಮುಹಮ್ಮದನ ದಂಡು ದೇವಲ ಬಂದರಿನಲ್ಲಿ ಕಾಣಿಸಿಕೊಂಡು ದೇವಲವನ್ನೂ ಅಕ್ಕಪಕ್ಕದ ಒಂದೆರಡು ಪಟ್ಟಣಗಳನ್ನೂ

ವಶಪಡಿಸಿಕೊಂಡಿತು. ದಾಹಿರನು ಈ ವೇಳೆಗೆ ಸೈನ್ಯವನ್ನು ಕೂಡಿಸಿಕೊಂಡು ಯುದ್ಧಕ್ಕೆ ಸಿದ್ಧನಾಗುತ್ತಿದ್ದನು. ಮುಹಮ್ಮದನೂ ಸನ್ನಾಹ ಮಾಡಿ ಮುಂದಕ್ಕೆ ಹೊರಟು **ರಾವರ್** ಎಂಬೆಡೆಯ ಬಳಿ ಎದುರಾದನು. ಇಬ್ಬರಿಗೂ ಘೋರ ಸಂಗ್ರಾಮವು ಮೊದಲಾಯಿತು. ಸ್ವಲ್ಪ ಕಾಲ ಎರಡು ಕಡೆಯವರೂ ಸಮಾನರಾಗಿ ಹೋರಾಡಿದರು; ದಾಹಿರನು ಒಂದು ದೊಡ್ಡಾನೆಯ ಮೇಲೆ ಕುಳಿತು ಯುದ್ಧಮಾಡುತ್ತಿದ್ದನು. ಆಗ ಒಬ್ಬ ಅರಬ್ಬೀ ಸೈನಿಕನು ಒಂದು ಬಾಣಕ್ಕೆ ಉರಿಯುವ ಅರಳೆಯನ್ನು ಸಿಕ್ಕಿ ಸಾಹಸದಿಂದ ಆನೆಗೆ ಗುರಿಯಿಟ್ಟು ಎಸೆದನು. ಆನೆಗೆ ದಿಗ್ಭ್ರಮೆ ಯುಂಟಾಗಿ ನದಿಯೊಳಕ್ಕೆ ನುಗ್ಗಿತು. ಮಾಹುತನೂ ರಾಜನೂ ಪ್ರಯತ್ನ ಪಟ್ಟು ಆನೆಯನ್ನು ತಡೆದು ಪುನಃ ಯುದ್ಧಕ್ಕೆ ನಿಲ್ಲಿಸಿದರು. ದಾಹಿರನು ಬಹಳ ಪರಾಕ್ರಮವನ್ನು ತೋರಿ ಅನೇಕ ಶತ್ರುಗಳನ್ನು ಸಂಹರಿಸಿದನು. ಆಗ ಒಂದು ಬಾಣವು ತಗಲಿ ರಾಜನು ಆನೆಯಿಂದ ಕೆಳಕ್ಕೆ ಬೀಳುವಂತಾಯಿತು. ಆದರೂ ಧೃತಿಗೆಡದೆ ದಾಹಿರನೊಂದು ಕುದುರೆಯನ್ನು ಹತ್ತಿಕೊಂಡು ಸಿದ್ಧನಾದನು. ಕಡೆಗೆ ಅರಬ್ಬೀ ಸೈನಿಕನೊಬ್ಬನ ಏಟಿಗೆ ಸಿಕ್ಕಿ ಪ್ರಾಣವನ್ನರ್ಪಿಸಿದನು. ದಾಹಿರನು ಬಿದ್ದ ಕೂಡಲೆ ಹಿಂದೂ ಸೈನಿಕರೆಲ್ಲರೂ ಯುದ್ಧಭೂಮಿಯಿಂದ ಕಾಲ್ದೆಗೆದರು. **ಯುವರಾಜ ಜಯಸಿಂಹ**ನು ಪಟ್ಟಣಕ್ಕೆ ಓಡಿದನು. **ರಾಣೀಬಾಯಿ**ಯೆಂಬ ದಾಹಿರನ ರಾಣಿಯೊಬ್ಬಾಕೆಯು ತನ್ನ ಪರಿವಾರದೊಡನೆ ರಾವರದಲ್ಲಿಯೇ ಚಿತಿ ಪ್ರವೇಶ ಮಾಡಿದಳು.

ಮುಹಮ್ಮದನ ಜಯ

ಯುವರಾಜ ಜಯಸಿಂಹನು **ಬಹಮನಾಬಾದೆಂ**ದು ಹೆಸರಾಗಿರುವ ನಗರದಲ್ಲಿ ಸೇರಿಕೊಂಡು ಮುಹಮ್ಮದನೊಡನೆ ಮತ್ತೊಮ್ಮೆ ಜಗಳಕ್ಕೆ ಅಣಿಯಾದನು. ಅಲ್ಲಿಯೂ ಮುಹಮ್ಮದನದೇ ಮೇಲ್ಗೈಯಾಗಲು ಜಯಸಿಂಹನು **ಚಿತ್ತೂರ**ರೆಂಬಲ್ಲಿಗೆ ಹೋದನು. ಬಹಮನಾಬಾದಿನಲ್ಲಿ ಮುಹಮ್ಮದನು ತನ್ನ ಅಧಿಕಾರವನ್ನು ಸ್ಥಾಪಿಸಿ **ರಾಣೀಲಾದೀ** ಎಂಬ ದಾಹಿರನ ಹೆಂಡತಿಯನ್ನೂ **ಸೂರ್ಯಾದೇವಿ** ಮತ್ತು **ಪರ್ಮಲದೇವಿ**ಯರೆಂಬ ಇಬ್ಬರು ಕುಮಾರಿಯರನ್ನೂ ಸೆರೆಹಿಡಿದನು. ಗೆದ್ದ ಭಾಗವನ್ನು ಭದ್ರಪಡಿಸಿ

ಮುಹಮ್ಮದನು ಮುಂದೆ ಹೊರಟು **ಅರಾರ**ವೆಂಬ ಪಟ್ಟಣವನ್ನು ಸಮೀಪಿಸಿದನು. ಅಲ್ಲಿ ದಾಹಿರನ ಮತ್ತೊಬ್ಬ ಮಗನಿದ್ದು ಧೈರ್ಯದಿಂದ ಪ್ರತಿಭಟಿಸಿದನು. ಅಲ್ಲಿಯ ಜನರಿಗೆ ದಾಹಿರನು ಇನ್ನೂ ಜೀವಂತನಾಗಿಯೇ ಇರುವನೆಂಬ ನಂಬಿಕೆಯಿತ್ತು. ಸೆರೆಸಿಕ್ಕ ರಾಣೀಲಾದೀದೇವಿಯನ್ನು ಮದುವೆಯಾಗಿದ್ದ ಮುಹಮ್ಮದನು ಆಕೆಯನ್ನು ಆ ನಂಬಿಕೆಯನ್ನು ನಾಶಗೊಳಿಸಿ ಆ ಜನರ ಧೈರ್ಯವನ್ನು ತಗ್ಗಿಸಲು ನಿಯಮಿಸಿದನು. ಆಕೆಯನ್ನು ಕಂಡ ಕೂಡಲೆ ಆ ಜನರು ಬೈದು ತಿರಸ್ಕಾರಮಾಡಿದರು. ಆದರೆ ರಾಜಪುತ್ರನು ನಿಜವನ್ನರಿತು ಆ ಪಟ್ಟಣವನ್ನು ಬಿಟ್ಟು ಹೊರಟುಹೋದನು. ಪಟ್ಟಣದ ಜನರು ಸಾಮರ್ಥ್ಯದಿಂದ ಹೋರಾಡಿ ಕಡೆಗೆ ಸೋತರು. ಅರಾರ ನಗರವು ಈ ರೀತಿ ಮುಹಮ್ಮದನ ವಶವಾಯಿತು.

ಅಲ್ಲಿಂದ ಮುಂದೆ ಮುಹಮ್ಮದನು ಬೇರೆ ಎರಡು ದುರ್ಗಗಳನ್ನು ಸಾಹಸದಿಂದ ಹಿಡಿದು **ಮೂಲ್ತಾನ** ನಗರಕ್ಕೆ ಬಂದನು. ಅಲ್ಲಿ ಮೈದಾನದಲ್ಲಿ ಯುದ್ಧಮಾಡಿ ಸೋತು ಹಿಂದೂ ಜನಗಳು ಪಟ್ಟಣದೊಳಕ್ಕೆ ಹೊರಟು ಮುತ್ತಿಗೆಗೆ ಸಿದ್ಧರಾದರು. ಕೋಟೆಯನ್ನು ಸಾಧಿಸುವುದು ಕಷ್ಟವಾಗಿತ್ತು. ಕಡೆಗೆ ಯಾರೋ ಒಬ್ಬ ದ್ರೋಹಿಯು ಶತ್ರುವಿಗೆ ನಗರದೊಳಗೆ ನೀರಿನ ವಸತಿಯನ್ನು ಕಲ್ಪಿಸುತ್ತಿದ್ದ ನದಿಯ ಕಾಲುವೆಯನ್ನು ತೋರಿಸಿಕೊಟ್ಟನು. ಆ ಕಾಲುವೆಯ ನೀರನ್ನು ಬೇರೆ ಕಡೆಗೆ ತಿರುಗಿಸಿ ಮುಹಮ್ಮದನು ನೀರಿಲ್ಲದಂತೆ ಮಾಡಿದನು. ಹಿಂದೂಗಳು ಸೋಲನ್ನೊಪ್ಪಿಕೊಳ್ಳಬೇಕಾಯಿತು. 713ರಲ್ಲಿ ಮೂಲ್ತಾನ್ ಪಟ್ಟಣವು ಸ್ವಾಧೀನವಾದ ಮೇಲೆ ಮುಹಮ್ಮದನು ಗೆದ್ದ ರಾಜ್ಯದ ಆಡಳಿತಕ್ಕೆ ಏರ್ಪಾಟು ಮಾಡತೊಡಗಿದನು. ದೇಶದಲ್ಲಿ ಜನರನ್ನು ಲೂಟಿಮಾಡಿ ದೇವಾಲಯಗಳನ್ನು ಹಾಳುಮಾಡಿ ಇಸ್ಲಾಮಿ ಮತಪ್ರಚಾರ ಮಾಡುವುದಲ್ಲದೆ ಸೆರೆಯಾಳುಗಳನ್ನು ಗುಲಾಮರನ್ನಾಗಿ ಮಾಡಿದ್ದರೂ ಅರಬ್ಬೀ ಜನರು ಹೆಚ್ಚು ಕ್ರೌರ್ಯವನ್ನು ತೋರಲಿಲ್ಲ. ಖಲೀಫರಿಗೆ ಪೊಗದಿ ನಿಷ್ಕೃಷ್ಟವಾಗಿ ಕ್ರಮವಾಗಿ ದೊರೆತರೆ ಸಾಕೆಂಬ ಭಾವನೆಯೇ ಅವರಲ್ಲಿತ್ತು.

715ರಲ್ಲಿ ಮಹಮ್ಮದನಿಗೆ* ಬದಲಾಗಿ **ಯಸೀದ್** ಎಂಬಾತನು ಸಿಂಧುದೇಶಕ್ಕೆ ಅಧಿಕಾರಿಯಾಗಿ ನಿಯುಕ್ತನಾದನು.

**ಯುವರಾಜ ಜಯಸಿಂಹ** ಮಹಮ್ಮದನು ಸ್ವದೇಶಕ್ಕೆ ಹಿಂತಿರುಗಿ ಅಲ್ಲಿ ಒಬ್ಬ ಶತ್ರುವಿನ ಕೈಗೆ ಸಿಕ್ಕಿ ಚಿತ್ರಹಿಂಸೆಗೆ ಗುರಿಯಾದನು.

ಸಿಂಧುದೇಶದಲ್ಲಿ ಅರಬ್ಬೀ ಅಧಿಕಾರಿಗಳು ಉದಾರ ಭಾವವನ್ನೇ ತೋರುತ್ತಲಿದ್ದರು. 717ರಲ್ಲಿ ಖಲೀಫನಾದ **ಎರಡನೆ ಉಮರನು** ಇಸ್ಲಾಮಿ ಮತದಲ್ಲಿ ನಿಷ್ಠಾವಂತನಾಗಿದ್ದು ಸಿಂಧುಪ್ರಾಂತದಲ್ಲಿ ಎಲ್ಲರೂ ಮುಸ್ಲಿಮರಾಗಬೇಕೆಂದು ಅಪ್ಪಣೆಮಾಡಿದನು. ಜಯಸಿಂಹನು ಈ ಸಂದರ್ಭದಲ್ಲಿ ಇಸ್ಲಾಮಿ ಮತವನ್ನು ಸ್ವೀಕರಿಸಿದನು. ಆದರೂ ಅರಬ್ಬೀ ಅಧಿಕಾರಿಯಾದ **ಜುನಾಯಿದ್** ಎಂಬಾತನಿಗೂ ಈತನಿಗೂ ವಿರೋಧವು ತೋರಿಕೊಂಡಿತು; ಆದ ಜಗಳದಲ್ಲಿ ಜಯಸಿಂಹನು ಪ್ರಾಣವನ್ನು ಕಳಕೊಂಡನು. ಜಯಸಿಂಹನ ತಮ್ಮ ಚಚನು ಜುನಾಯಿದನ ಮೇಲೆ ದೂರು ಹೇಳಬೇಕೆಂದು ಇರಾಕಿಗೆ ಹೊರಟನು. ಜುನಾಯುದನು ಅಲ್ಲಿ ಅವನನ್ನು ಸಮಾಧಾನಪಡಿಸಿ ಸ್ವಲ್ಪ ಕಾಲದಮೇಲೆ ಅವನನ್ನು ಕೊಂದನು. ತರುವಾಯ ಜುನಾಯಿದನು ಸಿಂಧುದೇಶದಲ್ಲಿ ಇನ್ನೂ ಕೆಲವು ಭಾಗಗಳನ್ನು ಗೆದ್ದು ಅಲ್ಲಿಯೇ ಅಧಿಕಾರಿಯಾಗಿದ್ದನು. ಆತನ ಅನಂತರ ಅಧಿಕಾರಮಾಡಿದ ಅರಬ್ಬೀ ಅಧಿಕಾರಿಗಳು ಸಿಂಧುದೇಶದಲ್ಲಿ ಇಸ್ಲಾಮಿ ಮತವನ್ನು ಭದ್ರಗೊಳಿಸಲು ಪ್ರಯತ್ನಮಾಡಿದರು; ಕೈಗೂಡಲಿಲ್ಲ. ಏಕೆಂದರೆ ಕೆಲವು ದೇವಾಲಯಗಳು ಧ್ವಂಸವಾಗಿ ಹಲಕೆಲವರು ಮುಸ್ಲಿಮರಾಗಿದ್ದಾಗ್ಗೂ ದೇಶೀಯ ಜನರು ತಮ್ಮ ಮತವನ್ನು ಬಿಡಲಿಲ್ಲ. ಇಸ್ಲಾಮಿ ಮತವನ್ನೊಪ್ಪಿದವರೂ ಕೂಡ ಸ್ವಲ್ಪ ಕಾಲದಲ್ಲಿಯೇ ಮೂರ್ತಿ ಪೂಜೆಯನ್ನು ಮಾಡಲಾರಂಭಿಸಿದರು. ಅರಬ್ಬಿಗಳು ಸಂಖ್ಯೆಯಲ್ಲಿ ಅಲ್ಪರಾಗಿದ್ದರು; ಅವರ ಪ್ರಾಬಲ್ಯವು ಕುಗ್ಗಿತು. ಇದ್ದವರು ಸುರಕ್ಷಿತರಾಗಿರಲು ಅಧಿಕಾರಿಗಳು **ಮನ್ಸೂರಾ** ಎಂಬ ಕೋಟೆಯನ್ನು ಭದ್ರಗೊಳಿಸಿಕೊಳ್ಳಬೇಕಾಯಿತು.

---

* ಕಾಸಿಮನ ಮಗ ಮಹಮ್ಮದನ (ಮಹಮ್ಮದ್ ಬಿನ್ ಕಾಸಿಂ) ಕಡೆಗಾಲವನ್ನು ಕುರಿತು ಒಂದು ಕಥೆಯು ಸುಪ್ರಸಿದ್ಧವಾಗಿದೆ. ಆದರೆ ಆದರಲ್ಲಿ ಸ್ವಲ್ಪವೂ ನಿಜಾಂಶವಿಲ್ಲ.
[Vide C. H. I., Vol. III., P. 7.]

ಹೀಗಿರುವಲ್ಲಿ 750ರಲ್ಲಿ ಉಮಯಿಯಾ ಖಲೀಫರ ಪ್ರಾಬಲ್ಯವು ಮಾಯವಾಯಿತು. ಬಗದಾದಿನಲ್ಲಿ ಸ್ಥಾಪಿತರಾದ **ಅಬ್ಬಾಸೀ** ವಂಶದ ಖಲೀಫರು ಪ್ರಬಲರಾದರು. ಪಾರ್ಸೀಸ್ಥಾನವು ಇವರ ಪಾದಾಕ್ರಾಂತವಾಯಿತು.

**ಬಗದಾದಿನ ಖಲೀಫರು**

ಅಬ್ಬಾಸೀ ಖಲೀಫರ ಅಧಿಕಾರಿಗಳು ಸಿಂಧುದೇಶದಲ್ಲಿ ಅಧಿಕಾರ ಮಾಡುತ್ತಿದ್ದ ಉಮಯಿಯಾ ಅಧಿಕಾರಿಗಳೊಡನೆ ಯುದ್ಧಮಾಡಿ ಮನಸ್ಸೂರಾ ಮತ್ತು ಮೂಲ್ತಾನ್ ಪಟ್ಟಣಗಳನ್ನು ಕಿತ್ತುಕೊಂಡರು. ಬಗದಾದಿನ ಖಲೀಫರ ಅಧಿಕಾರವು 871ರವರೆಗೆ ಸಿಂಧುದೇಶದ ಭಾಗಗಳಲ್ಲಿ ನಡೆಯುತ್ತಿತ್ತು. ಆ ವರುಷದಲ್ಲಿ ಅರಬ್ಬೀ ಅಧಿಕಾರಿಗಳು ಸ್ವತಂತ್ರರಾದರು; ಬಗದಾದಿನ ಅಥವಾ ಕಯ್ರೋನಗರದ ಖಲೀಫರಿಗೆ ಯಾವ ವಿಧದಲ್ಲಿಯೂ ಅಧೀನರಾಗಿರಲಿಲ್ಲ. ಕೆಲಕಾಲದಲ್ಲಿಯೇ ಸಿಂಧುದೇಶವು **ಸುಮೇರ** ಅಥವಾ **ಸುಮ್ರ** ಎಂದು ಹೆಸರಾದ ರಾಜಪುತ್ರಕುಲಸ್ಥರ ವಶವಾಯಿತು. ಈ ಸುಮ್ರಕುಲಸ್ಥರು ಕೆಲವರು ಕಾಲಗತಿಯಲ್ಲಿ ತಾವೇ ಮುಸ್ಲಿಮರಾದರು.

9ನೆ ಶತಮಾನದಲ್ಲಿ ಅರಬ್ಬೀ ಜನರು ಕೆಲವರು ಪಶ್ಚಿಮ ತೀರಪ್ರದೇಶದಲ್ಲಿ ವ್ಯಾಪಾರಕ್ಕಾಗಿ ಹೊರಡುತ್ತಿದ್ದವರು ಅಲ್ಲಿಯೇ ನೆಲೆಸಿದರು. ಅವರ ವಂಶಜರೇ **ಮಾಪಿಳ್ಳೆ**ಗಳೆಂಬ ಜನರು. ಕೇರಲದೇಶದಲ್ಲಿ ನೆಲೆಸಿದ ಅರಬ್ಬೀ

**ಶಾಂತಿ ಭಿಕ್ಷೆ**

ಜನರು ಶಾಂತ ರೀತಿಯಲ್ಲಿಯೇ ನಡೆದುಕೊಂಡರು. ಸರಿಸುಮಾರು ಅದೇ ಕಾಲದಲ್ಲಿಯೇ ಇರಾನ್ ಅಥವಾ ಫಾರ್ಸೀಸ್ಥಾನದಿಂದ ಮುಸಲ್ಮಾನ ಪ್ರಭುತ್ವವನ್ನು ತಪ್ಪಿಸಿಕೊಂಡು ಕೆಲವರು **ಇರಾನಿ**ಗಳು ಸ್ವದೇಶವನ್ನು ಬಿಟ್ಟು ಸೌರಾಷ್ಟ್ರ, ಗುಜರಾಥ ಪ್ರಾಂತಗಳ ಪಟ್ಟಣಗಳಿಗೆ ಓಡಿಬಂದರು. ತಮ್ಮ ಮತವನ್ನು ನಿರಾತಂಕವಾಗಿ ಅನುಸರಿಸುವ ಅನುಕೂಲವು ಅವರಿಗೆ ಇಲ್ಲಿಯೇ ದೊರೆತಿತು. ಅವರ ವಂಶದವರೇ ಈಗಿನ **ಪಾರ್ಸೀ**ಜನರು.

ಸಿಂಧುದೇಶದಲ್ಲಿ ಅರಬ್ಬೀ ಜನರು ಪಡೆದ ಜಯವು ಸ್ಥಿರವಾಗಿಯೂ ನಡೆಯಲಿಲ್ಲ; ಇಸ್ಲಾಮಿಯಾಮತದ ಪ್ರಚಾರಕ್ಕೆ ಗಣ್ಯವಾದ ಸಾಧಕವಾಗಿಯೂ ಆಗಲಿಲ್ಲ. ದೇಶವನ್ನು ಆಕ್ರಮಿಸುವ ಪ್ರಯತ್ನದಲ್ಲಿ ಕೆಲವು ಅಕೃತ್ಯಗಳು ನಡೆದಿದ್ದಾಗ್ಗೂ ಮುಸ್ಲಿಂ ಜನರು ಶಾಂತತೆಯನ್ನೇ ತೋರಿದರು ; ಕ್ರೌರ್ಯ

ವನ್ನೂ ಕಾಠೋರ್ಯವನ್ನೂ ತೋರಲಿಲ್ಲ. ಅವರ ಆಳ್ವಿಕೆಯಲ್ಲಿ ಜಿಸಿಯ ತೆರಿಗೆಯಿದ್ದಾಗ್ಯೂ ಬಲವಂತದಿಂದ ಮತಪ್ರಚಾರ ಮಾಡುವ ಪ್ರಯತ್ನವು ಸಾಗಲಿಲ್ಲ. ಹಲಕೆಲವರು ರಾಜಪುತ್ರರೇ ಮುಸ್ಲಿಮರಾಗಿ ಪ್ರಭುತ್ವವನ್ನು ಸ್ಥಾಪಿಸಿದ ಮೇಲೆ ಸಿಂಧುದೇಶದಲ್ಲಿ ಸ್ವಲ್ಪ ಕಾಲ ನಷ್ಟವಾಗಿದ್ದ ಸ್ವರಾಜ್ಯವು ಪುನಃ ಸ್ಥಾಪಿತವಾದಂತೆಯೇ ಆಯಿತು. ಅರಬ್ಬೀ ಜನರು **ಎಂಟನೆಯ** ಶತಮಾನದಲ್ಲಿ ಅಸಭ್ಯರಾಗಿರಲಿಲ್ಲ; ಅದೇ ಅವರ ಆಳ್ವಿಕೆಯು ನಿಷ್ಠುರವಾಗದಿರಲು ಕಾರಣವಾಯಿತು.

ಇಸ್ಲಾಮಿ ಆಡಳಿತ

ಕ್ರಿ. ಶ. 226ರಲ್ಲಿ ಇರಾಣಿನಲ್ಲಿ ಸ್ಥಾಪಿತವಾದ **ಸಾಸಾನೀ** ದೊರೆಗಳಿಗೂ ನಮ್ಮ ದೇಶದ ವಾಯುವ್ಯದಲ್ಲಿ ಆಳುತ್ತಿದ್ದ ತುಖಾರ ವಂಶಗಳ ರಾಜರಿಗೂ ಸ್ನೇಹ ಸಂಬಂಧಗಳು ನಡೆದುಬಂದಿದ್ದವು. ಪೈಗಂಬರನ ಸಮಕಾಲಿಕನಾಗಿ ಆಳಿದ **ಖುಸ್ರೂ ಅನೂಷೀರ್ವಾನ್** ದೊರೆಯು ಚಾಲುಕ್ಯ ಸಮ್ರಾಟ **ಇಮ್ಮಡಿ ಪುಲಿಕೇಶಿ**ಯೊಡನೆ ಸ್ನೇಹಕಟ್ಟಿ ರಾಯಭಾರಿಗಳನ್ನು ಕಳುಹಿಸಿದ್ದನು. ಈ ಸಂಬಂಧಗಳ ಪರಿಣಾಮವು ಕೆಲವಿಷಯಗಳಿಂದ ಸ್ಫುಟವಾಗುತ್ತದೆ. **ಚದುರಂಗ**ವೆಂಬ ಭಾರತೀಯ ಆಟವನ್ನು ಖುಸ್ರೂಷಹನ ಕಾಲದಲ್ಲಿ ಇರಾನೀಜನರು ಕಲಿತರಂತೆ. ಸಂಸ್ಕೃತ ಭಾಷೆಯಲ್ಲಿ ಪಂಚತಂತ್ರ, ಹಿತೋಪದೇಶ, ಬೃಹತ್ಕಥಾ ಮುಂತಾಗಿ **ಕಥೆಗಳ ರಾಶಿ**ಯು ಅಪಾರವಾಗಿತ್ತು. ಅವುಗಳಲ್ಲಿ ಕೆಲವು ಕ್ರಿ. ಪೂ. ಕಾಲದಲ್ಲಿಯೇ ಯಹುದೀಜನರಲ್ಲಿ ಬಳಕೆಯಾಗಿದ್ದವು. ಕ್ರಿಸ್ತ ಶಕದ ಕಾಲದಲ್ಲಿಯೂ ಭಾರತವರ್ಷದ ಕಥೆಗಳನ್ನು ಫಾರಸೀಜನರು ಎರವಾಗಿ ತೆಗೆದುಕೊಂಡರು.* ಅರಬ್ಬೀ ಜನರು ಫಾರ್ಸೀಸ್ಥಾನವನ್ನು ಗೆದ್ದಾಗ ಭಾರತೀಯರ ಉದಾತ್ತ ಸಂಸ್ಕೃತಿಯ ಪರಿಚಯವು ಅವರಿಗೂ ಉಂಟಾಯಿತು. ವ್ಯಾಪಾರದಲ್ಲಿ ತೊಡಗಿ ಸಂಚರಿಸಿದವರು ದೇಶದ ಪರಿಚಯವನ್ನು ಹೆಚ್ಚಿಸಿದರು. ಸಿಂಧುದೇಶದಲ್ಲಿ ನೆಲೆಸಿದ ಮೇಲೆ ಪರಿಚಯವು ಇನ್ನೂ ಬೆಳೆಯಿತು.

ವಿದ್ಯಾದಾನ

* ಕರಟಕ ದಮನಕರ ಕಥೆಯೇ ಕಲೀಲಾದಿಮ್ನಾ ಎಂಬುದು.

9ನೆ ಶತಮಾನದಲ್ಲಿ ಬಗದಾದಿನ ಖಲೀಫರಲ್ಲೆಲ್ಲ ಪ್ರಸಿದ್ಧನಾದ **ಹಾರೂನ್ ಅಲ್ ರಷೀದ್** ಎಂಬಾತನು ಆಳುತ್ತಿದ್ದಾಗ ಭಾರತೀಯ ವಿದ್ವಾಂಸರನ್ನೂ ಶಾಸ್ತ್ರಜ್ಞರನ್ನೂ* ಆತನು ತನ್ನ ಆಸ್ಥಾನಕ್ಕೆ ಬರಮಾಡಿಕೊಂಡು ಗೌರವಿಸಿ, ಅವರ ಸಹಾಯದಿಂದ ಶಾಸ್ತ್ರ ಗ್ರಂಥಗಳನ್ನು ಸಂಸ್ಕೃತದಿಂದ ಅರಬ್ಬೀ ಭಾಷೆಗೆ ಭಾಷಾಂತರಮಾಡಿಸಿದನು. **ಗಣಿತ, ವೈದ್ಯ, ರಸಾಯನ** ಶಾಸ್ತ್ರಗಳೂ, **ಕುಶಲಕಲೆ**ಗಳೂ ಈ ರೀತಿಯಲ್ಲಿ ಅರಬ್ಬೀ ಜನರಿಗೆ ಭಾರತೀಯರಿಂದ ಲಬ್ಧವಾದವು. ಈ ಸಂಗತಿಯು ಮುಖ್ಯವಾದುದು. ಏಕೆಂದರೆ ಕಾಲಾನಂತರದಲ್ಲಿ ಅರಬ್ಬೀ ಜನರಿಂದಲೇ ಈ ಶಾಸ್ತ್ರಗಳನ್ನು ಐರೋಪ್ಯರು ಪಡೆದು ಅಭಿವೃದ್ಧರಾದರು.

ಪರಿಣಾಮ

ಸಿಂಧು ದೇಶದಲ್ಲಿ ಆಕ್ರಮಣ ಪ್ರಯತ್ನವು ನಡೆದು ಯುದ್ಧಗಳಾದಾಗ್ಯೂ ಈ ಕಾಲದಲ್ಲಿ ಆ ಕಾರಣದಿಂದ ಅಭಿವೃದ್ಧಿಗೆ ಲೋಪವಾಗಲಿ ಚ್ಯುತಿಯಾಗಲಿ ಸಂಭವಿಸಲಿಲ್ಲ. ಸಿಂಧು ದೇಶದಲ್ಲಿ ನೆಲೆಸಿದ ಅರಬ್ಬೀ ಜನರು ಕ್ರಮೇಣ ದೇಶೀಯರಲ್ಲಿ ಸೇರಿ ಶಾಂತ ಜೀವನದಲ್ಲಿ ತೊಡಗಿದರು. ಅವರ ಅಧಿಕಾರಿಗಳು ದಖ್ಖಿನ್ನಿನಲ್ಲಿ 753ರಿಂದ 973ರ ವರೆಗೆ ಪ್ರೌಢಿಮೆಯಿಂದ ಆಳಿದ ರಾಷ್ಟ್ರಕೂಟ ವಂಶದವರ ಸ್ನೇಹವನ್ನು ಬಯಸಿ ಮೈತ್ರಿಯನ್ನು ಬಲಗೊಳಿಸಿಕೊಂಡರು. ಶ್ರೀವಲ್ಲಭನೆಂಬ ಬಿರುದು ಆ ಅರಸರಲ್ಲಿ ಸಾಮಾನ್ಯವಾಗಿತ್ತು. ಅರಬ್ಬೀ ಜನರು ಅದನ್ನು **ಬಲ್ಹರ** (ಕನ್ನಡ–ಬಲ್ಲಹ) ಎಂದು ಅಪಭ್ರಂಶ ಮಾಡಿಕೊಂಡು ವ್ಯವಹರಿಸುತ್ತಿದ್ದರು. ಅರಬ್ಬೀ ಜನರ

---

* ಬಗದಾದಿನ ಆಸ್ಥಾನದಲ್ಲಿದ್ದ ಪಂಡಿತರ ಹೆಸರುಗಳು ಮಾಂಕ, ಸಾಲೀಹ ಎಂದು ಕೆಲವರು ಆಧುನಿಕ ಗ್ರಂಥಕಾರರು ಬರೆದಿರುತ್ತಾರೆ. ಅರಬ್ಬೀ ಅಥವಾ ಫಾರಸೀ ಲಿಪಿಯಲ್ಲಿ ಸಂಸ್ಕೃತ ಭಾಷೆಯ ಶಬ್ದಗಳನ್ನು ಶುದ್ಧವಾಗಿ ಬರೆಯಲಾಗುವುದಿಲ್ಲ. ಆ ಜನರಿಂದ ಶುದ್ಧವಾದ ಉಚ್ಚಾರಣೆಯೂ ಆಗುವುದಿಲ್ಲ. ಆದ್ದರಿಂದ ಅರಬ್ಬೀ, ಫಾರಸೀ ಗ್ರಂಥಗಳಿಂದ ಸಂಸ್ಕೃತದ ಹೆಸರುಗಳನ್ನು ಉದ್ಧರಿಸುವುದು ಅಸಾಧ್ಯವಾದ ಕೆಲಸವಾಗಿಯೇ ಇದೆ.

ಅರಬ್ಬೀ ಅಂಕಿ (Arabic numerals) ಗಳು ಭಾರತೀಯವಾದವೇ; ಸಂಸ್ಕೃತದಲ್ಲಿ ಬರೆಯುವ ಅಂಕಿಗಳೊಡನೆ ಸ್ವಲ್ಪ ಹೋಲಿಸಿ ನೋಡಿದರೆ ಭಾಸವಾಗುವುದು.

ಯುನಾನೀ ವೈದ್ಯಶಾಸ್ತ್ರವು ಯವನರ ಸ್ಮರಣೆಯನ್ನುಂಟುಮಾಡಬಹುದಾಗಿದ್ದರೂ ಭಾರತೀಯ ಸಂಪರ್ಕದಿಂದಲೇ ಪುಷ್ಟಿಪಡೆಯಿತು.

ಪ್ರಯಾಣಿಕರು ಕೆಲವರು ಹಿಂದೂಸ್ಥಾನದಲ್ಲಿ ಸಂಚಾರಮಾಡಲು ಆಶೆಪಟ್ಟರು. ಈ ರೀತಿಯಲ್ಲಿ ಸಿಂಧು ದೇಶವನ್ನು ಅರಬ್ಬೀ ಜನರು ಆಕ್ರಮಿಸಿದುದು ಶಾಂತವಾಗಿಯೇ ಕೊನೆಗಂಡಿತು ; ಸಂಸ್ಕೃತಿ ಲಾಭವಾಗಲು ಆಸ್ಪದವುಂಟಾಯಿತು.

## ರತ್ನಸಾನು ರಾಷ್ಟ್ರಗಳು

ಕಾಶ್ಮೀರ

ಭಾರತಭೂಮಿಗೆ ಶಿಖರಪ್ರಾಯವಾಗಿರುವ ಕಾಶ್ಮೀರ ದೇಶವು ಸಮಸ್ತ ಪೃಥ್ವಿಯಲ್ಲಿಯೇ ಸೌಂದರ್ಯದ ತವರ್ಮನೆಯೆನಿಸಿದೆ. ತುಖಾರ ಕುಲದ ಪ್ರಭುಗಳು ಕೆಲಕಾಲ ಮಾತ್ರ ಅಲ್ಲಿ ಅರಸುತನಮಾಡಿದ್ದರು; ಗುಪ್ತ ಸಾರ್ವಭೌಮರ ಕಾಲದಲ್ಲಿಯೂ ಹರ್ಷವರ್ಧನನ ಕಾಲದಲ್ಲಿಯೂ ಕ್ಷತ್ರಿಯ ವಂಶಜರೇ ಅಲ್ಲಿ ರಾಜ್ಯಾರೂಢರಾಗಿದ್ದರು. ಕಾಶ್ಮೀರದ ಇತಿಹಾಸವು ಕಲ್ಹಣ ಕವಿಯ **ರಾಜತರಂಗಿಣಿ**ಯೆಂಬ ಗ್ರಂಥದಲ್ಲಿ ಉಲ್ಲಿಖಿತವಾಗಿದೆ.

ಲಲಿತಾದಿತ್ಯ

ಹರ್ಷವರ್ಧನನ ಕಾಲದಲ್ಲಿ ಕಾಶ್ಮೀರದಲ್ಲಿ **ದುರ್ಲಭವರ್ಧನ**ನೆಂಬ ರಾಜನು ಆಳುತ್ತಿದ್ದನು. ಆತನು ನಾಗಕುಲದವನು ; ಆತನ ಸಂತತಿಗೆ **ಕಾರ್ಕೋಟ ಸಂತತಿ** ಎಂದು ಹೆಸರು. ಆತನು ಹರ್ಷನಲ್ಲಿ ಮೈತ್ರಿಯನ್ನು ತೋರುತ್ತಿದ್ದು ಹಿಯುನ್ತ್ಸಾಂಗನು ತನ್ನ ರಾಜ್ಯಕ್ಕೆ ಬಂದಾಗ ಆತನನ್ನು ಸತ್ಕರಿಸಿ ಕೊಟ್ಟುಕಳುಹಿಸಿದನು. ದುರ್ಲಭವರ್ಧನನು ವೈದಿಕ ಮತವನ್ನು ಅನುಸರಿಸಿ ಬ್ರಾಹ್ಮಣರ ಬೋಧನೆಗೇ ಕಿವಿಗೊಡುತ್ತಲಿದ್ದರೂ ಬೌದ್ಧರಲ್ಲಿ ದಾಕ್ಷಿಣ್ಯವನ್ನು ತೋರುತ್ತಿದ್ದನು. ಆತನ ತರುವಾಯ ಆತನ ವಂಶದಲ್ಲಿ ಪ್ರಖ್ಯಾತನಾದ **ಮುಕ್ತಾಪೀಡ** ಅಥವಾ **ಲಲಿತಾದಿತ್ಯ ಮಹಾರಾಜ**ನು 733ರಲ್ಲಿ ಪಟ್ಟವನ್ನೇರಿ 36 ವರ್ಷ ಕಾಲ ರಾಜ್ಯವನ್ನಾಳಿದನು. ಈತನು ತಿಬ್ಬತ್ ದೇಶದವರನ್ನೂ ತುರುಷ್ಕರನ್ನೂ ಗೆದ್ದು ರಾಜ್ಯವನ್ನು ವಿಸ್ತರಿಸಿ ಚೀನಾ ಸಮ್ರಾಟನಿಂದ ಗೌರವವನ್ನು ಪಡೆದನು. ಅನೇಕ ದೇವಾಲಯಗಳನ್ನೂ ಬೌದ್ಧಮತಸ್ಥರಿಗಾಗಿ ವಿಹಾರಗಳನ್ನೂ ನಿರ್ಮಿಸಿ

ದನು. ಶ್ರೀನಗರದ ಸಮೀಪದಲ್ಲಿಯೇ ಈತನು ಅದ್ಭುತವೆನಿಸಿದ **ಮಾರ್ತಾಂಡ ದೇವಾಲಯ**ವನ್ನು ಕಟ್ಟಿಸಿದನು. ಪಾಳು ಬಿದ್ದಿರುವ



32. ಮಾರ್ತಾಂಡ ದೇವಾಲಯ

ಆ ದೇವಾಲಯವು ಈಗಲೂ ನೋಟಕರಿಗೆ ಅಚ್ಚರಿಯನ್ನುಂಟುಮಾಡು ತ್ತದೆ. ಲಲಿತಾದಿತ್ಯರಾಜನು ಯುದ್ಧದಲ್ಲಿ ಸಮರ್ಥನಾಗಿಯೂ ದಾನ ಧರ್ಮಗಳಲ್ಲಿ ಉದಾರನಾಗಿಯೂ ಇದ್ದುದಲ್ಲದೆ ಕಲಾಸಕ್ತನೂ ಆಗಿ ಸಾಹಿತ್ಯಲೋಲನಾಗಿದ್ದು ಆ ಕಾಲದ ಕವಿಗಳಲ್ಲಿ ಅಗ್ರಗಣ್ಯನಾಗಿದ್ದ **ಭವಭೂತಿ**ಯನ್ನು ತನ್ನ ಆಸ್ಥಾನದಲ್ಲಿಟ್ಟುಕೊಳ್ಳಬೇಕೆಂದು ಆಸೆ ಪಟ್ಟನು. ಭವಭೂತಿಯು **ಕನ್ಯಾಕುಬ್ಜ**ದಲ್ಲಿ **ಯಶೋವರ್ಮ**ನೆಂಬ ರಾಜನ ಆಶ್ರಯದಲ್ಲಿದ್ದನು. ಲಲಿತಾದಿತ್ಯನು ಯಶೋವರ್ಮನನ್ನು ಯುದ್ಧಕ್ಕೆ ಕರೆದು ಜಯಶಾಲಿಯಾಗಿ ಭವಭೂತಿಯನ್ನು ತನ್ನ ಆಸ್ಥಾನಕ್ಕೆ ಕರೆದುಕೊಂಡು ಹೋದನು. ಕವಿಯು ನನ್ನಲ್ಲಿರಬೇಕು, ತನ್ನಲ್ಲಿರ

ಬೇಕು ಎಂದು ಸ್ಪರ್ಧಿಸಿದ ರಾಜರ ಕಾಲವೇ ಇಸ್ಲೂ ನಡೆಯುತ್ತಿತ್ತು. ಉತ್ತರದಲ್ಲಿ ಹಿಮಾಚ್ಛಾದಿತ ಪ್ರಾಂತಗಳಲ್ಲಿ ಯಾವುದೋ ಯುದ್ಧದಲ್ಲಿ ಲಲಿತಾದಿತ್ಯನು ಮೃತನಾದನು. ಆತನ ನೆನಪು ಇಂದಿಗೂ ಕಾಶ್ಮೀರದಲ್ಲಿ ಸ್ಥಿರವಾಗಿದೆ.

ಉತ್ಪಾಲ ವಂಶ

ಲಲಿತಾದಿತ್ಯನ ತರುವಾಯ ಆತನ ಮೊಮ್ಮಗ **ಜಯಾಪೀಡ**ನೆಂಬಾತನು ಆಳಿದನು. ಕಡೆಗಾಲದಲ್ಲಿ ದೌಷ್ಟ್ಯವೇ ಆತನಲ್ಲಿ ಬಲವಾಗಿ ಪ್ರಜೆಗಳಿಗೆ ಹಿಂಸಾಕರವಾಯಿತು. ಮುಂದೆ ಆಳಿದ ಕಾರ್ಕೋಟ ವಂಶದ ರಾಜರು ಒಳ್ಳೇ ಹೆಸರನ್ನು ಪಡೆಯಲಿಲ್ಲ. 855ರಿಂದ 1003ರ ವರೆಗೆ ಅಧಿಕಾರ ಮಾಡಿದ **ಉತ್ಪಾಲ** ಮನೆತನದಲ್ಲಿ 855ರಿಂದ 883ರ ವರೆಗೆ ಆಳಿದ **ಅವಂತಿವರ್ಮ**ನೆಂಬ ದೊರೆಯು ಧರ್ಮಾತ್ಮನಾಗಿ ಅನೇಕ ದೇವಾಲಯಗಳನ್ನೂ ನಗರಗಳನ್ನೂ ಕಟ್ಟಿಸಿದನು.

ಸುಯ್ಯ

ಆತನಿಗೆ ಮಂತ್ರಿಯಾಗಿದ್ದ **ಸುಯ್ಯ**ನೆಂಬಾತನು ವಿತಸ್ತಾ ನದಿಯಿಂದ ಕಾಲುವೆಗಳನ್ನು ಅಗೆಯಿಸಿ ಜನರಿಗೆ ಬಹಳ ಉಪಕಾರ ಮಾಡಿದನು. 1003ರಲ್ಲಿ **ಲೋಹರ** ವಂಶವು ಸ್ಥಾಪಿತವಾಯಿತು; ಘಸನೀ ಮಹಮ್ಮೂದನು ಆಗಲೇ ದಂಡೆತ್ತಿದ್ದುದು. ರಾಜನಾದ **ಸಂಗ್ರಾಮ**ನು ಸೋತನು; ಆದರೂ ಸ್ಥಾನಮಹಿಮೆಯಿಂದ ಕಾಶ್ಮೀರದೇಶವು ದುಸ್ಸಾಧ್ಯವಾಗಿದ್ದುದರಿಂದ ಮಹಮ್ಮೂದನು ಪುನಃ ಆ ದೇಶದ ಮೇಲೆ ದಾಳಿ ಹೊರಡಲಿಲ್ಲ. ರಾಜರು ದೌಷ್ಟ್ಯಕ್ಕೂ ಸ್ವಾರ್ಥಕ್ಕೂ ಹೆಸರಾದರು. 1089ರಿಂದ 1101ರ ವರೆಗೆ ಆಳಿದ **ಹರ್ಷ**ನೆಂಬಾತನು ಸುರೂಪಿಯಾಗಿಯೂ ಕಲಾಲೋಲನಾಗಿಯೂ ಇದ್ದನು. ಆತನ ಆಸ್ಥಾನದಲ್ಲಿ ಕವಿಗಳೂ ಗಾಯಕರೂ ನೆರೆದಿದ್ದರು. ರಸಜ್ಞನಾಗಿದ್ದರೂ ಹರ್ಷನು ಧರ್ಮಿಷ್ಠನಾಗಿ ಬಾಳಲಿಲ್ಲ. ಅವನ ನೀಚತನವನ್ನು ಸಹಿಸಲಾರದೆ ಪ್ರಜೆಗಳು ದಂಗೆಯೆದ್ದು ಅವನನ್ನು ಸಿಂಹಾಸನದಿಂದ ತಳ್ಳಿ ಕೊಂದರು. ಲೋಹರ ವಂಶದ ಮತ್ತೊಂದು ಶಾಖೆಯವರೇ ಅರಸರಾದರು. 1339ರಲ್ಲಿ **ಷಾ ಮಿರ್ಜ**ನೆಂಬ ಪಠಾಣನು ಮಂತ್ರಿ

ಪಠಾನ ಮಿರ್ಜ

ಪದವಿಯನ್ನು ಸಂಪಾದಿಸಿ ಸಮಯಕಾದಿದ್ದು ರಾಜನು ಸತ್ತ ಕೂಡಲೆ ರಾಣಿಯನ್ನು ಸೋಲಿಸಿ ಬಲವಂತದಿಂದ ಮದುವೆಯಾಗಿ ತಾನೇ ಪ್ರಭುವಾದನು.

ಲಲಿತಾದಿತ್ಯನ ಅನಂತರ ಅವಂತಿವರ್ಮರಾಜನು ವಿನಾ ಉಳಿದವರು ವಿಷಯಾಸಕ್ತರಾಗಿಯೋ ದುರ್ಬಲರಾಗಿಯೋ ಇದ್ದರು. ಪಂಚನದ ಪ್ರಾಂತವು ತುರುಷ್ಕರ ಲೂಟಿಗೊಳಗಾಗಿದ್ದಾಗ ಈ ರಾಜರು ಪ್ರತೀಹಾರ ರಾಜರ ಸಹಾಯಕ್ಕೆ ಹೊರಡದೆ ಸ್ವಸ್ಥವಾಗಿದ್ದು ಬಿಟ್ಟರು. ಸೌಂದರ್ಯದ ಪ್ರಭಾವದಿಂದ ಕಾಶ್ಮೀರದೇಶವು ಕವಿಗಳನ್ನೂ ಪ್ರವಾಸಿಗಳನ್ನೂ ಆಕರ್ಷಿಸುತ್ತಲೇ ಇತ್ತು. ಹರ್ಷದೇವನ ಆಸ್ಥಾನದಲ್ಲಿ ಪ್ರಸಿದ್ಧನಾದ ಕಲ್ಹಣ ಕವಿಯಿದ್ದು ರಾಜತರಂಗಿಣಿಯೆಂಬ ಕಾವ್ಯವನ್ನು ರಚಿಸಿದನು.

ನೇಪಾಲ

ಹಿಮವತ್ಪರ್ವತದ ಸಾನುಪ್ರದೇಶದಲ್ಲಿಯೇ ರೂಪಗೊಂಡು ಕಾಶ್ಮೀರಕ್ಕಿಂತಲೂ ದುರ್ಗಮವಾದುದು ನೇಪಾಲವೆಂಬ ದೇಶ. ಪುರಾತನ ಕಾಲದಿಂದಲೂ ಹೆಸರಾದ ಆ ದೇಶವು ಅಶೋಕ ಚಕ್ರವರ್ತಿಗೆ ವಶವಾಗಿದ್ದು ಮೌರ್ಯ ಸಾಮ್ರಾಜ್ಯವು ಕ್ಷಯವಾದ ಬಳಿಕ ಲಿಚ್ಛವಿಗಣದವರ ಅಧಿಕಾರಕ್ಕೊಳಗಾಗಿತ್ತು. ಅಶೋಕನ ಕಾಲದಲ್ಲಿ ನೇಪಾಲದಲ್ಲಿ ಬೌದ್ಧಮತವು ವಿಶೇಷವಾದ ಪ್ರಚಾರವನ್ನು ಪಡೆದು ಕಾಲಕ್ರಮೇಣ ಪ್ರಬಲವಾಯಿತು. ಗುಪ್ತ ಸಾರ್ವಭೌಮರ ಕಾಲದಲ್ಲಿ ನೇಪಾಲ ರಾಜ್ಯವು ಸಾಮ್ರಾಜ್ಯದ ಹೊರಗಿದ್ದರೂ ಕಾಣಿಕೆಯನ್ನು ಕೊಟ್ಟು ಆ ಚಕ್ರವರ್ತಿಗಳ ಶ್ರೇಷ್ಠತೆಯನ್ನು ಒಪ್ಪಿತ್ತು. ಹರ್ಷವರ್ಧನನ ಕಾಲದಲ್ಲಿ ನೇಪಾಲದಲ್ಲಿ **ಅಂಶುವರ್ಮ**ನೆಂಬಾತನು **ಠಾಕೂರೀವಂಶ**ವನ್ನು ಸ್ಥಾಪಿಸಿ ಹರ್ಷನಲ್ಲಿ ಸ್ನೇಹದಿಂದ ವರ್ತಿಸುತ್ತ 642ರವರೆಗೆ ಆಳಿದನು. ಈತನು ತನ್ನ ಮಗಳನ್ನು ತಿಬ್ಬತ್ತಿನ ರಾಜನಿಗೆ ಮದುವೆಮಾಡಿಕೊಟ್ಟು ತಿಬ್ಬತ್ತಿನ ಸಂಬಂಧವನ್ನೂ ಆ ಮೂಲಕ ಚೀನಾ ಸಾಮ್ರಾಜ್ಯದ ಸಂಬಂಧವನ್ನೂ ಕಟ್ಟಿಕೊಂಡಿದ್ದನು. ಕನ್ಯಾಕುಬ್ಜದಲ್ಲಿ ಹರ್ಷನ ಮರಣಾನಂತರ ನಡೆದ ಅರ್ಜುನನ ರಾಜ್ಯಾಪಹಾರ ಪ್ರಯತ್ನವನ್ನು ಭಂಗಿಸುವುದರಲ್ಲಿ ನೇಪಾಲರಾಜನು ಚೀನಾ ರಾಯಭಾರಿಗೆ ನೆರವಾದ ಸಂಗತಿಯು ಹಿಂದೆಯೇ ತಿಳಿದಿದೆ. ನೇಪಾಲರಾಜರು ತಿಬ್ಬತ್ ಮತ್ತು

ಚೀನಾ ಸಂಬಂಧಗಳನ್ನು ಬೆಳೆಸುತ್ತ ಆಳುತ್ತಿದ್ದರು. ಬೌದ್ಧಮತವೂ ಶೈವಮತವೂ ನೇಪಾಲದಲ್ಲಿ ಬೆಳೆದು ಬೌದ್ಧಮತವು ಕಾಲಕ್ರಮದಲ್ಲಿ ದುರ್ಬಲವಾಯಿತು.

ನೇಪಾಲದೇಶವು ಎಂದಿಗೂ ಪರಾಧೀನವಾಗಲಿಲ್ಲ. 1768ರಲ್ಲಿ, ಅಂದರೆ ಈಚೀಚೆಗೆ, ರಾಜಪುತ್ರಕುಲದವರಾದ **ಗೋರಖ** (ಗೋರಕ್ಷಕ)ರು ತಮ್ಮ ವಂಶವನ್ನು ಸ್ಥಾಪಿಸಿದರು. ಸಮಸ್ತ ಭಾರತವರ್ಷದಲ್ಲೆಲ್ಲ ಪರಕೀಯರಿಗೆ ಆಸ್ಪದಕೊಡದೆ ಸ್ವತಂತ್ರವಾಗಿಯೇ ಇದ್ದು ಹಿಂದೂ ಮತವನ್ನೇ ಬೆಳೆಸಿದ ದೇಶವೆಂದರೆ ನೇಪಾಲವೊಂದೇ. ದೊಡ್ಡ ಸಾಮ್ರಾಜ್ಯವನ್ನು ಕಟ್ಟಿದ ಮುಘಲರಿಗೂ ಕೂಡ ನೇಪಾಲವು ವಶವಾಗಲಿಲ್ಲ.

ಕಾಮರೂಪ

ನೇಪಾಲಕ್ಕೆ ಮೂಡಲಲ್ಲಿ ಬ್ರಹ್ಮಪುತ್ರಾನದಿಯ ಎರಡು ಕಡೆಗಳಲ್ಲಿಯೂ ಇರುವ **ಕಾಮರೂಪ**ವೆಂಬ ದೇಶವೂ ಪುರಾತನ ಕಾಲದಿಂದಲೂ ಪ್ರಸಿದ್ಧವಾದುದೇ. ಪೂರ್ವಕಾಲದಲ್ಲಿ ಕಾಮರೂಪವು ಬಹಳ ವಿಸ್ತಾರವಾಗಿತ್ತು. ಗುಪ್ತವಂಶದವರು ಆಳುತ್ತಿದ್ದಾಗ ಕಾಮರೂಪದ ರಾಜನು ಪೊಗದಿ ಕೊಡಲೊಪ್ಪಿದ್ದನು ; ಹರ್ಷವರ್ಧನನಿಗೆ ಕಾಮರೂಪದ **ಭಾಸ್ಕರ ವರ್ಮ**ನು ಸಾಮಂತನಾಗಿದ್ದನು. ಯುವನ್ತ್ಸಂಗನು ಕಾಮರೂಪ ರಾಜನ ಆಸ್ಥಾನವನ್ನು ಸಂದರ್ಶಿಸಿದ್ದನು. ಈ ಭಾಸ್ಕರವರ್ಮನ ತರುವಾಯ ಆಳಿದ ರಾಜರ ಚರಿತ್ರೆಯು ವಿಶದವಾಗಿ ತಿಳಿದಿಲ್ಲ. ಕೆಲವು ಕಾಲ ಕಾಮರೂಪವು ವಂಗದೇಶದ ಪಾಲ ಸಂತತಿಯವರಿಗೆ ಅಧೀನವಾಗಿತ್ತು. **ಕುಮಾರ ಪಾಲ**ನೆಂಬ ಆ ವಂಶದ ರಾಜನು **ವೈದ್ಯದೇವ**ನೆಂಬ ತನ್ನ ಮಂತ್ರಿಯನ್ನು ರಾಜಪ್ರತಿನಿಧಿಯಾಗಿ ಕಾಮರೂಪದಲ್ಲಿ ನಿಯೋಗಿಸಿದ್ದನು. 1204ರಲ್ಲಿ ವಂಗದೇಶವನ್ನು ಜಯಿಸಿದ್ದ **ಇಖ್ತ್ಯಾರುದ್ದೀನ್ ಮುಹಮ್ಮದ್ ಬಿನ್ ಭಕ್ತ್ಯಾರ**ನೆಂಬ ತುರುಷ್ಕ ಸರದಾರನು ದುಡುಕಿ ಕಾಮರೂಪವನ್ನು ಮುತ್ತಲು ಹವಣಿಸಿ ಯಾವುದೋ ಒಂದು ನದಿಯ ದಡದಲ್ಲಿ ಸಂಚರಿಸಿ ದೇಶವನ್ನು ಹೊಕ್ಕು ಆಸರೆಯನ್ನು ಕಾಣದೆ ದಿಕ್ಕೆಟ್ಟು ಸೈನ್ಯ ಸಮಸ್ತವನ್ನೂ ನೀಗಿ ಹಿಂತಿರುಗಿದನು. ಕಾಮರೂಪದ ಜನರು ಆ ಸಮಯದಲ್ಲಿ ಒಂದು ದೊಡ್ಡ ಸೇತುವೆಯನ್ನು ನಾಶಗೊಳಿಸಿ ಮಾರ್ಗವಿಲ್ಲದಂತೆ ಮಾಡಲು

ತುರುಷ್ಕರು ಬಹುಮಂದಿ ನದಿಯಲ್ಲಿ ಬಿದ್ದು ಪ್ರಾಣಬಿಟ್ಟರು. ಮಹಮ್ಮದನು ಮಾತ್ರ ಬಹಳ ಕಷ್ಟದಿಂದ ಜೀವವನ್ನುಳಿಸಿಕೊಂಡು ಹಿಂದಿರುಗಿದನು. 1228ರಲ್ಲಿ ಷಾನ್‌ಕುಲಕ್ಕೆ ಸೇರಿ ಬೌದ್ಧಮತಸ್ಥರಾಗಿದ್ದ **ಅಹೋಮ**ರೆಂಬ ಜನರು ದೇಶವನ್ನು ಸ್ವಾಧೀನಪಡಿಸಿಕೊಂಡು ತಮ್ಮ ಹೆಸರನ್ನೇ ದೇಶಕ್ಕೆ ಕೊಟ್ಟರು (ಅಸ್ಸಾಂ).

ನೇಪಾಲವಿದ್ದಂತೆಯೇ ಕಾಮರೂಪ ದೇಶವೂ ಮುಸಲ್ಮಾನರ ಆಳ್ವಿಕೆಗೆ ಎಂದೂ ಒಳಗಾಗದಿತ್ತು. ನೇಪಾಲದಲ್ಲಿ **ಪಶುಪತಿನಾಥ ದೇವಾಲಯ**ವು ಪ್ರಸಿದ್ಧಿಯಾಗಿರುವಂತೆ ಅಸ್ಸಾಮಿನಲ್ಲಿ ಗೋಹಾಟಿಯಲ್ಲಿ **ಕಾಮಾಖ್ಯ ದೇವಾಲಯ**ವು ಹೆಸರುವಾಸಿಯಾಗಿದೆ. ಎರಡು ದೇಶಗಳಲ್ಲಿಯೂ ತಾಂತ್ರಿಕ ಮತವು ಪ್ರಬಲವಾಗಿ ಬೆಳೆಯಿತು.

ಕಾಶ್ಮೀರ, ನೇಪಾಲ, ಕಾಮರೂಪ ದೇಶಗಳು ಪರ್ವತಮಯಗಳಾಗಿ ಹಿಮಾಲಯದ ಒತ್ತಿನಲ್ಲಿರುವುದರಿಂದ ಅವುಗಳ ರಾಜಕೀಯ ಚರಿತ್ರೆಯು ಮೈದಾನ ಪ್ರದೇಶದ ಘಟನಾವಳಿಗಳ ಸಂಬಂಧವನ್ನು ವಿಶೇಷವಾಗಿ ಪಡೆಯಲಿಲ್ಲ.

## ಪ್ರಸಿದ್ಧ ರಾಷ್ಟ್ರಗಳು (700–1030)

ಪಾಂಚಾಲ

ಹರ್ಷವರ್ಧನನು ಕಾಲವಾದ ಕೂಡಲೆ ಸಾಮ್ರಾಜ್ಯದ ಭಾಗಗಳಾಗಿದ್ದ **ವಲ್ಲಭಿ, ಮಾಳವ, ಮಗಧ, ವಂಗ, ಕಾಮರೂಪ, ಉತ್ಕಲ** ನಾಡುಗಳು ಸ್ವತಂತ್ರವಾದವು. **ಕಾಶ್ಮೀರ, ನೇಪಾಲ**ದರಸರೂ **ಪಂಚನದ** ಪ್ರಾಂತದ ರಾಜರೂ ಬೇರೆಯೇ ಆದರು. ಕನ್ಯಾಕುಬ್ಜದಲ್ಲಿ **ಅರ್ಜುನ**ನೆಂಬ ಮಂತ್ರಿಯು ಮಾಡಿದ ರಾಜ್ಯಾಪಹಾರ ಪ್ರಯತ್ನವು ಚೀನಾ ರಾಯಭಾರಿಯ ಸಾಹಸದಿಂದ ಭಂಗವಾದ ತರುವಾಯ ಕೆಲಕಾಲ ಅನಾಯಕವಾಗಿಯೇ ಇತ್ತು. ಸುಮಾರು 700ರಲ್ಲಿ **ಯಶೋವರ್ಮ**ನೆಂಬ ರಾಜಪುತ್ರರಾಜನು **ಪಾಂಚಾಲ** ರಾಜ್ಯವನ್ನು ರೂಢಿಸಿಕೊಂಡನು. ಆತನು 731ರಲ್ಲಿ ಚೀನಾ ಚಕ್ರವರ್ತಿಯ ಬಳಿಗೆ ರಾಯಭಾರವನ್ನು ಕಳುಹಿಸಿದನು. ಸಾಹಿತ್ಯದಲ್ಲಿ ವಿಶೇಷ ಅಭಿರುಚಿಯುಳ್ಳವನಾಗಿ ಪ್ರಸಿದ್ಧ ಕವಿ **ಭವಭೂತಿ**

ಯನ್ನು ತನ್ನ ಆಸ್ಥಾನದಲ್ಲಿಟ್ಟುಕೊಂಡಿದ್ದನು. ಸುಮಾರು 740ರಲ್ಲಿ ಕಾಶ್ಮೀರದ ಲಲಿತಾದಿತ್ಯರಾಜನು ಭವಭೂತಿಗಾಸೆಪಟ್ಟು, ಯಶೋವರ್ಮನೊಡನೆ ಯುದ್ಧಮಾಡಿ ಆತನನ್ನು ಸೋಲಿಸಿ ರಾಜ್ಯಭ್ರಷ್ಟನನ್ನಾಗಿ ಮಾಡಿದನು. ಯಶೋವರ್ಮನ ತರುವಾಯ ಆಳಿದವರು ದುರ್ಬಲರೇ ಆಗಿದ್ದು ಕಾಶ್ಮೀರದ ರಾಜನಿಗೂ ಮಗಧದೇಶದ ಧರ್ಮಪಾಲ ರಾಜನಿಗೂ ಸೋತು ರಾಜ್ಯವನ್ನು ನೀಗಿಕೊಂಡರು. ಧರ್ಮಪಾಲನು ತನ್ನ ಆಶ್ರಿತನಾಗಿರುವ ಹಾಗೆ **ಚಕ್ರಾಯುಧ**ನೆಂಬಾತನನ್ನು ಪಟ್ಟದಲ್ಲಿ ಕುಳ್ಳಿರಿಸಿದನು. ಆದರೆ ಚಕ್ರಾಯುಧನನ್ನು 810ರಲ್ಲಿ ಭಿನ್ಮಾಲದಲ್ಲಿ ನೆಲೆಸಿದ್ದ ಗೂರ್ಜರ ಕುಲದ ಅಧಿಪತಿ **ನಾಗಭಟ**ನೆಂಬಾತನು ಕೊನೆಗಾಣಿಸಿದನು. 810ರಿಂದ ಪಾಂಚಾಲ ರಾಜ್ಯವು ನಾಗಭಟನ ಸಂತತಿಯಲ್ಲಿ ನಡೆದುಬಂತು. ಕನ್ಯಾಕುಬ್ಜ ನಗರವೇ ಚಕ್ರವರ್ತಿಯ ರಾಜಧಾನಿಯೆಂದು ಹೆಸರಾಗಿದ್ದಿತು; ನಾಗಭಟನ ತರುವಾಯ ಆಳಿದವರಿಗೆ ಚಕ್ರಾಧಿಪತ್ಯವನ್ನು ಕಟ್ಟುವುದು ಪ್ರಯಾಸವಾಗಿತ್ತು. ಗೂರ್ಜರ ಕುಲದವರಾದ ಇವರನ್ನು ದಖನ್ನಿನಲ್ಲಿ ಪ್ರಬಲರಾಗಿದ್ದ ರಾಷ್ಟ್ರಕೂಟರು ಆಕ್ರಮಿಸುತ್ತಿದ್ದರು. ನಾಗಭಟನ

ಗೂರ್ಜರ ಪರಿಹಾರ ವಂಶ

ತರುವಾಯ 840ರಲ್ಲಿ ಅಭಿಷಿಕ್ತನಾದ **ಮಿಹಿರ**ನೆಂಬಾತನು **ಭೋಜ**ನೆಂಬ ಹೆಸರನ್ನು ಧರಿಸಿ, ಸುಮಾರು 50 ವರ್ಷಕಾಲ ದರ್ಪದಿಂದ ಆಳಿ ಸಾಮ್ರಾಜ್ಯವನ್ನು ಕಟ್ಟಿದನು. ಈತನ ರಾಜ್ಯವು ಶತದ್ರು ನದಿಯಿಂದ ಮಗಧ ದೇಶದವರೆಗೂ ವ್ಯಾಪಿಸಿತ್ತು. ಸುರಾಷ್ಟ್ರ ಮಾಳವ ದೇಶಗಳೂ ಆತನಿಗೆ ಅಧೀನವಾಗಿದ್ದವು. ಭೋಜನ ಆಳ್ವಿಕೆಯು ಕೀರ್ತಿದಾಯಕವಾಗಿತ್ತು. ಭೋಜನ ತರುವಾಯ ಕನ್ಯಾಕುಬ್ಜದಲ್ಲಿ ಆಳಿದ **ಮಹೇಂದ್ರಪಾಲ** ಅಥವಾ ಮಹೇಂದ್ರಾಯುಧನೆಂಬ ಆತನ ಮಗನೂ ವರ್ಚಸ್ವಿಯಾಗಿ ಆಳಿದನು. ಪ್ರಸಿದ್ಧ ಕವಿ **ರಾಜಶೇಖರ**ನು ಆತನಿಗೆ ಗುರುವಾಗಿದ್ದನು. 910ರಲ್ಲಿ ಪಟ್ಟವನ್ನೇರಿದ **ಮಹೀಪಾಲ**ನು ರಾಷ್ಟ್ರಕೂಟ ಇಂದ್ರರಾಜನೊಡನೆ ಹೋರಾಡಲಾರದೆ ಸೋತು ಕನ್ಯಾಕುಬ್ಜನಗರವನ್ನೇ ಕಳೆದುಕೊಂಡನು. ಸುರಾಷ್ಟ್ರ ಮಾಳವಗಳು ಕೈತಪ್ಪಿದವು. ಸುರಾಷ್ಟ್ರದಲ್ಲಿ ಸೋಲಂಕೀ ಕುಲದವರೂ ಮಾಳವದಲ್ಲಿ ಪರಮಾರ ಕುಲದವರೂ ಪ್ರಬಲ

ರಾಗಲು ಅವಕಾಶವಾಯಿತು. ಮತ್ತು ಯಮುನಾ ನದಿಗೆ ದಕ್ಷಿಣದಲ್ಲಿ ನೆಲೆಸಿದ್ದ ಜೆಜಾಕ ಕುಲದ ರಾಜಪುತ್ರರಲ್ಲಿ **ಚಂದೇಲ** ವಂಶದವರು ತಮ್ಮ ರಾಜ್ಯವನ್ನು ಬಲಪಡಿಸಿಕೊಂಡರು. ಮಹೀಪಾಲನನ್ನು ರಾಷ್ಟ್ರ ಕೂಟರು ಆಕ್ರಮಿಸಿದಾಗ **ಚಂದೇಲ ಹರ್ಷರಾಜನು** ಸಾಮಂತನಿಗೆ ತಕ್ಕಂತೆ ಸಹಾಯ ಮಾಡಿದನು. ಆದರೆ ಮಹೀಪಾಲನು ಪರಾಜಿತನಾದ ಮೇಲೆ ಚಂದೇಲರಾಜರು ಸ್ವತಂತ್ರರಾದುದಲ್ಲದೆ ಮಹೀಪಾಲನ ವಂಶಜ ರೊಂದಿಗೆ ಸ್ಪರ್ಧಿಸುವುದಕ್ಕೂ ತೊಡಗಿದರು. ಮಹೀಪಾಲನ ತರುವಾಯ ಕನ್ಯಾಕುಬ್ಜವು ಸಾಮಾನ್ಯವೆನಿಸಿತು.

ಚಂದೇಲ ವಂಶ

ಈಗ ಬುಂದೇಲಖಂಡವೆಂದು ಹೆಸರಾಗಿರುವ ಪ್ರದೇಶವೇ **ಜೆಜಾಕ ಕುಲದವರ** ನೆಲೆಯಾಗಿ **ಜೆಜಾಕಭುಕ್ತಿ** (ಜೆಝೋಟಿ) ಯೆಂಬ ಹೆಸರನ್ನು ಪಡೆದಿತ್ತು. ಜೆಜಾಕರು ಆ ಪ್ರದೇಶದಲ್ಲಿ **ಮಹೋಬ** ಮತ್ತು **ಕಾಲಂಜರ**ಗಳೆಂಬ ಉತ್ಕೃಷ್ಟ ನಗರಗಳನ್ನೂ, ಅನೇಕ ಸುಂದರ ಸರೋವರ ಗಳನ್ನೂ, ಭವ್ಯವಾದ ದೇವಮಂದಿರಗಳನ್ನೂ ಕಟ್ಟಿಕೊಂಡಿದ್ದರು. ಸ್ವತಂತ್ರ ನಾದ **ಹರ್ಷ**ನು ಚಾಹುಮಾನ ರಾಜಪುತ್ರಿಯನ್ನು ಮದುವೆಯಾಗಿದ್ದನು. ಆತನ ಮಗ **ಯಶೋವರ್ಮ**ನು ಶೂರನಾಗಿದ್ದನು. ಆತನು ಪಟ್ಟವನ್ನೇರಿ ದಾಗ ಕನ್ಯಾಕುಬ್ಜದಲ್ಲಿ **ದೇವಪಾಲ**ನೆಂಬಾತನು ಆಳುತ್ತಿದ್ದನು. ಈ ದೇವಪಾಲನ ಬಳಿ ದಿವ್ಯವಾದ ವಿಷ್ಣುವಿಗ್ರಹವೊಂದಿತ್ತು. ಅದಕ್ಕಾಗಿ ಯಶೋವರ್ಮನು ದೇವಪಾಲನನ್ನು ಜಗಳಕ್ಕೆ ಕರೆದು ಯುದ್ಧದಲ್ಲಿ ಸೋಲಿಸಿ ಆ ವಿಗ್ರಹವನ್ನು ಪಡೆದು ಅದಕ್ಕಾಗಿ **ಖಾಜುರಾಹೊ** ಎಂಬೆಡೆಯಲ್ಲಿ ಸರ್ವೋತ್ಕೃಷ್ಟವಾದ ದೇವಾಲಯವನ್ನು ಕಟ್ಟಿಸಿದನು. ಯಶೋವರ್ಮನ ತರುವಾಯ ಆತನ ಮಗ **ಧಂಗರಾಜ**ನು ಪಟ್ಟವನ್ನೇರಿ ಕೀರ್ತಿಯಿಂದ 50 ವರ್ಷಗಳಾಳಿದನು. ಆತನೂ ಆತನ ಮಗ **ಗಂಡರಾಜ**ನೂ ಘಸನಿಯ ಅಮೀರರ ದಾಳಿಗಳಲ್ಲಿ ಶೂರರಾಗಿಯೇ ವರ್ತಿಸಿದರು.

**ರಾಜಸ್ಥಾನ** ಅಥವಾ **ರಾಜಪುತ್ರಸ್ಥಾನ**ವೆಂದು ಹೆಸರಾದ ಪ್ರಾಂತವು ರಾಜ್ಯಭ್ರಷ್ಟ ಕ್ಷತ್ರಿಯರಿಗೆ ಆಶ್ರಯವಾಗಿತ್ತು. ಹೂಣರ ಅವಾಂತರ ಕಾಲದಲ್ಲಿಯೇ ಕೆಲ ಕ್ಷತ್ರಿಯ ಕುಲಗಳು ಆ ಅರವಲ್ಲಿ ಪರ್ವತ

ಪ್ರಾಂತದಲ್ಲಿ ನೆಲೆಸಿದವು. ವೃತ್ತಿಯಿಂದ ಕ್ಷತ್ರಿಯರಾದ ಹೂಣ, ಗೂರ್ಜರ ಮುಂತಾದ ಕುಲಗಳವರು ಸನಾತನ ಧರ್ಮವನ್ನವಲಂಬಿಸಿ ಭಾರತೀಯು



33. ಖಾಜುರಾಹೋ ದೇವಾಲಯ

ರೆನಿಸಿದಮೇಲೆ ಆಬುಶಿಖರ ಪ್ರಾಂತದಲ್ಲಿ ಯಜ್ಞವಿಧಿಯಿಂದ ಶುದ್ಧಿಪಡೆದು ಕ್ಷತ್ರಿಯರಲ್ಲಿ ಎಣಿಕೆಯಾದರು. ಹೀಗೆ ಹುಟ್ಟಿದ ರಾಷ್ಟ್ರಗಳಲ್ಲಿ ಗೂರ್ಜರ ಕುಲದವರ ಆಧಿಪತ್ಯವು **ಭಿನ್ನಾ**ಲದಲ್ಲಿ ಮೊದಲಾಗಿ ಪಾಂಚಾಲ **ರಾಜ್ಯ**

ವನ್ನೊಳಗೊಂಡಿತು. ಆದರೆ ರಾಜಸ್ಥಾನದಲ್ಲಿ ಅತಿ ಪ್ರಖ್ಯಾತರಾಗಿ ಪರಿಣಮಿಸಿದವರು **ಗುಹಿಲತ್** ಅಥವಾ **ಘೆಲತ** ರೆಂಬವರು. ಭೀಲಕುಲಸ್ಥರ ಸಹಾಯದಿಂದ ಅವರ ರಾಜ್ಯವು ಮೇವಾಡದಲ್ಲಿ ಸ್ಥಾಪನೆ ಯಾಯಿತು. **ಬಾಪ್ಪಾರಾವಲ**ನೆಂಬಾತನೇ ಆ ವಂಶದ ಮೂಲಪುರುಷನು ; ಆತನ ಮಗ **ಗುಹಿಲ** ಅಥವಾ **ಗುಹ** ಎಂಬಾತನು ಪ್ರಸಿದ್ಧವಾದ **ಚಿತ್ತೂ**ರು ದುರ್ಗವನ್ನು ಸಾಧಿಸಿದನಂತೆ. ಈ ವಂಶದವರ ಚರಿತ್ರೆಯು 12ನೆ ಶತಮಾನಾನಂತರ ಮನೋರಂಜಕವೂ ಆದರ್ಶ ಶೌರ್ಯ ಸಾಹಸಗಳಿಂದ ಕೂಡಿದುದೂ ಆಗಿದೆ.

ರಾಜಸ್ಥಾನ

ಸುರಾಷ್ಟ್ರ ಪರ್ಯಾಯದ್ವೀಪದಲ್ಲಿ ಹರ್ಷವರ್ಧನನ ಅಳಿಯನಾಗಿದ್ದ **ಧ್ರುವಭಟ**ನಾಳುತ್ತಿದ್ದನು. ಹರ್ಷನ ಮರಣಾನಂತರ ಆತನು ಸ್ವತಂತ್ರನಾದನು. ಅಶ್ವಮೇಧ ಯಜ್ಞವನ್ನು ಮಾಡಿ ಕೀರ್ತಿಗೊಂಡ **ಧರಸೇನ ಮಹಾರಾಜ**ನು ಪ್ರಾಯಶಃ ಆತನ ವಂಶದವನು. ವಲ್ಲಭಿಯು ಆ ಪ್ರಾಂತಕ್ಕೆಲ್ಲ ಮುಖ್ಯಪಟ್ಟಣವಾಗಿ ಜೈನಮತಸ್ಥರಿಗೆ ಆಶ್ರಯವಾಗಿತ್ತು. ಎಂಟನೆ ಶತಮಾನದ ಆದಿಯಲ್ಲಿ **ಚಾಪೋತ್ಕಟ** (ಚಾವಡ) ಕುಲದ ರಾಜಪುತ್ರರು ಪ್ರಾಂತವನ್ನಾಕ್ರಮಿಸಿದರು. ಪ್ರಾಯಶಃ ಆ ಕುಲಸ್ಥರು ಮಿಹಿರಭೋಜ ಮಹೇಂದ್ರಾಯುಧರಿಗೆ ಅಧೀನರಾಗಿದ್ದರು. ಪ್ರಾಂತದ ಬೇರೆ ಬೇರೆ ಭಾಗಗಳಲ್ಲಿ ಮೈತ್ರಕ ಕುಲದವರೂ, ರಾಷ್ಟ್ರಕೂಟರೂ, ಚಾಲುಕ್ಯರೂ ಆಳುತ್ತ ಇದ್ದರು. ಸುಮಾರು 961ರಲ್ಲಿ **ಚಾಲುಕ್ಯ** ಅಥವಾ **ಸೋಲಂಕೀ** ಕುಲದವರು ಪ್ರಬಲರಾಗಿ 1215ರವರೆಗೂ ಪರಂಪರೆಯಾಗಿ ಆಳಿದರು. **ಮೂಲರಾಜ**ನೆಂಬಾತನು 961ರಲ್ಲಿ **ಅನಹಿಲಪಟ್ಟಣ**ವನ್ನು ರಾಜಧಾನಿಯಾಗಿ ಮಾಡಿಕೊಂಡು ಬಲವಾದ ರಾಜ್ಯವನ್ನೇ ಕಟ್ಟಿದನು. ಈತನ ವಂಶದಲ್ಲಿಯೇ ಹುಟ್ಟಿದ **ಭೀಮದೇವ**ನಾಳುತ್ತಿದ್ದಾಗ ಘಸನಿಯ ಅಮೀರರ ಅವಾಂತರವು ನಡೆಯಿತು.

ಸುರಾಷ್ಟ್ರ

ಮಾಳವ ಪ್ರಾಂತವು ಸುಮಾರು 820ರಲ್ಲಿ **ಪರಮಾರ** ಕುಲದ ರಾಜಪುತ್ರರಿಗೆ ಆಶ್ರಯವಾಯಿತು. **ಉಪೇಂದ್ರ**ನೆಂಬಾತನು ರಾಜವಂಶವನ್ನು

ಉಜ್ಜಯಿನಿಯಲ್ಲಿ ಸ್ಥಾಪಿಸಿದನು. ಆ ವಂಶದಲ್ಲಿ ಏಳನೆಯವನಾದ **ಮುಂಜ ರಾಜನು** ಯುದ್ಧದಲ್ಲಿ ಸಾಹಸಿಯಾಗಿಯೂ ಕಲೆಗಳಲ್ಲಿ ಪ್ರವೀಣನಾಗಿಯೂ ಇದ್ದನು. ಸಾಹಿತ್ಯದಲ್ಲಿ ಆತನ ಹೆಸರು ಚಿರಸ್ಥಾಯಿಯಾಗಿ **ವಾಕ್ಪತಿ**ಯೆಂಬ ಬಿರುದು ಆತನಿಗೆ ಪ್ರಾಪ್ತವಾಗಿದೆ. ಪರಮಾರ ವಂಶದವರಿಗೆ ದಕ್ಷಿಣದಲ್ಲಿ ಪ್ರಬಲರಾಗಿದ್ದ ಚಾಲುಕ್ಯರೊಡನೆ ಯುದ್ಧಗಳು ಘಟಿಸಿದವು. ಕಲ್ಯಾಣಿಯ **ತೈಲಪರಾಜ**ನೂ ಮುಂಜನೂ 6 ಸಲ ಪರಸ್ಪರವಾಗಿ ಯುದ್ಧಮಾಡಿದರು. ಕಡೆಯ ಸಲ ಮುಂಜನು ಸೆರೆಯಾಗಿ ಕಲ್ಯಾಣಿಯಲ್ಲಿ 995ರಲ್ಲಿ ಶಿರಚ್ಛೇದನಕ್ಕೆ ಗುರಿಯಾದನು. ಆತನ ತರುವಾಯ ಆಳಿದವರಲ್ಲಿ 1018ರಲ್ಲಿ ಪಟ್ಟವನ್ನೇರಿ 1060ರವರೆಗೆ ಆಳಿದ **ಭೋಜರಾಜನು ಧಾರಾ ನಗರ**ದಲ್ಲಿ ಓಲಗಮಾಡಿ ಬಹುಮುಖವಾದ ಕೀರ್ತಿಯನ್ನು ಸಂಪಾದಿಸಿದನು. ಸ್ವತಃ ವಿದ್ವಾಂಸನೂ ಉತ್ತಮ ಕವಿಯೂ ಆಗಿ ಜ್ಯೋತಿಷ, ವಾಸ್ತು, ಅಲಂಕಾರ ಶಾಸ್ತ್ರಗಳಲ್ಲಿ ವಿದಗ್ಧನೆನಿಸಿ ಕವಿಜನರಿಗೆ ಉದಾರವಾದ ಆಶ್ರಯವನ್ನಿತ್ತು **ಕವಿಕಾಮಧೇನು**ವೆಂಬ ಕೀರ್ತಿಯನ್ನು ಪಡೆದನು. ಬಾಲ್ಯದಲ್ಲಿ ಕಷ್ಟಗಳನ್ನು ಅನುಭವಿಸಿ ರಾಜ್ಯವನ್ನು ರೂಢಿಸಿಕೊಂಡು, ಭೋಜಪುರ ಸರೋವರವೆಂಬ ವಿಶಾಲವಾದ ಸರೋವರವನ್ನು ನಿರ್ಮಿಸಿ ಜನರಿಗೆ ಉಪಕಾರಮಾಡಿದನು. ಈ ರಾಜನು ಘಸನಿ ಮಹಮ್ಮದನ ದಾಳಿಗಳ ಅನಂತರ ನಡೆದ ಸಾಮ್ರಾಜ್ಯ ಸ್ಪರ್ಧೆಯಲ್ಲಿ ಸಿಕ್ಕಿ 1060ರಲ್ಲಿ ಪರಾಜಿತನಾದನು.

ಮಾಳವದ ಪರಮಾರರು

**ವಿಹಾರ** ದೇಶವೆಂದು ಪ್ರತಿನಾಮಧೇಯವನ್ನು ಪಡೆದ ಮಗಧ ದೇಶವು ಹರ್ಷವರ್ಧನನಂತರ ಪ್ರತ್ಯೇಕತೆಯನ್ನು ಉಳಿಸಿಕೊಳ್ಳದಾಯಿತು. ಗೌಡದೇಶದಲ್ಲಿ ಆಳುತ್ತಿದ್ದ ಆದಿಸೂರನೆಂಬ ರಾಜನು ತನ್ನ ರಾಜ್ಯವನ್ನು ಸ್ಥಿರಗೊಳಿಸಿ ಕನ್ಯಾಕುಬ್ಜ ಪ್ರಾಂತದಿಂದ ಬ್ರಾಹ್ಮಣರನ್ನು ಕರೆಕಳುಹಿಸಿ ವಂಗದೇಶದಲ್ಲಿ ಸನಾತನ ವೈದಿಕ ಧರ್ಮವು ದೃಢವಾಗುವಂತೆ ವ್ಯವಸ್ಥೆಗೊಳಿಸಿದನೆಂದು ಬಂಗಾಲ ಪ್ರಾಂತದಲ್ಲಿ ಪ್ರತೀತಿಯುಂಟು. ಸುಮಾರು 730ರಲ್ಲಿ ಮಗಧ ಪ್ರಾಂತದಲ್ಲಿ ಬೌದ್ಧಮತಸ್ಥನಾಗಿದ್ದ **ಗೋಪಾಲ**ನೆಂಬ

ಪಾಲ ವಂಶ

ರಾಜನು ರಾಜ್ಯಕಟ್ಟಿದನು. ಉದ್ದಂತಪುರಿಯೆಂಬಲ್ಲಿ ದೊಡ್ಡ ವಿಹಾರವೊಂದನ್ನು ಕಟ್ಟಿಸಿ ಗೋಪಾಲನು ಹೆಸರುವಾಸಿಯಾದನು. ಆತನ ತರುವಾಯ ಆಳಿದ **ಧರ್ಮಪಾಲ**ನೆಂಬ ಆತನ ವಂಶಸ್ಥನು (ಸು. 800) ಶೂರನಾಗಿದ್ದು ಕನ್ಯಾಕುಬ್ಜದಿಂದ ವಿಂಧ್ಯಪರ್ವತ ಪ್ರಾಂತದವರೆಗೆ ಸೇನೆಗಳನ್ನೋಡಾಡಿಸಿ ರಾಜ್ಯವನ್ನು ವಿಸ್ತರಿಸಿದನು. ಗಂಗಾ ತೀರದಲ್ಲಿ ಪ್ರಸಿದ್ಧವಾದ **ವಿಕ್ರಮಶಿಲ**ವೆಂಬೆಡೆಯ ವಿಹಾರವೂ ವಿದ್ಯಾಪೀಠವೂ ಆತನಿಂದ ಸ್ಥಾಪಿತವಾದುದು. ಸು. 850ರಲ್ಲಿ ಆಳಿದ **ದೇವಪಾಲ**ನೆಂಬ ರಾಜನೇ ಪಾಲವಂಶಸ್ಥರಲ್ಲೆಲ್ಲ ಅತಿಸಮರ್ಥನೆನಿಸಿದವನು. ಬೌದ್ಧಮತದಲ್ಲಿ ಆತನು ದೃಢಭಕ್ತಿಯುಳ್ಳವನಾಗಿದ್ದನು; ಆತನ ದಲಪತಿ **ಲವಸೇನ**ನೆಂಬಾತನು ಕಾಮರೂಪವನ್ನೂ ಕಳಿಂಗವನ್ನೂ ಗೆದ್ದನು.

ದೇವಪಾಲರಾಜನ ತರುವಾಯ ಕೆಲಕಾಲ ಮಾತ್ರ ರಾಜ್ಯವು ಪರ್ವತನಿವಾಸಿಗಳಾಗಿದ್ದ ಒಂದಾನೊಂದು ಕುಲಸ್ಥರಿಗೆ ವಶವಾಗಿದ್ದು ಸು. 978ರಲ್ಲಿ ಪುನಃ **ಮಹೀಪಾಲ**ನೆಂಬ ರಾಜನ ಕೈಸೇರಿತು. ಮಹೀಪಾಲರಾಜನೇ ತಿಬ್ಬತ್ ದೇಶಕ್ಕೆ ಹೊರಡಲು ಬೌದ್ಧಮತ ಪ್ರಚಾರಕರಿಗೆ ಪ್ರೋತ್ಸಾಹವನ್ನು ಕಲ್ಪಿಸಿಕೊಟ್ಟದ್ದು. ಸಮರ್ಥನೂ ಧರ್ಮಾತ್ಮನೂ ಆದ ಈ ರಾಜನು **ರಾಜೇಂದ್ರಚೋಳದೇವ**ನಿಂದ ಸೋಲನ್ನು ಪಡೆದನು. ಆ ತರುವಾಯ ಪಾಲವಂಶಸ್ಥರು ದುರ್ಬಲರಾಗಿಯೇ ಇದ್ದರು. 1084ರಿಂದ 1130ರ ವರೆಗೆ ಆಳಿದ **ರಾಮಪಾಲ**ರಾಜನು ಮಾತ್ರ ಮಿಥಿಲಾ ಪ್ರಾಂತವನ್ನೂ ಕಾಮರೂಪವನ್ನೂ ಗೆದ್ದು ಪ್ರಬಲನೆನಿಸಿ ಬೌದ್ಧರಿಗೆ ಪ್ರೋತ್ಸಾಹದಾಯಕನಾಗಿದ್ದನು. ಆತನ ತರುವಾಯ ಪಾಲವಂಶದವರ ಬಲವು ಕುಗ್ಗುತ್ತಲೇ ಇದ್ದು 1197ರಲ್ಲಿ ತುರುಷ್ಕರ ಹಾವಳಿಗೆ ಸಿಕ್ಕಿತು.

ರಾಷ್ಟ್ರಕೂಟರು

ಬಲ್ಹರರೆಂದು ಅರಬ್ಬೀ ಜನರಿಗೆ ಪರಿಚಿತರಾಗಿದ್ದವರು ಯಾರು? **ರಾಷ್ಟ್ರಕೂಟರು** ಯಾರು? ಎಂಬ ಪ್ರಶ್ನೆಯು ಕನ್ನಡಿಗರಿಗೆ ಇಷ್ಟವಾಗಿಯೇ ಇರಬೇಕಾದುದು. ಪೂರ್ವಕಾಲದಿಂದಲೂ ದಕ್ಷಿಣಾಪಥದಲ್ಲಿ **ರಾಷ್ಟ್ರೀಕ**ರೆಂಬ ಕುಲದವರಿದ್ದುದು ಅಶೋಕನ ಶಾಸನಗಳ ವಿವರದಲ್ಲಿಯೇ ಬಂದಿತು. ಅವರೇ ರಾಷ್ಟ್ರಕೂಟರೆಂದೂ ರಟ್ಟರೆಂದೂ ಪ್ರಸಿದ್ಧರಾದರು. ಅವರು ಆಳಿದ

ನಾಡಿಗೆ **ರಟ್ಟಪಾಡಿ**ಯೆಂದು ಹೆಸರು ಸಾಮಾನ್ಯವಾಯಿತು. ಬಾದಾಮಿಯ ಚಾಲುಕ್ಯರು ಸಾಮ್ರಾಜ್ಯವನ್ನು ಕಟ್ಟಿದಾಗ ರಾಷ್ಟ್ರಕೂಟರು ಕೀರ್ತಿವರ್ಮ, ಪುಲಿಕೇಶಿ ಚಕ್ರವರ್ತಿಗಳಿಗೆ ಸೋತು ಚಾಲುಕ್ಯ ಸಾಮ್ರಾಜ್ಯದಲ್ಲಿ ಸಾಮಂತರಾಗಿದ್ದರು. ಆ ಚಾಲುಕ್ಯವಂಶದಲ್ಲಿ ಇಮ್ಮಡಿ ಕೀರ್ತಿವರ್ಮನು ಆಳುತ್ತಿದ್ದಾಗ ರಾಷ್ಟ್ರಕೂಟರ ಒಡೆಯನಾಗಿದ್ದ **ದಂತಿದುರ್ಗ**ನೆಂಬಾತನು ಸಮಯ ಸಾಧಿಸಿ ಸ್ವತಂತ್ರನಾಗಿ, ನರ್ಮದಾನದಿಗೆ ದಕ್ಷಿಣದಲ್ಲಿರುವ ಪ್ರದೇಶಗಳನ್ನು ಸುಲಭವಾಗಿ ವಶಪಡಿಸಿಕೊಂಡು, ದಖನ್ನಿನಲ್ಲಿ ರಾಷ್ಟ್ರಕೂಟರೇ ಹಿರಿಯರಾಗುವಂತೆ ಸನ್ನಾಹಪಟ್ಟನು. ಚಾಲುಕ್ಯ ವಂಶದವರು ಈತನಿಗೆ ಸೋತು ಸಾಮಂತರಾಗಬೇಕಾಯಿತು. ಪೂರ್ವ ತೀರಪ್ರದೇಶದಲ್ಲಿದ್ದ ಪಲ್ಲವರೂ ಸೋತರು. ಸ್ವತಂತ್ರವೂ ವಿಸ್ತಾರವೂ ಆದ ರಾಜ್ಯವನ್ನು ಸಾಹಸದಿಂದ ಕಟ್ಟಿದ ಈ ದಂತಿವರ್ಮನು ಕಡೆಗಾಲದಲ್ಲಿ ನಿಸ್ಸಂತಾನನಾದನು. ಆಗ ಆತನ ಚಿಕ್ಕಪ್ಪನಾದ **ಕೃಷ್ಣರಾಜ**ನು ದಂತಿವರ್ಮನನ್ನು ಪಟ್ಟದಿಂದ

**ದಂತಿದುರ್ಗ**



34. ಪ್ರಸಿದ್ಧ ಕೈಲಾಸ ದೇವಾಲಯ—ವಲ್ಲೂರಕ (Ellora)

ತಳ್ಳಿ ತಾನೇ **ಅಕಾಲವರ್ಷ, ಶುಭತುಂಗ** ಎಂಬ ಬಿರುದುಗಳನ್ನು ಧರಿಸಿ ಸಿಂಹಾಸನವನ್ನೇರಿದನು. ರಾಜ್ಯವನ್ನು ಇನ್ನೂ ವಿಸ್ತಾರಗೊಳಿಸಿ ಭದ್ರಪಡಿಸಿದ್ದಲ್ಲದೆ ಈ ಹಿರಿಯ ಕೃಷ್ಣರಾಜನು ಲೋಕೋತ್ತರವೆನಿಸಿರುವ **ಕೈಲಾಸ ದೇವಾಲಯ**ವನ್ನು ಎಲ್ಲೂರದಲ್ಲಿ ಕಟ್ಟಿಸಿದನು. ಆ ದೇವಾಲಯವೆಲ್ಲವೂ ಒಂದೇ ಬಂಡೆಯಲ್ಲಿ ಕೊರೆದಿದೆ; ಪ್ರಮಾಣ ಸೌಂದರ್ಯಗಳಲ್ಲಿ ಅದ್ವಿತೀಯ ವೆಂದು ಜಗದ್ವಿಖ್ಯಾತವಾಗಿದೆ. ಈ ದೇವಾಲಯ ನಿರ್ಮಾಣವೊಂದರಿಂದಲೇ ಕೃಷ್ಣರಾಜನ ಕೀರ್ತಿಯು ಆಚಂದ್ರಾರ್ಕಸ್ಥಾಯಿಯಾಗಿದೆ.

ಕೃಷ್ಣ

ಕೃಷ್ಣನು 753ರಿಂದ 775ರ ವರೆಗೆ ಆಳಿದನು. ನರ್ಮದಾನದಿಯಿಂದ ಕೃಷ್ಣಾನದಿಯವರೆಗಿರುವ ಪ್ರದೇಶವೆಲ್ಲವೂ ಆತನ ಆಳ್ವಿಕೆಯಲ್ಲಿತ್ತು. ನೆರೆಯವರಾಗಿ ವೆಂಗಿ ಮಂಡಲದಲ್ಲಿ ಮೂಡಲ ಚಾಲುಕ್ಯರೂ, ಕಾಂಚೀ ಪ್ರದೇಶದಲ್ಲಿ ಪಲ್ಲವರೂ, ಕಾವೇರೀ ನದಿಯ ಮೇಲ್ಭಾಗದಲ್ಲಿ ಗಂಗರಸರೂ ಪ್ರಬಲರಾಗಿದ್ದರು. ಕೃಷ್ಣರಾಜನಿಗೆ ಇಬ್ಬರು ಮಕ್ಕಳಿದ್ದರು. ಹಿರಿಯವನಾದ **ಗೋವಿಂದ(II)**ನು ಸೋಮಾರಿಯೂ ಅಯೋಗ್ಯನೂ ಆಗಿದ್ದುದರಿಂದ ಸ್ವಲ್ಪ ಕಾಲದಲ್ಲಿಯೇ ಕಿರಿಯವನಾದ ಧ್ರುವರಾಜನು ತಾನೇ ರಾಜ್ಯವನ್ನು ಆಕ್ರಮಿಸಿ ಅಣ್ಣನನ್ನು ಮೂಲೆಗೆ ತಳ್ಳಿದನು. **ಧ್ರುವರಾಜ**ನು ತಂದೆಗೆ ಸರಿಯಾದ ಮಗನಾಗಿ ರಾಜ್ಯವಿಸ್ತಾರದಲ್ಲಿ ತೊಡಗಿ, ಪಲ್ಲವರಾಜನ ಮೇಲೆ ದಂಡೆತ್ತಿ ಹೊರಟು ಆತನನ್ನು ಸೋಲಿಸಿ, ಆತನಿಂದ ಆನೆಗಳನ್ನು ಕಾಣಿಕೆಯಾಗಿ ಸ್ವೀಕರಿಸಿದನು. ಅತ್ತ ವಿಂಧ್ಯಪರ್ವತದ ಉತ್ತರದಲ್ಲಿ ವತ್ಸರಾಜನೆಂಬ ಒಬ್ಬ ರಾಜನನ್ನು ಸೋಲಿಸಿದನು. ಗಂಗರಾಜನಾದ ಶಿವಮಾರನೂ ಸೋತು ಸೆರೆಯಾದನು. ಪರಾಕ್ರಮಿಯಾಗಿದ್ದ ಧ್ರುವರಾಜನು **ನಿರುಪಮ, ಧಾರಾವರ್ಷ** ಎಂಬ ಬಿರುದುಗಳನ್ನು ಧರಿಸಿ 794ರ ವರೆಗೆ ಆಳಿದನು.

ಧ್ರುವ

ಆತನ ತರುವಾಯ **ಗೋವಿಂದ**ನೆಂಬ ಆತನ ಮಗನು ಪಟ್ಟಾಭಿಷಿಕ್ತನಾಗಿ ಸಾಮರ್ಥ್ಯದಿಂದ ಆಳಿದನು. ತನ್ನನ್ನು ವಿರೋಧಿಸಿದ ರಾಜಸಮೂಹವನ್ನು ಸುಲಭವಾಗಿ ಈ ಮುಮ್ಮಡಿ ಗೋವಿಂದನು ಭಂಗಿಸಿ

**ಮುಮ್ಮಡಿ ಗೋವಿಂದ**

ವಿಂಧ್ಯಪರ್ವತಕ್ಕೆ ಉತ್ತರದಲ್ಲಿಯೂ ದಕ್ಷಿಣದಲ್ಲಿಯೂ ಅಸಮಾನನೆನಿಸಿದನು. ಗೂರ್ಜರ ರಾಜನೂ ಮಾಳವ ರಾಜನೂ ಆತನಿಗೆ ಶರಣಾಗತರಾದರು. ಗಂಗರಾಜ ಶಿವಮಾರನು ಸಾಮಂತತನವನ್ನೊಪ್ಪಿಕೊಂಡನು. ಪಲ್ಲವರು ಸೋತು ಮೊದಲಿಗಿಂತ ಹೆಚ್ಚಾದ ಪೊಗದಿಯನ್ನು ಅರ್ಪಿಸಲು ಒಡಂಬಟ್ಟರು. ಆಗ ಗೋವಿಂದನು ಹೊಸ ರಾಜಧಾನಿಯನ್ನು **ಮಾನ್ಯಖೇಟ**ದಲ್ಲಿ ನಿರ್ಮಿಸಿ, ಪೂರ್ವ ರಾಜಧಾನಿ ಮಯೂರಖಂಡಿಯನ್ನು ಬಿಟ್ಟನು. ಮಾನ್ಯಖೇಟದ ದುರ್ಗ ನಿರ್ಮಾಣದಲ್ಲಿ ವೆಂಗಿಯ ಚಾಲುಕ್ಯರಾಜನು ಗೋವಿಂದನ ಆಜ್ಞಾಧಾರಕನಾಗಿ ಉದ್ಯುಕ್ತನಾಗಿದ್ದನು. ಈ ರೀತಿ ಮಾನ್ಯಖೇಟದಲ್ಲಿ ಒಡ್ಡೋಲಗವನ್ನು ಮಾಡುತ್ತಿದ್ದ ಗೋವಿಂದರಾಜನಿಗೆ ವಿಂಧ್ಯಪರ್ವತದಿಂದ ತುಂಗಭದ್ರಾ ಕಾವೇರೀ ನದಿಗಳವರೆಗೂ ಪೂರ್ವ ಪಶ್ಚಿಮ ಸಮುದ್ರಗಳೇ ಮೇರೆಗಳಾಗಿದ್ದ ವಿಶಾಲ ರಾಷ್ಟ್ರವು ಸ್ವಾಧೀನವಾಗಿತ್ತು. ಗುಜರಾಥಿನ ದಕ್ಷಿಣ ಭಾಗವಾದ ಲಾಟದೇಶವೂ ವಶವಾಗಿತ್ತು. ಗೋವಿಂದನು **ಜಗತ್ತುಂಗ, ಪ್ರಭೂತವರ್ಷ** ಎಂಬ ಬಿರುದುಗಳಿಂದ ಪ್ರಸಿದ್ಧನಾಗಿ 815ರ ವರೆಗೆ ಆಳಿದನು. ಈತನ ಕಾಲದಲ್ಲಿಯೇ ತಲಕಾಡು ಕೋಲಾರಗಳಲ್ಲಿ ರಾಜ್ಯ ಕಟ್ಟಿಕೊಂಡಿದ್ದ ಗಂಗವಂಶಜರ ಸ್ವಾತಂತ್ರ್ಯವು ನಾಶವಾಯಿತು; ಗಂಗರಸರಿಗೂ ರಾಷ್ಟ್ರಕೂಟರಿಗೂ ವಿವಾಹ ಸಂಬಂಧವುಂಟಾಯಿತು. ಕನ್ನಡಿಗರಾದ ಗಂಗರಸರೂ ರಾಷ್ಟ್ರಕೂಟರೂ ಇನ್ನುಮುಂದೆ ಒಟ್ಟಾಗಿ ಸಾಮ್ರಾಜ್ಯಕ್ಕಾಗಿ ನೆರೆಹೊರೆಯವರೊಡನೆ ಸ್ಪರ್ಧಿಸಿದರು.

ನೃಪತುಂಗ

ಮುಮ್ಮಡಿ ಗೋವಿಂದನ ತರುವಾಯ **ಅಮೋಘವರ್ಷ**ನೆಂಬ ಬಿರುದನ್ನು ತಾಳಿದ **ನೃಪತುಂಗ**ರಾಜನು 815ರಿಂದ 877ರವರೆಗೆ 62 ವರ್ಷಗಳ ಕಾಲ ನೆಮ್ಮದಿಯಿಂದ ಆಳಿದನು. ವೆಂಗಿಯ ಚಾಲುಕ್ಯರೊಂದಿಗೆ ಮಾತ್ರ ಕೆಲವು ಯುದ್ಧಗಳು ನಡೆದು ಚಾಲುಕ್ಯರು ಸೋತರು; ಬೇರೆ ಯುದ್ಧಗಳಾಗಲಿಲ್ಲ. ಸಾಮ್ರಾಜ್ಯದಲ್ಲಿ ಶಾಂತಿಯೇ ನೆಲೆಸಿತ್ತು. ನೃಪತುಂಗರಾಜನು ಸಾಹಿತ್ಯದಲ್ಲಿ ಸ್ವತಃ ವಿದ್ವಾಂಸನಾಗಿದ್ದನು. **ಕವಿರಾಜಮಾರ್ಗ**ವೆಂಬ ಕನ್ನಡ ಗ್ರಂಥವು ಆತನದು. ಆತನ ಆಸ್ಥಾನದಲ್ಲಿ ಅನೇಕ ವಿದ್ವಾಂಸರೂ ಕವಿಗಳೂ ಇದ್ದರು. ಜೈನರಿಗೂ ಜೈನ ಗ್ರಂಥಗಳಿಗೂ

ಆತನಿಂದ ವಿಶೇಷವಾದ ಪ್ರೋತ್ಸಾಹವು ಲಭಿಸಿತು. ನೃಪತುಂಗನ ತರುವಾಯ 877ರಿಂದ 913ರವರೆಗೆ ಆಳಿದ **ಇಮ್ಮಡಿ ಕೃಷ್ಣರಾಜನು** ವೆಂಗಿಯ **ಗುಣಕವಿಜಯಾದಿತ್ಯರಾಜನಿಗೆ** ಸೋತನು; ಆದರೆ ಉತ್ತರದಲ್ಲಿ ಚೇದಿರಾಜನ ಮಗಳನ್ನು ಮದುವೆಯಾಗಿ ಉತ್ತರದ ರಾಜಪುತ್ರರೊಡನೆ ಸಂಬಂಧ ಕಟ್ಟಿದನು. ಈತನ ಮೊಮ್ಮಗ **ನಿತ್ಯವರ್ಷ**ನೆಂದು ಹೆಸರಾದ **ಮುಮ್ಮಡಿ ಇಂದ್ರರಾಜನು** ಚೇದಿಯ ಕಲಚೂರ್ಯ ವಂಶದ ರಾಜಪುತ್ರಿಯನ್ನು ಮದುವೆಯಾಗಿ ಪಾಂಚಾಲರಾಜ್ಯದ ಪರಿಹಾರ ವಂಶದ ಮಹೀಪಾಲ ರಾಜನನ್ನು ಸೋಲಿಸಿದನು. ಈ ನಿತ್ಯವರ್ಷನು ಶೂರನಾಗಿದ್ದರೂ 915–918ರ ವರೆಗೆ ಮೂರೇ ವರ್ಷಗಳಾಳಿದನು. ಈ ಸಂಬಂಧಗಳ ದೆಸೆಯಿಂದ ಗಂಗಾನದಿಯ ಬಯಲಿನಲ್ಲಿ ಕಲಚೂರ್ಯರಿಗೂ ಪರಿಹಾರರಿಗೂ ನಡೆಯುತ್ತಿದ್ದ ದ್ವಂದ್ವದಲ್ಲಿ ರಾಷ್ಟ್ರಕೂಟರು ಭಾಗಿಗಳಾಗಿ ಕಲಚೂರ್ಯರ ಪಕ್ಷವನ್ನು ವಹಿಸಿದ್ದರು. ಹತ್ತನೆ ಶತಮಾನವು ಕಳೆಯುತ್ತ ಬಂದಂತೆ ರಾಷ್ಟ್ರಕೂಟ ರಾಜರಿಗೆ ದಕ್ಷಿಣದಲ್ಲಿಯೇ ಸಮರ್ಥರಾದ ವಿರೋಧಿಗಳು ಸಿದ್ಧರಾಗಿ ಉತ್ತರದ ಪಾರುಪತ್ಯವು ತಗ್ಗುವ ಹಾಗಾಯಿತು.

ತಕ್ಕೋಲ

ಒಂಭತ್ತನೆ ಶತಮಾನದಲ್ಲಿ ಪಲ್ಲವ ರಾಜ್ಯವು ಕ್ಷೀಣವಾಯಿತು. ಉತ್ತರದಲ್ಲಿ ವೆಂಗಿಯ ಚಾಲುಕ್ಯರೂ, ದಕ್ಷಿಣದಲ್ಲಿ ಚೋಳರಸರೂ, ವಾಯುವ್ಯ ಪಶ್ಚಿಮಗಳಲ್ಲಿ ರಾಷ್ಟ್ರಕೂಟ ಗಂಗರೂ ಅವರೊಡನೆ ವಿರೋಧವನ್ನು ಸಾಧಿಸಲು ಅವರ ರಾಜ್ಯವು ಕ್ಷಯವಾಯಿತು. ಚೋಳಕುಲದ ಅರಸರು ಕಾವೇರಿಯ ಕೆಳಭಾಗದ ತಮ್ಮ ಹಿಂದಿನ ರಾಜ್ಯವನ್ನು ಬಲಪಡಿಸಿಕೊಂಡು ಉತ್ತರದ ಮೇರೆಯನ್ನು ಅತಿಕ್ರಮಿಸಿ ರಾಜ್ಯವಿಸ್ತಾರದಲ್ಲಿ ತೊಡಗಿದರು. 949ರಲ್ಲಿ ಚೋಳವಂಶದ **ರಾಜಾದಿತ್ಯ**ನೆಂಬಾತನು ರಾಷ್ಟ್ರಕೂಟ ಸಾಮಂತನಾಗಿದ್ದ ಒಬ್ಬಾನೊಬ್ಬ ಚಾಲುಕ್ಯ ವಂಶಸ್ಥನನ್ನು ಆಕ್ರಮಿಸಿದನು. ಆ ಸಾಮಂತನ ಪ್ರಾರ್ಥನೆಯನ್ನು ಮನ್ನಿಸಿ ರಾಷ್ಟ್ರಕೂಟ **ಮುಮ್ಮಡಿ ಕೃಷ್ಣ**ನೂ ಗಂಗಬೂತುಗನೂ ಒಟ್ಟಾಗಿ ಸೇರಿ ರಾಜಾದಿತ್ಯನೊಡನೆ **ತಕ್ಕೋಲ**ವೆಂಬಲ್ಲಿ ಕದನಮಾಡಿದರು. ಬೂತುಗನು ರಾಜಾದಿತ್ಯನ ಅಂಬಾರಿಗೆ ಹಾರಿ ಅಲ್ಲಿಯೇ ಮಲ್ಲಯುದ್ಧಮಾಡಿ ರಾಜಾದಿತ್ಯನನ್ನು

ಕೊಂದನು. ಕೂಡಲೆ ಕೃಷ್ಣನು ಕಾಂಚೀನಗರವನ್ನೂ ತಂಜಾವೂರನ್ನೂ ಸಾಧಿಸಿದನು. ಇದರಿಂದ ರಾಜ್ಯಲಾಭವಾಗಲಿಲ್ಲ; ಚೋಳರಸರ ರಾಜ್ಯ ವಿಸ್ತಾರಕ್ಕೆ ಅಡ್ಡಿಯಾಯಿತು.

ರಾಷ್ಟ್ರಕೂಟ ಗಂಗರ ಕ್ಷಯ

ಮುಮ್ಮಡಿ ಕೃಷ್ಣನ ತರುವಾಯ ಆಳಿದ ರಾಷ್ಟ್ರಕೂಟರು ಪ್ರಬಲರಾಗಿರಲಿಲ್ಲ. ರಾಷ್ಟ್ರಕೂಟ ಸಾಮ್ರಾಜ್ಯವು ಕ್ಷೀಣತೆಯನ್ನೇ ಪಡೆಯಿತು. ಗಂಗರಾಜ್ಯವೂ ಕೂಡ ದುರ್ಬಲವಾಯಿತು. 972-956ವರೆಗೆ ಆಳಿದ **ಕಕ್ಕರಾಜನು** ಮಾಳವದ ಪರಮಾರರೊಡನೆ ಹೆಣಗಾಡುತ್ತಲಿದ್ದು ಚಾಲುಕ್ಯಕುಲದ **ತೈಲಪನೆಂಬ** ತನ್ನ ಸಾಮಂತನಿಂದಲೇ ಪರಾಜಿತನಾದನು. ಆ ತರುವಾಯ **ನಾಲ್ಮಡಿ ಇಂದ್ರರಾಜನೆಂಬಾತನು** ರಾಜ್ಯವನ್ನು ಕೂಡಿಸಿಕೊಳ್ಳಲು ಪ್ರಯತ್ನಮಾಡಿ ಎಲ್ಲಿಯೂ ಸಾರ್ಥಕವಾಗದೆ ಕಡೆಗೆ ಶ್ರವಣಬೆಳುಗೊಳದಲ್ಲಿ ಪ್ರಾಣ ತೊರೆದನು. ಗಂಗವಂಶದವರಲ್ಲಿಯೂ ಬೂತುಗನ ತರುವಾಯ ಆಳಿದವರಲ್ಲಿ **ಮಾರಸಿಂಹನೆಂಬೊ**ಬ್ಬಾತನು ಮಾತ್ರ ಬಲಶಾಲಿಯಾಗಿದ್ದನು. ಆತನ ತರುವಾಯ ಗಂಗರಾಜ್ಯವು ದುರ್ಬಲವೇ ಆಯಿತು. ಇಂತಹ ದುರ್ಬಲ ಕಾಲದಲ್ಲಿಯೇ ಶ್ರವಣಬೆಳುಗೊಳದಲ್ಲಿ **ಚಾವುಂಡರಾಯನೆಂಬ** ದಳಪತಿಯು ಅದ್ಭುತವೆನಿಸಿರುವ **ಗೋಮಟೇಶ್ವರ ವಿಗ್ರಹವನ್ನು** ಕೆತ್ತಿಸಿದ ಸಂಗತಿಯು ರಾಜವಂಶಗಳ ಪರಸ್ಪರ ವಿರೋಧವು ಪರಂಪರೆಯಾಗಿ ನಿತ್ಯ ಯುದ್ಧವಾದಾಗ್ಗೂ ಶಾಂತ ಜೀವನಕ್ಕೂ ಕಲಾಭಿವೃದ್ಧಿಗೂ ಅಡ್ಡಿಯಾಗಿರಲಿಲ್ಲವೆಂಬುದಕ್ಕೆ ದೃಷ್ಟಾಂತವಾಗಿದೆ. 974ರಲ್ಲಿ ಚಾಲುಕ್ಯಕುಲದ ತೈಲಪನು ರಾಷ್ಟ್ರಕೂಟ ರಾಜ್ಯವನ್ನು ಕೊನೆಗಾಣಿಸಿ **ಕಲ್ಯಾಣಿಯಲ್ಲಿ** ತನ್ನ ವಂಶವನ್ನೇ ಸ್ಥಾಪಿಸಿದನು. 1004ರಲ್ಲಿ ಚೋಳರಸರ ಪ್ರಚಂಡ ಸೇನೆಯೊಂದು ಘಟ್ಟವನ್ನು ಹತ್ತಿ ತಲಕಾಡನ್ನು ಹಿಡಿದು ಗಂಗರಾಜ್ಯವನ್ನು ಕೊನೆಗಾಣಿಸಿತು. ರಾಷ್ಟ್ರಕೂಟ ವಂಶದವರು ಪ್ರಾಬಲ್ಯವನ್ನು ನೀಗಿದಮೇಲೆ ಚಾಲುಕ್ಯರಿಗೆ ಸಾಮಂತಾಧಿಪತಿಗಳಾದರು; ಗಂಗವಂಶಜರು ಕೆಲಕಾಲದ ತರುವಾಯ ಹೊಯಿಸಳ ರಾಜ್ಯದಲ್ಲಿ ದಂಡನಾಯಕರಾಗಿಯೂ ಸಾಮಂತಾಧಿಪತಿಗಳಾಗಿಯೂ ಇರುತ್ತಿದ್ದರು.

ದಖಿನ್ನಿನ ಪ್ರಸ್ಥಭೂಮಿಯ ಭಾಗವನ್ನು ಸಾಧಿಸಿದ ರಾಷ್ಟ್ರಕೂಟರು **ವೆಂಗಿಮಂಡಲ**ವನ್ನು ವಶಪಡಿಸಿಕೊಳ್ಳಲೇ ಇಲ್ಲ.

ವೆಂಗಿಯ ಚಾಲುಕ್ಯರು ಇಮ್ಮಡಿ ಪುಲಿಕೇಶಿಯು ಸಾಮ್ರಾಜ್ಯ ಕಟ್ಟಿದಾಗ ಪಲ್ಲವರಿಂದ ಕೃಷ್ಣಾ ಗೋದಾವರೀ ನದಿಗಳ ಮಧ್ಯ ಪ್ರದೇಶವನ್ನು ಗೆದ್ದು ಅಲ್ಲಿಗೆ ತನ್ನ ತಮ್ಮ **ಕುಬ್ಜವಿಷ್ಣುವರ್ಧನ**ನನ್ನು ನಿಯಮಿಸಿದ್ದನಷ್ಟೆ. 612ರಲ್ಲಿ ಸ್ಥಾಪಿತನಾದ ವಿಷ್ಣುವರ್ಧನನು ಆ ವೆಂಗಿ ಮಂಡಲದಲ್ಲಿ ತನ್ನ ವಂಶವನ್ನೇ ನೆಲೆಗೊಳಿಸಿದನು. ಚಾಲುಕ್ಯರೂ ರಾಷ್ಟ್ರ ಕೂಟರೂ ಪಲ್ಲವರೊಡನೆ ಹೋರಾಡುತ್ತಿದ್ದಾಗ ವಿಷ್ಣುವರ್ಧನನ ವಂಶಸ್ಥರು ತಮ್ಮ ರಾಜ್ಯವನ್ನು ನಿರಾತಂಕರಾಗಿ ಆಳುತ್ತಲಿದ್ದರು. ರಾಷ್ಟ್ರಕೂಟರಿಗೆ ವೆಂಗಿಯನ್ನು ಸ್ವಾಧೀನಪಡಿಸಿಕೊಳ್ಳುವ ಯೋಚನೆಯು ಬಲವಾಗಿ ಬೆಳೆಯ ಲಿಲ್ಲ. ವಿಷ್ಣುವರ್ಧನನ ವಂಶದವರು ವೆಂಗಿಮಂಡಲದಲ್ಲಿ ಐದುನೂರು ವರ್ಷಕಾಲ 7ನೆ ಶತಮಾನದಿಂದ 11ನೆ ಶತಮಾನದವರೆಗೆ ಆಳಿದರು. ಅವರಲ್ಲಿ 800ರಿಂದ 843ರವರೆಗಾಳಿದ **ಇಮ್ಮಡಿ ವಿಜಯಾದಿತ್ಯ**ರಾಜನು ಕಳಿಂಗ ದೇಶದ ಗಂಗವಂಶದವರೊಡನೆಯೂ ರಾಷ್ಟ್ರಕೂಟರೊಡನೆಯೂ ಯುದ್ಧ ಗಳನ್ನಾಡಿ ತನ್ನ ಸ್ಥಾನವನ್ನುಳಿಸಿಕೊಂಡನು. 844ರಿಂದ 888ರವರೆಗೆ ಆಳಿದ **ಮುಮ್ಮಡಿ ವಿಜಯಾದಿತ್ಯ**ನು ರಾಷ್ಟ್ರಕೂಟರ ಇಮ್ಮಡಿ ಕೃಷ್ಣ ರಾಜನೊಡನೆ ಸ್ವಲ್ಪಕಾಲ ಸ್ಪರ್ಧಿಸಿದನು. 918ರಲ್ಲಿ ರಾಜನಾದ **ಅಮ್ಮ ರಾಜ**ನು ರಾಜಮಹೇಂದ್ರನೆಂಬ ಬಿರುದನ್ನು ಧರಿಸಿದ್ದನು; ಆತನ ಕಾಲ ದಲ್ಲಿಯೇ **ರಾಜಮಹೇಂದ್ರವರ**ವೆಂಬ ನಗರವು ರಾಜಧಾನಿಯಾಯಿತು. ಆ ತರುವಾಯ ಆಳಿದವರಿಗೆ ರಾಷ್ಟ್ರಕೂಟರ ಚಿಂತೆಯು ಕಡಿಮೆಯಾಯಿತು; ಪ್ರಬಲರಾಗುತ್ತಿದ್ದ ಚೋಳರಸರ ಚಿಂತೆಯುಂಟಾಯಿತು. 1015ರಲ್ಲಿ ಪಟ್ಟವನ್ನೇರಿದ **ವಿಮಲಾದಿತ್ಯ**ರಾಜನು ಚೋಳರ ಸಂಬಂಧವನ್ನೇ ಕಟ್ಟಿದನು; ವೈವಾಹಿಕ ಸಂಬಂಧಗಳು ಕ್ರಮವಾಗಿ ವೃದ್ಧಿಯಾಗಿ ಹನ್ನೊಂದನೆ ಶತಮಾನದ ಮಧ್ಯಭಾಗದಲ್ಲಿ ಚೋಳಮಂಡಲ ವೆಂಗಿಮಂಡಲ ಗಳೆರಡೂ ಒಟ್ಟುಗೂಡಿ ಏಕರಾಜ್ಯವಾಗಿ ಪರಿಣಮಿಸಿದವು.

ವೆಂಗಿಮಂಡಲವೇ ಆಂಧ್ರದೇಶವೆಂಬುದು. ರಾಷ್ಟ್ರಕೂಟರ ಕಾಲ ದಲ್ಲಿ ಪಶ್ಚಿಮದಲ್ಲಿ ಕನ್ನಡ ಭಾಷೆಯ ಸಾಹಿತ್ಯ ರಚನೆಯಾದ ವೇಳೆಯಲ್ಲಿಯೇ

ವೆಂಗಿಮಂಡಲದಲ್ಲಿ ಆಂಧ್ರ ಅಥವಾ ತೆಲುಗು ಭಾಷೆಯು ವೃದ್ಧಿ ವಿಕಾಸ ಗಳನ್ನು ಪಡೆಯಿತು. ಹನ್ನೊಂದನೇ ಶತಮಾನದಲ್ಲಿ ಈ ರಾಜರ ಆಸ್ಥಾನ ದಲ್ಲಿಯೇ ಮಹಾಭಾರತವು ತೆಲುಗು ಭಾಷೆಯಲ್ಲಿ ಮೊದಲಾಯಿತು. ಆಂಧ್ರ ಸಾಹಿತ್ಯವು ಪ್ರಾರಂಭವಾದುದು ವೆಂಗಿಯ ಚಾಲುಕ್ಯ ಭೂಪತಿಗಳ ಪ್ರೋತ್ಸಾಹದಿಂದಲೇ.

ಹತ್ತನೆ ಶತಮಾನದ ಮಧ್ಯಭಾಗದವರೆಗೂ ರಾಷ್ಟ್ರಕೂಟರೇ ಇಡೀ ಭಾರತವರ್ಷದಲ್ಲಿ ಪ್ರಬಲರಾದವರು; ದಕ್ಷಿಣದಲ್ಲಿ ಪಲ್ಲವರೊಡನೆಯೂ ಉತ್ತರದಲ್ಲಿ ಪಾಂಚಾಲದ ಅರಸರೊಡನೆಯೂ ಸ್ಪರ್ಧಿಸಿ ಸಾಮ್ರಾಜ್ಯಪದವಿ ಯನ್ನನುಭವಿಸಿದವರು. ಪಾಂಚಾಲರೂ ರಾಷ್ಟ್ರಕೂಟರೂ ಸಾಮ್ರಾಜ್ಯ ದ್ವಂದ್ವವನ್ನು ನಡೆಸುತ್ತಲಿದ್ದಹಾಗೆಯೇ ಹತ್ತನೆ ಶತಮಾನ ಕಳೆಯಿತು; ಆ ಶತಮಾನಾಂತ್ಯದಲ್ಲಿ ವಾಯುವ್ಯದಲ್ಲಿ ಉದ್ಯಾನ, ಗಾಂಧಾರ ಮತ್ತು ಪಂಚನದ ಕ್ಷೇತ್ರಗಳಲ್ಲಿ ತುರುಷ್ಕರ ಹಾವಳಿಯು ಮೊದಲಾಯಿತು.

ದ್ರವಿಡ ರಾಷ್ಟ್ರಗಳು

ದ್ರಮಿಳ ಅಥವಾ ದ್ರಾವಿಡವೆಂಬ ದಕ್ಷಿಣಾಗ್ರದಲ್ಲಿ ಪುರಾತನ ಕಾಲ ದಿಂದಲೂ **ಚೋಳ, ಪಾಂಡ್ಯ, ಕೇರಲ** ರಾಜ್ಯಗಳು ಪ್ರಸಿದ್ಧವಾಗಿದ್ದವಷ್ಟೆ. ಪಲ್ಲವರು ಪ್ರಬಲರಾಗಿದ್ದಾಗ ಚೋಳರು ಅಡಗಿಯೇ ಇರಬೇಕಾಗಿತ್ತು. ರಾಷ್ಟ್ರ ಕೂಟರು, ವೆಂಗಿಯ ಚಾಲುಕ್ಯರು, ಗಂಗರಸರು ಮುಂತಾದವರು ಸಾಧಿಸಿದ ವೈರದ ಪರಿಣಾಮವಾಗಿ ಪಲ್ಲವರ ಆಧಿಪತ್ಯವು ನಷ್ಟವಾಗುತ್ತಿದ್ದಾಗ ಚೋಳರಸರು ಪಲ್ಲವರಿಗೂ ಪಾಂಡ್ಯರಿಗೂ ನಡುವೆ ಸಿಲ್ಕಿ ದುರ್ಬಲರಾಗಿಯೇ ಇರುತ್ತಿದ್ದರು. **ಕೋರ್ಕೈ** ಎಂಬ ಪ್ರಸಿದ್ಧ ರೇವನ್ನು ಪಡೆದು, ಮುತ್ತುಗಳ ವ್ಯಾಪಾರದಲ್ಲಿ ಅದ್ವಿತೀಯರಾಗಿ ರೋಮಕ ಚಕ್ರವರ್ತಿಗಳೊಡನೆ ರಾಯ ಭಾರಗಳನ್ನು ನಡೆಸಿದ್ದ ಪಾಂಡ್ಯರಾಜರೂ ಪಲ್ಲವರ ಪ್ರಾಬಲ್ಯ ಕಾಲದಲ್ಲಿ

ಪಾಂಡ್ಯ

ಅಶಕ್ತರಾಗಿಯೇ ಇದ್ದರು. ರೋಮಕ ವ್ಯಾಪಾರವು ನಾಶವಾದ ಬಳಿಕ ಕೋರ್ಕೈ ಪಟ್ಟಣವೂ ಹಾಳಾಯಿತು. ಆರನೆ ಶತಮಾನದಲ್ಲಿ ಪಾಂಡ್ಯ ರಾಜ್ಯವು ಕಲಭ್ರರೆಂಬ ಔತ್ತರೇಯ ಜನರಿಗೆ ವಶವಾಗಿ ಸ್ವಲ್ಪಕಾಲ ಪರತಂತ್ರ ದಲ್ಲಿತ್ತು; ಆ ತರುವಾಯ ಪಾಂಡ್ಯರಾಜರೇ **ಮಧುರೆ**ಯಲ್ಲಿ ರಾಜ್ಯ

ವನ್ನು ಪ್ರಾರಂಭಿಸಿದರು. 8ನೆ ಶತಮಾನದಲ್ಲಿ ಆ ರಾಜರಲ್ಲಿ **ನೆದುಂಜೊಡೆಯನ್** ಮತ್ತು **ಶ್ರೀಮಾರ**ರೆಂಬುವವರು ಪ್ರಖ್ಯಾತರು. 830ರಿಂದ 862ರವರೆಗೆ ಆಳಿದ ಶ್ರೀಮಾರರಾಜನು ಕುಂಭಘೋಣದ ಬಳಿ ಗಂಗರಸರನ್ನೂ ಪಲ್ಲವರನ್ನೂ ಸೋಲಿಸಿದನು.

ಚೋಳ

ಪಾಂಡ್ಯರಾಜರು ಸಮಯ ಸಾಧನೆಮಾಡಿ ತಮ್ಮ ಶ್ರೇಷ್ಠತೆಯನ್ನು ನೆಲೆಗೊಳಿಸಲು ಪ್ರಯತ್ನಮಾಡಿದರು; ವ್ಯರ್ಥವಾಯಿತು. ಸುಮಾರು 880ರಲ್ಲಿ ಪಾಂಡ್ಯರಾಜನಾಗಿದ್ದ **ವರಗುಣ**ನು **ಶ್ರೀ ಪುರುಂಬಿಯಂ** ಎಂಬಲ್ಲಿ ಪಲ್ಲವರ ಮತ್ತು ಗಂಗರಸರ ಸೈನ್ಯಗಳನ್ನು ಏಕಕಾಲದಲ್ಲಿ ಎದುರಿಸಿ ಚನ್ನಾಗಿ ಸೋತನು. ಪಾಂಡ್ಯರಾಜನ ಪರಾಭವವು ಚೋಳಕುಲಸ್ಥರಿಗೆ ಒಳ್ಳೆಯ ಅವಕಾಶವನ್ನೊದಗಿಸಿತು. ಚೋಳವಂಶದ **ವಿಜಯಾಲಯ**ನೆಂಬ ಶೂರನು ಅದೇ ವೇಳೆಯಲ್ಲಿಯೇ ತಂಜಾವೂರನ್ನು ಸಾಧಿಸಿದನು. ದುರ್ಬಲರಾಗಿದ್ದ ಪಲ್ಲವರು ಆತನನ್ನು ಶಿಕ್ಷಿಸಲು ಅಶಕ್ತರಾಗಿದ್ದರು. ವಿಜಯಾಲಯನ ಅನಂತರ ಆತನ ಮಗ **ಆದಿತ್ಯಚೋಳ**ನೆಂಬಾತನು ಪಲ್ಲವವಂಶದ ಅಪರಾಜಿತನೆಂಬ ರಾಜನನ್ನು ಸೋಲಿಸಿ ಪಲ್ಲವರ ಪ್ರಾಬಲ್ಯವನ್ನು ಕೊನೆಗಾಣಿಸಿದನು.

ಪರಾಂತಕ

ಆದಿತ್ಯಚೋಳನೇ ಚೋಳರ ಪ್ರಾಬಲ್ಯಕ್ಕೆ ಅಸ್ತಿಭಾರವನ್ನು ನಿರ್ಮಿಸಿದನು. ರಾಜ್ಯವನ್ನು ವಿಸ್ತರಿಸಿದ್ದಲ್ಲದೆ ಜನರನ್ನು ಸಮಾಧಾನಗೊಳಿಸಿ ತನ್ನ ಆಡಳಿತವನ್ನು ಭದ್ರಗೊಳಿಸಿದನು. 906ರಲ್ಲಿ ಆತನ ಮಗ **ಪರಾಂತಕರಾಜ**ನು ಪಟ್ಟವನ್ನೇರಿ ಕೇರಲರಾಜನೊಡನೆ ಸ್ನೇಹವನ್ನು ಕಟ್ಟಿ ಬಾಣ, ವೈದುಂಬ ಮುಂತಾದ ಸಣ್ಣ ರಾಜರನ್ನು ಗೆದ್ದುದಲ್ಲದೆ ಪಾಂಡ್ಯರೊಡನೆ ಮೂರು ಸಲ ಯುದ್ಧಮಾಡಿ ಸಿಂಹಳದ್ವೀಪವನ್ನೂ ಆಕ್ರಮಿಸಿದನು. ಉತ್ತರ ಭಾಗದಲ್ಲಿ ಮಾತ್ರ ಚೋಳರಾಜ್ಯ ವಿಸ್ತಾರಕ್ಕೆ ಆತಂಕವು ತೋರಿಕೊಂಡಿತು. ಯುವರಾಜನಾಗಿದ್ದ ರಾಜಾದಿತ್ಯನು ತಕ್ಕೋಲದಲ್ಲಿ ರಾಷ್ಟ್ರಕೂಟ ಕೃಷ್ಣ ಗಂಗಬೂತುಗರೊಂದಿಗೆ ಯುದ್ಧಮಾಡುತ್ತ ಮಡಿದನು. ಈ ಅಪಜಯದಿಂದ ಸ್ವಲ್ಪಕಾಲ ಚೋಳರಾಜ್ಯ ವಿಸ್ತಾರವೇ ನಿಂತುಹೋಯಿತು;

ಅಲ್ಲದೆ ಪರಾಂತಕನ ತರುವಾಯ ಆಳಿದ ನಾಲ್ಕೈದುವರು ಪ್ರತಾಪಶಾಲಿಗಳಾಗಿರಲಿಲ್ಲ. ಪರಾಂತಕ ರಾಜನ ಮರಣಕಾಲದಿಂದ ರಾಜರಾಜದೇವನ ಕಾಲದವರೆಗೆ (952–985) ಚೋಳರ ಬಲವು ವೃದ್ಧಿಯಾಗಲಿಲ್ಲ.

ಸಾಮ್ರಾಜ್ಯ

985ರಲ್ಲಿ ಪಟ್ಟಾಭಿಷಿಕ್ತನಾದ **ರಾಜರಾಜದೇವನು** ಮಹಾಶೂರನಾಗಿದ್ದನು. ಅರಮನೆಯ ಒಳಸಂಚುಗಳನ್ನು ಅಲ್ಪಕಾಲದಲ್ಲಿಯೇ ಕೊನೆಗಾಣಿಸಿ ದಿಗ್ವಿಜಯ ಸಂಕಲ್ಪವನ್ನು ತಾಳಿದನು. ಮೊದಲು ಕೇರಲ ರಾಜನನ್ನು ಆಕ್ರಮಿಸಿ ಆ ರಾಜನ ನೌಕಾವ್ಯೂಹವನ್ನು **ಕಂದಲೂರೆಂ**ಬಲ್ಲಿ ಧ್ವಂಸ ಮಾಡಿದನು. ತರುವಾಯ ಪಾಂಡ್ಯರಾಜನೊಡನೆ ಯುದ್ಧಮಾಡಿ ಆ ರಾಜನನ್ನೇ ಸೆರೆಹಿಡಿದು ಅವನ ದರ್ಪವನ್ನು ಮುರಿದನು. ಆ ತರುವಾಯ ತುಂಡೀರ ವಿಷಯವೆಲ್ಲವನ್ನೂ ಸುಲಭವಾಗಿ ಆಕ್ರಮಿಸಿ ವೆಂಗಿಮಂಡಲದ ಚಾಲುಕ್ಯರೊಡನೆ ಹೋರಾಡಿ **ವೆಂಗಿಪುರ**ವನ್ನು ಸ್ವಾಧೀನಪಡಿಸಿಕೊಂಡನು. ರಾಷ್ಟ್ರಕೂಟರೂ ಗಂಗರಸರೂ ದುರ್ಬಲರಾಗಿದ್ದು ಕ್ಷೀಣಗತಿಯನ್ನು ಪಡೆದಿದ್ದುದರಿಂದ ಗಂಗವಾಡಿಯ ಜಯವೂ ಸುಲಭವಾಗಿ ನೆರವೇರಿತು. ಅನಂತಶಯನ ರಾಜ್ಯದಲ್ಲಿ ಕೊಲ್ಲಂ ಎಂಬುದೂ ಗೋದಾವರಿಗೆ ಉತ್ತರದಲ್ಲಿ ಕಳಿಂಗವೂ ರಾಜರಾಜನ ಹಸ್ತಗತವಾದವು. ಸಕಲ ದಿಕ್ಕುಗಳಲ್ಲಿಯೂ ಜಯಶಾಲಿಯಾದ ಈ ರಾಜನು ಆ ಬಳಿಕ ಯುದ್ಧವನ್ನು ನಿಲ್ಲಿಸಲು ಮನಸ್ಸು ಮಾಡಿದನು. ಸು. 1014ರಲ್ಲಿ ವೆಂಗಿಯ ಚಾಲುಕ್ಯರಾಜ ವಿಮಲಾದಿತ್ಯನಿಗೆ ತನ್ನ ಕುವರಿ **ಕುಂದವ್ವೆ** (ಗುಂಡಮಾಂಬಾ) ಯನ್ನು ಕೊಟ್ಟು ಮದುವೆಮಾಡಿ ಆ ಚಾಲುಕ್ಯ ಶಾಖೆಯವರೊಡನೆ ಮೈತ್ರಿಯು ದೃಢವಾಗಿ ಬೆಳೆಯುವಂತೆ ನೆರವೇರಿಸಿದನು.

ರಾಜರಾಜದೇವನೇ ಚೋಳರಸರಲ್ಲಿ ಚಿರಸ್ಮರಣೀಯನಾದಾತನು. ಯುದ್ಧದಲ್ಲಿ ಅಜೇಯನಾಗಿದ್ದುದಲ್ಲದೆ ಆತನು ಶೈವಭಕ್ತನಾಗಿ ಅನೇಕ ಧರ್ಮಕಾರ್ಯಗಳನ್ನು ನಡೆಸಿದನು. ತಂಜಾವೂರಿನಲ್ಲಿ ಪ್ರಸಿದ್ಧವಾದ **ರಾಜರಾಜೇಶ್ವರ ದೇವಾಲಯವು** ಆತನಿಂದಲೇ ನಿರ್ಮಿತವಾದುದು. ತಾನು ಉಗ್ರ ಶಿವಭಕ್ತನಾಗಿದ್ದಾಗ್ಯೂ ಇತರ ಮತಸ್ಥರನ್ನು ಗೌರವದಿಂದ ಕಾಣುತ್ತಿದ್ದನು.

**ರಾಜೇಂದ್ರ ಚೋಳದೇವ**

ರಾಜರಾಜದೇವನ ತರುವಾಯ ಆತನ ಮಗ **ರಾಜೇಂದ್ರದೇವ**ನೆಂಬಾತನು ಚೋಳಮಂಡಲಕ್ಕರಸಾದನು. ತಂದೆಗೆ ತಕ್ಕ ಮಗನಾಗಿದ್ದ ಈತನು ಆರು ವರ್ಷಗಳೊಳಗಾಗಿ ಬನವಾಸಿ, ರಾಯಚೂರು ಮುಂತಾದ ಪ್ರಾಂತಗಳನ್ನು ಗೆದ್ದು ಕಲ್ಯಾಣಿಯ ಚಾಲುಕ್ಯರಿಗೆ ಅವಕಾಶ ಕೊಡದೆ ಇದ್ದನು. ಸಿಂಹಳ ದ್ವೀಪ ಮತ್ತು ಕೇರಲ ರಾಷ್ಟ್ರಗಳವರು ರಾಜೇಂದ್ರ



35. ತಂಜಾವೂರಿನ ದೇವಾಲಯ

ದೇವನಿಗೆ ಹೆದರುತ್ತಿದ್ದರು. ತನ್ನ ಆಳ್ವಿಕೆಯ ಹನ್ನೆರಡನೆ ವರ್ಷದಲ್ಲಿ ಈತನ ದಳಪತಿಯು ಗಂಗಾನದಿಯ ತೀರಕ್ಕೆ ದಾಳಿ ಹೊರಟು ವಂಗದೇಶದ **ಮಹೀಪಾಲರಾಜನನ್ನು** ಸೋಲಿಸಿದನು; ಈ ಜಯದಿಂದ ರಾಜೇಂದ್ರನು **ಗಂಗೈಕೊಂಡ ಚೋಳದೇವ**ನೆಂದು ಪ್ರಸಿದ್ಧನಾದನು. ಗಂಗೈಕೊಂಡ ಚೋಳಪುರವೆಂಬ ನಗರವನ್ನು ಆತನೇ ರಾಜಧಾನಿಯಾಗಿ ಕಟ್ಟಿಸಿದನು.

ರಾಜೇಂದ್ರನಿಗೆ ಸಮುದ್ರದ ಆಚೆ ಇದ್ದ ಕ್ಷೇತ್ರಗಳನ್ನು ಸಾಧಿಸುವುದರಲ್ಲಿ ಮನಸ್ಸು ನಟ್ಟಿತ್ತು; ಆದಕ್ಕಾಗಿಯೇ ಮಹೀಪಾಲನನ್ನು ಸೋಲಿಸಿ ಕಳಿಂಗ ಕ್ಷೇತ್ರಕ್ಕೆ ತೊಂದರೆಯುಂಟಾಗದಂತೆ ಮಾಡಿಕೊಂಡನು. ಆತನ ನೌಕಾ ಸೇನೆಯು ಪ್ರಬಲವೆನಿಸಿ ಬಂಗಾಳಾಕೊಲ್ಲಿಯೆಲ್ಲವನ್ನೂ ವಶಪಡಿಸಿ ಕೊಂಡಿತ್ತು. ಬ್ರಹ್ಮದೇಶದ ದಕ್ಷಿಣಭಾಗವೂ ಅದರ ನೆರೆಯ ನಾಡುಗಳೂ ದ್ವೀಪಗಳೂ ರಾಜೇಂದ್ರದೇವನಿಗೆ ಸ್ವಾಧೀನವಾಗಿದ್ದವು. ಸುಮಾತ್ರಾ ದ್ವೀಪದವರೆಗೂ ಆತನ ರಾಜ್ಯಾಧಿಕಾರವು ನಡೆಯುತ್ತಿತ್ತೆಂದು ಹೇಳ ಬಹುದಾಗಿದೆ.

ಚಾಲುಕ್ಯ ಸ್ಪರ್ಧೆ

ರಾಜೇಂದ್ರ ಚೋಳದೇವನ ತರುವಾಯ **ಜಯಂಗೊಂಡ ಚೋಳ ದೇವ**ನೆಂಬ ಬಿರುದನ್ನು ವಹಿಸಿದ **ರಾಜಾಧಿರಾಜ**ನೆಂಬಾತನು ಚೋಳರಾಜ್ಯಾಧಿಪತಿಯಾಗಿ ಚಾಲುಕ್ಯರೊಡನೆ ಹೆಣಗಾಡುವುದರಲ್ಲಿಯೇ ಕಾಲ ಕಳೆದನು. 1053–54ರಲ್ಲಿ **ಕೊಪ್ಪ**ದ ಬಳಿ ನಡೆದ ಕದನದಲ್ಲಿ ರಾಜಾಧಿರಾಜನು **ಚಾಲುಕ್ಯ ಸೋಮೇಶ್ವರ**ನೊಡನೆ ಯುದ್ಧ ಮಾಡುತ್ತ ಮಡಿದನು. ಅನಂತರ **ರಾಜೇಂದ್ರ**ನೆಂಬಾತನೂ **ರಾಜಮಹೇಂದ್ರ**ನೆಂಬಾತನೂ **ವೀರರಾಜೇಂದ್ರ**ನೆಂಬಾತನೂ ಕ್ರಮವಾಗಿ ಆಳಿದರು. ವೀರರಾಜೇಂದ್ರನು ತುಂಗಭದ್ರಾ ಪ್ರಾಂತದಲ್ಲಿ ಚಾಲುಕ್ಯರೊಡನೆ ಯುದ್ಧ ಮಾಡುತ್ತ ಕೂಡಲ**ಸಂಗಮ**ವೆಂಬೆಡೆಯಲ್ಲಿ ಚಾಲುಕ್ಯರಾಜನನ್ನು ಸೋಲಿಸಿದನು. ಹಿಂದೆ ರಾಷ್ಟ್ರಕೂಟ ಪಲ್ಲವರಿಗೆ ನಡೆಯುತ್ತಿದ್ದಂತೆಯೇ ಈಗ ಚಾಲುಕ್ಯ ಚೋಳರಿಗೆ ಸಾಮ್ರಾಜ್ಯ ದ್ವಂದ್ವವು ನಡೆಯುತ್ತಿತ್ತು. ಚಾಲುಕ್ಯರನ್ನು ಸೋಲಿಸಿದ ವೀರರಾಜೇಂದ್ರನು ವಿಜಯಾಲಯನ ವಂಶಕ್ಕೆ ಕಡೆಯವನಾದನು. ಆತನ ತರುವಾಯ ವೆಂಗಿಯ ಚಾಲುಕ್ಯ ವಂಶದಲ್ಲಿ ಹುಟ್ಟಿದ **ಕುಲೋತ್ತುಂಗದೇವ**ನೆಂಬಾತನು ವೆಂಗಿಮಂಡಲ ಚೋಳ ಮಂಡಲಗಳೆರಡಕ್ಕೂ ಅರಸಾದನು. ಪೂರ್ವ ತೀರಪ್ರದೇಶವೆಲ್ಲವೂ ಹೀಗೆ ಒಟ್ಟುಗೂಡಿ ಏಕರಾಜ್ಯವಾಯಿತು.

ಕುಲೋತ್ತುಂಗದೇವನು ಚೋಳರಸರಲ್ಲಿ ವಿಖ್ಯಾತನಾಗಿದ್ದಾನೆ. ಮೊದಲು ಆತನು ರಾಜ್ಯದಲ್ಲಿ ಶಾಂತಿಯನ್ನು ನೆಲೆಗೊಳಿಸಿ ರಾಜಾದಾಯ

ವನ್ನು ಸರಿಪಡಿಸಲು ಜಮೀನುಗಳ ಅಳತೆಯನ್ನು ಮಾಡಿಸಿ ನೆಲಗಂದಾಯ ವನ್ನು ಕ್ರಮಗೊಳಿಸಿದನು. ಕಲ್ಯಾಣಿಯ ಚಾಲುಕ್ಯ

**ಕುಲೋತ್ತುಂಗದೇವ**

ವಿಕ್ರಮಾದಿತ್ಯನು ವೆಂಗಿಮಂಡಲದಲ್ಲಿ ಸೈನ್ಯ ವನ್ನು ನಡೆಸುತ್ತಿದ್ದುದರಿಂದ ಆ ಕಳಿಂಗ ಪ್ರದೇಶ ವನ್ನು ಸ್ವಾಧೀನಗೊಳಿಸಿಕೊಳ್ಳುವ ಸಂಕಲ್ಪಮಾಡಿ ಕುಲೋತ್ತುಂಗನು 1095-96ರಲ್ಲಿ ಆ ಪ್ರದೇಶವನ್ನು ತನ್ನ ಸೇನೆಗಳಿಂದ ಆಕ್ರಮಿಸಿದನು. ಎರಡನೆ ಸಲ 1112ರಲ್ಲಿ ಕುಲೋತ್ತುಂಗನಿಂದ ಆಜ್ಞಪ್ತನಾಗಿ ಆತನ ದಲಪತಿ **ಕರುಣಾಕರ ತೊಂಡೈಮಾನೆಂ**ಬಾತನು ಕಳಿಂಗ ಪ್ರಾಂತವನ್ನು ಮುತ್ತಿದನು. ಈ ಮುತ್ತಿಗೆಯ ವಿಷಯವು ತಮಿಳು ಭಾಷೆಯ ಕಾವ್ಯ ವೊಂದಕ್ಕೆ ವಸ್ತುವಾಗಿದೆ; ಆಸ್ಥಾನದಲ್ಲಿದ್ದ **ಜಯಂಗೊಂಡನ್** ಎಂಬ ಕವಿಯೇ ಆ ಕಾವ್ಯವನ್ನು ರಚಿಸಿದನು. ಈ ರೀತಿಯಲ್ಲಿ ವಿಸ್ತಾರವಾದ ಸಾಮ್ರಾಜ್ಯವನ್ನು ಆಳುತ್ತಿದ್ದಾಗ್ಯೂ ಕುಲೋತ್ತುಂಗದೇವನು ಸಮುದ್ರ ದಾಚೆ ಇದ್ದ ಕ್ಷೇತ್ರಗಳನ್ನು ಉಳಿಸಿಕೊಳ್ಳದಾದನು. ಕಲ್ಯಾಣಿಯ ಚಾಲುಕ್ಯರಲ್ಲದೆ ಮಲೆನಾಡಿನಲ್ಲಿ ತಲೆಯೆತ್ತಿದ್ದ ಹೊಯಿಸಳ ವಂಶದವರೂ ಚೋಳ ಸಾಮ್ರಾಜ್ಯಕ್ಕೆ ವೈರಿಗಳಾಗಿ ಆಗಾಗ ತೊಂದರೆಯನ್ನುಂಟು ಮಾಡುತ್ತಲೇ ಇದ್ದರು. ಕುಲೋತ್ತುಂಗದೇವನು 1118ರಲ್ಲಿ ಕಾಲ ವಾದನು. ಅಂದಿನಿಂದ ಚೋಳರಸರ ಕ್ಷೀಣಗತಿಯು ಮೊದಲಾಯಿತು. ಸರಹದ್ದುಗಳಲ್ಲಿ ಹೊರಗಿನ ಶತ್ರುಗಳು ಪ್ರಬಲರಾದರು; ರಾಜ್ಯದೊಳಗಡೆ ಬಿಗಿ ತಪ್ಪಿತು. 1216ರಿಂದ 1248ರ ವರೆಗೆ ಆಳಿದ **ಮುಮ್ಮಡಿ ರಾಜರಾಜ**ನೇ ಚೋಳರಸರಲ್ಲಿ ಕಡೆಯಾತನೆಂದು ಎಣಿಸಬಹುದು.

ಈ ಕಾಲದಲ್ಲಿ ಕೇರಲದೇಶವನ್ನು ಆಳಿದವರ ವೃತ್ತಾಂತವು ವಿವರವಾಗಿ ಲಭ್ಯವಾಗಿಲ್ಲ. ಚೋಳ ಪಾಂಡ್ಯ ಕೇರಲರಾಷ್ಟ್ರ

**ಕೇರಲ**

ಗಳು ತಮಿಳು ಅಥವಾ ದ್ರವಿಡ ರಾಷ್ಟ್ರಗಳು; ಕ್ರಿ. ಪೂ. 4ನೆ ಶತಮಾನದಿಂದ ಕ್ರಿ. ಶ. 2ನೆ ಶತಮಾನದವರೆಗೂ ಈ ಮೂರು ರಾಜ್ಯಗಳೂ ಸುಸ್ಥಿತಿಯಲ್ಲಿದ್ದು ಪಲ್ಲವರ ಕಾಲದಲ್ಲಿ ಅಡಗಿದಂತಿದ್ದು ಆ ತರುವಾಯ ಪ್ರಾಬಲ್ಯಕ್ಕೆ ಯತ್ನಮಾಡಿದವು. ಕೇರಲದಲ್ಲಿ ತಮಿಳು ಭಾಷೆಯ ಪ್ರಚಾರ ಕಡಿಮೆಯಾಗಿ ಮಲೆಯಾಳವೆಂಬ

ಮತ್ತೊಂದು ಭಾಷೆಯು ಈ ಕಾಲದಲ್ಲಿಯೇ ಅಭಿವೃದ್ಧಿಯಾಯಿತು. ಕೇರಲದ ನಂಬೂದಿರಿ ಬ್ರಾಹ್ಮಣರಲ್ಲಿಯೇ ಶಂಕರಾಚಾರ್ಯರು ಜನಿಸಿದರೆಂಬಂಶವನ್ನು ಮರೆಯಲಾಗದು.

ಚೋಳರ ಇಳಿಗಾಲದಲ್ಲಿ ಪಾಂಡ್ಯ ಕೇರಲ ಭೂಪತಿಗಳು ತಮ್ಮ ರಾಜ್ಯಗಳನ್ನು ವಿಸ್ತಾರಪಡಿಸಿಕೊಳ್ಳಬಹುದಾಗಿತ್ತು. ಅವರ ವೃತ್ತಾಂತವನ್ನು ಮುಂದೆ ಹೊಯಿಸಳ ವಂಶದವರ ವಿವರದಲ್ಲಿ ಕಾಣಬಹುದು.

## ಪಂಚನದ ಪ್ರತೀಹಾರರು

ವೃಷಲರು

ಸಿಂಧುನದಿಗೆ ಪಶ್ಚಿಮದಲ್ಲಿ ಉದ್ಯಾನ ಗಾಂಧಾರ ಕ್ಷೇತ್ರಗಳಲ್ಲಿ ಪೂರ್ವಕಾಲದಿಂದಲೂ ಕ್ರಿಯಾಲೋಪದ ಕಾರಣದಿಂದ ವೃಷಲರೆನಿಸಿದ ಕ್ಷತ್ರಿಯ ವಂಶಗಳು ನೆಲೆಸಿದ್ದುವು. ಪಾರದರು, ಪಹ್ಲವರು, ಕಿರಾತರು, ದರದರು, ಖಶರು ಮುಂತಾದವರು ವೃಷಲರೆಂದು ಮನುಸ್ಮೃತಿಯ ಕಾಲದಲ್ಲಿಯೇ ಭಾರತೀಯರಿಗೆ ತಿಳಿದಿತ್ತು. ಇವರ ಮಧ್ಯೆ ಯಾದವ ವಂಶದ ಗಜಸಿಂಹನೆಂಬಾತನು ಸಾಹಸದಿಂದ ರಾಜ್ಯವನ್ನು ಕಟ್ಟಿ **ಗಜನಿ** (ಘಸ್ನಿ) ಯನ್ನು ಸ್ಥಾಪಿಸಿದ್ದನು. ಆ ರಾಜ್ಯವು 10ನೆ ಶತಮಾನದಂತ್ಯಕಾಲದಲ್ಲಿ ಮುಸಲ್ಮಾನನಾದ ತುರುಷ್ಕ ಜಾತಿಯ **ಅಲುಪ್ತೆಕೀನ್** ಎಂಬಾತನ ವಶವಾಯಿತು. ಬಗದಾದಿನ ಖಲೀಫರ ಅಧಿಕಾರವು ಕೊನೆಗಂಡಿತ್ತು; ಅರಬ್ಬೀಜನರ ಮತ್ತು ಇರಾನೀಜನರ ಸಭ್ಯತೆಯು ಈ ಕಾಲಕ್ಕೆ ತುರುಷ್ಕರ ಸಾಹಸದೆದುರಿಗೆ ದುರ್ಬಲವಾಗಿ ಮಾಯವಾಗುತ್ತಿತ್ತು. ಕ್ರಿ. ಶ. 960ರಲ್ಲಿ ಅಲುಪ್ತೆಕೀನನು ಕಾಲವಾದನು; **ಸೆಬುಕ್ತೆಗೀನ್** ಎಂಬ ಆತನ ಅಳಿಯನು ರಾಜ್ಯಾಧಿಕಾರಿಯಾಗಿ ರಾಜ್ಯವಿಸ್ತಾರಕ್ಕೆ ತೊಡಗಿದನು.

ಜಯಪಾಲ

ಆ ಕಾಲದಲ್ಲಿ **ಪಂಚನದ** ಪ್ರದೇಶದಲ್ಲಿ **ಬ್ರಹ್ಮಕ್ಷತ್ರಿಯ** ವಂಶದ ರಾಜರು ಆಳುತ್ತಿದ್ದರು. ಅವರಿಗೆ **ಭಾಟಿಂಡ, ಲಾಹೋರ** (ಲವಪುರ), **ವಹಿಂದ** (ಉದಭಾಣ್ಡ)ಗಳು ನೆಲೆವೀಡುಗಳಾಗಿದ್ದುವು. ಅವರಿಗೆ ಉತ್ತರಕ್ಕೆ ಕಾಶ್ಮೀರದೇಶವೂ ಪೂರ್ವಕ್ಕೆ ಕುರುಕ್ಷೇತ್ರವೂ ಮೇರೆಗಳಾಗಿದ್ದುವು.

ಸೆಬುಕ್ತೆಗೀನನು ಅಮೀರನಾದ ಕಾಲದಲ್ಲಿ ಪಂಚನದ ಪ್ರದೇಶದಲ್ಲಿ **ಜಯಪಾಲ**ನೆಂಬ ರಾಜನು ಆಳುತ್ತಿದ್ದನು; ಅಮೀರನ ರಾಜ್ಯ ವಿಸ್ತಾರ ಪ್ರಯತ್ನವನ್ನು ಕಂಡು ಜಯಪಾಲನು ಆತನನ್ನು ಅಡಗಿಸಬೇಕೆಂದು ಯೋಚಿಸಿ, ಸು. 986ರಲ್ಲಿ **ಲುಂಘಾನ್ ಕಣಿವೆ**ಯಲ್ಲಿ ಸೈನ್ಯದೊಡನೆ ನುಗ್ಗಿದನು. ಅಮೀರನೂ ಸೈನ್ಯ ಸಮೇತನಾಗಿ ಆ ಕಣಿವೆಯಲ್ಲಿ ಇದಿರಾದನು. ಎರಡು ಪಕ್ಷಗಳೂ ಸಿದ್ಧವಾಗಿ ಯುದ್ಧಕ್ಕೆ ಮೊದಲಿಡುವ ಸಮಯದಲ್ಲಿ ಪ್ರಚಂಡವಾದ ಜಂಝಾಮಾರುತವು ಎದ್ದು ಕಣಿವೆಯಲ್ಲಿ ಮಂಜುಗಡ್ಡೆಗಳ ವೃಷ್ಟಿಯನ್ನುಂಟುಮಾಡಿತು. ಯಾವ ಪಕ್ಷದವರಿಗೂ ಕೈಯಾಡಲಿಲ್ಲ. ಆಗ ಜಯಪಾಲನು ಸದ್ಯಕ್ಕೆ ಯುದ್ಧವನ್ನು ನಿಲ್ಲಿಸುವ ಒಪ್ಪಂದಮಾಡಿಕೊಂಡು ಹಿಂತಿರುಗಿದನು. ರಾಜಧಾನಿಯನ್ನು ತಲಪಿದ ಕೂಡಲೆ ನೆರೆಹೊರೆಯ ರಾಜರಿಗೆ ಹೇಳಿಕಳುಹಿಸಿ ಪುನಃ ಯುದ್ಧಕ್ಕೆ ಸಿದ್ಧನಾದನು. 987–88ರಲ್ಲಿ ಜಯಪಾಲರಾಜನ ಸೈನ್ಯವು **ಘುಸ್ನಿ ಪ್ರಾಂತ**ವನ್ನು ಹೊಕ್ಕಿತು; ಆ ಯುದ್ಧಕಾಲದಲ್ಲಿ ಅಮೀರನು ರಹಸ್ಯವನ್ನು ತಿಳಿದವನಾಗಿ ಅಲ್ಲಿಯ ಜಲಾಶಯಗಳನ್ನು ಗೋಮಾಂಸದಿಂದ ಕೆಡಿಸಲು ರಾಜಪುತ್ರರು ನೀರಿಲ್ಲದೆ ತೊಂದರೆಪಟ್ಟು ಯುದ್ಧಮಾಡಲಾರದಾದರಂತೆ. ಜಯಪಾಲನು ಸೋಲನ್ನೊಪ್ಪಿಕೊಂಡು ಪಡುವಲಲ್ಲಿ ಕೆಲವು ಪ್ರದೇಶಗಳನ್ನು ಬಿಟ್ಟುಕೊಡಲೊಪ್ಪಿ ಹಿಂತಿರುಗಬೇಕಾಯಿತು. 997ರಲ್ಲಿ ಅಮೀರ ಸೆಬುಕ್ತೆಗೀನನು ಮೃತನಾದನು; **ಬೂತ್ಷಿಕನ್** (ವಿಗ್ರಹ ವಿಭೇದಕ) ಎಂದು ಪ್ರಸಿದ್ಧನಾದ **ಮುಹಮ್ಮದ**ನು ಅಮೀರನಾಗಿ ಹಿಂದೂಸ್ಥಾನದ ಐಶ್ವರ್ಯವನ್ನು ಸೂರೆಮಾಡುವ ಸಂಕಲ್ಪ ಮಾಡಿಕೊಂಡನು. ತುರುಷ್ಕರು ಅರಬ್ಬಿಗಳಂತೆ ಸಭ್ಯರಾಗಿರಲಿಲ್ಲ; ಯುದ್ಧದಲ್ಲಿ ಧರ್ಮವನ್ನೂ ಔದಾರ್ಯವನ್ನೂ ಅರಿಯದವರಾಗಿದ್ದರು. ಸೆರೆಸಿಕ್ಕಿದವರನ್ನು ಗುಲಾಮರಂತೆ ಮಾರುವುದಲ್ಲದೆ ಲೂಟಿಮಾಡುವುದರಲ್ಲಿ ದಯಾದಾಕ್ಷಿಣ್ಯ ಲೇಶವೂ ಇಲ್ಲದೆ ವರ್ತಿಸುತ್ತಿದ್ದರು. ಇಂತಹ ಜನರ ಪ್ರಾಬಲ್ಯಕ್ಕೆಡೆಗೊಡಬಾರದೆಂದು ಜಯಪಾಲನು ಚಿಂತಿಸಿ ಪುನಃ ನೆರೆಹೊರೆಯ ರಾಜರಿಗೆ ಹೇಳಿಕಳುಹಿಸಿ 1001ರಲ್ಲಿ ಮುಹಮ್ಮದನನ್ನು **ಪುರುಷಪುರ**ದ ಬಳಿ ಎದುರುಗೊಂಡನು.

ಜಯಪಾಲನ ಸೈನ್ಯದಲ್ಲಿ 12,000 ರಾವುತರೂ, 30,000 ಪದಾತಿಗಳೂ, 300 ಆನೆಗಳೂ ಇದ್ದವು; ಮಹಮ್ಮೂದನ ಸೈನ್ಯದಲ್ಲಿ 15,000 ಅಶ್ವಾರೋಹಿಗಳಿದ್ದರು. ಉಭಯ ಸೈನ್ಯಗಳು ಸಮೀಪಸ್ಥವಾದಾಗ್ಯೂ ಜಯಪಾಲರಾಜನು ತನ್ನ ಇತರ ದಳಗಳೂ ಬಂದು

ಪುರುಷಪುರದ ಬಳಿ ಕದನ 1001

ಸೇರಿಕೊಳ್ಳಲೆಂದು ನಿದಾನಮಾಡಿದನು. ನಿದಾನವಾದರೆ ತನ್ನ ಕೆಲಸ ಕೆಡುವುದೆಂದು ಮಹಮ್ಮೂದನೇ ಮುಂದಾಗಿ ರಾಜಪುತ್ರರನ್ನು ಆಕ್ರಮಿಸಿದನು. ಜಯಪಾಲನು ಯುದ್ಧಮಾಡಲೇ ಬೇಕಾಯಿತು. ಮೊದಲು ಎರಡು ಕಡೆಗಳವರೂ ಬಾಣಗಳನ್ನು ಎಸೆದರು. ರಾಜಪುತ್ರರು ಅನೇಕ ಶತ್ರುಗಳನ್ನು ಧ್ವಂಸಮಾಡಿದಾಗ್ಯೂ ತುರುಷ್ಕರ ಅಂಬುಗಳೂ ಗುರಿ ತಪ್ಪದೆ ತಗಲಿ ರಾಜಪುತ್ರರಿಗೂ ಸೈನ್ಯ ನಷ್ಟವಾಯಿತು. ಆ ತರುವಾಯ ತುರುಷ್ಕ ರಾವುತರು ನುಗ್ಗಿದರು. ಆನೆಗಳನ್ನು ಉಪಯೋಗಿಸಬೇಕೆಂದಿದ್ದ ಜಯಪಾಲ ರಾಜನ ಉದ್ದೇಶವು ಭಂಗವಾಯಿತು; ಬಾಣಗಳ ಸುರಿಮಳೆಯಲ್ಲಿ ನಡೆದ ಗದ್ದಲದಲ್ಲಿ ಆನೆಗಳು ಮತಿಗೆಟ್ಟು ಸ್ವಾಧೀನ ತಪ್ಪಿದ್ದವು. ತುರುಷ್ಕರು ಉರುಬಿಕೊಂಡು ಬಂದು ಸಿಕ್ಕಿದೆಡೆಗೆ ಹೊಡೆಯುತ್ತಾ ನಿಯಮಬದ್ಧ ರಾಜಪುತ್ರರಲ್ಲಿ ಅನೇಕರನ್ನು ಸಂಹರಿಸಿದರು. 15,000 ರಾಜಪುತ್ರರು ಧೃತಿಗೆಡದೆ ಪ್ರಾಣಗಳನ್ನರ್ಪಿಸಿದರು. ರಾಜನೂ ರಾಜಬಂಧುಗಳು ಹದಿನೈದು ಮಂದಿಯೂ ಬಂಧನದಲ್ಲಿ ಸಿಕ್ಕಿದರು; ಅವರ ಅಮೂಲ್ಯ ಆಭರಣಗಳನ್ನು ಕಂಡು ತುರುಷ್ಕರು ಅವರನ್ನು ಸೆರೆಹಿಡಿದು ಆಭರಣಗಳನ್ನು ಕಿತ್ತುಕೊಂಡರು. ಜಯಪಾಲನ ಕೊರಳಲ್ಲಿದ್ದ ಅಮೂಲ್ಯವಾದ ರತ್ನಹಾರವೊಂದು ಮಹಮ್ಮೂದನ ವಶವಾಯಿತು. ಸೆರೆಸಿಕ್ಕು ಖಿನ್ನನಾಗಿದ್ದ ರಾಜನನ್ನು ಕಂಡು ಮಹಮ್ಮೂದನು ತನ್ನ ಜಯಕ್ಕೆ ಹಿಗ್ಗಿ **ವಹಿಂದಪುರಿ** (ಉದಭಾಣ್ಡ)ಯನ್ನು ಕೊಳ್ಳೆಹೊಡೆಸಿದನು. ಹೇರಳವಾದ ಧನವನ್ನೂ 150 ಆನೆಗಳನ್ನೂ ಕೊಡುವುದಾದರೆ ಸೆರೆಯಿಂದ ಬಿಡಲಾಗುವುದೆಂದು ರಾಜನಿಗೆ ಹೇಳಿದನು. ರಾಜನು ಕೊಡುವೆನೆಂದು ಮಾತುಕೊಟ್ಟನು; ರಾಜನ ವಚನಕ್ಕೆ ತೃಪ್ತನಾಗದೆ 'ಮಹಮ್ಮೂದನು ಒತ್ತೆಯಾಗಿ ಬಂಧುವರ್ಗದವರನ್ನು ಇಟ್ಟು

ರಾಜನ ಸೆರೆ

ಹೋಗಬಹುದೆನ್ನಲು ಆ ಬಂಧುಗಳು ರಾಜನನ್ನೊಪ್ಪಿಸಿ ಸೆರೆಯಿಂದ ಬಿಡಿಸಿ ಕಳುಹಿಸಿದರು. ಇತ್ತ ಯುವರಾಜ ಆನಂದಪಾಲನು ದಂಡದ ಹಣವನ್ನೂ ಆನೆಗಳನ್ನೂ ಕ್ಷಿಪ್ರವಾಗಿ ಕೊಟ್ಟು ಕಳುಹಿಸಿದನು. ರಾಜನು ಹೊರಟ ಐದಾರು ದಿನಗಳಲ್ಲಿಯೇ ಒತ್ತೆಯಾಗಿದ್ದ ರಾಜಬಂಧುಗಳೂ ವಿಮುಕ್ತ ರಾದರು. ಅವರ ಬೇಡಿಗಳನ್ನು ಕಳಚಿ ತುರುಷ್ಕ ಸೈನಿಕರು ಅವರನ್ನು ಹಾಸ್ಯ ಮಾಡುತ್ತ ಹಿಂದೆ ಹೊಡೆಯುತ್ತ ಸ್ವದೇಶದ ಕಡೆಯ ದಾರಿಯಲ್ಲಿ ಅಟ್ಟಿದರು.

**ಆತ್ಮಯಜ್ಞ**

ತುರುಷ್ಕರ ಈ ಅಸಭ್ಯ ವರ್ತನೆಯ ವಿವರವನ್ನು ಕೇಳಿದ ರಾಜಪುತ್ರ ರಾಜರು ಹಾಹಾಕಾರ ಮಾಡಿದರು. ಜಯಪಾಲ ರಾಜನು ಪ್ರಾಣ ಸಹಿತ ಇರುವ ಅವಮಾನವನ್ನು ಸಹಿಸದಾದನು; ಆತನ ಬಂಧುವರ್ಗದವರೂ ದಳ ಮುಖ್ಯರೂ ಪರಾಜಿತನಾದ ರಾಜನು ಪಟ್ಟದಲ್ಲಿರಲಾಗದೆಂದು ಅಭಿಪ್ರಾಯ ಪಟ್ಟರು. ಆಗಲಾ ರಾಜನು ದಾನಧರ್ಮಗಳನ್ನು ಮಾಡಿ ಯುವರಾಜ ಆನಂದಪಾಲನಿಗೆ ರಾಜ್ಯವನ್ನು ಅರ್ಪಿಸಿ ಚಿತಾರೋಹಣ ಮಾಡಿದನು.

**ವಜ್ರರಾಜ**

ಸಿಂಧುನದಿಯ ಪಕ್ಕದಲ್ಲಿ ಭಾಟಿಯ ಅಥವಾ **ಊಚ್** ಎಂಬ ಸಣ್ಣ ರಾಜ್ಯದಲ್ಲಿ ಭಾಟಿಕುಲದ ರಾಜಪುತ್ರರು ನೆಲೆಸಿದ್ದರು. ಅವರ ರಾಜನಾಗಿದ್ದ **ವಜ್ರರಾಜನು** (ವಿಜಯ ರಾಯ?) ಸೆಬುಕ್ತೆಗೀನನೊಡನೆ ಸ್ನೇಹವನ್ನು ಕಟ್ಟಿಕೊಂಡಿದ್ದನು. ಜಯಪಾಲನೊಡನೆ ತಾನು ಮಾಡಿದ ಯುದ್ಧ ಸಂದರ್ಭದಲ್ಲಿ ವಜ್ರರಾಜನು ತನ್ನ ಸಹಾಯಕ್ಕೆ ಒದಗಲಿಲ್ಲವೆಂದು ಮಹಮ್ಮೂದನು ಕೋಪಗೊಂಡು 1004ರಲ್ಲಿ ಭಾಟಿರಾಜ್ಯದಮೇಲೆ ದಾಳಿ ಹೊರಟನು. ಭಾಟಿಕುಲಸ್ಥರು ಆವೇಶದಿಂದ ಯುದ್ಧಮಾಡಲು ತುರುಷ್ಕರಿಗೆ ಅಪಜಯದ ಭೀತಿಯು ಹುಟ್ಟಿತು. ಆಗ ಮಹಮ್ಮೂದನು ದಂಡಿನೆದುರಿಗೆ ಮೊಣಕಾಲೂರಿ ಪ್ರಾರ್ಥನೆಮಾಡಿ ಅವರಲ್ಲಿ ಉತ್ಸಾಹವನ್ನುಂಟು ಮಾಡಿದನು. ವಜ್ರರಾಜನು ರಣಾಂಗಣವನ್ನು ಬಿಟ್ಟು ದುರ್ಗವನ್ನು ಪ್ರವೇಶಮಾಡಿ ಮುತ್ತಿಗೆಗೆ ಸಿದ್ಧನಾದನು. ಮುತ್ತಿಗೆಯು ನಡೆಯಿತು; **ಊಚ್** ಕೋಟೆಯು ಮಹಮ್ಮೂದನ ವಶವಾಗಿ ಕೊಳ್ಳೆಗೆ ಸಿಕ್ಕಿತು. ವಜ್ರರಾಜನು ಯುದ್ಧಮಾಡುತ್ತ ಅರಣ್ಯವನ್ನು ಹೊಕ್ಕನು. ಆ ವೇಳೆಗೆ

ಅನೇಕರು ಸಿಕ್ಕಿ ಹತರಾಗಿದ್ದರು. ಅರಣ್ಯದಲ್ಲಿ ವಜ್ರನನ್ನು ತುರುಷ್ಕರು ಹುಡುಕಿದರು; ಎಲ್ಲಿಯೂ ಎಡೆಗಾಣದೆ ಸೆರೆಸಿಕ್ಕುವ ಸಂದರ್ಭ ಬರಲು ವಜ್ರನು ತಾನೇ ತನ್ನ ಕಠಾರಿಯಿಂದ ಇರಿದುಕೊಂಡು ಪ್ರಾಣಬಿಟ್ಟನು. ತುರುಷ್ಕರು ಅವನ ತಲೆಯನ್ನು ಕತ್ತರಿಸಿ ಅಮೀರನಿಗೊಪ್ಪಿಸಿದರು. ಅಮೀರ ಮಹಮ್ಮೂದನು ಬುಖಾರಾ (ಬಾಹ್ಲಿಕ) ಪ್ರಾಂತಕ್ಕೆ ಹೊರಡಬೇಕಾಗಿದ್ದುದರಿಂದ ಊಚ್ ದುರ್ಗಕ್ಕೆ, ಹಿಂದೆ ಸೆರೆಸಿಕ್ಕಿ ತನ್ನಲ್ಲಿಯೇ ಇದ್ದು ಇಸ್ಲಾಮಿ ಮತವನ್ನು ನಿರ್ಬಂಧದಿಂದ ಸ್ವೀಕಾರಮಾಡಿದ್ದ **ಸುಖಪಾಲ**ನೆಂಬ ಜಯಪಾಲರಾಜನ ಪೌತ್ರನೊಬ್ಬನನ್ನು ನಿಯಮಿಸಿದನು. ಮಹಮ್ಮೂದನು ಹೊರಟುಹೋದ ಕೂಡಲೆ ಸುಖಪಾಲನು ತುರುಷ್ಕರನ್ನು ಹೊರಡಿಸಿ, ಇಸ್ಲಾಮಿ ಮತವನ್ನು ಬಿಟ್ಟು, ಆನಂದಪಾಲರಾಜನಿಗೆ ವರ್ತಮಾನಕೊಟ್ಟು ಹಿಂದಿನಂತೆ ರಾಜಪುತ್ರಾಧಿಪತ್ಯವನ್ನೇ ನಡೆಸಲು ಉದ್ಯುಕ್ತನಾದನು. 1007ರಲ್ಲಿ ಘಸ್ನಿಗೆ ಹಿಂತಿರುಗಿದಾಗ ಮಹಮ್ಮೂದನು ಈ ವರ್ತಮಾನವನ್ನು ಕೇಳಿ ಕ್ರುದ್ಧನಾಗಿ ಉದಭಾಣ್ಡಕ್ಕೆ ಬಂದು ತನ್ನ ಅಧಿಕಾರಿಗಳಿಗೆ ಸುಖಪಾಲ (ನವಾಸಷಾಹ)ನನ್ನು ಹಿಡಿದೊಪ್ಪಿಸುವಂತೆ ಆಜ್ಞೆಕೊಟ್ಟನು. ಅವರು ಅವನನ್ನು ಹಿಡಿದು ತರಲು ಮಹಮ್ಮೂದನು ಅವನ ಧನವೆಲ್ಲವನ್ನೂ ತಾನೇ ತೆಗೆದುಕೊಂಡು ಅವನನ್ನು ಒಂದು ಕಾರಾಗೃಹದಲ್ಲಿ ಆಜೀವವಾಗಿ ಬಂಧಿಸಿಬಿಟ್ಟನು.

**ಸುಖಪಾಲ**

ಆನಂದಪಾಲ ರಾಜನು ಮಹಮ್ಮೂದನನ್ನು ಲಕ್ಷಿಸಲಿಲ್ಲ. ಪಟ್ಟಾಭಿಷಿಕ್ತನಾದ ಮೇಲೆ ಈ ಅಮೀರನು ಪುನಃ ಬಾರನೆಂದೋ ದುರ್ಬಲನೆಂದೋ ನೆನೆಸಿದ್ದನು. 1005ರಲ್ಲಿ ಮಹಮ್ಮೂದನು ಮೂಲ್ತಾನಿನಲ್ಲಿದ್ದ ಇಸ್ಮಾಯಿಲೀ ಪಂಥದ ಮುಸ್ಲಿಂ ದೊರೆಯ ಮೇಲೆ ದಂಡೆತ್ತಿ ಹೊರಟು ಆನಂದಪಾಲನ ರಾಜ್ಯದಲ್ಲಿಯೇ ದಂಡನ್ನು ನಡೆಸಿದಾಗ ಆನಂದಪಾಲನು ವಿರೋಧಿಸಿದನು. ಮಹಮ್ಮೂದನು ಅವನನ್ನು ಸೋಲಿಸಲು ಆನಂದಪಾಲನು ಕಾಶ್ಮೀರರಾಜ್ಯಕ್ಕೆ ಹೊರಟು ಅಲ್ಲಿಯ ಲೋಹರವಂಶದ ರಾಜನ ಸಖ್ಯವನ್ನು ಬಯಸಿದನು. ಕಾಶ್ಮೀರರಾಜನು ಸಹಾಯಮಾಡಿದಂತೆ

**ಆನಂದಪಾಲ**

ಕಾಣುವುದಿಲ್ಲ. ರಾಜಧಾನಿಗೆ ಬಂದಮೇಲೆ ಆನಂದಪಾಲನು ದೊಡ್ಡ ಪ್ರಯತ್ನವನ್ನೇ ಮಾಡಬೇಕೆಂದೆಣಿಸಿ ನೆರೆಹೊರೆಯ ರಾಜರ ಬಳಿಗೆ ದೂತರನ್ನು ಕಳುಹಿಸಿದನು. ಸುಖಪಾಲನನ್ನು ನಿರ್ಬಂಧದಲ್ಲಿಟ್ಟಮೇಲೆ 1008ರಲ್ಲಿ ಮಹಮ್ಮೂದನು ಆನಂದಪಾಲನೊಡನೆ ಜಗಳವಾಡಲು ಅಣಿಯಾದನು. ಆನಂದಪಾಲನೊಡನೆ ಗಾಹಡವಾಲ, ಚೇದಿ, ತೋಮರ, ಚಾಹುಮಾನಕುಲದ ರಾಜರುಗಳೂ ಸೇರಿಕೊಂಡು ಸೈನ್ಯಗಳನ್ನು ಒಟ್ಟು ಗೂಡಿಸಿದರು. ಚಂದೇಲಕುಲದ **ಗಂಡರಾಜನು** ಆನಂದಪಾಲನಿಗೆ ಬಲಗೈಯಂತಿದ್ದನು. ಒಟ್ಟು ರಾಜಪುತ್ರ ಸೈನ್ಯವು **ವಿಶಾಲದೇವನೆಂಬ** ಪ್ರಸಿದ್ಧ ಶೂರನನ್ನು ದಳಪತಿಯಾಗಿ ಮಾಡಿಕೊಂಡು, ಅಟಕ್ ಬಳಿ ಬಂದಿದ್ದ ಮಹಮ್ಮೂದನ ಸೈನ್ಯವನ್ನು ಕಚ್ಛವೆಂಬ ಮೈದಾನ

**ಅಟಕ್ ಕದನ, 1008**

ದಲ್ಲಿ ಎದುರಿಸಿತು. ಆನಂದಪಾಲನ ಸೈನ್ಯವು ದೊಡ್ಡದಾಗಿದ್ದುದಲ್ಲದೆ ಆ ಪ್ರಾಂತದಲ್ಲಿ ಸಾಹಸಕ್ಕೆ ಹೆಸರಾದ **ಖೊಕ್ರ** (ಗಕ್ಕರ) ಕುಲದವರೂ ತುರುಷ್ಕರ ನೀತಿರಾಹಿತ್ಯವನ್ನು ಕಂಡು ಕೋಪಗೊಂಡು ರಾಜಪುತ್ರ ಶಿಬಿರದಲ್ಲಿ ಸಹಾಯಕ್ಕೆ ಬಂದಿದ್ದರು. ಖೊಕ್ರಕುಲದವರು ರಾಜಪುತ್ರರಂತೆ ಕ್ಷಾತ್ರಯುದ್ಧ ಮಾಡುತ್ತಿರಲಿಲ್ಲ; ತುರುಷ್ಕರಂತೆಯೇ ಯದ್ವಾತದ್ವಾ ಹೊಡೆಯುತಕ್ಕವರಾಗಿದ್ದರು. ಈ ಅಪಾರ ಸೈನ್ಯವನ್ನು ಕಂಡು ಮಹಮ್ಮೂದನ ಎದೆ ಕುಗ್ಗಿತು; ಜಯವನ್ನು ಪಡೆಯುವುದು ಅಸಾಧ್ಯವೆನ್ನಿಸಿತು. ಆದುದರಿಂದ ಮಹಮ್ಮೂದನು ಯುದ್ಧಕ್ಕೆ ಆಸ್ಪದ ಕೊಡದೆ ಕಾಲಹರಣ ಮಾಡುತ್ತ ನಲವತ್ತು ದಿನಗಳವರೆಗೆ ಸುಮ್ಮನಿದ್ದನು. ದಿನೇದಿನೇ ರಾಜಪುತ್ರ ಸೈನ್ಯವು ಹೆಚ್ಚುತ್ತಿತ್ತು; ಅಷ್ಟು ದೊಡ್ಡ ಸೈನ್ಯಕ್ಕೆ ಆಹಾರಾದಿ ಸಾಮಗ್ರಿ ಯೊದಗಲು ಆದ ಕಷ್ಟವೂ ತೊಲಗಿತು. ಏಕೆಂದರೆ ಯುದ್ಧಕ್ಕೆ ಹೊರಟಿದ್ದ ರಾಜಪುತ್ರರ ಪತ್ನಿಯರು ತಮ್ಮ ಆಭರಣಗಳನ್ನು ಮಾರಿ ಹಣವನ್ನೊದಗಿ ಸಿದರು. ತುರುಷ್ಕರು ಸೋಲುವುದು ಖಂಡಿತವೆನಿಸುತ್ತಿತ್ತು.

ಮಹಮ್ಮೂದನು ಯುದ್ಧನಿಪುಣನಾಗಿದ್ದನು. ತಾನೇ ಮುಂದಾಗಿ ರಾಜಪುತ್ರರನ್ನು ತಾಗಿದರೆ ಸೋಲು ನಿಶ್ಚಯವೆಂದು ತಿಳಿದು ತನ್ನ ಸೈನ್ಯ ವನ್ನು ಸಿಬಿರದಲ್ಲಿ ಸ್ಥಿರಗೊಳಿಸಿ ಸಿಬಿರದ ಸುತ್ತಲೂ ಹಳ್ಳಗಳನ್ನು ತೋಡಿಸಿ

ರಾಜಪುತ್ರರೇ ಮುಂದಾಗಲೆಂದು ಸಮಯ ಕಾಯುತ್ತಿದ್ದನು. ಹಿಂದಿನ ಯುದ್ಧಗಳಲ್ಲಿ ಮೊದಲು ಮುಂದಾದಂತೆ ಈಗಲೂ ತುರುಷ್ಕರು ಮುಂದಾದಾರೆಂದು ರಾಜಪುತ್ರರು ಕೆಲವು ದಿನಗಳು ನಿರೀಕ್ಷಿಸಿದರು. ಕಡೆಗೆ ಡಿಸೆಂಬರ್ 31ನೆ ದಿನ ತಾವೇ ಮುಂದಾಗಿ ತುರುಷ್ಕರ ಪಾಳೆಯವನ್ನು ಆಕ್ರಮಿಸಲು ಸನ್ನದ್ಧರಾಗಿ ಹೊರಟರು. 30,000 ಖೊಕ್ರಕುಲಸ್ಥರು ಎಲ್ಲರಿಗಿಂತಲೂ ಮುಂದಾಗಿ ಬರಿಯ ತಲೆಗಳನ್ನೆತ್ತಿಕೊಂಡು ಬರಿಯ ಕಾಲಿನಿಂದ ಹೆಜ್ಜೆ ಹಾಕುತ್ತ ಚಿತ್ರವಿಚಿತ್ರವಾದ ಆಯುಧಗಳನ್ನು ಹಿಡಿದು, ತುರುಷ್ಕ ಪಾಳೆಯದ ಎರಡು ಪಾರ್ಶ್ವಗಳಲ್ಲಿಯೂ ನುಗ್ಗಿ, ಹಳ್ಳಗಳನ್ನು ದಾಟಿಕೊಂಡು ಅನೇಕ ಶತ್ರುಗಳನ್ನು ಧ್ವಂಸಮಾಡಿದರು. ಖೊಕ್ರರ ಏಟನ್ನು ತುರುಷ್ಕರು ತಡೆಯಲಾರದೆ ಹೋದರು. ಆಗ ಮಹಮ್ಮದನು ಹಿಮ್ಮೆಟ್ಟುವ ಆಲೋಚನೆಮಾಡಿ ಅದರಂತೆಯೇ ಆಜ್ಞೆಕೊಡುವುದರಲ್ಲಿದ್ದನು. ಅಷ್ಟರಲ್ಲಿ ಎದುರಿನಲ್ಲಿ ಗಂಭೀರವಾಗಿ ಬರುತ್ತಿದ್ದ ರಾಜಪುತ್ರ ಸೈನ್ಯದಲ್ಲಿ ಬಂಧಭಂಗ ವಾಗಿ ಮಹಾಕೋಲಾಹಲವಾಗುತ್ತಿದ್ದುದು ಕಾಣಿಸಿತು. ಆನಂದಪಾಲ ರಾಜನು ಕುಳಿತಿದ್ದ ಆನೆಯು ಯಾವ ಕಾರಣದಿಂದಲೋ ಚಿತ್ತವೈಕಲ್ಯವನ್ನು ಹೊಂದಿ ಹಿಂದುಮುಂದಾಗಿ ತಿರುಗಿ ಪಕ್ಕದಲ್ಲಿದ್ದ ಭಟರನ್ನೇ ತುಳಿಯುತ್ತ ಘೀಳಿಡುತ್ತ ಹೊರಟಿತು. ಹತ್ತಿರಿದ್ದವರು ಕೂಗಿಕೊಂಡರು. ಆ ಕೂಗನ್ನು ಕೇಳಿ ಸ್ವಲ್ಪ ದೂರದಲ್ಲಿದ್ದವರು ಮಹಾರಾಜನು ಯಾವ ಕಾರಣದಿಂದಲೋ ಹಿಂತಿರುಗಿದನೆಂದು ತಿಳಿದು ತಾವೂ ಹಿಂತಿರುಗಿದರು. ಈ ತಳಮಳವನ್ನು ಕಂಡು ಮಹಮ್ಮದನು ಏನೋ ಅನುಕೂಲವಾದ ಘಟನೆಯು ನಡೆದಿದೆ ಯೆಂದು ತಿಳಿದು ತನ್ನ ರಾವುತರಿಗೆ ನುಗ್ಗಿ ರಾಜಪುತ್ರರಮೇಲೆ ಬೀಳುವಂತೆ ಅಪ್ಪಣೆಮಾಡಿದನು. ಹಿಂತಿರುಗಿದ್ದ ರಾಜಪುತ್ರ ಸೈನ್ಯದ ಹಿಂದುಗಡೆಯಿಂದ ಅಬ್ಬರಿಸುತ್ತ ಬಂದ ತುರುಷ್ಕರ ಮುಂದೆ ರಾಜಪುತ್ರರು ಚದರಿ ದಿಕ್ಕಾಪಾಲಾ ದರು. ಕೆಲಮೈಲಿಗಳವರೆಗೂ ತುರುಷ್ಕರು ಅಟ್ಟಿಸಿಕೊಂಡುಹೋಗಿ 30 ಆನೆಗಳನ್ನೂ ಯಥೇಷ್ಟವಾದ ಕೊಳ್ಳೆಯನ್ನೂ ದೊರಕಿಸಿಕೊಂಡು ಹಿಂತಿರುಗಿ ದರು. ಕ್ಷಾತ್ರಯುದ್ಧದಲ್ಲಿಯೇ ಪರಿಣತರಾಗಿದ್ದ ರಾಜಪುತ್ರರು ಈ ಯುದ್ಧ ದಲ್ಲಿ ಅಸಭ್ಯ ತುರುಷ್ಕರಿಗೆ ಸೋತು, ಅಸಭ್ಯರೆದುರಿಗೆ ತಮ್ಮ ಯುದ್ಧ

ಆನೆಯ ಅವಾಂತರ

ಪಾಂಡಿತ್ಯವು ಅಪ್ರಯೋಜಕವೆಂಬುದನ್ನು ಸ್ಪಷ್ಟಪಡಿಸಿದರು. ತಮ್ಮ ಯುದ್ಧನೀತಿಯೇ ತಮ್ಮ ಪರಾಭವಕ್ಕೆ ಕಾರಣವೆಂಬುದನ್ನೂ, ಆನೆಗಳು ಯುದ್ಧಭೂಮಿಯಲ್ಲಿ ನಷ್ಟಕಾರಕವಾಗಬಹುದೆಂಬುದನ್ನೂ ರಾಜಪುತ್ರರು ತಿಳಿಯದಾದರು. ಆನಂದಪಾಲರಾಜನು ಬಹುಶಃ ಯುದ್ಧಭೂಮಿಯಲ್ಲಿಯೇ ಪ್ರಾಣಗಳನ್ನರ್ಪಿಸಿದನು.

ನಾಗರಕೋಟಿ

ಅನಿರೀಕ್ಷ್ಯವಾಗಿದ್ದ ಜಯಲಾಭವಾದ ಕೂಡಲೆ ಮಹಮ್ಮೂದನಿಗೆ ಪಂಚನದ ಪ್ರಾಂತದಲ್ಲಿ ಅಡ್ಡಿಯಿಲ್ಲದಂತಾಗಿ **ನಾಗರಕೋಟಿ** ಅಥವಾ ಕಾಂಗರಾ ದುರ್ಗದಲ್ಲಿ ಪ್ರಖ್ಯಾತವಾಗಿದ್ದ **ಅಂಬಿಕಾ** ಅಥವಾ **ವಜ್ರೇಶ್ವರೀ ದೇವಾಲಯು**ವನ್ನು ಲೂಟಿಮಾಡುವ ಉದ್ದೇಶವು ಹುಟ್ಟಿತು. ಸೈನ್ಯವೆಲ್ಲವೂ ಯುದ್ಧಕ್ಕೆ ಹೊರಟಿದ್ದುದರಿಂದ ನಾಗರಕೋಟಿಯಲ್ಲಿ ದೇವಾಲಯದ ಅರ್ಚಕರೂ ಕೆಲವರು ಬ್ರಾಹ್ಮಣರೂ ಮಾತ್ರವೇ ಇದ್ದರು. ಮಹಮ್ಮೂದನು ಬಂದು ಕಾಣಿಸಿಕೊಂಡಾಗ ದುರ್ಗದ್ವಾರಗಳನ್ನು ಮುಚ್ಚಿಸಿ ಅವರು ಎರಡು ದಿನಗಳು ತಡೆದು ಕಡೆಗೆ ಸಂಧಿಯನ್ನು ಆಶಿಸಿದರು. ಮೂರನೆ ದಿನ ಬಾಗಿಲುಗಳು ಮಹಮ್ಮೂದನೆದುರಿಗೆ ತೆರೆದವು. ಏಳುಲಕ್ಷ ದೀನಾರಗಳೂ, ಅನೇಕ ಚಿನ್ನ ಬೆಳ್ಳಿ ಪಾತ್ರೆಗಳೂ, 700 ಮಣ ಬಂಗಾರ, 200 ಮಣ ಬಂಗಾರದ ಗಟ್ಟಿಗಳು, 2,000 ಮಣ ಬೆಳ್ಳಿ, 20 ಮಣ ರತ್ನಾಭರಣಗಳೂ ಲಭಿಸಿದವು. ಇವುಗಳನ್ನು ತೆಗೆಸಿಕೊಂಡು ಘಸನಿಯನ್ನು ತಲಪಿದ ಮೇಲೆ ಮಹಮ್ಮೂದನು ತನ್ನ ಅರಮನೆಯ ಅಂಗಳದಲ್ಲಿ ಜಮಖಾನೆಗಳ ಮೇಲೆ ಅವುಗಳನ್ನು ರಾಶಿ ರಾಶಿಗಳಾಗಿಡಿಸಿ ಪ್ರದರ್ಶಿಸಿದನು. ಅಲ್ಲಿಯ ನಿವಾಸಿಗಳು ಅವುಗಳನ್ನು ಕಂಡು ಆಶ್ಚರ್ಯಪಟ್ಟರು. ಫಲಿತಾಂಶವಾಗಿ ಮಹಮ್ಮೂದನ ಸೈನ್ಯದಲ್ಲಿ ಹೆಚ್ಚು ಹೆಚ್ಚಾಗಿ ಲುಂಠನಪ್ರಿಯರು ಬಂದು ಸೇರಿಕೊಂಡರು. ಮರುವರ್ಷ ಮಹಮ್ಮೂದನು ತನ್ನ ರಾಜ್ಯದಲ್ಲಿಯೇ ಘೂರ್ ಪ್ರಾಂತದ ಬಳಿ ತನ್ನ ಅಧಿಕಾರವನ್ನು ಭದ್ರಗೊಳಿಸಿ ಅಲ್ಲಿದ್ದ ಹಿಂದೂ ಜನರನ್ನು ಬಲವಂತದಿಂದ ಇಸ್ಲಾಮಿಾ ಮತಕ್ಕೆ ಸೇರಿಸಿದನು.

ಆನಂದಪಾಲ ರಾಜನು ಸತ್ತಮೇಲೆ ಆತನ ಮಗ **ತ್ರಿಲೋಚನಪಾಲ**ನು ಅಧಿಕಾರಿಯಾದನು. 1010, 1013ಗಳಲ್ಲಿ ಮಹಮ್ಮೂದನು

ದಂಡೆತ್ತಿ ಬಂದಾಗ **ಮಾರ್ಗಲ್ಲ ಕಣಿವೆ**ಯಲ್ಲಿ ತ್ರಿಲೋಚನನು ಎದುರಿಸಿ ಸೋತು ಕಾಶ್ಮೀರದ ಕಡೆಗೆ ಪಲಾಯನಮಾಡಿದನು. ತ್ರಿಲೋಚನನ ಮಗ **ಭೀಮಪಾಲನು** ತಂದೆಯ ಪರವಾಗಿ ಯುದ್ಧಕ್ಕೆ ನಿಂತನು.

ತ್ರಿಲೋಚನಪಾಲ

**ನಂದನಕೋಟೆ**ಯ ಬಳಿ ಮಹಮ್ಮೂದನೊಡನೆ ಯುದ್ಧ ನಡೆಯಿತು; ಭೀಮನು ಅತಿಪರಾಕ್ರಮದಿಂದ ಯುದ್ಧಮಾಡಿದರೂ ಜಯಲಾಭವಾಗಲಿಲ್ಲ. ಯುದ್ಧಭೂಮಿಯನ್ನು ಬಿಟ್ಟು ವನಪ್ರದೇಶದಲ್ಲಿ ಹೊಕ್ಕಿರಬೇಕಾಯಿತು. ಅವನನ್ನು ಹುಡುಕಿ ಹಿಡಿತರಲು ಹೊರಟ ತುರುಷ್ಕರಿಗೆ ಅವನ ವಸ್ತುವಾಹನಗಳು ದೊರೆತವು; ಆತನು ಮಾತ್ರ ಸಿಕ್ಕಲಿಲ್ಲ. ಗುಲಾಮರ ವ್ಯಾಪಾರವನ್ನೇ ಮಾಡುತ್ತಿದ್ದ ತುರುಷ್ಕರು ಈ ಸಂದರ್ಭದಲ್ಲಿ ಸಿಕ್ಕಿದವರನ್ನೆಲ್ಲ ಗುಲಾಮರನ್ನಾಗಿ ಮಾಡಿ ಘಸನಿಯಲ್ಲಿ ಮಾರಿದರು. ಘಸನಿಯಲ್ಲಿ ಗುಲಾಮರ ಬೆಲೆಯು ಅಗ್ಗವಾಗಿ ಸಾಮಾನ್ಯ ನಿವಾಸಿಯೂ ಗುಲಾಮರನ್ನಿಟ್ಟುಕೊಳ್ಳುವ ಹಾಗಾಯಿತು. ಉತ್ತಮ ಕುಲದಲ್ಲಿ ಹುಟ್ಟಿ ಗೌರವಸ್ಥರಾಗಿ ಬದುಕಿದ್ದ ಗೃಹಸ್ಥರು ಈ ರೀತಿ ಘಸನಿಯಲ್ಲಿ ಗುಲಾಮರಾದರು. ತ್ರಿಲೋಚನಪಾಲನೂ ಭೀಮಪಾಲನೂ ಪುನಃ ಹೇಗಾದರೂ ತುರುಷ್ಕರನ್ನು ತಡೆಯಬೇಕೆಂಬ ಸನ್ನಾಹದಲ್ಲಿ ತೊಡಗಿದರು. **ಜಯಪಾಲ**ನೆಂಬ ರಾಜಕುಮಾರನು ರಾಜ್ಯದಲ್ಲಿದ್ದುಕೊಂಡು ಪ್ರಾಯಶಃ ಕಪ್ಪವನ್ನು ಕೊಡಲೊಪ್ಪಿದನು.

ಮಹಮ್ಮೂದನಿಗೆ ಲೂಟಿಯ ಸವಿಯು ಅನುಭವವಾಗಿ ಪುನಃ ಹೊರಡುವ ಆಸೆಯಿತ್ತು. ಮುಂದೆ ಸ್ಥಾನೇಶ್ವರದಲ್ಲಿದ್ದ ದೇವಾಲಯದ ಮೇಲೆ ದೃಷ್ಟಿಯಿಟ್ಟು 1014ರಲ್ಲಿ ಹೊರಟನು. ಜಯಪಾಲನು ಆ ದೇವಾಲಯದ ಗೋಜಿಗೆ ಹೋಗದಿದ್ದರೆ ವರ್ಷೇ ವರ್ಷೇ 50 ಆನೆಗಳನ್ನು ಕಳುಹುವುದಾಗಿ ಹೇಳಿಕಳುಹಿದನು. ಮಹಮ್ಮೂದನು ಒಪ್ಪದೆ ತನ್ನ ಮಾರ್ಗ ಸೌಖ್ಯವನ್ನು ಬಯಸಿದನು. ಗತ್ಯಂತರವಿಲ್ಲದೆ ಜಯಪಾಲನೊಪ್ಪಿಕೊಂಡನು; ಆದರೆ **ಸ್ಥಾನೇಶ್ವರ ಪ್ರಾಂತ**ದಲ್ಲಿ ಅರಸಾಗಿದ್ದ **ತೋಮರವಂಶದ** ವಿಜಯಪಾಲ ರಾಜನಿಗೆ ಎಚ್ಚರಿಕೆಯ ಮಾತನ್ನು

ವಿಜಯಪಾಲ

ಹೇಳಿಕಳುಹಿದನು. ವಿಜಯಪಾಲನು ಸನ್ನಾಹಕ್ಕೆ ಮೊದಲಿಟ್ಟನು. ಅದನ್ನು ಕೇಳಿ ಮಹಮ್ಮೂದನು ವೇಗವಾಗಿ ಪಂಚನದ ಪ್ರಾಂತದಲ್ಲಿ ಸಂಚರಿಸಿ ಸ್ಥಾನೇಶ್ವರಕ್ಕೆ ಬಂದನು. ಅವನು ವೇಗದಿಂದ ಬಂದ ಕಾರಣದಿಂದ ಅಲ್ಲಿ ಯಾರೂ ಯೋಧರಿರಲಿಲ್ಲ. ಅಲ್ಲಿಯ **ಶ್ರೀಮಂತ ದೇವಾಲಯವು** ಲೂಟಿಯಾಯಿತು; ದೇವಮೂರ್ತಿಗಳು ಚೂರು ಚೂರಾದವು; ಮುಖ್ಯ ಮೂರ್ತಿಯನ್ನು ಮಾತ್ರ ಮಹಮ್ಮೂದನು ಘಸನಿಗೆ ಸಾಗಿಸಿ ಅಲ್ಲಿಯ ಚೌಕದಲ್ಲಿ ಎಲ್ಲರೂ ತುಳಿದಾಡುವಂತೆ ನೆಲದಲ್ಲಿ ಹೂಳಿಸಿದನು.

**ತೌಷೀ ಯುದ್ಧ**

ಅತ್ತ ತ್ರಿಲೋಚನಪಾಲ ರಾಜನೂ, ಯುವರಾಜ ಭೀಮಪಾಲನೂ, ಕಾಶ್ಮೀರದ ತುಂಗರಾಜನೂ ಒಟ್ಟುಗೂಡಿ ಸಜ್ಜಿತರಾಗುತ್ತಿದ್ದರು. ಮಹಮ್ಮೂದನು ಅವರನ್ನು ಅಡಗಿಸಲು ಪ್ರಾಯಶಃ ಅದೇ ವರ್ಷ ಕಾಶ್ಮೀರದ ಕಡೆ ಹೊರಟನು. **ತೌಷೀ** ಎಂಬ ನದಿಯ ದಡದಲ್ಲಿ ಎರಡು ಪಕ್ಷಗಳಿಗೂ ಘೋರ ಯುದ್ಧವಾಯಿತು. ಸೈನ್ಯ ಚಾಲನದಲ್ಲಿ ನಿಪುಣನಾದ ಮಹಮ್ಮೂದನೇ ಪ್ರಯಾಸದಿಂದ ಜಯವನ್ನು ಪಡೆದನು. ತ್ರಿಲೋಚನನು ಯುದ್ಧಭೂಮಿಯಲ್ಲಿ ತನ್ನ ಕಳೇಬರವನ್ನು ಅರ್ಪಿಸಿದನು. ಭೀಮಪಾಲನು ಖಿನ್ನನಾಗಿ ರಾಜ್ಯವನ್ನು ಕಳೆದುಕೊಂಡು ಪಾಂಚಾಲಾದಿ ದೇಶಗಳ ರಾಜರಲ್ಲಿಗೆ ಹೋಗಿ ತುರುಷ್ಕರ ಬಲವನ್ನು ಮುರಿಯಲು ಸಹಾಯ ಕೇಳುತ್ತಿದ್ದು, ಕಡೆಗೆ ಕನೂಜಿನ ಬಳಿ ತುರುಷ್ಕರೊಡನೆ ಯುದ್ಧಮಾಡುತ್ತ ಪ್ರಾಣಗಳನ್ನರ್ಪಿಸಿದನು.

**ಪ್ರತೀಹಾರಿ ಆದರ್ಶ**

**ಮೋಹಿಯಾಲ** ಕುಲದವರಾದ ಈ ನಾಲ್ವರು ರಾಜರು ನಿತ್ಯ ಸ್ಮರಣೀಯರಾಗಿದ್ದಾರೆ. ನಾಲ್ವರೂ ಯುದ್ಧಗಳಲ್ಲಿಯೇ ತೊಡಗಿದ್ದು ಪ್ರಾಣಗಳನ್ನು ದೇಶರಕ್ಷಣೆಗೆ ಆಹುತಿಮಾಡಿದರು. ಅವರ ಪ್ರಯತ್ನವು ಫಲಪ್ರದಾಯಕವಾಗದಿದ್ದರೂ ಅವರು ದೇಶ ರಕ್ಷಣೆಯಲ್ಲಿ ತೋರಿದ ಶ್ರದ್ಧೆಯೂ ಆತ್ಮಬಲಿಯೂ ಆದರ್ಶಪ್ರಾಯವಾಗಿವೆ. ಅವರ ತರುವಾಯ ಪಂಚನದ ಪ್ರಾಂತವು ತುರುಷ್ಕರ ಪಾಲೇ ಆಯಿತು. ಘಸನೀ ಸುಲ್ತಾನನ ಅಧಿಕಾರಿಗಳೇ ಪಂಜಾಬಿನಲ್ಲಿ ಆಳುತ್ತಿದ್ದರು.

## ಪ್ರಸಿದ್ಧ ರಾಷ್ಟ್ರಗಳು (1030–1200)

ಭೀಮಪಾಲ

1014ರಲ್ಲಿ ತೌಷೀ ನದಿಯ ಯುದ್ಧವಾದ ಮೇಲೆ ಘಸನೀ ಮಹಮ್ಮೂದನು ಸ್ವರಾಜ್ಯದಲ್ಲಿಯೇ ಉಳಿದು ಕೊಂಡು ಖುರಾಸಾನ್ ಪ್ರಾಂತವನ್ನು ರೂಢಿಗೊಳಿಸುವುದರಲ್ಲಿದ್ದನು. ಲೋಹರಕುಲದ ರಾಜರು ಒದಗಿದ್ದ ಗಂಡವು ಕಳೆಯಿತೆಂದು ಭೀಮಪಾಲನ ಕೈಬಿಟ್ಟರು. ಭೀಮಪಾಲನು ಪಂಚನದ ಪ್ರಾಂತವು ಅಸ್ತವ್ಯಸ್ತವಾದುದನ್ನು ಕಂಡು ಇತರ ಭೂಪಾಲರನ್ನು ಒಟ್ಟುಗೂಡಿಸುವ ಪ್ರಯತ್ನದಲ್ಲಿ ತೊಡಗಿದನು. ಆ ಇತರರು ತಮ್ಮ ರಾಜ್ಯಗಳಿಗೆ ವಿಪತ್ತಿಲ್ಲವೆಂದುಕೊಂಡು ಭೀಮನಿಗೆ ನೆರವಾಗಲು ಉತ್ಸಾಹವನ್ನು ತೋರದೆ ಇದ್ದುಬಿಟ್ಟರು. ಹೀಗಿರಲು ಘಸನೀ ಮಹಮ್ಮೂದನು 1018ರಲ್ಲಿ ಪುನಃ ದಾಳಿ ಹೊರಡಲು ಸಿದ್ಧನಾದನು. ಕಾಶ್ಮೀರದ ಲೋಹರ ರಾಜನು ಭಯದಿಂದಲೋ ಹೇಡಿತನದಿಂದಲೋ ಮಹಮ್ಮೂದನಿಗೆ ಸಹಾಯಮಾಡಲು ಸಿದ್ಧನಾದನು. ಒಂದು ಲಕ್ಷ ರಾವುತರನ್ನೂ ಇಪ್ಪತ್ತು ಸಾವಿರ ಲುಂಠನಕಾರಿಗಳನ್ನೂ ಕಟ್ಟಿಕೊಂಡು ಅಮೀರನು ಲೋಹರರಾಜನ ಸಹಾಯದಿಂದ ಸುಲಭವಾಗಿ ಪಂಚನದ ಪ್ರದೇಶದಲ್ಲಿ ಸಂಚರಿಸಿ, ಯಮುನಾ ನದಿಯನ್ನು ದಾಟಿ, ಢಿಲ್ಲಿಕಾ ನಗರವನ್ನು ಸಮೀಪಿಸದೆ ದಕ್ಷಿಣಕ್ಕೆ ಹೊರಟನು. ಈಸಲ ಮಹಮ್ಮೂದನು ಮಥುರೆಯನ್ನೂ ಕನ್ಯಾಕುಬ್ಜವನ್ನೂ ಕೊಳ್ಳೆಹೊಡೆಯಬೇಕೆಂದಿದ್ದನು.

ಹರದತ್ತ

ಢಿಲ್ಲಿಕಾ ನಗರಿಯಲ್ಲಿದ್ದ ಚಾಹುಮಾನ ಕುಲದ ರಾಜನು ಇತ್ತ ಗಮನವನ್ನೇ ಕೊಡದೆ ಇದ್ದನು. ಮಹಮ್ಮೂದನು ಅಕಸ್ಮಾತ್ತಾಗಿ **ವರಣ** ಕೋಟೆಯನ್ನು ಸಮೀಪಿಸಿದಾಗ ಅಲ್ಲಿ ಅಧಿಪತಿಯಾಗಿದ್ದ **ಹರದತ್ತ**ನೆಂಬ ಕ್ಷುದ್ರರಾಜನು ದುರ್ಗವನ್ನು ಬಿಟ್ಟೋಡಿಹೋದನು. ಅಲ್ಲಿ ಉಳಿದಿದ್ದವರು ಅನೇಕ ಧನವನ್ನೂ, 30 ಆನೆಗಳನ್ನೂ ಒಪ್ಪಿಸಿ ಪ್ರಾಣಗಳನ್ನುಳಿಸಿಕೊಂಡರು. ಅದನ್ನು ತಿಳಿದು ಹರದತ್ತನು ಹಿಂತಿರುಗಿ ಬಂದು ಪರಿಹಾರ ಕುಲದವರಲ್ಲಿ ಅಸೂಯೆಯಿಂದ ಅಮೀರನ ಪಕ್ಷವನ್ನು ಸೇರಿಕೊಳ್ಳುವುದೇ

ಲೇಸೆಂದು ಚಿಂತಿಸಿ, ಹತ್ತು ಸಾವಿರ ಅನುಚರರೊಡಗೂಡಿ ಮುಸಲ್ಮಾನೀ ಧರ್ಮವನ್ನು ಸೇರಿದನು. ಮಹಮ್ಮದನ ಉದ್ದೇಶಕ್ಕೆ ಇದು ಸಹಕಾರಿಯೇ ಆಯಿತು. ಮುಂದೆ ಮಹಮ್ಮೂದನು **ಮಹಾಬನಕ್ಕೆ** ಹೊರಟನು. ಅಲ್ಲಿ ಅಧಿಪತಿಯಾಗಿ **ಕುಲಚಂದ್ರ**ನೆಂಬ ರಾಜಪುತ್ರನಿದ್ದನು. ಕುಲಚಂದ್ರನು ಸೈನ್ಯವನ್ನು ಸಿಲ್ಲಿಸಿ ಯುದ್ಧಮಾಡಿ ಸೋತನು; ಆಗ ಆತನು ದೈವಲೀಲೆಯೆಂದುಕೊಂಡು ತನ್ನ ಪತ್ನಿಯನ್ನೂ ಪುತ್ರನನ್ನೂ ಮೊದಲು ಸಂಹರಿಸಿ ತಾನು ಅಗ್ನಿಪ್ರವೇಶಮಾಡಿದನು. ಅಲ್ಲಿ ಹೇರಳವಾದ ಧನವೂ ಎಂಭತ್ತಾನೆಗಳೂ ಅಮೀರನಿಗೆ ವಶವಾದವು. ಅಲ್ಲಿಂದ ಮುಂದಿದ್ದುದು ಪುಣ್ಯಕ್ಷೇತ್ರವಾದ **ಮಥುರಾನಗರ.** ಅಲ್ಲಿ ಬಲವಾದ ಕೋಟೆಯಿತ್ತು; ಢಿಲ್ಲಿಕಾ ನಗರದ ರಾಜನಿಗೆ ಸೇರಿತ್ತು. ಆದರೂ ಅದರ ರಕ್ಷಣೆಗೆ ಯೋಗ್ಯವಾದ ಏರ್ಪಾಟಿರಲಿಲ್ಲ. ನಿರಾತಂಕವಾಗಿ ತುರುಷ್ಕರು ಆ ಪಟ್ಟಣವನ್ನು ಲೂಟಿಮಾಡಿ ದೇವಾಲಯಗಳನ್ನು ಧ್ವಂಸಮಾಡಿದರು. 16 ಪೌಂಡು ತೂಕವುಳ್ಳ ಒಂದು ಮರಕತವು ಅಲ್ಲಿ ಅಮೀರನಿಗೆ ಸಿಕ್ಕಿತಂತೆ; 548 ಪೌಂಡುಗಳಷ್ಟು ಚಿನ್ನವೂ, ಐದಡಿ ಪ್ರಮಾಣವುಳ್ಳ ಐದು ಚಿನ್ನದ ಮೂರ್ತಿಗಳೂ ದೊರಕಿದವಂತೆ.

**ಪರಿಹಾರ ರಾಜ್ಯಪಾಲ**

ಕನ್ಯಾಕುಬ್ಜದಲ್ಲಿ ಈ ಸಮಯದಲ್ಲಿ **ರಾಜ್ಯಪಾಲ**ನೆಂಬಾತನು ರಾಜನಾಗಿದ್ದನು. ಅಸಂಖ್ಯಾತವಾದ ಸೈನ್ಯವನ್ನೆತ್ತಿಕೊಂಡು ಅಮೀರನು ಬರುವನೆಂಬ ಸುದ್ದಿಯನ್ನು ಕೇಳಿ ಈ ಹೇಡಿ ರಾಜನು ಪಲಾಯನ ಪರನಾದನು. ಏಳು ಸುತ್ತಿನ ಕೋಟೆಯನ್ನುಳ್ಳದಾಗಿ ಧನಾಢ್ಯವಾಗಿದ್ದ ಕನ್ಯಾಕುಬ್ಜವು ಒಂದು ದಿನದಲ್ಲಿ ಅಮೀರನಿಗೆ ವಶವಾಯಿತು. ಅಮೀರನು ಪಟ್ಟಣವನ್ನಾಕ್ರಮಿಸಿಕೊಂಡ ಮೇಲೆ ರಾಜ್ಯಪಾಲನು ದೀನನಾಗಿ ಕಾಣಿಸಿಕೊಂಡು, ಅನೇಕ ಧನಕನಕ ವಸ್ತುಗಳನ್ನೂ ರತ್ನಾಭರಣಗಳನ್ನೂ ಒಪ್ಪಿಸಿ ರಾಜ್ಯವನ್ನುಳಿಸಿಕೊಡಬೇಕೆಂದು ಬೇಡಿದನು. ಸಾಕಾದಷ್ಟು ಕೊಳ್ಳೆಯನ್ನು ದೊರಕಿಸಿಕೊಂಡ ತರುವಾಯ ಮಹಮ್ಮೂದನು ರಾಜ್ಯಪಾಲನನ್ನು ಕನ್ಯಾಕುಬ್ಜದಲ್ಲಿ ನಿಯೋಗಿಸಿ, ಮುಂದೆ **ಮನ್ನೈಚ್, ಅಶನಿ, ಶರ್ವ** ದುರ್ಗಗಳನ್ನು ಒಂದೊಂದಾಗಿ ಹಿಡಿದು ಕೊಳ್ಳೆಹೊಡೆದನು. ಮನ್ನೈಚ್

ದುರ್ಗದವರು ಕೈಲಾದಷ್ಟು ಯುದ್ಧವನ್ನು ಮಾಡಿ ಕಡೆಗೆ ಜೋಹಾರ ವ್ರತವನ್ನು ಮಾಡಿದರು. ಅಶನಿದುರ್ಗದ ಚಂದೇಲಭೋರನೆಂಬಾತನು ಪಲಾಯನಮಾಡಿದನು. ಶರ್ವದುರ್ಗದ ರಾಜನು ರಾಜ್ಯಪಾಲನನ್ನನುಕರಿಸಿ ದುರ್ಗವನ್ನು ಬಿಟ್ಟು ಅರಣ್ಯಪ್ರಾಂತಕ್ಕೋಡಿದನು. ಮುಹಮ್ಮದನು ಅವನ ಬೆನ್ನಟ್ಟಿ ರಾತ್ರಿವೇಳೆಯಲ್ಲಿ ಹಟಾತ್ತಾಗಿ ಅವನ ಮೇಲೆ ಬಿದ್ದು ಸೋಲಿಸಿ, ವಿಶೇಷವಾದ ಧನವನ್ನೂ ಆಭರಣಗಳನ್ನೂ ಅಸಂಖ್ಯಾಕ ಸೆರೆಯಾಳುಗಳನ್ನೂ ಗ್ರಹಿಸಿದನು. ಈ ಜಯಗಳಿಂದಲೂ ಧನ ಸಂಚಯದಿಂದಲೂ ತೃಪ್ತನಾಗಿ ಮುಹಮ್ಮದನು ಹಿಂತಿರುಗಿದನು.

ರಾಜ್ಯಪಾಲನ ದಂಡನೆ

ಯುದ್ಧಮಾಡಿ ಮರಣವನ್ನಿದಿರುಗೊಳ್ಳದೆ ಹೇಡಿತನವನ್ನು ತೋರಿದ ರಾಜ್ಯಪಾಲನ ಪ್ರವರ್ತನೆಯಿಂದ ರಾಜಪುತ್ರರೆಲ್ಲರಿಗೂ ಅವಮಾನವಾಯಿತು. ಕನ್ಯಾಕುಬ್ಜದ ಗೂರ್ಜರ ವಂಶದವರಲ್ಲಿ ವೈರ ಬೆಳೆಸಿಕೊಂಡಿದ್ದ ಚಂದೇಲಕುಲದ **ಗಂಡರಾಜ**ನಿಗೆ ರೋಷವು ಹುಟ್ಟಿತು. ಗಂಡರಾಜನು ಪಂಚನದ ಪ್ರದೇಶದಲ್ಲಿ ಆತ್ಮಯಜ್ಞಮಾಡಿದ ಜಯಪಾಲನೊಡನೆ ಸೇರಿಕೊಂಡು ಯುದ್ಧಮಾಡಿದ್ದ ಧಂಗರಾಜನ ಮಗನಾಗಿದ್ದನು; ಮತ್ತು ತಾನೇ ಆನಂದಪಾಲನೊಡನೆ ಸೇರಿ ಹಿಂದೆ ಅಮೀರನೊಡನೆ ಅಟಕ ಬಳಿ ಯುದ್ಧಮಾಡಿದ್ದನು. ಆತನ ಆಶ್ರಯದಲ್ಲಿ ಪ್ರತಿಹಾರ ವಂಶದ ಭೀಮಪಾಲನೂ ಇದ್ದನು. ಇಬ್ಬರಿಗೂ ಕ್ರೋಧವೇರಿ ಕ್ಷತ್ರಿಯ ಕುಲಕ್ಕೆ ಕಳಂಕ ತಂದಿಟ್ಟ ರಾಜ್ಯಪಾಲನನ್ನು ದಂಡಿಸಲು ಸಂಕಲ್ಪಮಾಡಿಕೊಂಡು 1019–20ರಲ್ಲಿ ರಾಜ್ಯಪಾಲನನ್ನು ಯುದ್ಧಕ್ಕೆ ಕರೆದು ಚೆನ್ನಾಗಿ ಸೋಲಿಸಿ ಸಂಹರಿಸಿಬಿಟ್ಟರು. ಕನ್ಯಾಕುಬ್ಜದಲ್ಲಿ ರಾಜ್ಯಪಾಲನ ಮಗ ತ್ರಿಲೋಚನಪಾಲನೆಂಬುವನಿಗೆ ಪಟ್ಟಕಟ್ಟಿದರು.

ಗಂಡರಾಜ

ಈ ಸಮಾಚಾರವನ್ನು ತಿಳಿದು ಮುಹಮ್ಮದನು ಇವರನ್ನು ಮುರಿಯದಿದ್ದರೆ ತನಗೆ ಕೇಡಾಗುವುದೆಂದು ಯೋಚಿಸಿ ದಂಡನ್ನು ಕೂಡಿಸಿದನು. ಭೀಮಪಾಲನೂ ಗಂಡರಾಜನೂ ಇದನ್ನು ನಿರೀಕ್ಷಿಸಿಯೇ ಇದ್ದರು. ಭೀಮಪಾಲನು ಸಿಂಧು ನದೀತೀರದಲ್ಲಿ ಯುದ್ಧಕ್ಕೆ ಪ್ರಯತ್ನ

ಮಾಡಿದರೆ ಸಹಾಯವೊದಗಲಾರದೆಂದು ಚಿಂತಿಸಿ ಯಮುನಾ ನದಿಯ ಬಳಿಯಲ್ಲಿಯೇ ಸನ್ನದ್ಧನಾದನು. ಮಹಮ್ಮದನು ಅಲ್ಲಿಗೆ ಬರುವ ವೇಳೆಗೆ ಯಮುನೆಯಲ್ಲಿ ಪ್ರಚಂಡ ಪ್ರವಾಹವು ಹರಿಯುತ್ತಿತ್ತು. ಅಮೀರನಿಗೆ ಈಸಲ ನಿಜವಾಗಿ ಚಿಂತೆಯು ಮನಸ್ಸಿನಲ್ಲಿ ಹುಟ್ಟಿತು. ಪ್ರವಾಹವನ್ನು ದಾಟುವುದು ಹೇಗೆ, ಎದುರಿಗೆ ಸಿದ್ಧನಾಗಿದ್ದ ಭೀಮಪಾಲನನ್ನು ಗೆಲ್ಲುವುದು ಹೇಗೆ ಎಂದು ಚಿಂತಿಸುತ್ತ ಪ್ರಮಾದಕ್ಕೆಡೆಗೊಡಬಾರದೆಂದು ಅಮೀರನು ಯಾರೂ ನದಿಯನ್ನು ದಾಟಕೂಡದೆಂದು ಆಜ್ಞೆ ಕೊಟ್ಟನು. ರಾಜಪುತ್ರ ಸೈನ್ಯವೇ ತನ್ನನ್ನು ಆಕ್ರಮಿಸಿದರೆ ಸೋಲಾಗುವುದೆಂಬ ಭೀತಿಯು ಅಮೀರನ ಮನಸ್ಸಿನಲ್ಲಿತ್ತು. ಆದರೆ ಆತನ ಕಟ್ಟಾಜ್ಞೆಯನ್ನುಲ್ಲಂಘಿಸಿ ಕೆಲವರು ಸಾಹಸಿಗಳು ನದಿಯನ್ನು ದಾಟಿ ರಾಜಪುತ್ರರನ್ನು ತಾಗಿದರು. ಶತ್ರುಗಳು ನದಿಯನ್ನು ದಾಟಲಾರರೆಂದಿದ್ದ ರಾಜಪುತ್ರರು ವಿಸ್ಮಿತರಾಗಿಬಿಟ್ಟರು; ಯುದ್ಧಮಾಡುವುದನ್ನು ಬಿಟ್ಟು ಸ್ವಲ್ಪ ಯುದ್ಧಮಾಡಿ ಹಿಮ್ಮೆಟ್ಟಿದರು. ಆ ತುರುಷ್ಕ ಸಾಹಸಿಗಳು ಮುಂದೆ ನುಗ್ಗಿದರು. ಮಹಮ್ಮದನೂ ನದಿಯನ್ನು ದಾಟಿ ಅವರನ್ನು ಕಲೆತುಕೊಂಡನು.

ಯಮುನಾತೀರ

ಯಮುನಾ ನದಿಯ ಬಳಿ ಇದ್ದುದು ರಾಜಪುತ್ರ ಸೈನ್ಯದ ಅಗ್ರಮಾತ್ರ. ಪ್ರಧಾನ ಸೈನ್ಯವು ಗಂಡರಾಜನ ನಾಯಕತ್ವದಲ್ಲಿ **ಸಾಯ್** ಎಂಬ ನದಿಯ ತೀರದಲ್ಲಿ ಸಿಬಿರ ಮಾಡಿತ್ತು. ಮಹಮ್ಮದನು ಅಲ್ಲಿಗೆ ಬಂದು, ಶತ್ರುಸಮೂಹದಲ್ಲಿ 36,000 ರಾವುತರೂ 105,000 ಪದಾತಿಗಳೂ, 640 ಆನೆಗಳೂ ನೆರೆದಿದ್ದುದನ್ನು ನೋಡಿ ಎದೆಗೆಟ್ಟನು. ಹಿಂದೆ ಮಾಡಿದಂತೆ ದೇವರಿಗೆ ಪ್ರಾರ್ಥನೆಮಾಡಿ ಯುದ್ಧಕ್ಕೆ ಸಿದ್ಧನಾದನು. ರಾತ್ರಿ ವೇಳೆಯಲ್ಲಿ ರಾಜಪುತ್ರ ಪಾಳೆಯದಲ್ಲಿ ಏನು ವಿಚಿತ್ರ ವ್ಯಾಪಾರ ನಡೆಯಿತೋ ಏನೋ ಮರುದಿವಸ ಯುದ್ಧವಾರಂಭವಾಗುವುದರಲ್ಲಿಯೇ ಗಂಡರಾಜನು ಭ್ರಾಂತನಾಗಿ ಕೆಲವರು ಅಂಗರಕ್ಷಕರೊಡನೆ ಯುದ್ಧಭೂಮಿಯನ್ನು ಬಿಟ್ಟು ಹೊರಟುಹೋದನು. ಉಳಿದ ದಂಡನಾಯಕರಿಗೂ ಸೈನ್ಯಭಟರಿಗೂ ಏನಾಯಿತೆಂದು ತಿಳಿಯದೆ ಭಯ ಭ್ರಾಂತಿಗಳು

ಕೌತುಕ

ಸಾಂಕ್ರಾಮಿಕವಾಗಿ ತೋರಿದವು. ಕೋಲಾಹಲವನ್ನು ನೋಡಿ ಇದೇನೋ ಶತ್ರುಗಳ ಉಪಾಯವೆಂದು ಮಹಮ್ಮೂದನು ಸ್ವಲ್ಪಕಾಲ ತಟಸ್ಥನಾಗಿದ್ದು, ನಿಜವಾಗಿಯೂ ಶತ್ರುಗಳು ವ್ಯೂಹ ಭ್ರಷ್ಟರಾಗಿದ್ದುದನ್ನು ಮನಗಂಡಮೇಲೆ ಮುಂದೆ ಸೈನ್ಯವನ್ನು ನುಗ್ಗಿಸಿ ಕೊಳ್ಳೆಗೆ ಅಪ್ಪಣೆಯಿತ್ತನು. ಗಂಡರಾಜನ 580 ಆನೆಗಳು ವಶವಾದವು. ತರುವಾಯ ಮಹಮ್ಮೂದನು ತನ್ನ ಹಿಂದೆ ಶತ್ರುಗಳು ಸಿದ್ಧರಾದಾರೆಂಬ ಚಿಂತೆಯಿಂದ ಈ ಜಯದಿಂದಲೇ ತೃಪ್ತನಾಗಿ ಬೇಗ ಬೇಗ ದಾರಿ ಕಳೆದು ಘಸನಿಯನ್ನು ಸೇರಿಕೊಂಡನು.

**ಕಚ್ಛಪಘಾತ (ಕಚ್ಛವಾಹ) ಕುಲ**

ಭೀಮಪಾಲನೂ ಗಂಡದೇವನೂ ತಮ್ಮ ಪ್ರಯತ್ನವನ್ನಲ್ಲಿಗೇ ನಿಲ್ಲಿಸಲಿಲ್ಲ. ಭೀಮಪಾಲನು ಪಂಚನದ ಪ್ರದೇಶಕ್ಕೆ ಹೊರಟು ಪುನಃ ಬಲವನ್ನು ಕೂಡಿಸುವುದರಲ್ಲಿ ನಿರತನಾದನು. ಗಂಡದೇವನೂ ಕೂಡ ಖಿನ್ನನಾದಾಗ್ಯೂ ತನ್ನ ದುರ್ಗಗಳನ್ನು ಭದ್ರಗೊಳಿಸುವುದಕ್ಕೆ ತೊಡಗಿದನು. ಆಕಸ್ಮಿಕವಾದ ಜಯದಿಂದ ತೃಪ್ತನಾಗಿರುವುದು ಕ್ಷೇಮಕರವಲ್ಲವೆಂದು ಅಮೀರನು 1022ರಲ್ಲಿ ಭೀಮಪಾಲನನ್ನು ದಂಡಿಸುವ ಉದ್ದೇಶದಿಂದ ಹೊರಟು ಪಂಚನದವನ್ನು ಪ್ರವೇಶಿಸಿ ಲಾಹೋರನ್ನು ಮುತ್ತದೆ ಸುತ್ತಮುತ್ತಲಲ್ಲಿ ಕೊಳ್ಳೆಹೊಡೆಯುತ್ತ ಲಾಹೋರಿನೊಳಗಿದ್ದ ಭೀಮನಿಗೆ ಆಹಾರವಿಲ್ಲದಂತೆ ಮಾಡಿದನು. ಗತ್ಯಂತರವಿಲ್ಲದೆ ಭೀಮನು ಕೋಟೆಯಿಂದ ತಪ್ಪಿಸಿಕೊಂಡು ಆಜ್ಮೀರಿಗೆ ಹೋಗಿ ಅಲ್ಲಿಯ ಚಾಹುಮಾನ ರಾಜನ ಆಶ್ರಯವನ್ನು ಸೇರಿಕೊಂಡನು. ತರುವಾಯ ಅಮೀರನು ಗಂಡ ರಾಜನ ಮೇಲೆ ಹೊರಟನು. ಯಮುನಾ ನದಿಯನ್ನು ದಾಟಿದ ಕೂಡಲೆ **ಗ್ವಾಲಿಯರ್** (ಗೋಪಗಿರಿ) ಕೋಟೆಯನ್ನು ಸಮೀಪಿಸಿದನು; ಏಕೆಂದರೆ ಅಲ್ಲಿ ಕಚ್ಛಪಘಾತ ಕುಲದ ರಾಜನೊಬ್ಬನು ದುರ್ಗದಲ್ಲಿ ಪ್ರಬಲನಾಗಿ ಯುದ್ಧಕ್ಕೆ ಸಿದ್ಧನಾಗಿದ್ದನು. ಮುತ್ತಿಗೆಯು ಮೊದಲಾಯಿತು; ರಾಜಪುತ್ರನು ಸೋಲಲಿಲ್ಲ. ಆತುರದಲ್ಲಿದ್ದ ಅಮೀರನು 35 ಆನೆಗಳನ್ನು ಮಾತ್ರ ಕೊಟ್ಟರೆ ತಾನು ಹೊರಟುಹೋಗುವುದಾಗಿ ತಿಳಿಸಲು ಆ ರಾಜನು ಮ್ಲೇಚ್ಛನು ತೊಲಗಿಹೋಗಲೆಂದು ಆನೆಗಳನ್ನು ಕಳುಹಿಸಿದನು. ಕೂಡಲೆ ಮಹಮ್ಮೂದನು ಹಿಂತಿರುಗದೆ **ಕಾಲಂಜರ** ದುರ್ಗದ ಮಾರ್ಗವನ್ನು

ಹಿಡಿದನು. ಗಂಡರಾಜನು ದುರ್ಗ ರಕ್ಷಣೆಗೆ ಸಿದ್ಧನಾದನು. ಮುತ್ತಿಗೆಯು ಕೆಲಕಾಲ ನಡೆಯಿತು. ಕಡೆಗೆ ಮಹಮ್ಮೂದನ ಬಲವೇ ಅಧಿಕವೆಂದು ಒಪ್ಪಿಕೊಂಡು ಗಂಡರಾಜನು ಮುನ್ನೂರು ಆನೆಗಳನ್ನು ಕೊಟ್ಟನು. ಮಹಮ್ಮೂದನು ತೃಪ್ತಿಯನ್ನೂ ಸಮಾಧಾನವನ್ನೂ ವ್ಯಕ್ತಪಡಿಸಿ ಗಂಡ ರಾಜನ ರಾಜ್ಯಾಧಿಕಾರವನ್ನು ಮನ್ನಿಸಿ ಹಿಂತಿರುಗಿದನು. 1022ರಲ್ಲಿ ಈ ರೀತಿ ಹಿಂತಿರುಗಿದ ಮೇಲೆ ಮಹಮ್ಮೂದನು ಗಂಗಾ ಯಮುನಾ ನದಿಗಳ ಪ್ರದೇಶಕ್ಕೆ ಪುನಃ ಬರಲಿಲ್ಲ.

**ಗಾಹಡವಾಲ (ಗಹರ್ವಾರ್) ಕುಲ**

ಕನ್ಯಾಕುಬ್ಜದಲ್ಲಿ ಪ್ರತಿಷ್ಠಿತನಾದ ತ್ರಿಲೋಚನಪಾಲನೂ ಅವನ ವಂಶದವರೂ ದುರ್ಬಲರಾಗಿಯೇ ಇದ್ದರು. 1090ರಲ್ಲಿ ರಾಜ್ಯವನ್ನು ಕಳೆದುಕೊಂಡರು. ಆ ವರುಷದಲ್ಲಿ ಗಾಹಡವಾಲ ಕುಲದ **ಚಂದ್ರದೇವ**ನೆಂಬ ಶೂರನು ಕನ್ಯಾಕುಬ್ಜವನ್ನು ಗೆದ್ದು ವಾರಣಾಸಿ, ಅಯೋಧ್ಯೆ, ಢಿಲ್ಲಿಕಾ ನಗರಗಳಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸಿದನು. ಪ್ರಸಿದ್ಧವಾದ ಕನ್ಯಾಕುಬ್ಜವು ಈ ರೀತಿ ಗಾಹಡವಾಲ ಕುಲದವರ ವಶವಾಯಿತು. ಚಂದ್ರದೇವನ ತರುವಾಯ ಆತನ ಮೊಮ್ಮಗ **ಗೋವಿಂದಚಂದ್ರ**ನೆಂಬಾತನು 1114ರಿಂದ 1154ರವರೆಗೆ ಬಹಳ ಧರ್ಮಿಷ್ಠನಾಗಿ 40 ವರ್ಷಗಳಾಳಿದನು. ಆತನ ಮೊಮ್ಮಗನೇ ಪ್ರಸಿದ್ಧನಾದ **ಜಯಚಂದ್ರ**ರಾಜನು.

**ತೋಮರಕುಲ**

**ದಿಲ್ಲಿ** ಅಥವಾ **ಢಿಲ್ಲಿಕಾ** ನಗರವು 993–94ರಲ್ಲಿಯೇ ಸ್ಥಾಪಿತವಾಗಿ **ತೋಮರ ಕುಲದ ಅನಂಗಪಾಲ ರಾಜನ** ವಶವಾಗಿತ್ತು. ಆ ರಾಜನೇ **ಲಾಲ್‌ಕೋಟೆ** ಯೆಂಬ ಪುರಾತನ ಭಾಗವನ್ನು ಕಟ್ಟಿಸಿದ್ದು. ತೋಮರ ಕುಲದವರು ದೇವಾಲಯಗಳನ್ನು ನಿರ್ಮಿಸಿದ್ದಲ್ಲದೆ ಪ್ರಾಯಶಃ ಮಧುರಾ ಪ್ರಾಂತದಲ್ಲಿದ್ದ ಅಶೋಕನ ಸ್ತಂಭವೊಂದನ್ನು ತರಿಸಿ ದಿಲ್ಲಿಯ ಬಾಗಲಿನ ಅಲಂಕಾರವಾಗಿಡಿಸಿದರು. ತೋಮರ ಕುಲದವರು 12ನೆ ಶತಮಾನದ ಮಧ್ಯಭಾಗದಲ್ಲಿ ರಾಜ್ಯವನ್ನು ಕಳೆದುಕೊಂಡರು; **ಚಾಹುಮಾನ** ಅಥವಾ **ಚೌಹಾನ** ಕುಲದ ರಾಜಪುತ್ರರು ದಿಲ್ಲಿಯ ಅಧಿಪತಿ

ಗಳಾದರು. ಚಾಹುವಮಾನ ಕುಲದವರು ರಾಜಪುತ್ರಸ್ಥಾನದಲ್ಲಿ **ಶಾಕಂಭರೀ**ರಾಜ್ಯವನ್ನು ಕಟ್ಟಿಕೊಂಡಿದ್ದರು. ಅವರಲ್ಲಿ ಹೆಸರುವಾಸಿಯಾದ **ವಿಗ್ರಹರಾಜ** ಅಥವಾ **ವೀಸಲರಾಜ**ನೆಂಬಾತನು ತೋಮರ ಕುಲಸ್ಥರನ್ನು ಸೋಲಿಸಿ ದಿಲ್ಲಿಯನ್ನು ರಾಜ್ಯಕ್ಕೆ ಸೇರಿಸಿದನು. ಅಜ್ಮೀರ್ ದುರ್ಗವು ಈತನಿಗೆ ಸೇರಿತ್ತು. ವಿಗ್ರಹರಾಜನು ಪಂಡಿತರಲ್ಲಿ ಅಭಿಮಾನವುಳ್ಳವನಾಗಿ ಸ್ವತಃ ಕವಿಯಾಗಿದ್ದನು. ಈತನ ತರುವಾಯವೇ ಪಟ್ಟವನ್ನೇರಿದವನು ಪ್ರಸಿದ್ಧ ವೀರನಾದ **ಪೃಥ್ವೀರಾಜ.**

**ಚೇದಿಯ ಹೈಹಯರು**

ಸಾಯ್ ನದೀತೀರದಲ್ಲಿ ಅಜ್ಞಾತ ಕಾರಣಕ್ಕಾಗಿ ಯುದ್ಧಭೂಮಿಯಿಂದ ಕಾಲ್ದೆಗೆದ ಚಂದೇಲ ಗಂಡರಾಜನ ಅಧಿಕಾರವು ಕ್ಷೀಣವೇ ಆಯಿತು. ಘಸನಿಯ ಮಹಮ್ಮೂದನು ಪುನಃ ಆ ದಿಕ್ಕಿಗೆ ಬರಲಿಲ್ಲ; ಗೆದ್ದ ಪ್ರದೇಶಗಳನ್ನು ಪುನಃ ಗೆದ್ದು ರೂಢಿಸಿಕೊಳ್ಳುವುದಕ್ಕೂ ಸಿದ್ಧನಾಗಲಿಲ್ಲ. ಆತನಿಗೆ ಬೇಕಾಗಿದ್ದುದು ಕೊಳ್ಳೆ. ಯಥೇಚ್ಛವಾಗಿ ಕೊಳ್ಳೆಯು ದೊರೆತಮೇಲೆ ಮಹಮ್ಮೂದನಿಗೆ ರಾಜಪುತ್ರಕುಲಗಳನ್ನು ಪುನಃ ರೇಗಿಸಿ ಒಟ್ಟುಗೂಡುವಂತೆ ಮಾಡುವ ಹಟವಿರಲಿಲ್ಲ. ಗಂಡರಾಜನು ರಾಜ್ಯವನ್ನು ಬಲಪಡಿಸಿಕೊಳ್ಳಬಹುದಾಗಿತ್ತು. ಆದರೆ ಅವಮಾನ ಪ್ರಭಾವದಿಂದ ಆತನ ಕೀರ್ತಿಯು ಕುಗ್ಗಿತ್ತು. ಮತ್ತು ಜೆಜಾಕ ಭುಕ್ತಿಯ ಒತ್ತಿನಲ್ಲಿಯೇ ಚೇದಿರಾಜ್ಯವನ್ನು ಆಳುತ್ತ, ರಾಷ್ಟ್ರಕೂಟರ ಸಂಬಂಧವನ್ನು ಕಟ್ಟಿಕೊಂಡು ಇತರ ರಾಜಪುತ್ರ ಕುಲಗಳೊಡನೆ ಹೆಣಗಾಡುತ್ತಲಿದ್ದ ಅಹಿಹಯ (ಹೈಹಯ) ಅಥವಾ ಕಲಚೂರ್ಯ ಕುಲದವರು ಈ ಸಮಯವನ್ನು ಸಾಧಿಸಿದರು. 1015ರಲ್ಲಿ ರಾಜನಾದ ಹೈಹಯ **ಗಾಂಗೇಯದೇವ**ನು ಪಶ್ಚಿಮದಿಕ್ಕಿನ ಅವಾಂತರದಿಂದ ದೂರನಾಗಿಯೇ ಇದ್ದು ತನ್ನ ರಾಜ್ಯವನ್ನು ವಿಸ್ತಾರಪಡಿಸಿಕೊಂಡನು. ಗಂಡರಾಜನ ಅವಮಾನವು ಈತನಿಗೆ ಅನುಕೂಲವಾಯಿತು. ಗಾಂಗೇಯದೇವನ ಮಗ **ಕರ್ಣದೇವ**ನು 1040ರಲ್ಲಿ ಅಭಿಷಿಕ್ತನಾಗಿ ಸಮ್ರಾಟನಾಗಲು ಹವಣಿಸಿದನು. ಧಾರಾನಗರದ ಭೋಜರಾಜನು ಧವಳಕೀರ್ತಿಯುತನಾಗಿದ್ದುದನ್ನು ಕಂಡು ಈತನು ಆತನೊಡನೆ ಸ್ಪರ್ಧಿಸಿ ಸೌರಾಷ್ಟ್ರದ ಭೀಮದೇವನೆಂಬ ಸೋಲಂಕೀಕುಲದ ರಾಜನನ್ನು ತನ್ನ ಪಕ್ಷಕ್ಕೆ ಸೆಳೆದು

ಕೊಂಡನು. ಈ ಭೀಮದೇವನ ಕಾಲದಲ್ಲಿಯೇ (1022–1064) ಸೋಮನಾಥ ದೇವಾಲಯದ ವಿಧ್ವಂಸವು ನಡೆದುದು.

**ಸೋಲಂಕೀ ಭೀಮದೇವ**

ಕಾಠೆವಾಡ ಪರ್ಯಾಯದ್ವೀಪದಲ್ಲಿ **ಪ್ರಭಾಸ ತೀರ್ಥ**ವೆಂದು ಪ್ರಸಿದ್ಧವಾದ ಪುಣ್ಯಕ್ಷೇತ್ರದಲ್ಲಿ **ಸೋಮನಾಥ ದೇವಾಲಯ**ವು ಅದ್ಭುತವಾಗಿದ್ದು ಸುಪ್ರಸಿದ್ಧವಾಗಿತ್ತು. ಅಲ್ಲಿ ಸಾವಿರ ಅರ್ಚಕರಿದ್ದರು; ದೇವಾಲಯಕ್ಕೆ 10,000 ಗ್ರಾಮಗಳು ದತ್ತವಾಗಿದ್ದವು; ಅದರ ಐಶ್ವರ್ಯವು ಅಗಣ್ಯವಾಗಿತ್ತು. ಅದರ ಆಸೆಯಿಂದ ಮಹಮ್ಮೂದನು 1024ರಲ್ಲಿ ಘಸನಿಯಿಂದ ಹೊರಟು ಮೂಲ್ತಾನಿಗೆ ಬಂದು ಮುಂದಿನ ಮರುಭೂಮಿಯನ್ನು ಹಾಯಲು ಮಹತ್ಪ್ರಯತ್ನವನ್ನೇ ಮಾಡಿ **ಅಜ್ಮೀರ**ನ್ನು ತಲಪಿದನು; ಅಲ್ಲಿಯ ರಾಜನು ಕೋಟೆಯನ್ನು ಬಿಟ್ಟೋಡಿಹೋದನು. ಅಜ್ಮೀರನ್ನು ವಶಮಾಡಿಕೊಂಡು ತುರುಷ್ಕರು ಅನಹಿಲ ಪಟ್ಟಣಕ್ಕೆ ಹೊರಟರು. ಅದನ್ನು ತಲಪಿದಾಗ ಸೋಲಂಕೀ ರಾಜನಾಗಿದ್ದ ಭೀಮದೇವನು ದುರ್ಗವನ್ನು ಬಿಟ್ಟು ಹೊರಟುಹೋಗಿದ್ದನು. ಅಲ್ಲಿ ಸಿಕ್ಕಿದ ಸಾಮಗ್ರಿಯನ್ನು ತೆಗೆಸಿಕೊಂಡು ಮಹಮ್ಮೂದನು **ದೇವಲವಾರ**ವೆಂಬಲ್ಲಿಗೆ ಪ್ರಯಾಣಮಾಡುತ್ತ ದಾರಿಯಲ್ಲಿ ಭೀಮದೇವನ ಸೈನ್ಯದೆದುರಾದನು. ಭೀಮದೇವನು ಸಾಹಸದಿಂದ ಯುದ್ಧಮಾಡಿ ಅನೇಕ ತುರುಷ್ಕರನ್ನು ಸಂಹರಿಸಿದರೂ ಜಯಶೀಲನಾಗದೆ ಪಲಾಯನಪರನಾದನು. ತರುವಾಯ ಮಹಮ್ಮೂದನು ಸೋಮನಾಥ ದೇವಾಲಯದ ಮಾರ್ಗದಲ್ಲಿದ್ದ ದೇವಲವಾರವೆಂಬ ಕೋಟೆಯ ಎದುರಿನಲ್ಲಿ ಪ್ರತ್ಯಕ್ಷನಾದನು. ಅಲ್ಲಿಯ ಹಿಂದೂಗಳು ಪಲಾಯನಪರರಾಗದೆ ಪ್ರಾಣಗಳನ್ನರ್ಪಿಸಿದರು. ಮುಂದೆ ಸೋಮನಾಥ ದೇವಾಲಯವೇ ದೊಡ್ಡ ಕೋಟೆಯಂತೆ ತುರುಷ್ಕರಿಗೆ ಗೋಚರವಾಯಿತು.

**ದೇವಾಲಯಧ್ವಂಸ**

ಸಮೀಪಿಸಿದ ಕೂಡಲೆ ತುರುಷ್ಕರನ್ನು ಗೋಡೆಗಳ ಮೇಲೇರಿದ್ದ ಹಿಂದೂಗಳು ಜರೆದಾಡಿದರು. ಮರುದಿವಸ ತುರುಷ್ಕರು ಲಗ್ಗೆ ಹತ್ತಲು ಸಿದ್ಧರಾಗಿ ಬಾಣಗಳ ಮಳೆಯನ್ನು ಕರೆಯುತ್ತ ಗೋಡೆಗಳ ಮೇಲೆ ನಿಂತಿದ್ದವರನ್ನು ಅಲ್ಲಿಂದ ತಪ್ಪಿಸಿ ಏಣಿಗಳನ್ನಿಟ್ಟು ಹತ್ತಿದರು. ಬೀದಿ ಬೀದಿ




ರಾಜಗೋಪಾಲ್ ಫೋಟೋ ಜಿಂಕೊ ಆಫೀಸ್, ಬೆಂಗಳೂರು ಸಿಟಿ

ಯಲ್ಲಿಯೂ ಕೈಕೈ ಯುದ್ಧವು ಹಗಲೆಲ್ಲ ರೇಗಿ ಅನೇಕರು ಹತರಾದರು; ಸಾಯಂಕಾಲವಾಗುವ ವೇಳೆಗೆ ತುರುಷ್ಕರಿಗೆ ಪಟ್ಟಣವಿನ್ನೂ ಸ್ವಾಧೀನ ವಾಗಿರಲಿಲ್ಲವಾದುದರಿಂದ ಅವರು ಹಿಮ್ಮೆಟ್ಟಿ ತಮ್ಮ ಸಿಬಿರವನ್ನು ಸೇರಿ ಕೊಂಡರು. ಬೆಳಗಾಗಲು ಪುನಃ ಹೊರಟು ಯುದ್ಧಕ್ಕೆ ಅಣಿಯಾದರು. ಹಿಂದೂಗಳು ದೇವರ ದರ್ಶನ ಮಾಡಿಕೊಂಡು ತಂಡ ತಂಡವಾಗಿ ಮರಣಕ್ಕೆ ಸಿದ್ಧರಾಗಿ ತುರುಷ್ಕರನ್ನು ಎದುರಿಸಿದರು. ಕೆಲವರು ಸಮುದ್ರಮಾರ್ಗವಾಗಿ ದೋಣಿಗಳಲ್ಲಿ ತಪ್ಪಿಸಿಕೊಳ್ಳಲು ಯತ್ನಿಸಿದರು. ಅದನ್ನು ಮೊದಲೇ ನಿರೀಕ್ಷಿಸಿದ್ದ ಮುಹಮ್ಮದನು ಸಿದ್ಧವಾಗಿಟ್ಟುಕೊಂಡಿದ್ದ ದೋಣಿಗಳಲ್ಲಿ ತುರುಷ್ಕರನ್ನು ಕೊಟ್ಟುಕಳುಹಿಸಿ ಅವರನ್ನು ಹಿಡಿಸಿ ನಾಶಗೊಳಿಸಿದನು. ಎದುರುನಿಂತು ಯುದ್ಧಮಾಡಿದವರೆಲ್ಲರೂ ಮೃತರಾಗಿರಲು ಮುಹಮ್ಮೂದನು ದೇವಾಲಯವನ್ನು ಪ್ರವೇಶಿಸಿ ಅದರ 56 ಸ್ತಂಭಗಳನ್ನೂ ದಿವ್ಯವಾದ ಆಭರಣಗಳನ್ನೂ ಅದ್ಭುತವಾದ ವಿಗ್ರಹವನ್ನೂ ಕಂಡನು. ಎಲ್ಲವೂ ಧ್ವಂಸ ವಾದವು. ಧನಕನಕ ವಸ್ತುಗಳೂ ವಿಗ್ರಹದ ಚೂರುಗಳೂ ತುರುಷ್ಕ ರೊಡನೆ ಸಾಗಿದವು. ವಿಗ್ರಹದ ಚೂರುಗಳನ್ನು ಘಸನಿಯ ಅರಮನೆಯ ಮುಂದೆಯೂ ಮಸೀದಿಯ ಮುಂದೆಯೂ ಮುಹಮ್ಮೂದನು ಮೆಟ್ಟಲು ಗಳಾಗಿ ಉಪಯೋಗಿಸಿದನು.

**ಅಮೀರನ ಯುಕ್ತಿ**

ಧ್ವಂಸವು ಮುಗಿದ ತರುವಾಯ ಭೀಮದೇವನು **ಶಂಖಧರ**ವೆಂಬ ಸ್ಥಳದಲ್ಲಿ ಅಡಗಿರುವನೆಂಬ ಸಮಾಚಾರವು ಮುಹ ಮ್ಮೂದನಿಗೆ ತಿಳಿಯಿತು. ಕೂಡಲೆ ವೇಗವಾಗಿ ಸೈನ್ಯವನ್ನು ನಡೆಸಿಕೊಂಡು ಅಲ್ಲಿಗೆ ಅಮೀರನು ಹೊರಟನು. ಭೀಮದೇವನು ಭ್ರಾಂತನಾಗಿ ವೇಷಧಾರಿಯಾಗಿ ಅಲ್ಲಿಂದ ತಪ್ಪಿಸಿಕೊಂಡನು. ಅಲ್ಲಿ ಸಿಕ್ಕಿದವರನ್ನು ವಧೆಮಾಡಿಸಿ ಮುಹಮ್ಮೂದನು ಅನಹಿಲವಾಡಕ್ಕೆ ಹಿಂತಿರುಗಿ ಅಲ್ಲಿಂದ ಘಸನಿಗೆ ಹೊರಡಲು ಸಿದ್ಧನಾದನು. ಬಂದ ಮಾರ್ಗವನ್ನು ಬಿಟ್ಟು ಬೇರೊಂದು ಮಾರ್ಗವನ್ನು ಹಿಡಿದು ಸಿಂಧು ದೇಶವನ್ನು ಹಾಯ್ದು ಸ್ವಸ್ಥಾನವನ್ನು ಪ್ರಯಾಸದಿಂದ ತಲಪಿದನು. ಹಾಗೆ ಹೊರಡಲು ಕಾರಣವೇನೆಂದರೆ **ಶಾಕಂಭರಿಯ ಚಾಹುಮಾನ ರಾಜ**ನು ಆ ಮಾರ್ಗದಲ್ಲಿ ಮುಹಮ್ಮೂದನ ನಾಶಮಾಡಬೇಕೆಂದು ಸನ್ನದ್ಧ

ನಾಗಿ ಮಾರ್ಗವನ್ನು ಅಡ್ಡಗಟ್ಟಿ ನಿರೀಕ್ಷಿಸುತ್ತಲಿದ್ದನು. ಈ ಗಂಡವನ್ನು ತಪ್ಪಿಸಿಕೊಳ್ಳಲು ಮಹಮ್ಮೂದನು ಮರುಭೂಮಿಯಲ್ಲಿ ಪ್ರಯಾಣ ನಡೆಸಿ ಹಿಂದೂಸ್ಥಾನದ ಎಲ್ಲೆ ದಾಟಿದನು.

ರಾಜಸ್ಪರ್ಧೆ

ಮಹಮ್ಮೂದನ ದಂಡಯಾತ್ರೆಗಳು ಯಾವುದೋ ಒಂದು ದೊಡ್ಡ ಬಿರುಗಾಳಿಯೆದ್ದು ಬೀಸಿಕೊಂಡುಹೋದಂತೆ ಪರಿಣಾಮವಾಯಿತು. ಪಂಚನದ ಪ್ರಾಂತವೊಂದು ಪದೇ ಪದೇ ತುರುಷ್ಕರ ಪದಘಾತಿಗೊಳಗಾಗಿ ಘಸನಿಯ ಅಧಿಕಾರಕ್ಕೊಳಗಾಯಿತು. 1024ರ ತರುವಾಯ ಮಹಮ್ಮೂದನು ಪುನಃ ಹಿಂದೂಸ್ಥಾನದಲ್ಲಿ ಕಾಲಿಡಲಿಲ್ಲ. ದಾಳಿಗಳ ಪರಿಣಾಮವಾಗಿ ಅಪಾರವಾದ ಧನವು ಸೂರೆಯಾಯಿತು. ತುರುಷ್ಕರಿಗೂ ಮುಸಲ್ಮಾನರಿಗೂ ಅಸಭ್ಯರೂ ಕ್ರೂರಿಗಳೂ ಆದ ಮ್ಲೇಚ್ಛರೆಂಬ ಹೆಸರು ಲಭಿಸಿತು. ಬಿರುಗಾಳಿಯು ಮಾಯವಾದ ಕೂಡಲೆ ಮರಗಿಡಗಳು ತಲೆಯೆತ್ತಿಕೊಳ್ಳುವಂತೆ ಹಿಂದೂಸ್ಥಾನದಲ್ಲಿ ರಾಜರು ಪುನಃ ತಮ್ಮ ಆಳ್ವಿಕೆಯಲ್ಲಿಯೂ ಸಾಮ್ರಾಜ್ಯಸ್ಪರ್ಧೆಯಲ್ಲಿಯೂ ತೊಡಗಿದರು. **ಸೋಲಂಕೀ ಭೀಮದೇವ, ಪರಮಾರ ಭೋಜರಾಜ** ಮತ್ತು **ಹೈಹಯ ಕರ್ಣದೇವ**ರ ಸ್ಪರ್ಧೆಯನ್ನು ಆ ದೃಷ್ಟಿಯಿಂದಲೇ ಕಾಣಬೇಕು. ಮಹಮ್ಮೂದನು ಹೊರಟು ಹೋದ ಕೂಡಲೆ ಭೀಮದೇವನು ಪೂರ್ವದಂತೆ ರಾಜ್ಯಭಾರಮಾಡಿ ಧರ್ಮಾತ್ಮನೆಂಬ ಹೆಸರಿಗೆ ಅರ್ಹನೆನಿಸಿದನು. ಸೋಮನಾಥ ದೇವಾಲಯವನ್ನು ಜೀರ್ಣೋದ್ಧಾರಗೊಳಿಸುವ ಯೋಚನೆಮಾಡಿದ್ದಲ್ಲದೆ ಭೀಮದೇವನು **ಅಬು, ಪಲಿತಾನ, ಚಂದ್ರಾವತಿ**ಗಳೆಂಬ ಸ್ಥಳಗಳಲ್ಲಿ ಉತ್ತಮವಾದ ದೇವಮಂದಿರಗಳನ್ನು ನಿರ್ಮಿಸಿದನು.

ತುರುಷ್ಕರ ಸೋಲು

ಪಾಂಚಾಲ ಪ್ರದೇಶದಲ್ಲಿ ಕನ್ಯಾಕುಬ್ಜವನ್ನು ಗೆದ್ದು ಗಂಡದೇವನ ಸೈನ್ಯವನ್ನೂ ಸೋಲಿಸಿದ ತರುವಾಯ ಮಹಮ್ಮೂದನು ಆ ಪ್ರಾಂತದಲ್ಲಿ ಸ್ವಲ್ಪ ತುರುಷ್ಕರ ಸೈನ್ಯವನ್ನು ಇಟ್ಟಿದ್ದನು. ಕ್ರಿ. ಶ. 1030ರಲ್ಲಿ ಮಹಮ್ಮೂದನು ಘಸನಿಯಲ್ಲಿ ಕಾಲವಶನಾದ ತರುವಾಯ ಪಂಚನದ ಕ್ಷೇತ್ರದಲ್ಲಿ ತುರುಷ್ಕ ಅಧಿಕಾರಿಗಳು ಸ್ವತಂತ್ರರಾಗಲು ಪ್ರಯತ್ನಿಸಿದ್ದೇ

ಅಲ್ಲದೆ ಕನ್ಯಾಕುಬ್ಜಪುರಿಯ ಮೂಡಲಲ್ಲಿಯೂ ನುಗ್ಗಿ ಕೊಳ್ಳೆಹೊಡೆಯ ಬೇಕೆಂದು ಹವಣಿಸಿದರು. ಆಗ ಚೇದಿರಾಜನಾದ **ಗಾಂಗೇಯದೇವನು** ಪರಾಕ್ರಮಿಯಾಗಿದ್ದನು. 1040ರಲ್ಲಿ ಈತನು ಪಾಂಚಾಲ ರಾಷ್ಟ್ರದಲ್ಲಿದ್ದ ತುರುಷ್ಕರನ್ನು ಸೋಲಿಸಿ ಯಮುನಾನದಿಯ ಹೊರಗೆ ಅಟ್ಟಿಬಿಟ್ಟನು. ಮಧ್ಯದೇಶವು ಈ ರೀತಿಯಾಗಿ ತುರುಷ್ಕರ ತೊಂದರೆಯಿಂದ ಪಾರಾಯಿತು.

ಪ್ರಖ್ಯಾತ ರಾಜಚತುಷ್ಟಯ

ತುರುಷ್ಕರ ಆಕ್ರಮಣವು ನಿಂತುಹೋದಂತಾಯಿತು. ಆ ಕಾಲದಲ್ಲಿ ಅಜ್ಮೀರದಲ್ಲಿ ಚಾಹುಮಾನ **ವೀಸಲದೇವನೂ**, ಮಾಳವದಲ್ಲಿ ಪರಮಾರ **ಭೋಜರಾಜನೂ**, ಚೇದಿ ರಾಷ್ಟ್ರದಲ್ಲಿ ಹೈಹಯ ಗಾಂಗೇಯದೇವನ ಮಗ **ಕರ್ಣದೇವನೂ** ಆಳುತಲಿದ್ದು ಸೋಲಂಕೀ **ಭೀಮದೇವನ** ಸಮಕಾಲಿಕರಾಗಿದ್ದರು. ತುರುಷ್ಕರಿಂದ ವಿಪತ್ತು ಸಂಭವಿಸಲಾರದೆಂದು ತೋರಿದ ಕೂಡಲೆ ಈ ರಾಜರು ಎಂದಿನಂತೆ ಪರಸ್ಪರ ಸ್ಪರ್ಧೆಗೆ ತೊಡಗಿದರು; ತಮ್ಮ ಆಸ್ಥಾನಗಳಲ್ಲಿ ವೈಭವವನ್ನು ತೋರುವುದರಲ್ಲಿಯೂ ಧರ್ಮಕಾರ್ಯಗಳಲ್ಲಿಯೂ ನಿರತರಾದರು. ಸೋಲಂಕೀ ಭೀಮದೇವನಿಗೂ ಚಾಹುಮಾನ ವೀಸಲದೇವನಿಗೂ ವೈರವಿತ್ತು; ಹೈಹಯ ಕರ್ಣದೇವನಿಗೂ ಪರಮಾರ ಭೋಜರಾಜನಿಗೂ ವೈಷಮ್ಯವಿತ್ತು. ಸೌರಾಷ್ಟ್ರದ ಕಡೆಗೆ 1024ರಲ್ಲಿ ಮಹಮ್ಮೂದನು ಹೊರಟಾಗ ಆತನನ್ನು ವೀಸಲದೇವನೇ ಮೊದಲು ತಡೆಯಬೇಕಾಗಿತ್ತು; ತಡೆಯಬೇಕೆಂದು ಮನಮಾಡಿ ಭೀಮದೇವನ ಸಹಾಯವನ್ನು ಬಯಸಿದನು. ಭೀಮದೇವನು ಸಹಾಯವಾಗದೆ ತಟಸ್ಥನಾಗಿದ್ದು, ಅದರ ಪರಿಣಾಮವನ್ನು ಸೋಮನಾಥ ದೇವಾಲಯದ ಲೂಟಿಯಲ್ಲಿ ಅನುಭವಿಸಿದನು. ವೀಸಲದೇವನು ಮಹಮ್ಮೂದನ ಸರ್ವನಾಶವನ್ನು ಮಾಡಬೇಕೆಂದು ಆತುರನಾಗಿ ಭೋಜರಾಜನ ಸಹಾಯವನ್ನು ಕೇಳಿಕೊಂಡು ಮಹಮ್ಮೂದನು ಸೋಮನಾಥದಿಂದ ಹಿಂತಿರುಗುವ ದಾರಿಯಲ್ಲಿ ಸನ್ನದ್ಧನಾಗಿ ಹೊಂಚಿದನು; ಇದನ್ನರಿತು ಮಹಮ್ಮೂದನು ಆ ದಾರಿಯನ್ನು ತಪ್ಪಿಸಿಕೊಂಡು ಮರುಭೂಮಿಯ ಮಾರ್ಗವನ್ನು ಹಿಡಿದು ಪಾರಾದನು. ವೀಸಲದೇವನು ಭೀಮದೇವನಲ್ಲಿ ವೈರವನ್ನೂ ತಿರಸ್ಕಾರವನ್ನೂ ಮೊದಲಿಗಿಂತಲೂ ಹೆಚ್ಚಾಗಿ ತೋರಿದನು.

ಭೀಮದೇವನು ಆದ ಧನ ನಷ್ಟವನ್ನು ಲೆಕ್ಕಿಸದೆ ಪುನಃ ಎಂದಿನಂತೆ ಆಳ್ವಿಕೆಯನ್ನು ನಡೆಸಿಬಿಟ್ಟನು.

ಕರ್ಣದೇವ

ಈ ರಾಜರಲ್ಲೆಲ್ಲ ಕವಿಕಲ್ಪತರುವೆನಿಸಿದ್ದ ಭೋಜರಾಜನ ಕೀರ್ತಿಯೇ ಅತಿಶಯವಾಗಿದ್ದುದರಿಂದ ಆತನೇ ಶ್ರೇಷ್ಠನೆನಿಸಿದ್ದನು. ಮಾಳವ ರಾಜ್ಯದ ಪಕ್ಕದಲ್ಲಿದ್ದ **ಚೇದಿ ರಾಜ್ಯಾಧಿಪತಿ ಕರ್ಣದೇವ**ನು ಈತನೊಡನೆ ಸ್ಪರ್ಧಿಸುತ್ತ ಸೋಲಂಕೀ ಭೀಮದೇವನ ಸಹಾಯವನ್ನು ಪಡೆದು ಭೋಜರಾಜನ ಮೇಲೆ ಯುದ್ಧಕ್ಕೆ ನಡೆದನು. ಯುದ್ಧದಲ್ಲಿ ಸೋತು ಹೋದ ಭೋಜರಾಜನು ಕಡೆಗಾಲದಲ್ಲಿ ಅವಮಾನವನ್ನನುಭವಿಸಬೇಕಾಯಿತು. ಜಯಶಾಲಿಯಾದ ಕರ್ಣದೇವನೂ ಚಿರಕಾಲ ಯಶಸ್ವಿಯಾಗಿರಲಿಲ್ಲ. ಚಂದೇಲವಂಶದಲ್ಲಿ ಗಂಡರಾಜನ ತರುವಾಯ ಪ್ರಖ್ಯಾತನಾಗಿ ಆಳಿದ **ಕೀರ್ತಿವರ್ಮದೇವ**ನು ಕರ್ಣದೇವನನ್ನು ಸೋಲಿಸಿಬಿಟ್ಟನು.

ಕೀರ್ತಿವರ್ಮ

ಭೋಜರಾಜನಂತೆಯೇ ತಾನೂ ಆಗಬೇಕೆಂದು ಕೀರ್ತಿವರ್ಮನು ಆಸ್ಥಾನವನ್ನು ಕವಿಜನರಿಂದ ತುಂಬಿಸಿದನು. **ಪ್ರಬೋಧ ಚಂದ್ರೋದಯ**ವೆಂಬ ಅತಿಚತುರ ನಾಟಕವನ್ನು ರಚಿಸಿದ **ಕೃಷ್ಣಮಿಶ್ರ** ಕವಿಯು ಆತನ ಆಸ್ಥಾನಿಕನಾಗಿದ್ದನು. ಸಮರ್ಥರೂ ಯೋಗ್ಯರೂ ಆಗಿದ್ದ ಈ ರಾಜರು ಪರಸ್ಪರ ಸ್ಪರ್ಧೆಯಲ್ಲಿಯೇ ತೊಡಗಿದ್ದು ತುರುಷ್ಕರನ್ನು ತಾವೂ ಮರೆತು ತಮ್ಮ ಜನರಲ್ಲಿಯೂ ವಿಸ್ಮೃತಿಯನ್ನುಂಟುಮಾಡಿದರು.

ಸೋಲಂಕೀ ವಂಶ
1063—1176

ಇತ್ತ ಸೋಲಂಕೀ ಭೀಮದೇವನ ತರುವಾಯ **ಕರ್ಣರಾಜ**ನೆಂಬ ಮಗನು ಅರಸನಾದನು. ಕರ್ಣರಾಜನು 1063 ರಿಂದ 1093ರವರೆಗೆ ಆಳಿ ಶಾಂತತೆಗೂ ಔದಾರ್ಯಕ್ಕೂ ಅಸಮಾನನೆನಿಸಿದನು ; **ಕರ್ಣಸಾಗರ**ವೆಂಬ ಸರೋವರವನ್ನೂ **ಕರ್ಣಾವತಿ**ಯೆಂಬ (ಈಗಿನ ಅಹಮದಾಬಾದ್) ಹೊಸ ರಾಜಧಾನಿಯನ್ನೂ ನಿರ್ಮಿಸಿದನು. ಕರ್ಣರಾಜನ ಬಳಿಕ ಆಳಿದ **ಸಿದ್ಧರಾಜ**ನೂ ಆತನ ತರುವಾಯ ಆಳಿದ **ಕುಮಾರಪಾಲ**ನೂ ಶೂರರಾಗಿಯೂ ವಿದ್ಯಾಪಕ್ಷಪಾತಿಗಳಾಗಿಯೂ ಇದ್ದರು.

ಅವರ ಕಾಲದಲ್ಲಿಯೇ ಮಾಳವ ರಾಜ್ಯವು ಸೋಲಂಕೀ ರಾಜ್ಯದಲ್ಲಿ ಸೇರಿ ಹೋಯಿತು; ಜೈನಮತಸ್ಥರಿಗೆ ವಿಶೇಷವಾದ ಸಹಾಯವು ಲಭಿಸಿತು. ಪ್ರಸಿದ್ಧ ಜೈನಯತಿಯಾದ **ಹೇಮಚಂದ್ರ**ನು ಇಬ್ಬರಿಂದಲೂ ಸನ್ಮಾನಿತ ನಾಗಿದ್ದನು. ಕುಮಾರಪಾಲನು ವಿದ್ವಾಂಸರನ್ನು ಪೋಷಿಸಿದ್ದಲ್ಲದೆ ಪುಸ್ತಕಭಂಡಾರಗಳನ್ನೂ ಸ್ಥಾಪಿಸಿದನು. ಕುಮಾರಪಾಲನ ತರುವಾಯ **ಅಜಯಪಾಲ**ನೆಂಬಾತನು ಆಳಲು ಮೊದಲಿಟ್ಟು ಶೈವಪಂಥವನ್ನವಲಂಬಿ ಸಿದ್ದರಿಂದ ಜೈನರಿಗೆ ಹಿಂಸೆಯನ್ನು ತೋರಿದನು. 1176ರಲ್ಲಿ ಪ್ರಜಾಮುಖ್ಯರು ಬೇಸತ್ತು ಸಮಯ ಹೊಂಚಿ ಅಜಯಪಾಲನನ್ನು ಕೊಂದುಹಾಕಿ ಅವನ ಮಗ **ಮೂಲರಾಜ**ನನ್ನು ಪಟ್ಟಣದಲ್ಲಿ ಕುಳ್ಳಿರಿಸಿದರು. ಮೂಲರಾಜನು ಇನ್ನೂ ಬಾಲ್ಯದಲ್ಲಿದ್ದುದರಿಂದ ಪಟ್ಟದ ರಾಣಿ **ನಾಯಕೀದೇವಿ**ಯೆಂಬಾಕೆಯು ರಾಜ್ಯಭಾರವನ್ನು ವಹಿಸಿದಳು. ಆಕೆಯು ಆಳ್ವಿಕೆಯನ್ನು ವಹಿಸಿದ್ದಾಗಲೇ ತುರುಷ್ಕರ ದಂಡೊಂದು ನುಗ್ಗಿಕೊಂಡು ಬಂದು ರಾಜ್ಯವನ್ನು ಮುತ್ತಿತು. ಇದೇ ಮಹಮ್ಮದ್ ಘೋರಿಯೆಂಬಾತನ ಪ್ರಥಮ ಪ್ರಯತ್ನವಾಗಿತ್ತು.

ಗದಾಧರ ಘಟ್ಟ

ಘಸನಿಯಲ್ಲಿ ಮಹಮ್ಮೂದನು 1030ರಲ್ಲಿ ಕಾಲವಶನಾದಮೇಲೆ ಆತನ ವಂಶಸ್ಥರು ರಾಜ್ಯವಾಳಿ 1150ರ ವೇಳೆಗೆ ರಾಜ್ಯ ಕಳೆದುಕೊಂಡರು. ಆ ರಾಜ್ಯವು ಘೋರೀ ಮಹಮ್ಮದನೆಂಬಾತನ ವಶವಾಯಿತು. ಈತನು ಶೂರನಾಗಿದ್ದು ಹಿಂದೂಸ್ಥಾನದಲ್ಲಿ ರಾಜ್ಯಕಟ್ಟಬೇಕೆಂಬ ಉದ್ದೇಶವನ್ನು ಬೆಳೆಸಿ, 1175ರಲ್ಲಿ ಮೂಲ್ತಾನ್ ನಗರವನ್ನೂ ಊಚ್ ಕೋಟೆಯನ್ನೂ ಹಿಡಿದು, ಸೌರಾಷ್ಟ್ರ ಗುಜರಾಥಗಳಲ್ಲಿ ದಾಳಿ ಹೊರಡಲು ಸನ್ನದ್ಧನಾಗಿ 1178ರಲ್ಲಿ ಸೈನ್ಯದೊಡನೆ ಅಕಸ್ಮಾತ್ತಾಗಿ **ಪಾಟನ** ಬಳಿ ಪ್ರತ್ಯಕ್ಷನಾದನು. ನಾಯಕೀದೇವಿಯು ರಾಜ್ಯ ನಿರ್ವಾಹಮಾಡುತ್ತಿದ್ದು ಧೈರ್ಯಗೆಡದೆ ತನ್ನ ಸೈನ್ಯವನ್ನು ಸಜ್ಜುಗೊಳಿಸಿ ಕೊಟ್ಟುಕಳುಹಿಸಿದಳು. **ಗದಾಧರ ಘಟ್ಟ**ವೆಂಬೆಡೆಯಲ್ಲಿ **ಸೇನಾಪತಿ ಧಾರಾವರ್ಷ**ನು ಸೈನ್ಯವನ್ನು ಅಣಿಮಾಡಿ ತುರುಷ್ಕರನ್ನು ಇದುರಿಸಿ ಚನ್ನಾಗಿ ಸೋಲಿಸಿ ಅಟ್ಟಿಬಿಟ್ಟನು. ಪೂರಾ ಸೋತ ತುರುಷ್ಕರು ಅಲ್ಲಿಂದ ಹಿಂತಿರುಗುವ ಪ್ರಯತ್ನದಲ್ಲಿ ವಿಶೇಷ ವಾದ ನಷ್ಟವನ್ನು ಅನುಭವಿಸಿದರು. ಘಸನಿಯನ್ನು ಸೇರುವ ವೇಳೆಗೆ

ಅಲ್ಪ ಸಂಖ್ಯಾಕರಾಗಿ ಖಿನ್ನರಾಗಿ ದೀನರಾಗಿದ್ದರು. ಗದಾಧರ ಘಟ್ಟದ ಜಯವು ಘೋರಿ ಮುಹಮ್ಮದನ ಮನಸ್ಸಿನಲ್ಲಿ ಚಿಂತೆಯನ್ನೂ ರಾಜಪುತ್ರ ರಾಜರಲ್ಲಿ ಹೆಮ್ಮೆಯನ್ನೂ ಉಂಟುಮಾಡಿತು. ಗುಜರಾಥ ಪ್ರಾಂತದಲ್ಲಿ ತುರುಷ್ಕರು ಪ್ರವೇಶಮಾಡಲು ಅಂಜುವಹಾಗಾಯಿತು.

ಬಾಲನಾದ ಮೂಲರಾಜನು ಬಾಲ್ಯದಲ್ಲಿಯೇ ತೀರಿಕೊಳ್ಳಲು ಅವನ ತಮ್ಮ ಭೀಮದೇವನೆಂಬಾತನು ಗದ್ದುಗೆಯನ್ನೇರಿದನು (1179). ಈತನು **ಭೋಳಾ ಭೀಮದೇವ**ನೆಂದು ಅಥವಾ ಮುಗ್ಧಭೀಮದೇವನೆಂದು ಹೆಸರಾಗಿದ್ದಾನೆ. ಈತನ ಸಮಕಾಲಿಕರಾಗಿ ಶಾಕಂಭರೀ ಢಿಲ್ಲಿಗಳಲ್ಲಿ **ಪೃಥ್ವೀರಾಜ**ನೂ ಕನ್ಯಾಕುಬ್ಜದಲ್ಲಿ **ಜಯಚಂದ್ರ**ನೂ ಆಳುತ್ತಿದ್ದರು. ಇವರಲ್ಲಿ ಒಬ್ಬರಿಗೂ ತುರುಷ್ಕರ ಭಯವಾಗಲಿ, ದಾಳಿಯಾದೀತೆಂಬ ಚಿಂತೆಯಾಗಲಿ ತೋರಲಿಲ್ಲ. ತಮ್ಮ ರಾಜ್ಯಗಳನ್ನು ಧರ್ಮದಿಂದ ಪಾಲಿಸುತ್ತ ಕವಿಜನರಿಗೂ ವಿದ್ವಾಂಸರಿಗೂ ಪ್ರೋತ್ಸಾಹಕೊಡುತ್ತ ಪರಸ್ಪರ ಸ್ಪರ್ಧೆಯಲ್ಲಿ ಈ ರಾಜರು ತೊಡಗಿದ್ದರು. ಸ್ಪರ್ಧೆಯು ವಂಶಾನುಗತವಾಗಿಯೇ ನಡೆಯುತ್ತಿತ್ತು. ವಂಶಪರಂಪರೆಯು ನಡೆದಂತೆ ನಡೆದುಬಂದ ಪರಸ್ಪರ ವೈರವು ರಾಜಪುತ್ರರ ಶೌರ್ಯಕ್ಕೆ ಉತ್ತೇಜಕವಾಗಿತ್ತು; ಅದೇ ಅಂಶವೇ ಹೊರಗಿನಿಂದ ಬಂದ ಶತ್ರುವನ್ನು ಅವರು ಐಕಮತ್ಯದಿಂದ ತಡೆಯುವುದಕ್ಕೂ ಅಡ್ಡಿಯಾಗಿ ಪರಿಣಮಿಸಿತು. ಗದಾಧರ ಘಟ್ಟದ ಜಯವು ಇವರ ಭರವಸೆಯನ್ನು ಹೆಚ್ಚಿಸಿತ್ತು. ಹೊರಗಿನ ಶತ್ರುವಿನ ಲಕ್ಷ್ಯವೇ ಇಲ್ಲದೆ ಢಿಲ್ಲಿ, ಕನ್ಯಾಕುಬ್ಜ, ಅನಹಿಲಪಟ್ಟಣದ ರಾಜಪುತ್ರರಾಜರು ತಮ್ಮ ತಮ್ಮೊಳಗೇ ಸ್ಪರ್ಧಿಸಲು ಮೊದಲಿಟ್ಟರು.

ಇಚ್ಛಿನೀಕುಮಾರಿ

ಅಬೂ ಪ್ರಾಂತದಲ್ಲಿ ಪರಮಾರ ಕುಲದ ಜೈತ ಅಥವಾ **ಜೇತ್ರಪಾಲ**ನೆಂಬ ರಾಜನಿದ್ದನು. ಆತನಿಗೆ **ಇಚ್ಛಿನೀಕುಮಾರಿ** ಎಂಬ ರೂಪವತಿಯಾದ ಮಗಳಿದ್ದಳು. ಭೋಳಾ ಭೀಮದೇವನು ಆ ಕುಮಾರಿಯ ಪಾಣಿಗ್ರಹಣ ಮಾಡಲು ಆಸೆಪಟ್ಟು ಜೇತ್ರಪಾಲನ ಬಳಿಗೆ ದೂತರನ್ನಟ್ಟಿ "ಇಚ್ಛಿನಿಯನ್ನು ನನಗೆ ಕೊಟ್ಟು ವಿವಾಹಮಾಡುವುದು; ಇಲ್ಲವಾದರೆ ಯುದ್ಧಕ್ಕೆ ಸಿದ್ಧನಾಗುವುದು" ಎಂದು ಹೇಳಿಕಳುಹಿದನು. ಜೇತ್ರಪಾಲನಿಗೆ ಇದು ಸರಿ

ಬೀಳಲಿಲ್ಲ; ಭೀಮದೇವನ ವೈರಿಯಾಗಿ ಪ್ರತಾಪಶಾಲಿಯಾಗಿದ್ದ ದಿಲ್ಲಿಯ ಪೃಥ್ವೀರಾಜನ ಸಹಾಯವನ್ನು ಕೇಳಿಕೊಂಡು ಯುದ್ಧಕ್ಕೆ ಸಿದ್ಧನಾದನು. **ಸಾಬರಮತೀ** ನದಿಯ ತಟದಲ್ಲಿ ಇಬ್ಬರಿಗೂ ಯುದ್ಧವು ನಡೆಯಿತು; ಭೀಮದೇವನು ಸೋತು ಅವಮಾನಪಟ್ಟನು. ಪೃಥ್ವೀರಾಜನೇ ಇಚ್ಛಿನೀ ಕುಮಾರಿಯನ್ನು ಮದುವೆಯಾಗಿ ಜಯಭೇರಿಗಳೊಡನೆ ತನ್ನ ರಾಜಧಾನಿಗೆ ಹೊರಟನು.

ಸಂಯುಕ್ತಾಪಹರಣ

ಕನ್ಯಾಕುಬ್ಜದಲ್ಲಿ ಗಾಹಡವಾಲ ಕುಲದಲ್ಲಿ ಚಂದ್ರದೇವ, ಗೋವಿಂದ ಚಂದ್ರರಾಜರ ಅನಂತರ **ಜಯಚಂದ್ರ**ನು ಪಟ್ಟಾಭಿಷಿಕ್ತನಾಗಿದ್ದನು. ಕನ್ಯಾಕುಬ್ಜವು ಈ ರಾಜರ ಆಳ್ವಿಕೆಯಲ್ಲಿ ಪೂರ್ವದ ರೂಪವನ್ನು ತಾಳಿ ಐಶ್ವರ್ಯದಿಂದ ತುಂಬಿ ತುಳುಕುತ್ತಿತ್ತು. ಜಯಚಂದ್ರನು ರಾಜನಾದ ತರುವಾಯ ಆರ್ಯಾವರ್ತದಲ್ಲೆಲ್ಲ ಐಶ್ವರ್ಯಲೋಲನಾದ ಪ್ರಭುವಾಗಿದ್ದನು. ಜಯಚಂದ್ರ ಪೃಥ್ವೀರಾಜರಿಬ್ಬರೂ ಪರಸ್ಪರ ಬಂಧುಗಳಾಗಿದ್ದರು; ಅವರ ತಾಯಂದಿರು ಅಕ್ಕತಂಗಿಯರಾಗಿದ್ದರು. ಆದರೂ ಪರಸ್ಪರ ಸ್ಪರ್ಧೆಯಿತ್ತೇ ಇತ್ತು. ಜಯಚಂದ್ರನ ಮಗಳು **ಸಂಯುಕ್ತೆ**ಯು ಪೃಥ್ವೀರಾಜನ ಪ್ರತಾಪ ಸಾಹಸಗಳನ್ನು ಕೇಳಿ ಆತನನ್ನೇ ಮನಸ್ಸಿನಲ್ಲಿ ವರಿಸಿದಳು. ಜಯಚಂದ್ರನು ಕ್ರುದ್ಧನಾಗಿ ಆಕೆಯನ್ನು ನಿರ್ಬಂಧದಲ್ಲಿಡಿಸಿ ರಾಜಸೂಯ ಪ್ರಯತ್ನಮಾಡಿ ಪೃಥ್ವಿಯ ಪ್ರತಿಮೆಯನ್ನು ದ್ವಾರದಲ್ಲಿಡಿಸಿದನು. ಪೃಥ್ವಿಗೆ ಸಮಾಚಾರ ತಿಳಿದ ಕೂಡಲೇ ಜಯಚಂದ್ರನ ದರ್ಪಭಂಗಕ್ಕೆ ಅಣಿಯಾಗಿ, ಕನ್ಯಾಕುಬ್ಜ ನಗರದಲ್ಲಿ ಹಟಾತ್ತಾಗಿ ಕಾಣಿಸಿಕೊಂಡು, ಸಂಯುಕ್ತೆಯನ್ನು ನಿರ್ಬಂಧದಿಂದ ಬಿಡಿಸಿ ಎತ್ತಿಕೊಂಡು ಹೋಗಿ ಮದುವೆಯಾದನು. ಜಯಚಂದ್ರರಾಜನಿಗೆ ಅವಮಾನವಾಯಿತು. ಪೃಥ್ವಿಯು ಇಬ್ಬರು ರಾಜರನ್ನು ಈ ರೀತಿ ಪರಾಭವಿಸಿದಮೇಲೆ ದರ್ಪಿಷ್ಠನಾಗಿ ಸಾಮಂತರಲ್ಲಿಯೂ ಮಂತ್ರಿಜನರಲ್ಲಿಯೂ ಗರ್ವದಿಂದ ಪ್ರವರ್ತಿಸಿದನು. ವಿಲಾಸಿಯಾಗಿ ರಾಜ್ಯಭಾರ ಕರ್ತವ್ಯದಲ್ಲಿ ಅಜಾಗರೂಕನಾದನು. ಅಸಂತುಷ್ಟರಾದ ಸಾಮಂತರು ಒಬ್ಬರಿಬ್ಬರೂ ಮಂತ್ರಿಯೊಬ್ಬಾತನೂ ಪೃಥ್ವೀರಾಜನಿಗೆ ಕೇಡನ್ನು ಬಯಸುತ್ತ ಶತ್ರುಗಳಿಗೆ ಅನುಕೂಲರಾದರೆಂದು ದೃಢವಾದ ಅನುಮಾನವಿದೆ.

ಜಮ್ಮೂ ಚಕ್ರದೇವ

ಅತ್ತ ಪಂಚನದ ಪ್ರದೇಶದಲ್ಲಿ ಹದಿನಾರು ಸಲ ಘಸನಿ ಮುಹಮ್ಮೂದನ ಪದಘಾತಗಳಾದ ಮೇಲೆ ರಾಜಪುತ್ರ ರಾಜ್ಯವು ನಷ್ಟವಾಗಿ ಘಸನಿಯ ಅಮೀರರಿಗೆ ಹೆಸರಿಗೆ ಮಾತ್ರ ಅಧೀನರಾದ ತುರುಷ್ಕ ಸರದಾರರು ಅಧಿಕಾರವನ್ನು ನಡೆಸುತ್ತಿದ್ದರು. ಘೋರಿ ಮುಹಮ್ಮದನಿಗೆ ಘಸನಿಯ ಮುಹಮ್ಮೂದನಿಗಿದ್ದಂತೆ ಧನ ಲೋಭ ಮಾತ್ರವೇ ಇರಲಿಲ್ಲ; ರಾಜ್ಯಾಕಾಂಕ್ಷೆಯೂ ಬಲವಾಗಿತ್ತು. ಗದಾಧರಘಟ್ಟದ ಪರಾಭವವಾದ ಬಳಿಕ ಈ ಮುಹಮ್ಮದನು ಪಂಚನದ ಪ್ರಾಂತವನ್ನು ರೂಢಿಸಿಕೊಂಡ ಹೊರತು ತನ್ನ ಆಸೆಯು ನೆರವೇರದೆಂದು ತಿಳಿದು ಆ ಪ್ರಾಂತವನ್ನು ವಶಪಡಿಸಿಕೊಳ್ಳುವ ಚಿಂತೆಯಲ್ಲಿದ್ದನು. ಆ ಪ್ರಾಂತದಲ್ಲಿ ಘಸನೀ ವಂಶದವರೊಂದು ಕಡೆ, ಖೊಕ್ರ, ಜಾತ ಮುಂತಾದ ಕುಲಗಳೊಂದು ಕಡೆ, ಜಮ್ಮೂರಾಜರೊಂದು ಕಡೆ ಹೆಣಗಾಡುತ್ತಿದ್ದರು. ಜಮ್ಮೂರಾಜರನ್ನು ಅಡ್ಡಿಮಾಡಲು ತುರುಷ್ಕರು ಖೊಕ್ರ ಕುಲಸ್ಥರ ಸ್ನೇಹವನ್ನು ಕಟ್ಟಿದ್ದರು; ಪೊಗದಿ ಕೊಡುವುದನ್ನು ತಪ್ಪಿಸಿಕೊಳ್ಳಲು ಆ ಕುಲದವರು ತುರುಷ್ಕರ ಸ್ನೇಹವನ್ನೊಪ್ಪಿಕೊಂಡರು. ಜಮ್ಮೂರಾಜನಾಗಿದ್ದ **ಚಕ್ರದೇವ**ನು ಖೊಕ್ರರಲ್ಲಿ ಕ್ರುದ್ಧನಾಗಿ ಈ ಘೋರಿ ಮುಹಮ್ಮದನಿಗೆ ಹೇಳಿಕಳುಹಿಸಿ ತನ್ನ ಸಹಾಯದ ಭರವಸೆಯನ್ನು ಕೊಟ್ಟನು. 1181ರಲ್ಲಿ ಈ ಸುಸಂದರ್ಭವು ಒದಗಲು ಮುಹಮ್ಮದನು ದಂಡೆತ್ತಿ ಬಂದು ತನ್ನ ಮತಸ್ಥರೇ ಆದ ತುರುಷ್ಕರನ್ನು ಚಕ್ರದೇವನ ಸಹಾಯದಿಂದ ಯುದ್ಧದಲ್ಲಿ ಸೋಲಿಸಿ ಖೊಕ್ರಕುಲದವರ ಬಲ ಮುರಿಯುವುದಕ್ಕೆ ಪುರಾತನ ಶಾಕಲ ನಗರಿಯಲ್ಲಿ ಒಂದು ದುರ್ಗವನ್ನು ನಿರ್ಮಿಸಿದನು. ಅದೇ **ಸಿಯಾಲ್ಕೋಟ್** ಎಂಬುದು. ಮುಹಮ್ಮದನು ಹಿಂತಿರುಗಿದ ತರುವಾಯ ಖೊಕ್ರರು

ಖೊಕ್ರರು

ಆ ದುರ್ಗವನ್ನು ಮುತ್ತಿದರು; ಆದರೆ ಚಕ್ರದೇವನ ಸಹಾಯದಿಂದ ದುರ್ಗರಕ್ಷಕರು ಜಯಶೀಲರಾದರು. 1186ರಲ್ಲಿ ಪುನಃ ಮುಹಮ್ಮದನು ಪಂಚನದ ಪ್ರಾಂತದಲ್ಲಿ ಬಂದಾಗ ಚಕ್ರದೇವನ ಮಗ **ವಿಜಯದೇವ**ನು ಅವನಿಗೆ ಸಹಾಯಮಾಡಿದನು. ತುರುಷ್ಕ ಪ್ರಮುಖನಾದ ಖುಸ್ರವ್ ಮಾಲಿಕನೆಂಬಾತನು ಸೆರೆಯಾಗಿ ಘಸನಿಯ ಕಾರಾಗೃಹದಲ್ಲಿ ಸಿಕ್ಕಿ

ಕೊಂಡನು. ಪಂಚನದ ಪ್ರದೇಶವು ಈ ರೀತಿಯಲ್ಲಿ ಮುಹಮ್ಮೊದನ ಸ್ವಾಧೀನವಾಯಿತು.

ತರಾವರಿಯ 1ನೆ ಕದನ 1191

ಶತದ್ರು ನದಿಯೇ ಪೃಥ್ವೀರಾಜನ ಎಲ್ಲೆಯಾಗಿತ್ತು. 1190ರಲ್ಲಿ ಮುಹಮ್ಮದನು ಧೈರ್ಯವನ್ನು ತಾಳಿ ಎಲ್ಲೆಯನ್ನು ದಾಟಿ **ಭಾಟಿಂಡ**ವೆಂಬ ದುರ್ಗವನ್ನು ಹಿಡಿದು ಅಲ್ಲಿಗೆ **ಸಿಯಾಉದ್ದೀನ್** ಎಂಬಾತನನ್ನು ನಿಯಮಿಸಿ 1200 ರಾಹುತರ ದಳವನ್ನು ಇಡಿಸಿದನು. ಪೃಥ್ವೀರಾಜನಿಗೆ ಕೋಪಬಂದು ಯುದ್ಧಕ್ಕೆ ಸಿದ್ಧನಾಗಿ ಸೈನ್ಯದೊಡನೆ ಬಂದನು. ದೊಡ್ಡ ಸೈನ್ಯವನ್ನೆತ್ತಿ ಚಾಹುಮಾನ ರಾಜನು ಬರುತ್ತಿದ್ದುದನ್ನು ಕೇಳಿ ಮುಹಮ್ಮೊದನು ತನ್ನ ಪ್ರಯಾಣವನ್ನು ನಿಲ್ಲಿಸಿ ಕರ್ನಾಲಿನ ಬಳಿ **ತರಾವರಿ** ಎಂಬಲ್ಲಿ ಎದುರಾದನು. ಎರಡು ಪಕ್ಷಗಳಿಗೂ ಪ್ರಚಂಡವಾದ ಯುದ್ಧವು ಮೊದಲಾಯಿತು. ರಾಜಪುತ್ರ ಸೈನ್ಯವು ಸಂಖ್ಯೆಯಲ್ಲಿ ಅಧಿಕವಾಗಿತ್ತು. ಮೊದಲಿನಲ್ಲಿಯೇ ಮುಹಮ್ಮದನ ಎಡಬಲ ಪಕ್ಷಗಳ ಭಟರು ರಾಜಪುತ್ರರ ಆಕ್ರಮಣವನ್ನು ತಾಳಲಾರದೆ ಕಂಗೆಟ್ಟು ಓಡಿದರು. ಮಧ್ಯಭಾಗದಲ್ಲಿ ಮಾತ್ರ ಮುಹಮ್ಮದನು ಸ್ಥೈರ್ಯದಿಂದ ನಿಂತು ಭಟರನ್ನು ಹುರಿಗೊಳಿಸಿ ರಾಜಪುತ್ರರನ್ನು ಇದಿರಿಸಿದನು. ಸಾಹಸದಿಂದ ಮುಂದೆ ಹೊರಟು ಮುಹಮ್ಮದನು ಪೃಥ್ವಿಯ ಸೋದರ **ಗೋವಿಂದರಾಯ**ನಿಗೆದುರಾಗಿ ನುಗ್ಗಿ, ತನ್ನ ಭಲ್ಯದಿಂದ ಇರಿದು ಗೋವಿಂದರಾಯನ ಹಲ್ಲುಗಳನ್ನುದುರಿಸಿದನು. ಗೋವಿಂದರಾಯನು ರೋಷಾವಿಷ್ಟನಾಗಿ ತನ್ನ ಭರ್ಜಿಯಿಂದ ಮುಹಮ್ಮದನ ತೋಳನ್ನು ತಿವಿದನು. ಪೂರಾ ಗಾಯವಾಯಿತು. ಆ ಸಮಯದಲ್ಲಿ ತಾನು ಬಿದ್ದರೆ ಸರ್ವನಾಶವಾದೀತೆಂಬ ಶಂಕೆಯಿಂದ ಮುಹಮ್ಮದನು ಕುದುರೆಯಿಂದಿಳಿಯದೆ ಕುದುರೆಯ ತಲೆಯನ್ನು ಮಾತ್ರ ತಿರುಗಿಸಿದನು. ತುರುಕರ ಸೈನ್ಯವು ಪಲಾಯನ ಸೂತ್ರವನ್ನೇ ಹಿಡಿದಿತ್ತು. ರಾಜಪುತ್ರರು ಅನೇಕರನ್ನು ವಧೆಮಾಡಿಬಿಟ್ಟರು. ಗಾಯಪಟ್ಟ ಮುಹಮ್ಮದನಿಗೆ ರಕ್ತಸ್ರಾವದಿಂದ ಪ್ರಜ್ಞೆತಪ್ಪಿ ಬೀಳುವಹಾಗಿತ್ತು; ಅಂತಹ ಸಮಯದಲ್ಲಿ ಒಬ್ಬ ತುರುಷ್ಕ ಯುವಕನು ಹಿಂದಿನಿಂದ ಕುದುರೆಯ ಬೆನ್ನಿಗೆ ಹಾರಿ, ಮುಹಮ್ಮದನನ್ನು ಭದ್ರವಾಗಿ ಅಪ್ಪಿ, ಕಡಿವಾಣವನ್ನು ಹಿಡಿದು ಸುರಕ್ಷಿತವಾಗಿ ತುರು

ಷ್ಕರು ಓಡಿ ಸೇರಿಕೊಂಡಿದ್ದ ಪಾಳೆಯವನ್ನು ಸೇರಿದನು. ಅಲ್ಲಿ ಒಂದು ಪಲ್ಲಕ್ಕಿಯನ್ನು ಒದಗಿಸಿ ಮುಹಮ್ಮದನನ್ನು ಎತ್ತಿಕೊಂಡು ತುರುಷ್ಕರು ಹಾಗೂ ಹೀಗೂ ಸ್ವಸ್ಥಾನವನ್ನು ಸೇರಿಕೊಂಡರು.

ತರಾವರಿ 2ನೆ ಕದನ 1192

ಯುದ್ಧ ಮುಗಿದ ಕೂಡಲೇ ಪೃಥ್ವೀರಾಜನು ಭಾಟಿಂಡ ದುರ್ಗವನ್ನು ಮುತ್ತಿದನು. ಸಿಯಾಉದ್ದೀನನು ಸ್ವಲ್ಪಕ್ಕೆ ವಶನಾಗದೆ ಹತ್ತು ಹದಿಮೂರು ತಿಂಗಳವರೆಗೂ ಹೆಣಗಾಡಿ ಕಡೆಗೆ ವಶನಾಗಿ ದುರ್ಗವನ್ನೊಪ್ಪಿಸಿದನು. ಪೃಥ್ವೀರಾಜನು ಪಡೆದ ಜಯದ ಸುದ್ದಿಯು ದೇಶದಲ್ಲೆಲ್ಲ ಹರಡಿತು. ಪುನಃ ತುರುಷ್ಕರು ಬಂದಾರೆಂಬ ನಿರೀಕ್ಷೆಯೂ ಇತ್ತು. ಬಂದರೆ ಹಿಂದಿನಂತೆ ಲೂಟಿ, ದೇವಾಲಯ ವಿನಾಶದೊಂದಿಗೆ ಮಾನಭಂಗವೂ ಸಂಭವಿಸಬಹುದೆಂದು ತಿಳಿದಿದ್ದ ಸ್ತ್ರೀಯರನೇಕರು ತಮ್ಮ ಆಭರಣಗಳನ್ನು ಮಾರಿ ಹಣವನ್ನು ಯುದ್ಧಮುಖರಾಗಿದ್ದ ತಮ್ಮ ಬಂಧುವರ್ಗದವರಿಗೆ ಕೊಟ್ಟು ಕಳುಹಿಸಿದರು. ಪೃಥ್ವೀರಾಜನಿಗಂತೂ ತುರುಷ್ಕರನ್ನು ದುರ್ಲಕ್ಷ್ಯ ಮಾಡುವ ಗರ್ವವು ಏರಿತು. ಅತ್ತ ಘಸನಿಯನ್ನು ಸೇರಿದೊಡನೆಯೇ ಮುಹಮ್ಮದನು ಹಗಲು ರಾತ್ರಿ ಶ್ರಮಪಟ್ಟು ಉತ್ತಮ ಸೈನ್ಯವನ್ನು ಕೂಡಿಸಿಕೊಂಡನು. 1192ರಲ್ಲಿ ಆ ಸೈನ್ಯದೊಡನೆ ಹೊರಟುಬಂದನು. ಸಿಯಾಉದ್ದೀನನಿಗೆ ಸಮಯಕ್ಕೆ ಸಹಾಯಮಾಡಲಾಗಲಿಲ್ಲ. 12,000 ಸುಶಿಕ್ಷಿತ ರಾಹುತ ದಳದೊಡನೆ ಮುಹಮ್ಮದನು ತರಾವರಿಯಲ್ಲಿ ಪೃಥ್ವೀರಾಜನನ್ನು ಪುನಃ ಪ್ರತಿಭಟಿಸಿದನು. ಮುಹಮ್ಮದನು ಜಾಣತನದಿಂದ ತನ್ನ ಸೈನ್ಯವನ್ನು ಐದು ಭಾಗಗಳಾಗಿ ವಿಭಾಗಿಸಿಕೊಂಡು ನಾಲ್ಕು ತಂಡಗಳಾಗಿದ್ದ ಧನುರ್ಧಾರಿಗಳಿಗೆ ರಾಜಪುತ್ರ ಸೈನ್ಯದ ಎಡಬಲ ಪಕ್ಷಗಳನ್ನು ಆಕ್ರಮಿಸುವಂತೆಯೂ, ಸಮೀಪವನ್ನು ಸೇರದೆ ಕೈಕೈಯುದ್ಧವನ್ನು ತಪ್ಪಿಸಿಕೊಂಡು ರಾಜಪುತ್ರರ ಬೆನ್ನನ್ನು ಹಿಂದಿನಿಂದ ಗುರಿಯಿಟ್ಟು ಹೊಡೆಯುವಂತೆಯೂ ಏರ್ಪಾಟು ಮಾಡಿದನು. ಮತ್ತು ತನ್ನ ದಳದವರಿಗೆ ''ರಾಜಪುತ್ರ ಸೈನಿಕರ ಸಮೀಪವನ್ನು ಹೇಗಾದರೂ ತಪ್ಪಿಸಿಕೊಳ್ಳಿ. ಅವರೊಡನೆ ಖಡ್ಗಾಖಡ್ಗಿ ಮಾಡಬೇಡಿ. ಅವರು ನಿಮ್ಮನ್ನು ಆಕ್ರಮಿಸಲು ಹವಣಿಸಿಕೊಂಡು ನುಗ್ಗಿದಾಗ ಸೋತು ಪಲಾಯನಪರರಾದಂತೆ ನಟಿಸಿ'' ಎಂದು ಆಜ್ಞೆಕೊಟ್ಟನು. ಬೆಳಿಗ್ಗೆಯಿಂದ

ಮಧ್ಯಾಹ್ನದವರೆಗೆ ಈ ರೀತಿಯಲ್ಲಿಯೇ ಎದುರು ನಿಂತು ಯುದ್ಧಮಾಡದೆ ತಪ್ಪಿಸಿಕೊಂಡು ತುರುಷ್ಕರು ಯುದ್ಧಭೂಮಿಯಲ್ಲಿ ಅತ್ತಿತ್ತ ಸುಳಿದಾಡಿದರು. ರಾಜಪುತ್ರರಿಗೆ ಶತ್ರುವ್ಯೂಹವು ಹೇಗೆಂಬುದೇ ತಿಳಿಯದಾಯಿತು. ಪೃಥ್ವೀರಾಜನು ಹಿಂದೆ ಅವಲಂಬಿಸಿದ್ದ ಯುದ್ಧದ ಪರಿಯನ್ನೇ ಈಗಲೂ ಅವಲಂಬಿಸಿದನು. ಮಧ್ಯಾಹ್ನದ ವೇಳೆ ರಾಜಪುತ್ರರು ಭ್ರಾಂತರಾಗಿದ್ದುದನ್ನು ತಿಳಿದು ಮುಹಮ್ಮದನು ತನ್ನ 12,000 ರಾವುತರೊಡನೆ ಏಕಮುಖವಾಗಿ ರಾಜಪುತ್ರ ಸೇನಾ ಮಧ್ಯವನ್ನು ತಾಗಿದನು. ರಾಜಪುತ್ರರು ದಿಗ್ಭ್ರಾಂತರಾಗಿ ಪೂರಾ ಸೋತರು. ಪೃಥ್ವೀರಾಜನು ಆನೆಯ ಮೇಲಿಂದ ಇಳಿದು ಕುದುರೆಯನ್ನೇರಿಕೊಂಡನು. ಶತ್ರುಗಳು ಸುತ್ತಿಕೊಂಡು ಅವನನ್ನು ಸಂಹರಿಸಿಬಿಟ್ಟರು. ಆತನ ತಮ್ಮನೂ ಹತನಾದನು. ಹಲ್ಲಿಲ್ಲದ ಬಾಯಿಯ ಗುರುತನ್ನು ಹಿಡಿದು ಗೋವಿಂದರಾಯನ ಕಳೇಬರವೆಂದು ತುರುಷ್ಕರು ನಿರ್ಧರಿಸಿದರು. ಈ ಪರಾಜಯದಿಂದ ತುರುಷ್ಕರಿಗೆ ನಷ್ಟವಾಗಿದ್ದ ಧೈರ್ಯವು ಪುನಃ ಬಂದಿತು.

**ಚಾಹುಮಾನರ ದುಸ್ಥಿತಿ**

ಕದನ ಮುಗಿದ ಕೂಡಲೆ ಮುಹಮ್ಮದನು **ಹಾಂಸೀ, ಗುಹರಾಂ, ಸಾವರಾನ್** ಮುಂತಾದ ದುರ್ಗಗಳನ್ನು ಹಿಡಿದು ಅಲ್ಲಲ್ಲಿ ಕೋಟೆಹೊಡೆದು, ಪ್ರಾಪ್ತವಾಗಿದ್ದ ಜಯವನ್ನು ಕಳೆದುಕೊಳ್ಳಬಾರದೆಂದು ತನ್ನ ಕಾರ್ಯದಲ್ಲಿ ಕ್ಷಿಪ್ರತೆಯನ್ನು ವಹಿಸಿದನು. ಅತ್ತ ಢಿಲ್ಲಿಕಾನಗರದಲ್ಲಿ ಪೃಥ್ವೀರಾಜನಂತಹ ರಾಜನನ್ನೂ ಅನೇಕ ಶೂರರನ್ನೂ ಕಳೆದುಕೊಂಡಮೇಲೆ ಸಂಯುಕ್ತಾದೇವಿಯು **ಚಿತಾರೋಹಣ** ಮಾಡಿದಳು. ನಾಯಕರಾರೂ ಇರಲಿಲ್ಲ. ಉಪಾಯಶಾಲಿಯಾದ ಮುಹಮ್ಮದನು ಪೃಥ್ವೀರಾಜನ ಕೂಸೊಂದನ್ನು ರಾಜನೆಂದೊಪ್ಪಿ ಮುಂದಕ್ಕೆ ತನಗೆ ಪೊಗದಿ ಸಲ್ಲುವಹಾಗೆ ಸಂಧಾನಮಾಡಿಕೊಂಡು, ಢಿಲ್ಲಿಯ ಅಕ್ಕಪಕ್ಕದಲ್ಲಿ ಗೆದ್ದ ದುರ್ಗಗಳಲ್ಲಿ ಸೈನ್ಯಗಳನ್ನಿಡಿಸಿ ಅಲ್ಲಿಗೆ **ಕುತ್ಬುದ್ದೀನ್** ಎಂಬ ತನ್ನ ಗುಲಾಮೀ ಸರದಾರನನ್ನು ನಿಯಮಿಸಿ, ಮರುವರುಷವೇ ಕನ್ಯಾಕುಬ್ಜದ ಆಕ್ರಮಣಕ್ಕೆ ಸನ್ನದ್ಧನಾದನು. ಪೃಥ್ವೀರಾಜನ ಕಡೆಯವರು ಸಮಯವನ್ನು ನಿರೀಕ್ಷಿಸುತ್ತಲಿದ್ದರು.

ಪೃಥ್ವೀರಾಜನಲ್ಲಿ ಹಗೆತನವನ್ನು ಸಾಧಿಸುತ್ತಿದ್ದ ಜಯಚಂದ್ರರಾಜನು ಮೊದಲು ಮುಹಮ್ಮದನಿಗೆ ಸಹಾಯಮಾಡಿ ಪೃಥ್ವೀರಾಜನ ಮರಣಾನಂತರ

ಪಶ್ಚಾತ್ತಾಪಪಟ್ಟನೆಂದು ವೃತ್ತಾಂತವುಂಟು. 1193ರಲ್ಲಿ ಜಯಚಂದ್ರನು ತನ್ನ ರಾಜ್ಯದೊಳಕ್ಕೆ ನುಗ್ಗಲು ಹವಣಿಸುತ್ತಿದ್ದ ತುರುಷ್ಕರನ್ನು ಇದಿರಿಸಲು ಸೇನೆಯನ್ನು ಸೇರಿಸಿ, ಯಮುನಾನದಿಯ ತೀರದಲ್ಲಿ **ಚಂದ್ವಾರ** (ಈಗಿನ ಫಿರೂಸಾಬಾದ್) ವೆಂಬಲ್ಲಿ ಕುತ್ಬುದ್ದೀನನ ಸೈನ್ಯವನ್ನು ಪ್ರತಿಭಟಿಸಿದನು.

ಜಯಚಂದ್ರನ ಪರಾಭವ



36. ದಿಲ್ಲಿಯ ಪುರಾತನ ಭಾಗ

ರಾಜನು ಉನ್ಮತ್ತನಾಗಿ ಯುದ್ಧಮಾಡುತ್ತ ತನ್ನವರನ್ನೂ ಉತ್ಸಾಹಗೊಳಿಸಿ ಶತ್ರುಗಳಿಗೆ ಭಯಂಕರವಾದ ಯುದ್ಧವನ್ನೇ ತೋರಿದನು. ತುರುಷ್ಕರು ಭಯಪಟ್ಟು ಸೋಲೇ ನಿಶ್ಚಯವೆಂದುಕೊಂಡು ಕಾಲ್ದೆಗೆಯುವುದರಲ್ಲಿದ್ದರು. ಅಷ್ಟರಲ್ಲಿ ಒಂದು ಬಾಣವು ಬಂದು ರಾಜನ ಕಣ್ಣನ್ನು ನಾಶಮಾಡಿತು; ನಿಶ್ಚೇಷ್ಟಿತನಾಗಿ ರಾಜನು ಅಂಬಾರಿಯಿಂದ ಕೆಳಗೆ ಬಿದ್ದನು. ಇದನ್ನು ಕಂಡು ರಾಜಪುತ್ರರು ಎದೆಗೆಟ್ಟು ಕೋಲಾಹಲವನ್ನೆಬ್ಬಿಸಿ ವ್ಯೂಹ ಭ್ರಷ್ಟರಾದರು. ಇದೇ ಸುಸಮಯವೆಂದು ತುರುಷ್ಕರು ಮುಂದೆ ನುಗ್ಗಿ ರಾಜಪುತ್ರ ಸೈನ್ಯವನ್ನು ಯುದ್ಧಭೂಮಿಯಿಂದ ಅಟ್ಟಿದರು. ನಡೆದ ಧಾಮಧೂಮಿನಲ್ಲಿ ಜಯಚಂದ್ರನ ದೇಹವು ಅನೇಕರ ತುಳಿತಕ್ಕೆ ಸಿಕ್ಕಿ ಜರ್ಝರಿತವಾಯಿತು. ಸುವರ್ಣ ಖಚಿತವಾದ ದಂತಪಙ್ಕ್ತಿಗಳ ಗುರುತಿನಿಂದ ದೇಹ

ವನ್ನು ರಾಜನನ್ನಾಗಿಯೂ ತಿಳಿದರು. ಜಯಮತ್ತರಾದ ತುರುಷ್ಕರು ಅಲ್ಲಿಂದ ಮುಂದಾಗಿ ರಾಜಭಂಡಾರವಿದ್ದ **ಆಸೀ** ಎಂಬ ದುರ್ಗವನ್ನು ಧ್ವಂಸಮಾಡಿ ಕೊಳ್ಳೆ ಹೊಡೆದರು. ಕನ್ಯಾಕುಬ್ಜವೂ ಲೂಟಿಯಾಯಿತು. ಜಯಚಂದ್ರನ ಬಂಧುಗಳು ಕೆಲವರು ಹತಾಶರಾಗಿ ಆರಾವಲಿ ಪರ್ವತಗಳ ಪ್ರಾಂತಕ್ಕೆ ಹೊರಟು ಅಲ್ಲಿ **ಮಾರವಾಡ**ವೆಂಬ ರಾಜ್ಯವನ್ನು ಕಟ್ಟಿದರಂತೆ; **ಗಾಹಡ ವಾಲ** ಕುಲದವರ ರಾಜ್ಯವು ಇಲ್ಲಿಗೆ ಮುಗಿಯಿತೆಂದೇ ಹೇಳಬೇಕು. ಮಾರವಾಡದಲ್ಲಿ ಸಿದ್ಧವಾದ ರಾಜ್ಯವನ್ನಾಳಿದವರು **ರಾಠೋಡ ಕುಲ**ದವರೆಂದು ಪ್ರಖ್ಯಾತರಾಗಿದ್ದಾರೆ.

ಹೇಮರಾಜ

ಪೃಥ್ವೀರಾಜನು ಸತ್ತಕೂಡಲೇ ಚಾಹುಮಾನ ಕುಲಸ್ಥರು **ಅಜ್ಮೇರಿ**ನಲ್ಲಿ ಸೇರಿಕೊಂಡು ಆ ರಾಜನ ತಮ್ಮ **ಹೇಮರಾಜ**ನೆಂಬಾತನನ್ನು ವರಿಸಿ ಪಟ್ಟದಲ್ಲಿ ಕುಳ್ಳಿರಿಸಿದರು. ಹೇಮರಾಜನು ಕೂಡಲೇ ಸೈನ್ಯ ಸಮೇತನಾಗಿ ಹೊರಟು **ಮೀರತ್** ದುರ್ಗದ ಬಳಿ ಕುತ್ಬುದ್ದೀನನೊಡನೆ ಯುದ್ಧಕ್ಕೆ ನಿಂತನು. ಅಲ್ಲಿ ಸೋತರೂ ಖಿನ್ನನಾಗದೆ ಹೇಮರಾಜನು 1194ರಲ್ಲಿ **ರಣಸ್ತಂಭಪುರ** (Ranatambhor) ಅಥವಾ **ರತನಭೋ**ರೆಂಬ ದುರ್ಗದ ಕಡೆಗೆ ತಿರುಗಿ ಅಲ್ಲಿದ್ದ ಶತ್ರುಗಳನ್ನು ಓಡಿಸಲು ಉದ್ಯುಕ್ತನಾದನು. ಕುತ್ಬುದ್ದೀನನು ಅಲ್ಲಿಗೂ ಬರಲು ತನ್ನ ಸೈನ್ಯ ಬಲ ಸಾಲದೆಂದುಕೊಂಡು ಹೇಮರಾಜನು ಆಳ್ವಾರ್ ಪ್ರಾಂತದ ಗಿರಿದುರ್ಗಗಳಲ್ಲಿ ಅಡಗಿದ್ದು ಸಮಯ ಹೊಂಚಿ ಆಜ್ಮೇರನ್ನೇ ಹಿಡಿದನು. ಢಿಲ್ಲಿಕಾನಗರಿಯನ್ನು ಹಿಡಿಯಲು **ಝೂಟ ರಾಯ**ನೆಂಬ ದಳಪತಿಯನ್ನು ಕಳುಹಿಸಿದನು. ಆದರೆ ಕುತ್ಬುದ್ದೀನನು ಝೂಟರಾಯನನ್ನು ಸೋಲಿಸಿ ಅಟ್ಟಿಸಿಕೊಂಡು ಆಜ್ಮೇರಿನ ಬಳಿಗೇ ಬಂದನು. ಹೇಮರಾಜನು ಆಗ ಧೈರ್ಯದಿಂದ ದುರ್ಗದ ಹೊರಗೆ ಬಂದು ಯುದ್ಧ ಮಾಡಿದನು; ಜಯಲಾಭವಾಗಲಿಲ್ಲ. ಪದೇ ಪದೇ ಆದ ಸೋಲನ್ನು ಸಹಿಸಲಾರದೆ ಹೇಮರಾಜನು ಚಿತಿಯನ್ನು ಸಿದ್ಧಗೊಳಿಸಿ ತನ್ನ ದೇಹವನ್ನು ಅಗ್ನಿಗೆ ಸಮರ್ಪಿಸಿದನು. ಆಜ್ಮೇರ್ ದುರ್ಗವು ತುರುಷ್ಕರ ಪಾಲಾಯಿತು.

ಚಾಹುಮಾನರ ರಾಜ್ಯವೂ ಗಾಹಡವಾಲರ ರಾಜ್ಯವೂ ಈ ರೀತಿಯಲ್ಲಿ ತುರುಷ್ಕರ ಪಾಲಾಗುತ್ತಿದ್ದಾಗ **ಸೋಲಂಕೀ ಭೀಮದೇವ**ನು ತಟಸ

ನಾಗಿರಲಿಲ್ಲ. ಪೃಥ್ವೀರಾಜನು ಜೀವಂತನಾಗಿದ್ದವರೆಗೂ ಆತನಲ್ಲಿ ದ್ವೇಷವನ್ನು ಸಾಧಿಸುತ್ತಿದ್ದ ಈ ರಾಜನು ತರಾವರಿಯ ಎರಡನೆಯ ಕದನವಾದ ಬಳಿಕ ತುರುಕರನ್ನು ಸೋಲಿಸಿ ಓಡಿಸುವ ಸನ್ನಾಹದಲ್ಲಿದ್ದನು. ಹಾಂಸಿಯಲ್ಲಿ ನಿಯಮಿತನಾಗಿದ್ದ **ನುಸರತುದ್ದೀನ**ನನ್ನು ಓಡಿಸಲು ಭೀಮದೇವನು 1192ರಲ್ಲಿಯೇ ಜಾತಕುಲದ **ಜಾತವಾನ**ನೆಂಬಾತನನ್ನೆತ್ತಿಕಟ್ಟಿದನು. ಆದರೆ ಆತನು ಕುತ್ಬುದ್ದೀನನಿಂದ ಪರಾಜಿತನಾದನು. ಗದಾಧರ ಘಟ್ಟದ ಪರಾಜಯದ ಅಪಕೀರ್ತಿಯನ್ನು ತೊಡೆದುಹಾಕಬೇಕೆಂದು ಕುತ್ಬುದ್ದೀನನೂ ಹವಣಿಸಿ 1196ರಲ್ಲಿ ಅನಹಿಲವಾರದ ಕಡೆಗೆ ಹೊರಟನು. ಭೀಮದೇವನ **ಸೇನಾಪತಿ ಕುಮಾರಪಾಲ**ನು ಕುತ್ಬುದ್ದೀನನನ್ನು ಎದುರಿಸಿ ಯುದ್ಧಮಾಡಿ ಸೋತು ಪ್ರಾಣಗಳನ್ನರ್ಪಿಸಿದನು. ಭೀಮದೇವನು ಖಿನ್ನನಾಗಿ ರಾಜಧಾನಿಯನ್ನು ಬಿಟ್ಟು ಬೇರೆಡೆಯಲ್ಲಿ ಅವಿತುಕೊಂಡನು; ತುರುಷ್ಕರು ಅನಹಿಲವನ್ನೂ ಸುತ್ತಮುತ್ತಣ ಪ್ರಾಂತವನ್ನೂ ಕೊಳ್ಳೆಹೊಡೆದು ದಿಲ್ಲಿಗೆ ಹಿಂತಿರುಗಿದರು. ಜಯಶಾಲಿಗಳಾಗಿದ್ದ ತುರುಷ್ಕರನ್ನು ಇದುರಿಸಲಾರದೆ ಗ್ವಾಲಿಯರ (ಗೋಪಗಿರಿ)ನ ರಾಜನು ಪೊಗದಿ ಕೊಡಲೊಪ್ಪಿ ವಶ್ಯತೆಯನ್ನು ಸೂಚಿಸಿ ಪ್ರಾಣವನ್ನುಳಿಸಿಕೊಂಡನು. ಭೀಮದೇವನು ಆ ರಾಜನಂತೆ ಹೇಡಿಯಾಗಿರಲಿಲ್ಲ. 1197ರಲ್ಲಿ ಆಜ್ಮೀರ್ ಪ್ರಾಂತದ **ಮೇರಕುಲ**ದವರು ತುರುಷ್ಕರನ್ನೋಡಿಸುವ ಪ್ರಯತ್ನಮಾಡಿಕೊಂಡು ಭೀಮದೇವನ ಸಹಾಯವನ್ನು ಬಯಸಿದರು. ಭೀಮದೇವನು ಸಹಾಯಕ್ಕೆ ಸೈನ್ಯವನ್ನು ಕಳುಹಿಸಿದನು. ಎರಡು ದಳಗಳೂ ಒಟ್ಟುಸೇರುವ ಮೊದಲೇ ಯುದ್ಧಮಾಡಿ ಬಿಡಬೇಕೆಂದು ಕುತ್ಬುದ್ದೀನನು ಆತುರದಿಂದ ಹೊರಟು ಆಜ್ಮೀರದಲ್ಲಿದ್ದ ಅಧಿಕಾರಿಯ ಸಹಾಯಕ್ಕೆ ಬಂದನು. ಭೀಮದೇವನ ಸೈನ್ಯವು ಬಂದು ಸೇರಿಕೊಳ್ಳುವ ಮೊದಲೇ ಕುತ್ಬುದ್ದೀನನು ಮೇರರೊಡನೆ ಯುದ್ಧವನ್ನು ಹೂಡಿದನು. ಹಗಲೆಲ್ಲ ಮೇರರು ಯುದ್ಧಮಾಡಿ ಸೋಲದೆ ತುರುಷ್ಕರಿಗೆ ಬಹು ಪ್ರಯಾಸವನ್ನುಂಟುಮಾಡಿದರು; ಮರುದಿನ ಬೆಳಕುಹರಿದ ಕೂಡಲೆ ಭೀಮದೇವನ ಸೈನ್ಯವು ಕಾಣಿಸಿಕೊಂಡಿತು. ಇಬ್ಬರೂ ಕಲೆತು ತುರುಷ್ಕರನ್ನು ಸೋಲಿಸಿ ಆಜ್ಮೀರ ದುರ್ಗದೊಳಕ್ಕೆ ಅಟ್ಟಿದರು. ದುರ್ಗದಲ್ಲಿ ಸೇರಿಕೊಂಡ

ಭೀಮದೇವನ ಸಂಧಾನ

ತುರುಷ್ಕರನ್ನು ಮುತ್ತಲು ರಾಜಪುತ್ರರು ಸಿದ್ಧರಾದರು. ಆ ವೇಳೆಗೆ ಘಸನಿಯಿಂದ ದೊಡ್ಡ ಸೇನೆಯು ಬರುತ್ತಿರುವುದೆಂದು ಸಮಾಚಾರವು ಹುಟ್ಟಿಕೊಂಡಿತು ; ರಾಜಪುತ್ರ ಸೈನ್ಯದವರು ಆ ಕಾರಣದಿಂದ ಹಿಮ್ಮೆಟ್ಟಿದರು.

ಆಜ್ಮೀರ ಬಳಿ ಕದನ

ಘಸನಿ ಸೈನ್ಯವು ಸಾವಕಾಶವಾಗಿ ಬಂದಿತು ; ಸೋಲಿನ ಅಪಮಾನಕ್ಕೆ ಪ್ರತಿಕ್ರಿಯೆಮಾಡಬೇಕೆಂದು ಕುತ್ಬುದ್ದೀನನು ಸಿರೋಹಿ ಮಾರ್ಗವಾಗಿ ಅನಹಿಲ ಪಟ್ಟಣದ ಕಡೆ ಹೊರಟನು. ಮಾರ್ಗ ಮಧ್ಯದಲ್ಲಿ ಭೀಮದೇವನ ಸೈನ್ಯವು ಆಬೂಪರ್ವತ ಪ್ರಾಂತದಲ್ಲಿ ಗುಲ್ಮರಚನೆ ಮಾಡಿಕೊಂಡು ಭದ್ರವಾಗಿತ್ತು. ಅದನ್ನು ಕಂಡು ಕುತ್ಬುದ್ದೀನನು ಚಿಂತಾಕ್ರಾಂತನಾಗಿ ಅವರನ್ನು ತಾಗುವ ಪ್ರಯತ್ನಮಾಡದೆ ನಿಂತಲ್ಲಿಯೇ ನಿಂತನು. ಇದನ್ನು ಕಂಡು ರಾಜಪುತ್ರ

ಆಬೂ ಕದನ

ಸೈನ್ಯವು ತನ್ನ ಭದ್ರ ಸ್ಥಾನವನ್ನು ಬಿಟ್ಟು ಮುಂದೆ ಬಂದಿತು. ಆಗ ಕುತ್ಬುದ್ದೀನನು ಯುದ್ಧವನ್ನು ಮೊದಲಿಟ್ಟನು. ಅರುಣೋದಯದಲ್ಲಿ ಪ್ರಾರಂಭವಾದ ಕಾಳಗವು ಮಧ್ಯಾಹ್ನದವರೆಗೂ ಸರಿಸಮವಾಗಿಯೇ ನಡೆಯಿತು ; ಮಧ್ಯಾಹ್ನದ ವೇಳೆಗೆ ರಾಜಪುತ್ರರು ಆಯಾಸದಿಂದ ವ್ಯೂಹಗೆಟ್ಟರು. ತುರುಷ್ಕರು ಮುಂದೆ ನುಗ್ಗಿ 15,000 ಜನರನ್ನು ಕೊಂದು, 20,000 ಜನರನ್ನು ಸೆರೆಹಿಡಿದು, 20 ಆನೆಗಳನ್ನೂ ಅನೇಕ ವಸ್ತುಗಳನ್ನೂ ಸ್ವಾಧೀನ ಮಾಡಿಕೊಂಡರು. ಅನಹಿಲ ಪಟ್ಟಣದ ದಾರಿಯು ನಿರಾತಂಕವಾಗಿತ್ತು. ಕುತ್ಬುದ್ದೀನನು ಆ ದಾರಿಯನ್ನು ಹಿಡಿದು ಆ ಪಟ್ಟಣವನ್ನು ಕೊಳ್ಳೆ ಹೊಡೆದು ಹಿಂತಿರುಗಿದನು.

ಅಜದೇವನ ಸಾಹಸ

ಪ್ರಸಿದ್ಧ ಗಂಡದೇವನ ರಾಜ್ಯವಾದ ಚೇದಿರಾಷ್ಟ್ರದಲ್ಲಿ ಕೀರ್ತಿವರ್ಮನ ತರುವಾಯ ಪ್ರಸಿದ್ಧ ರಾಜರಾರೂ ಆಳಲಿಲ್ಲ. 1180ರಲ್ಲಿ ಆಳುತ್ತಿದ್ದ **ಪರ್ಮಾಲರಾಜನು** ದುರ್ಬಲನಾಗಿ ಪೃಥ್ವೀರಾಜನಿಗೆ ಸೋತು ಪೊಗದಿ ಕೊಡುತ್ತಿದ್ದನು. ಆತನ ಕಾಲಂಜರ ದುರ್ಗವು ದುಸ್ಸಾಧ್ಯವೆಂದು ಹೆಸರಾಗಿತ್ತು. 1202ರಲ್ಲಿ ಕುತ್ಬುದ್ದೀನನು ಈ ರಾಜನ ಮೇಲೆ ದಂಡೆತ್ತಿ ಹೊರಟನು. ನಡೆದ ಕಾಳಗದಲ್ಲಿ ರಾಜನು ಸೋತು ಪೊಗದಿ ಕೊಡಲೊಪ್ಪಿ

ದನು. ಈ ಒಪ್ಪಿಗೆಯು ಮಂತ್ರಿಯಾದ **ಅಜದೇವ**ನೆಂಬಾತನಿಗೆ ಸರಿ ಬೀಳಲಿಲ್ಲ. ಈತನು ರಾಜ್ಯಭಾರದ ಸೂತ್ರಗಳನ್ನು ತನ್ನ ಕೈಲಿ ಹಿಡಿದನು. ಪರ್ಮಾಲರಾಜನು ಹಟಾತ್ತಾಗಿ ಸತ್ತನು. ಅಜದೇವನೇ ಆಗ ರಾಜಪದವಿ ಗೇರಿ ಪೊಗದಿಯನ್ನು ನಿಲ್ಲಿಸಿದನು. ಕಾಲಂಜರ ಕೋಟೆಯಲ್ಲಿ ನೀರಿಗೆ ಒಂದು ಬುಗ್ಗೆಯಿತ್ತು. ಎಂದೂ ಅದು ಬರಿದಾಗಿರಲಿಲ್ಲ. ಅಜದೇವನು ಅದನ್ನು ನಂಬಿ ಕಾಲಂಜರ ದುರ್ಗದಲ್ಲಿ ಸೈನ್ಯವನ್ನು ಸೇರಿಸಿ ತುರುಷ್ಕರು ಬಂದು ಮುತ್ತಲೆಂದಿದ್ದನು. ಕುತ್ಬುದ್ದೀನನು ಬಂದು ಮುತ್ತಿದನು. ಕೆಲವು ದಿನಗಳಲ್ಲಿಯೇ ಆ ಬುಗ್ಗೆಯು ಅಕಸ್ಮಾತ್ತಾಗಿ ಬತ್ತಿಹೋಯಿತು. ನೀರಿಲ್ಲದೆ ಸಂಕಟಪಡುತ್ತ ನಿವಾಸಿಗಳು ಎಚ್ಚರಿಕೆಯನ್ನು ಮರೆತು ತುರುಷ್ಕರೊಡನೆ ಷರತ್ತುಗಳನ್ನು ಮಾಡಿಕೊಳ್ಳದೆ ಅವರಲ್ಲಿ ಕೆಲವರನ್ನು ಒಳಕ್ಕೆ ಬಿಟ್ಟರು. ಕುತ್ಬುದ್ದೀನನು ಅಜದೇವನನ್ನು ನಿರ್ಮೂಲ ಮಾಡಿಬಿಡಬೇಕೆಂದು ಮನಸ ಮಾಡಿ ಪಟ್ಟಣವನ್ನು ಸುಲಿಯಿರೆಂದು ಆಜ್ಞೆ ಮಾಡಿದನು. ಅಪಾರವಾದ ಧನವು ಸೂರೆಯಾದುದಲ್ಲದೆ 50,000 ಸ್ತ್ರೀ ಪುರುಷರು ಸೆರೆಸಿಕ್ಕಿ ಗುಲಾಮರಾದರು. ದೇವಸ್ಥಾನಗಳಲ್ಲಿ ಮಸೀದಿಗಳು ನಿರ್ಮಿತವಾದವು. ಕಾಲಂಜರ ದುರ್ಗವು ಈ ರೀತಿ ವಶವಾದಮೇಲೆ ಕುತ್ಬುದ್ದೀನನು ಚಂದೇಲ ರಾಷ್ಟ್ರದ ರಾಜಧಾನಿ **ಮಹೋಬಪುರ**ವನ್ನೂ ಸುಲಭವಾಗಿ ವಶಪಡಿಸಿಕೊಂಡನು.

ಕಾಲಂಜರ

ಪಾಂಚಾಲ ಮತ್ತು ಚೇದಿ ರಾಷ್ಟ್ರಗಳಿಗೆ ಮೂಡಲಲ್ಲಿದ್ದುದು **ಪಾಲರಾಷ್ಟ್ರ** ಅಥವಾ ವಿಹಾರ ದೇಶ. ಪಾಲ ವಂಶದಲ್ಲಿ **ಮಹೀಪಾಲ**ನೆಂಬಾತನೇ ಪ್ರಾಯಶಃ ಕಡೆಯವನು; ಆತನು 1060ರಲ್ಲಿ ಕಾಲವಾಗಲು ಆ ರಾಜ್ಯದ ಪೂರ್ವಭಾಗವು ಬೇರೆಯಾಗಿ ಹೊಸ ರಾಷ್ಟ್ರವಾಗಿ ಏರ್ಪಟ್ಟಿತು. ಸುಮಾರು 1050ರಲ್ಲಿ ಉತ್ಕಲದಲ್ಲಿ ಪ್ರಾಬಲ್ಯವನ್ನು ಪಡೆದ **ವಿಜಯಸೇನ**ನೆಂಬಾತನು ವಂಗ ಅಥವಾ ಗೌಡದೇಶವನ್ನು ಗೆದ್ದು ರಾಜ್ಯವನ್ನು ಕಟ್ಟಿದನು. ಪಾಲವಂಶದವರು ಬೌದ್ಧಮತಸ್ಥರಾಗಿದ್ದರು; ಸೇನವಂಶದವರು ಸನಾತನ ಪಂಥದವರು; ಆದ್ದರಿಂದ ಪರಸ್ಪರ ವಿರೋಧವೂ ಇದ್ದಿತು. ವಿಜಯಸೇನನ ತರುವಾಯ ಪಟ್ಟವನ್ನೇರಿದ ಆತನ ಮಗ **ಬಲ್ಲಾಳಸೇನ**ನು

ಸೇನವಂಶ

ಪ್ರಖ್ಯಾತನಾದವನು. ಆತನ ಆಳ್ವಿಕೆಯಲ್ಲಿಯೇ ಸಮಾಜ ಶುದ್ಧಿಯು ಕೈಗೂಡಿ ಕುಲೀನಾಚಾರಗಳು ನೆಲೆಗೊಂಡವು. 1119ರಲ್ಲಿ **ಲಕ್ಷ್ಮಣ ಸೇನ**ನೆಂಬಾತನು ಈ ವಂಶಜರಲ್ಲಿ ಅಭಿಷಿಕ್ತನಾಗಿ ಗೌಡದಲ್ಲಿಯೂ ಲಕ್ಷ್ಮಣಾವತಿ (Lukhnowti)ಯಲ್ಲಿಯೂ ಆಳಿದನು. ಬಲ್ಲಾಳಸೇನನಂತೆಯೇ ಈತನೂ ಧರ್ಮನಿಷ್ಠನಾಗಿ ವಿದ್ಯಾಪಕ್ಷಪಾತವನ್ನು ತೋರಿದನು. **ನವದ್ವೀಪ** (ನದಿಯ), **ಗೌಡ** (ಗೌರ), **ಲಕ್ಷ್ಮಣಾವತಿ**ಗಳು ಪ್ರಸಿದ್ಧ ವಿದ್ಯಾಪೀಠಗಳಾಗಿ ರೂಪಗೊಂಡುದು ಆತನ ಕಾಲದಲ್ಲಿಯೇ. ಗೀತಗೋವಿಂದವನ್ನು ರಚಿಸಿದ **ಕವಿ ಜಯದೇವ**ನು ಆತನ ಆಸ್ಥಾನದಲ್ಲಿದ್ದನು. 1119ರಲ್ಲಿ ಪಟ್ಟವನ್ನೇರಿದ ಲಕ್ಷ್ಮಣಸೇನನು ದೀರ್ಘಾಯುವಾಗಿ 1202ರವರೆಗೂ ರಾಜನಾಗಿಯೇ ಇದ್ದನು.

ಪಾಂಚಾಲ ದೇಶಕ್ಕೆ ಮೂಡಲಿಗೂ ಗೌಡ ಬಿಹಾರ ದೇಶಗಳ ಉತ್ತರಕ್ಕೂ ಪೂರ್ವದ ಅಯೋಧ್ಯಾ ಪ್ರಾಂತವಿತ್ತು.

ಬಿಹಾರ ನಾಶ

ಪಾಂಚಾಲದ ಜಯಚಂದ್ರನು ಬಲಿಷ್ಠನಾಗಿ ಸುತ್ತಮುತ್ತಲಿದ್ದವರನ್ನು ದುರ್ಬಲರನ್ನಾಗಿಯೇ ಮಾಡಿದ್ದುದರಿಂದ ತುರುಷ್ಕರ ಸಾಹಸವನ್ನು ತಡೆಯಲು ಶಕ್ತರಾದವರಾರೂ ಇಲ್ಲವಾಗಿತ್ತು. ಕುತ್ಬುದ್ದೀನನಿಗೆ ಅಧೀನರಾಗಿದ್ದ ಸಾಹಸಿಗಳಲ್ಲಿ **ಇಖ್ತ್ಯಾರುದ್ದೀನ್ ಮುಹಮ್ಮದ್** (ಭಕ್ತ್ಯಾರನ ಮಗ) ಎಂಬಾತನು ತಾನೇ ಮುಂದೆ ಬಿದ್ದು ಗಂಗಾ ಶೋಣಾನದಿಗಳ ಮಧ್ಯಪ್ರದೇಶದಲ್ಲಿ ಜಹಗೀರನ್ನು ಸಂಪಾದಿಸಿಕೊಂಡಿದ್ದನು. ಅಲ್ಲಿಂದ ಬಿಹಾರ ಮತ್ತು ತಿರುಭುಕ್ತಿ (Tirhut) ಪ್ರಾಂತಗಳಲ್ಲಿ ಸುಗ್ಗಿ ಆಗಾಗ್ಗೆ ಕೊಳ್ಳೆ ಹೊಡೆಯುತ್ತಲಿದ್ದ ಅವನನ್ನು ಅನೇಕರು ಸೇರಿಕೊಂಡರು. ಸೈನ್ಯವೊಂದು ಈ ರೀತಿ ಸೇರಿದಮೇಲೆ ಇಖ್ತ್ಯಾರುದ್ದೀನನು ಸಾಹಸಕ್ಕೆ ತೊಡಗಿ ಬಿಹಾರನ್ನು ಮುತ್ತಿ, ಅಲ್ಲಿಯ ರಾಜಧಾನಿ **ಉದ್ದಂತಪುರಿ** (Odantapuri) ಯನ್ನು ಹಿಡಿದು ಅಲ್ಲಿದ್ದ ಬೌದ್ಧ ಸಂನ್ಯಾಸಿಗಳೆಲ್ಲರನ್ನೂ ಕೊಲೆಮಾಡಿಸಿ ಅಲ್ಲಿಯ ಪುಸ್ತಕಭಂಡಾರವನ್ನು ಲೂಟಿಮಾಡಿದನು. ಈ ಇಖ್ತ್ಯಾರನು ಅತಿ ಕುರೂಪಿಯಾಗಿದ್ದನು; ನಿಂತಾಗ ಅವನ ಕೈಗಳು ಕಣಕಾಲಿನವರೆಗೂ ತಾಕುವಷ್ಟು ಉದ್ದವಾಗಿದ್ದವು. ಒಂದು ಸಂದರ್ಭದಲ್ಲಿ ಇವನು ಒಂದು

ಆನೆಯೊಡನೆ ಕಾಳಗಕ್ಕೆ ನಿಂತು ಆನೆಯನ್ನೇ ಸೋಲಿಸಿದನಂತೆ. ಬಿಹಾರಿನ ಜಯವಾದ ಕೂಡಲೆ ಈತನು ಢಿಲ್ಲಿಗೆ ಬಂದು ಕುತ್ಬುದ್ದೀನನಿಂದ ಸನ್ಮಾನಿತನಾಗಿ 1193ರಲ್ಲಿಯೇ ಬಿಹಾರಿಗೆ ಹಿಂತಿರುಗಿದನು; ಅಕ್ಕ ಪಕ್ಕ ರಾಷ್ಟ್ರಗಳನ್ನು ಮುತ್ತಲು ಹವಣಿಸಿದನು.

ನವದ್ವೀಪದ ನಷ್ಟ

ಬಂಗಾಳದ ದಕ್ಷಿಣ ಭಾಗದಲ್ಲಿ ಸೇನವಂಶದ ವೃದ್ಧರಾಜ **ಲಕ್ಷ್ಮಣಸೇನ**ನು ನವದ್ವೀಪವೆಂಬ ರಾಜಧಾನಿಯಲ್ಲಿ ಆಳುತ್ತಿದ್ದನು. 1202ರಲ್ಲಿ ಇಖ್ತ್ಯಾರನು ರಾವುತ ಸೈನ್ಯವನ್ನು ಎತ್ತಿಕೊಂಡು ವೇಗವಾಗಿ ಸಂಚರಿಸಿ ನವದ್ವೀಪದ ಬಳಿಗೆ ಬಂದನು. ಅಲ್ಲಿಯ ನಿವಾಸಿಗಳನೇಕರು ಕಾರಣಾಂತರದಿಂದ ಪಟ್ಟಣವನ್ನು ಬಿಟ್ಟು ಬೇರೆಡೆಗೆ ಹೋಗಿದ್ದರು. ರಾಜನು ಮಾತ್ರ ಅಲ್ಲಿಯೇ ಇದ್ದನು. ಇಖ್ತ್ಯಾರನು ನಗರದ ಬಾಗಿಲ ಬಳಿ ಕಾಣಿಸಿಕೊಂಡಾಗ ಅಲ್ಲಿಯವರು ಕುದುರೆ ವ್ಯಾಪಾರಿಗಳೆಂದದುಕೊಂಡು ಅಡ್ಡಿಮಾಡದೆ ಹೋದರು. ಇಖ್ತ್ಯಾರನು ಅಡ್ಡಿಯಿಲ್ಲದೆ ಅರಮನೆಯ ಬಾಗಿಲಿಗೇ ಹೊರಟನು. ಆ ವೇಳೆಯಲ್ಲಿ ರಾಜನು ಊಟಕ್ಕೆ ಸಿದ್ಧನಾಗುತ್ತಿದ್ದನು. ತುರುಷ್ಕರು ಅರಮನೆಯಲ್ಲಿ ನುಗ್ಗಿ ಗಲಾಟೆಯನ್ನೆಬ್ಬಿಸಿದರು; ದ್ವಾರಪಾಲಕರನ್ನು ಕಡಿದುಹಾಕಿ ಒಳಗೆ ದಾಂಧಲೆಮಾಡಿದರು. ಲಕ್ಷ್ಮಣಸೇನ ರಾಜನು ದಿಗ್ಭ್ರಾಂತನಾಗಿ ಹಾಗೆಯೇ ಪಲಾಯನಪರನಾಗಿ ಬೇರೆ ಬಾಗಿಲಿನಿಂದ ಪಾರಾಗಿ ಒಂದು ದೋಣಿಯಲ್ಲಿ ಹೊರಟು ತಲೆತಪ್ಪಿಸಿಕೊಂಡನು. ತುರುಷ್ಕರ ಸೈನ್ಯವೂ ಆ ವೇಳೆಗೆ ಸಿದ್ಧವಾಗಿ ಬಂತು. ನಗರವೆಲ್ಲವೂ ಲೂಟಿಯಾಗಿ ನಾಶವಾಯಿತು. ಆ ತರುವಾಯ ಇಖ್ತ್ಯಾರನು ಗೌರ ಅಥವಾ **ಲಕ್ಷಣಾವತಿ**ಯೆಂಬ ಪಟ್ಟಣದಲ್ಲಿ ನೆಲೆಮಾಡಿ ಬಂಗಾಳ ಪ್ರಾಂತವನ್ನು ತಾನೇ ಆಳಲು ಮೊದಲಿಟ್ಟನು. ಲಕ್ಷ್ಮಣಸೇನರಾಜನು **ಸುವರ್ಣಗ್ರಾಮ** (ಸೊನಾರ್ ಗಾಂವ್)ದ ಬಳಿ **ವಿಕ್ರಮಪುರ**ವನ್ನು ಸೇರಿಕೊಂಡು ಉಳಿದಿದ್ದ ಅಲ್ಪರಾಜ್ಯವನ್ನು ಆಳುತ್ತಿದ್ದು ಅದನ್ನು ತನ್ನ ಮಗ ಮಾಧವಸೇನನೆಂಬವನಿಗೆ ಕೊಟ್ಟು ಸತ್ತನು.

ಲಕ್ಷಣಾವತಿ ಅಥವಾ ಲಖ್ನೌತಿಯಲ್ಲಿ ಭದ್ರನಾದಮೇಲೆ ಇಖ್ತ್ಯಾರನು ಹಿಮವತ್ಪರ್ವತದವರೆಗೂ ಅಧಿಕಾರವನ್ನು ನೆಲೆಗೊಳಿಸುವ ಆಸೆಯನ್ನು

ಬೆಳೆಸಿದನು. ಆ ಪ್ರಾಂತದಲ್ಲಿ ಮಂಗೋಲವರ್ಣದ ಅನೇಕ **ಪರ್ವತೀಯ ಕುಲ**ಗಳಿದ್ದವು. ಕೋಚ್, ಮೇಚ್, ಕಚಾರಿಗಳೆಂಬ ಆ ಕುಲಗಳ ಜನರು ಪ್ರಬಲರಾಗಿಯೇ ಇದ್ದರು. ಮೇಚ್ ಕುಲದ ನಾಯಕನೊಬ್ಬನು ಮುಸ್ಲಿಮನಾಗಿ **ಆಲಿ**ಯೆಂಬ ಹೆಸರನ್ನು ಧರಿಸಿ ಇಖ್ತ್ಯಾರನಿಗೆ ಅನುಕೂಲನಾದನು. ಆ ಕಷ್ಟಸಾಧ್ಯವಾದ ಪ್ರದೇಶಗಳಲ್ಲಿ ದಾರಿಯನ್ನು ತೋರಿಕೊಡುವುದಾಗಿ ಆಲಿಯು ಒಪ್ಪಿಕೊಂಡನು.

ಇಖ್ತ್ಯಾರನ ತೇಜೋಭಂಗ

1205ರಲ್ಲಿ ಇಖ್ತ್ಯಾರನು 10,000 ರಾವುತರೊಡನೆ ಹೊರಟನು. ಕಾಮರೂಪದೇಶದ ರಾಜನು ತಾನು ಅಡ್ಡಿಯಾಗುವುದಿಲ್ಲವೆಂದು ಸಂಧಿಮಾಡಿಕೊಂಡನು. ಆಗ **ದೇವಕೋಟೆ**ಯೆಂಬೆಡೆಯಿಂದ ಹೊರಟು ಇಖ್ತ್ಯಾರನು ಯಾವುದೋ ಒಂದು ದೊಡ್ಡ ನದಿಯ ದಡಕ್ಕೆ ಬಂದನು. ಅಲ್ಲಿಂದ ಹತ್ತು ದಿನ ಪ್ರಯಾಣಮಾಡಿ ಪ್ರಾಯಶಃ ಬರ್ಧಾನ ಕೋಟೆಯ ಬಳಿಗೆ ಬಂದನು. ಅಲ್ಲಿ ನದಿಗೆ ಕಲ್ಲಿನ ಒಂದು ಸೇತುವೆಯಿತ್ತು. ಕಾಮರೂಪ ರಾಜನು ಅಲ್ಲಿಯೇ ಸ್ವಲ್ಪಕಾಲವಿರುವುದು ಮೇಲೆಂದು ಹೇಳಿದುದನ್ನು ಕೇಳದೆ ಇಖ್ತ್ಯಾರನು ಕೆಲವರನ್ನು ಸೇತುವೆಯ ಕಾವಲಿಗಿಟ್ಟು ತಾನು ಇನ್ನೂ ಮುಂದೆ ಹೊರಟು, ಹದಿನೈದು ದಿನ ಪ್ರಯಾಣಮಾಡಿ ಒಂದಾನೊಂದು ಕೋಟೆಯನ್ನು ಸಮೀಪಿಸಿದನು. ಅಲ್ಲಿಯ ಜನರು ಒಟ್ಟುಗೂಡಿ ಇಖ್ತ್ಯಾರನೊಡನೆ ಯುದ್ಧಮಾಡಿದರು; ತುರುಷ್ಕರು ಅನೇಕರು ಹತರಾದುದಲ್ಲದೆ ಸೆರೆಯಾಗಿಯೂ ಸಿಕ್ಕಿದರು. ಶತ್ರುಗಳನ್ನು ಸೇರಲು ಇನ್ನೂ ಇತರ ಜನರು ಬರುತ್ತಿರುವರೆಂದು ಕೇಳಿ ಇಖ್ತ್ಯಾರನು ಹಿಮ್ಮೆಟ್ಟಿದನು.

ಕರತೋಯಾ?

ಬರುವ ದಾರಿಯಲ್ಲಿ ಮಾರ್ಗಗಳನ್ನು ಅಡ್ಡಕಟ್ಟಿ ಆಹಾರವೇ ಸಿಕ್ಕದಂತೆ ಶತ್ರುಗಳು ನೆರವೇರಿಸಿದ್ದರು. ಹಾಗೂ ಹೀಗೂ ಸೇತುವೆಯನ್ನು ಸಮೀಪಿಸಿದಾಗ ಶತ್ರುಗಳು ಅದನ್ನೂ ನಾಶಗೊಳಿಸಿದ್ದರು. ನದಿಯನ್ನು ದಾಟುವುದು ಕಷ್ಟವಾಗಿತ್ತು; ಆ ಸಮಯದಲ್ಲಿ ಕಾಮರೂಪ ರಾಜನು ಇವರ ಮೇಲೆ ತಿರುಗಿಬಿದ್ದು ತುರುಷ್ಕರನ್ನು ನದಿಯಲ್ಲಿ ತಳ್ಳಿಸಿದನು. ಇಖ್ತ್ಯಾರನು ಮಾತ್ರ ಅತಿಸಾಹಸದಿಂದ ಹಲಕೆಲವರೊಡನೆ ಮಾತ್ರ ಲಕ್ಷ್ಮಣಾವತಿಯನ್ನು

ತಲಪಿದನು. ಹೊರಟ ಹತ್ತು ಸಾವಿರ ರಾವುತರಲ್ಲಿ ಪ್ರಾಣವುಳಿಸಿಕೊಂಡು ಬಂದವರು ನೂರು ಮಂದಿ ಕೂಡ ಇರಲಿಲ್ಲ.

ಈ ಪರಾಭವವು ತುರುಷ್ಕರಿಗೆ ಭಯಂಕರವಾಯಿತು. ಯುದ್ಧ ಭೂಮಿಯಲ್ಲಿ ಸೋಲಾಗುವುದು ಒಂದು ವಿಧ. ಒಂದು ದೊಡ್ಡ ಸೈನ್ಯ ಸೈನ್ಯವೇ ಸರ್ವನಾಶವಾದ ಅನುಭವವು ಹೊಸದಾಯಿತು. ಕಾಮರೂಪದ ರಾಜನೂ ಪರ್ವತ ಪ್ರಾಂತಗಳ ಜನರೂ ತುರುಷ್ಕರಿಗೆ ಹುಟ್ಟಿಸಿದ ಭಯವು ಬಹುಕಾಲ ಅವರಲ್ಲಿತ್ತು. ಆ ಪ್ರಾಂತಗಳನ್ನು ಜಯಿಸುವ ಯೋಚನೆ ಯನ್ನೇ ಅವರು ಬಹುಕಾಲ ಮಾಡಲಿಲ್ಲ.

**ಪಂಚನದ—ರಾಯಸಾಲ**

ಇತರೆಡೆಗಳಲ್ಲಿಯೂ ತುರುಷ್ಕರನ್ನು ಪ್ರತಿಭಟಿಸಿ ದೇಶವನ್ನು ಬಿಡಿಸಿ ಕೊಳ್ಳಲು ಪ್ರಯತ್ನಗಳು ನಡೆದವು. 1205ರಲ್ಲಿ ಸುಲ್ತಾನ್ ಮುಹಮ್ಮದನು ಸತ್ತನೆಂಬ ಸುದ್ದಿ ಹರಡಿತು ; ಪಂಚನದ ಪ್ರದೇಶದ ಖೊಕ್ಕರನ್ನೊಟ್ಟು ಗೂಡಿಸಿಕೊಂಡು **ರಾಯಸಾಲ**ನೆಂಬೊಬ್ಬ ಶೂರ ರಾಜಪುತ್ರನು ತುರುಷ್ಕ ಅಧಿಕಾರಿಯನ್ನು ಸೋಲಿಸಿ ಲಾಹೋರನ್ನು ಹಿಡಿದು ಪೊಗದಿಯನ್ನು ಅಡ್ಡಿಮಾಡಿದನು. ಇನ್ನೂ ಬದುಕಿದ್ದ ಮುಹಮ್ಮದನು ಹೊರಟು ಬಂದು ವಿತಸ್ತಾ ಚಂದ್ರಭಾಗಾ ನದಿಗಳ ಮಧ್ಯೆ ಯುದ್ಧವನ್ನು ಕೊಟ್ಟನು. ರಾಯ ಸಾಲನು ಭದ್ರವಾದ ಸ್ಥಾನದಲ್ಲಿ ಗುಲ್ಮರಚನೆಯನ್ನು ಮಾಡಿದ್ದನು ; ನಡೆದ ಕಾಳಗದಲ್ಲಿ ಖೊಕ್ಕರು ಪ್ರಾತಃಕಾಲದಿಂದ ಮಧ್ಯಾಹ್ನದವರೆಗೂ ಹುರುಪಿ ನಿಂದ ಹೋರಾಡಿ ಶತ್ರುಗಳನ್ನು ಸೋಲಿಸುವುದರಲ್ಲಿದ್ದರು. ಆ ವೇಳೆಗೆ ಸರಿಯಾಗಿ ಕುತ್ಬುದ್ದೀನನು ಸೈನ್ಯ ಸಹಿತನಾಗಿ ಸುಲ್ತಾನನ ಸಹಾಯ ಕ್ಕೊದಗಿಕೊಂಡನು. ಹೊಸ ಸೈನ್ಯವನ್ನು ಕಂಡು ಆಯಾಸಗೊಂಡಿದ್ದ ಖೊಕ್ಕರು ಜಯವಾಗಲಾರದೆಂದು ರಣಭೂಮಿಯಿಂದ ಕಾಲ್ದೆಗೆದರು.

**ಖೊಕ್ಕ ನಾಯಕರು**

ತುರುಷ್ಕರು ಅವರ ಬೇಟೆಯಾಡಿ ಅನೇಕರನ್ನು ಧ್ವಂಸಮಾಡಿ ಅನೇಕರನ್ನು ಗುಲಾಮರನ್ನಾಗಿ ಹಿಡಿದರು. ಒಂದು ದೀನಾರಕ್ಕೆ ಐವರು ಖೊಕ್ಕ ರಂತೆ ವ್ಯಾಪಾರವಾಯಿತು. ಆದರೂ ಅನೇಕರು ತಪ್ಪಿಸಿಕೊಂಡು ಅರಣ್ಯ ಗಳನ್ನು ಸೇರಿಕೊಂಡರು. **ಸರ್ಕ**ನೆಂಬ ಖೊಕ್ಕ ನಾಯಕನು ಯುದ್ಧ



ರಾಜಗೋಪಾಲ್ ಫೋಟೊ ಜಿಂಕೊ ಆಫೀಸ್, ಬೆಂಗಳೂರು ಸಿಟಿ

ದಲ್ಲಿಯೇ ಪ್ರಾಣಗಳನ್ನರ್ಪಿಸಿದ್ದನು; **ಬಕನ್** ಎಂಬ ಮತ್ತೊಬ್ಬನು ಒಂದು ಗಿರಿದುರ್ಗವನ್ನು ಸೇರಿ ಸ್ವಲ್ಪಕಾಲದ ತರುವಾಯ ಅಧೀನನಾದನು. ಅರಣ್ಯಗಳಲ್ಲಿ ಅಡಗಿದ್ದವರನ್ನು ನಾಶಗೊಳಿಸಲು ತುರುಷ್ಕರು ಅರಣ್ಯಕ್ಕೇ ಬೆಂಕಿಯಿಟ್ಟರು; ಕಾಡ್ಗಿಚ್ಚಿನಲ್ಲಿ ಅನೇಕ ಖೊಕ್ಕರು ನಾಶವನ್ನು ಹೊಂದಿದರು.

1206ರಲ್ಲಿ ಸುಲ್ತಾನನು ಪ್ರಾಯಶಃ **ಇಸ್ಮಾಯಿಲೀ ಪಂಥ**ದವರ ದೆಸೆಯಿಂದ ಹತನಾದನು. ಆತನ ದಳಪತಿ ಪ್ರಮುಖರಾಗಿದ್ದ **ಕಬಾಚ, ಕುತ್ಬುದ್ದೀನ್, ಇಖ್ತ್ಯಾರುದ್ದೀನ್** ಎಂಬ ಮೂವರು ಪಂಚನದ, ಮಧ್ಯದೇಶ, ಮಗಧ ಗೌಡದೇಶಗಳಲ್ಲಿ ದುರ್ಗಗಳನ್ನು ಹಿಡಿದು ರಾಜ್ಯವನ್ನು ರೂಢಿಸುವ ಪ್ರಯತ್ನದಲ್ಲಿ ತೊಡಗಿದರು. 1206ರಲ್ಲಿಯೇ ಕುತ್ಬುದ್ದೀನನು ಡಿಲ್ಲಿಯಲ್ಲಿ ಸುಲ್ತಾನನೆನಿಸಿದನು.

ದೀರ್ಘ ದ್ವಂದ್ವ ಪ್ರಾರಂಭ

ಸಿಂಧುದೇಶವು 8ನೆ ಶತಮಾನದಲ್ಲಿ ಅರಬ್ಬೀ ಜನರಿಗೆ ವಶವಾಗಿ ಕೆಲಕಾಲದ ತರುವಾಯ ಇಸ್ಲಾಮಿಾ ಮತವನ್ನೇ ಸ್ವೀಕರಿಸಿದ ರಾಜಪುತ್ರಕುಲದವರಿಗೆ ಕೈಸೇರಿತ್ತು. ಮೂಲ್ತಾನ್ ಪ್ರದೇಶದಲ್ಲಿ ಅರಬ್ಬಿಯವರ ಅಧಿಕಾರವು ಸ್ಥಾಪಿತವಾಗಿ ಇಸ್ಮಾಯಿಲೀ ಪಂಥದ ಮುಸಲ್ಮಾನರ ರಾಜ್ಯ ನಡೆಯುತ್ತಿತ್ತು. ಪಂಚನದ ಕ್ಷೇತ್ರದಲ್ಲಿ ತುರುಷ್ಕರು ಪದೇ ಪದೇ ನುಗ್ಗಿ ಬರುತ್ತಿದ್ದುದರಿಂದ ಅಲ್ಲಿ ರಾಜಪುತ್ರರಾಜರ ಅಧಿಕಾರವು ನಡೆಯಲಿಲ್ಲ. ಪ್ರತೀಹಾರ ರಾಜರು ಸಾಹಸಪಟ್ಟ ತರುವಾಯ ತುರುಷ್ಕರ ಅಧಿಕಾರಕ್ಕೆ ಹಿಂದೂ ಜನರು ಸಹಾಯಮಾಡಿದಂದಿನಿಂದ ಅವರ ಅಧಿಕಾರವು ನಡೆಯಲಾರಂಭವಾಯಿತು. ದುರ್ಗಗಳೂ ಮುಖ್ಯ ಪಟ್ಟಣಗಳೂ ಅವರ ಸ್ವಾಧೀನವಾಗಿದ್ದವು. ಜಾತರು, ಖೊಕ್ಕರು ಮುಂತಾದವರು ಪದೇ ಪದೇ ತಿರುಗಿಬೀಳುತ್ತಲೇ ಇರುತ್ತಿದ್ದರು. ಖೊಕ್ಕಕುಲದವರನ್ನು ಅಡಗಿಸುವುದು ಘೋರಿ ಮಹಮ್ಮದನಿಗೆ ಅತಿಪ್ರಯಾಸಕರವೇ ಆಯಿತು. ಯಮುನಾ ಶತದ್ರು ನದಿಗಳ ನಡುವಣ ಚಾಹುಮಾನ ರಾಷ್ಟ್ರವು ಪೃಥ್ವೀರಾಜನ ತರುವಾಯ ತುರುಷ್ಕರಿಗೆ ವಶವಾಯಿತೆಂದು ಹೇಳಬಹುದು. ಪಾಂಚಾಲ ಚೇದಿ ರಾಷ್ಟ್ರಗಳ ಮುಖ್ಯ ದುರ್ಗಗಳು ಕುತ್ಬುದ್ದೀನನಿಗೆ ವಶವಾದವು.

ಸೆಬುಕ್ತಗೀನನ ಕಾಲದಿಂದ ಆರಂಭಮಾಡಿ 1206ರ ವರೆಗೆ ಅಂದರೆ ಸುಮಾರು 200 ವರ್ಷ ಕಾಲ ಈ ಕ್ಷೇತ್ರಗಳಲ್ಲಿ ತುರುಷ್ಕರಿಗೂ ರಾಜಪುತ್ರರಿಗೂ ಹೋರಾಟವು ನಡೆಯಿತು. ವಾಯುವ್ಯಭಾಗಗಳ ಮುಖ್ಯ ದುರ್ಗಗಳನ್ನು ಹಿಡಿಯಲು ತುರುಷ್ಕರಿಗೆ ಎರಡು ಶತಮಾನಗಳೇ ಬೇಕಾದವು. ಅಲ್ಲಿಂದ ಮುಂದೆ ನದೀಬಯಲುಗಳಲ್ಲಿದ್ದ ತುರುಷ್ಕರಿಗೂ ಗಿರಿದುರ್ಗಗಳಲ್ಲಿಯೂ ಪ್ರಸ್ಥ ಭೂಮಿಯಲ್ಲಿಯೂ ನೆಲೆಯಾಗಿದ್ದ ರಾಜಪುತ್ರರಿಗೂ ಸಮಯವೊದಗಿದಂತೆಲ್ಲ ಯುದ್ಧ ಪ್ರತಿಯುದ್ಧಗಳು ನಡೆಯುತ್ತಲೇ ಇದ್ದವು.

## ದಕ್ಷಿಣಾಪಥ (1000–1300)

**ಕಲ್ಯಾಣಿಯ ಚಾಲುಕ್ಯರು**

ದಖನ್ನಿನಲ್ಲಿ ರಾಷ್ಟ್ರಕೂಟರ ರಾಷ್ಟ್ರಧ್ವಂಸವಾಗಿ 973ರಲ್ಲಿ ಚಾಲುಕ್ಯ ಕುಲದ **ತೈಲಪ**ನೆಂಬಾತನು ತನ್ನ ರಾಜ್ಯವನ್ನು ಭದ್ರಗೊಳಿಸಿಕೊಳ್ಳುವ ಪ್ರಯತ್ನದಲ್ಲಿ ನೆರೆಹೊರೆಯವರೊಡನೆ ಹೋರಾಡುತ್ತಿದ್ದು 24 ವರುಷಗಳ ಕಾಲವನ್ನು ಕಳೆದನು. ಮಾಳವದೇಶದ ಮುಂಜರಾಜನೊಡನೆ ಈತನು ನಡೆಸಿದ ದ್ವಂದ್ವವು ಪ್ರಸಿದ್ಧವಾಗಿದೆ. ಅನೇಕಸಲ ಯುದ್ಧಗಳಾದ ತರುವಾಯ ಕಡೆಗೆ ಮುಂಜರಾಜನು ಸೆರೆ ಸಿಕ್ಕಿ ಕಲ್ಯಾಣಿಯಲ್ಲಿ ಅವಮಾನ ಕ್ಕೊಳಗಾಗಿ ಶಿರಚ್ಛೇದಕ್ಕೆ ಗುರಿಯಾದನು. ತೈಲಪನು ಹಿಂದೆ ಆಳಿದ್ದ ಚಾಲುಕ್ಯ ಕುಲಕ್ಕೇ ಸೇರಿದವನಾಗಿ ಕನ್ನಡ ನಾಡೆಲ್ಲವನ್ನೂ ಸ್ವಾಧೀನ ಪಡಿಸಿಕೊಂಡು **ಕಲ್ಯಾಣಿ**ಯನ್ನೇ ರಾಜಧಾನಿಯಾಗಿ ಸ್ಥಾಪಿಸಿದನು. ಈತನ ತರುವಾಯ ಆಳಿದ **ಸತ್ಯಾಶ್ರಯ** ಅಥವಾ **ಇರಿವಬೆಡಂಗ**ನೆಂಬ (997–1008) ರಾಜನ ಆಸ್ಥಾನದಲ್ಲಿಯೇ ಕನ್ನಡ ಕವಿಚಕ್ರವರ್ತಿಯೆನಿಸಿದ **ರನ್ನ**ನಿದ್ದುದು. ಆ ತರುವಾಯ 1015ರಿಂದ 1042ರ ವರೆಗೆ ಆಳಿದ **ಜಗದೇಕಮಲ್ಲ**ನೆಂಬಾತನು ಶೂರನಾಗಿ ರಾಜ್ಯವನ್ನು ವಿಸ್ತರಿಸಿದನು. 1043ರಲ್ಲಿ ಪಟ್ಟವನ್ನೇರಿದ **ಸೋಮೇಶ್ವರ** Iನೆಂಬಾತನು ವೀರನಾಗಿಯೂ ಧರ್ಮಿಷ್ಠನಾಗಿಯೂ ಆಳಿದನು. ಆತನು ಚೋಳರೊಡನೆಯೂ ಪರಮಾರ ಭೋಜರಾಜನೊಡನೆಯೂ ಯುದ್ಧಗಳನ್ನು ನಡೆಸಿ ಜಯಶಾಲಿಯಾದುದಲ್ಲದೆ ದಾನ ಧರ್ಮಗಳನ್ನು ವಿಶೇಷವಾಗಿ ಮಾಡಿದನು. ಅಂತ್ಯ ಕಾಲದಲ್ಲಿ

ಯಾವುದೋ ರೋಗವು ತಗಲಲು ಈ ರಾಜನು ತುಂಗಭದ್ರಾ ನದಿಯಲ್ಲಿ ಮುಳುಗಿ ಪ್ರಾಣಗಳನ್ನು ತಾನಾಗಿಯೇ ಅರ್ಪಿಸಿದನು.

ಭ್ರಾತೃ ಕಲಹ

ಸೋಮೇಶ್ವರನ ಮಕ್ಕಳಲ್ಲಿ ಎರಡನೆಯಾತನೇ **ಚಾಲುಕ್ಯ ವಿಕ್ರಮಾದಿತ್ಯ** ಅಥವಾ **ತ್ರಿಭುವನಮಲ್ಲ**ನೆಂದು ಪ್ರಸಿದ್ಧನಾದಾತನು. 1076ರಲ್ಲಿ ಪಟ್ಟವನ್ನೇರುವ ಮೊದಲು ಈತನು ತನ್ನ ಶೌರ್ಯ ಪ್ರತಾಪಗಳನ್ನು ಅನೇಕ ವೇಳೆಗಳಲ್ಲಿ ಪ್ರದರ್ಶಿಸಿದ್ದನು. ಅಣ್ಣನಾದ **ಇಮ್ಮಡಿ ಸೋಮೇಶ್ವರ**ನು ರಾಜಪದವಿಯನ್ನು ಪಡೆದಾಗ ವಿಕ್ರಮಾದಿತ್ಯನು ಯುವರಾಜ ಪದವಿಯಿಂದಲೇ ತೃಪ್ತನಾಗಿದ್ದನು. ಆದರೆ ಕಾಲವು ಚಾಲುಕ್ಯ ವಂಶಸ್ಥರಿಗೆ ಅನುಕೂಲವಾಗಿರಲಿಲ್ಲ; ಚೋಳ ವಂಶಸ್ಥರು ವೆಂಗಿಮಂಡಲವನ್ನು ಸಾಧಿಸಿದ್ದುದಲ್ಲದೆ ದಖನ್ನಿನಲ್ಲೆಲ್ಲ ಅದ್ವಿತೀಯರಾಗಿ ಪದೇಪದೇ ಚಾಲುಕ್ಯರಿಗೆ ಅಡ್ಡಿಮಾಡುತ್ತಿದ್ದರು. ವಿಕ್ರಮಾದಿತ್ಯನು ಚೋಳರ ರಾಜಪುತ್ರಿಯನ್ನು ಮದುವೆಯಾಗಿ ಚೋಳವಂಶಜರಲ್ಲಿ ನಡೆಯುತ್ತಿದ್ದ ಪಟ್ಟದ ಜಗಳಗಳಲ್ಲಿ ಪ್ರವೇಶಿಸಿ ಪರಾಕ್ರಮಿಯೆನಿಸಿದನು. ಅಣ್ಣನ ರಾಜ್ಯಭಾರವು ಸಮರ್ಪಕವಾಗಿ ನಡೆಯುತ್ತಿರಲಿಲ್ಲ; ಅಲ್ಲದೆ ಅಣ್ಣನು ವಿಕ್ರಮಾದಿತ್ಯನಲ್ಲಿ ಅಸೂಯಾವಿಷ್ಟನಾಗಿ ದ್ರೋಹಮಾಡಿದನು. ಇಬ್ಬರಿಗೂ ಯುದ್ಧವಾಯಿತು; ಅಣ್ಣ ಸೋಮೇಶ್ವರನು ಸೋತು ಸೆರೆಯಾದನು. ತರುವಾಯ ವಿಕ್ರಮಾದಿತ್ಯನೇ ಕಲ್ಯಾಣಿ ನಗರದಲ್ಲಿ ಅಭಿಷಿಕ್ತನಾದನು.

ತ್ರಿಭುವನಮಲ್ಲ
ವಿಕ್ರಮಾದಿತ್ಯ VI

ವಿಕ್ರಮಾದಿತ್ಯನ ಚರಿತ್ರೆಯು **ವಿಕ್ರಮಾಂಕದೇವ ಚರಿತ್ರ** ಎಂಬ ಗ್ರಂಥದಲ್ಲಿ ಉಲ್ಲಿಖಿತವಾಗಿದೆ. ಆ ಕಾವ್ಯವನ್ನು ರಚನೆಮಾಡಿದ **ಬಿಲ್ಹಣಕವಿ**ಯು ಕಾಶ್ಮೀರದೇಶಸ್ಥನಾದಾಗ್ಯೂ ವಿಕ್ರಮಾದಿತ್ಯನ ಕೀರ್ತಿಯನ್ನು ಕೇಳಿ ಕಲ್ಯಾಣಿನಗರಕ್ಕೆ ಬಂದು ಆಸ್ಥಾನ ಕವಿಯಾಗಿದ್ದನು. ವಿದ್ಯಾಪಕ್ಷಪಾತಿಯಾದ ವಿಕ್ರಮಾದಿತ್ಯನ ಆಸ್ಥಾನದಲ್ಲಿ ಧರ್ಮಶಾಸ್ತ್ರಜ್ಞರಲ್ಲಿ ಪ್ರಸಿದ್ಧನಾದ **ವಿಜ್ಞಾನೇಶ್ವರ**ನೆಂಬಾತನೂ ಇದ್ದನು. ಈತನು ರಚಿಸಿದ **ಮಿತಾಕ್ಷರ**ವೆಂಬ ಗ್ರಂಥವೇ ದಖನ್ನಿನಲ್ಲಿ ನ್ಯಾಯಶಾಸ್ತ್ರಕ್ಕೆ ಆಧಾರಭೂತವೆನಿಸಿದೆ. ವಿಕ್ರಮಾದಿತ್ಯನ ಆಸ್ಥಾನವು ಈ ರೀತಿ ಪಂಡಿತಜನರಿಂದಲೂ

ಕವಿಶ್ರೇಷ್ಠರಿಂದಲೂ ಶೋಭಿಸಿತು. ವಿಕ್ರಮಾದಿತ್ಯನಿಗೆ **ಚೋಳ**ರಾಜರು ಕೃತಜ್ಞರಾಗಿದ್ದರು; **ರಟ್ಟ**ಕುಲದವರು, **ಕದಂಬ**ಕುಲದವರು, **ಯಾದವ** ಕುಲದವರು, **ಹೊಯಿಸಳ**ಕುಲದವರು, **ಗಂಗ**ವಂಶಜರು, **ಶಿಲಾಹಾರ** ವಂಶದವರು, **ಕಟಚ್ಚುರಿ** ಅಥವಾ **ಕಲಚುರಿ** ವಂಶಸ್ಥರು ಸಾಮಂತ ರಾಗಿದ್ದರು. 1076ರಿಂದ 1126ರವರೆಗೆ ಸತ್ಕೀರ್ತಿಯನ್ನು ಗಳಿಸುತ್ತ ಆಳಿದ ಈ ವಿಕ್ರಮಾದಿತ್ಯನು 1076ರಲ್ಲಿ **ಚಾಲುಕ್ಯ ವಿಕ್ರಮ ಶಕೆ**ಯೆಂಬ ಶಕೆಯನ್ನು ಸ್ಥಾಪಿಸಿದನು. ಆತನ ಆಳ್ವಿಕೆಯಲ್ಲಿ ಜನರು ನೆಮ್ಮದಿಯಿಂದಿದ್ದುದಲ್ಲದೆ ಅನೇಕಾನೇಕ ಜಲಾಶಯಗಳೂ ದೇವಮಂದಿರಗಳೂ ನಿರ್ಮಿತವಾದವು.

ಭೂಲೋಕಮಲ್ಲ ಸೋಮೇಶ್ವರ III

ವಿಕ್ರಮಾದಿತ್ಯನ ತರುವಾಯ ಆತನ ಮಗ **ಮುಮ್ಮಡಿ ಸೋಮೇಶ್ವರ**ನು ಅರಸಾದನು. ಈತನು ಮಹಾಪಂಡಿತನಾಗಿದ್ದು **ಸರ್ವಜ್ಞ ಚಕ್ರವರ್ತಿ**ಯೆಂಬ ಬಿರುದನ್ನು ಪಡೆದಿದ್ದನು. ಸಂಸ್ಕೃತದಲ್ಲಿ **ಅಭಿಲಷಿತಾರ್ಥ ಚಿಂತಾಮಣಿ**ಯೆಂಬ ಗ್ರಂಥವನ್ನು ರಚಿಸಿದನು. ಪಾಂಡಿತ್ಯದಲ್ಲಿ ಪ್ರೌಢಿಮೆಯನ್ನು ಪಡೆದ ಈ ಪ್ರಭುವು ಪ್ರಾಯಶಃ ಸಾಮಂತರನ್ನು ದರ್ಪದಿಂದ ಆಳಲಿಲ್ಲ. ಆ ಕಾರಣದಿಂದಲೇ ಆತನ ತರುವಾಯ ಸಾಮಂತರು ಸ್ವತಂತ್ರರಾಗಲು ಬಯಸಿ ಪ್ರಯತ್ನಪರರಾದರು. ದೋರಸಮುದ್ರದ ಹೊಯಿಸಳ ಬಲ್ಲಾಳರು, ದೇವಗಿರಿಯ ಯಾದವರು, ಸವದತ್ತಿಯ ರಟ್ಟರು, ಹಾನುಗಲ್ಲಿನ ಕದಂಬರು ಮುಂತಾದವರು ಸ್ವತಂತ್ರರಾಗಲು ಸಿದ್ಧರಾಗುತ್ತಿದ್ದರು.

ಬಿಜ್ಜಳನ ರಾಜ್ಯಾಪಹಾರ

ಮುಮ್ಮಡಿ ಸೋಮೇಶ್ವರ ಅಥವಾ ಭೂಲೋಕಮಲ್ಲನ ತರುವಾಯ 1138ರಲ್ಲಿ **ಜಗದೇಕಮಲ್ಲ**ನೆಂಬಾತನು ಕೆಲಕಾಲವಾಳಿದನು. ಆ ಬಳಿಕ ಪಟ್ಟವನ್ನೇರಿದ **ತೈಲಪ** ರಾಜನು ದುರ್ಬಲನಾಗಿದ್ದು 1157ರಲ್ಲಿ ತನ್ನ ಸಾಮಂತನಾಗಿದ್ದ ಕಲಚೂರ್ಯವಂಶ **ಬಿಜ್ಜಳ ದಂಡಾಧಿಪತಿ**ಯಿಂದಲೇ ಬಂಧಿತನಾಗಿ ರಾಜ್ಯವನ್ನು ಕಳೆದುಕೊಂಡನು. ಕಲ್ಯಾಣಿನಗರದಲ್ಲಿ **ಕಲಚೂರ್ಯ** ವಂಶವು ಸ್ಥಾಪಿತವಾಯಿತು; ಇತರ ಸಾಮಂತರು ಇದ

ಕೊಳ್ಳುವುದೆ ತಮ್ಮ ಪ್ರಾಂತಗಳಲ್ಲಿ ಸ್ವತಂತ್ರರಾದರು. ಜೈನಮತವನ್ನವಲಂಬಿಸಿದ್ದ ಬಿಜ್ಜಳರಾಯನಲ್ಲಿಯೇ ಲಿಂಗವಂತ ಮತಸ್ಥಾಪಕನಾದ **ಬಸವೇಶ್ವರ**ನು ಮಂತ್ರಿಯಾಗಿದ್ದನು. ಜೈನರಿಗೂ ವೀರಶೈವ ಮತದವರಿಗೂ ವಿರೋಧವು ಪ್ರಬಲವಾಗಿ ರೇಗಿ ನಡೆದ ಕೋಲಾಹಲದಲ್ಲಿ ಬಿಜ್ಜಳನು ಹತನಾದನು; ಬಸವೇಶ್ವರನು ಜೈನರ ಆಗ್ರಹಕ್ಕೆ ಗುರಿಯಾದನು. ಈ ಸಂದರ್ಭದಲ್ಲಿ ಚಾಲುಕ್ಯ ವಂಶಜರಿಗೆ ಅವಕಾಶ ಸಿಕ್ಕಿತು. **ಬ್ರಹ್ಮದಂಡೇಶ**ನೆಂಬ ದಳಪತಿಯು ಚಾಲುಕ್ಯವಂಶದ **ನಾಲ್ವಡಿ ಸೋಮೇಶ್ವರ**ನಿಗಾಗಿ ಯುದ್ಧಮಾಡಿ ಕಲಚೂರ್ಯರ ಬಲವನ್ನು ಮುರಿದು 1189ರಲ್ಲಿ ಸೋಮೇಶ್ವರನಿಗೆ ಪಟ್ಟಕಟ್ಟಿದನು. ಆದರೆ ಚಾಲುಕ್ಯ ಸಾಮ್ರಾಜ್ಯವು ಪುನಃ ತಲೆ ಎತ್ತಲಿಲ್ಲ. ಉತ್ತರ ಭಾಗದಲ್ಲಿ **ಯಾದವ**ವಂಶದವರೂ, ದಕ್ಷಿಣ ಭಾಗದಲ್ಲಿ **ಹೊಯಿಸಳ**ರೂ ಸ್ವತಂತ್ರರೂ ಬಲಿಷ್ಠರೂ ಆಗಿ ತಮ್ಮ ರಾಜ್ಯಗಳನ್ನು ವಿಸ್ತರಿಸಿಕೊಳ್ಳಲು ಸಿದ್ಧರಾದರು. ಇವರಿಬ್ಬರ ನಡುವೆ ಸಿಕ್ಕಿದ ಸೋಮೇಶ್ವರನು ಕೆಲಕಾಲ ಮಾತ್ರ ಅರಸೆನಿಸಿದ್ದು ವಂಶಕ್ಕೇ ಕಡೆಯ ಅರಸಾದನು.

ಕಲ್ಯಾಣಿಯ ಚಾಲುಕ್ಯ ಸಾಮ್ರಾಜ್ಯವು ಈ ರೀತಿಯಲ್ಲಿ 12ನೆ ಶತಮಾನದ ಕೊನೆ ಭಾಗದಲ್ಲಿ ಒಡೆದುಹೋಯಿತು. ಸಾಮಂತರಲ್ಲಿ ಯಾದವರೂ ಹೊಯಿಸಳರೂ ಉತ್ತರ ದಕ್ಷಿಣ ಭಾಗಗಳನ್ನು ರೂಢಿಸಿಕೊಂಡು ಸ್ವತಂತ್ರರಾದುದಲ್ಲದೆ ತಮ್ಮ ಆಧಿಪತ್ಯಗಳನ್ನು ವಿಸ್ತಾರಪಡಿಸಿಕೊಳ್ಳುವುದಕ್ಕೂ ತೊಡಗಿದರು.

ಯಾದವ ವಂಶ

ಯಾದವರೆಂದು ಪ್ರಸಿದ್ಧರಾದ ಕುಲದವರು ಗೋದಾವರಿ ನದಿಯ ಮೂಲ ಪ್ರದೇಶದಲ್ಲಿ ಪೂರ್ವ ಕಾಲದಿಂದಲೂ ನೆಲೆಸಿದ್ದವರು; ಅವರ ರಾಜ್ಯಕ್ಕೆ **ಸೇವುಣ** ರಾಜ್ಯವೆಂದೂ ಹೆಸರುಂಟು. ರಾಷ್ಟ್ರಕೂಟರ ಕಾಲದಲ್ಲಿಯೂ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿಯೂ ಇವರು ಸಾಮಂತರಾಗಿದ್ದು 11ನೆ ಶತಮಾನದಲ್ಲಿ ಪ್ರಾಬಲ್ಯವನ್ನು ಪಡೆದರು. ತ್ರಿಭುವನಮಲ್ಲ ವಿಕ್ರಮಾದಿತ್ಯನ ಕಾಲದಲ್ಲಿ ಯಾದವಕುಲ ಪ್ರಮುಖ **ಭಿಲ್ಲಮ**ನು ದಂಡನಾಯಕನಾಗಿದ್ದನು. ಭೂಲೋಕಮಲ್ಲನ ತರುವಾಯ ಸಾಮ್ರಾಜ್ಯಬಂಧವು ಸಡಲಿ ಹೋಗಲು ಯಾದವ ಕುಲದವರೇ ಮೊದಲು ಸ್ವತಂತ್ರ

ರಾದರು. 1187ರಲ್ಲಿ ಸ್ವತಂತ್ರನಾಗಿ ಕೃಷ್ಣಾನದಿಗೆ ಉತ್ತರದಲ್ಲಿರುವ ಪ್ರದೇಶವೆಲ್ಲವನ್ನೂ ಸ್ವಾಧೀನಗೊಳಿಸಿಕೊಂಡ ಭಿಲ್ಲಮನನ್ನೇ ಮೊದಲ ರಾಜನನ್ನಾಗಿ ಗಣಿಸಬೇಕು. ಈತನಿಗೂ ಹೊಯಿಸಳರಲ್ಲಿ ರಾಜನಾಗಿ ಪ್ರತಾಪಶಾಲಿಯಾಗಿದ್ದ ವೀರಬಲ್ಲಾಳದೇವನಿಗೂ 1191ರಲ್ಲಿ ಗದಗಿನ ಬಳಿ

ಭಿಲ್ಲಮ

**ಸೊರಟೂರೆಂ**ಬಲ್ಲಿ ಕದನವಾಯಿತು; ಭಿಲ್ಲಮನು ಸೋತುದಲ್ಲದೆ ಯುದ್ಧದಲ್ಲಿಯೇ ಮಡಿದನು. ಆ ತರುವಾಯ ಭಿಲ್ಲಮನ ಮಗ **ಜೈತುಗಿ**ಯು ರಾಜನಾಗಿ ಹೊಯಿಸಳರ ಗೋಜಿಗೆ ಹೋಗದೆ ಮೂಡಲಲ್ಲಿ ಆಳುತ್ತಿದ್ದ ಕಾಕತೀಯವಂಶದ ಮಹಾದೇವರಾಜನೊಡನೆ ಯುದ್ಧಮಾಡಿ ಆತನನ್ನು ಸಂಹರಿಸಿದನು. ಮೂಡಲ ಮೇರೆಯು ಈ ರೀತಿಯಲ್ಲಿ ಭದ್ರವಾಯಿತು. ಜೈತುಗಿಯ ತರುವಾಯ 1210ರಲ್ಲಿ ಪ್ರಸಿದ್ಧನಾದ **ಸಿಂಘಣದೇವ**ನು ಪಟ್ಟವನ್ನೇರಿದನು. ಈತನು ಪುರಾತನ ಕಾಲದಿಂದಲೂ ಹೆಸರುವಾಸಿಯಾಗಿದ್ದ **ತಗರ**ವೆಂಬ ನಗರವನ್ನೇ ರಾಜಧಾನಿಯನ್ನಾಗಿ ನೆಲೆಗೊಳಿಸಿಕೊಂಡು ಅದಕ್ಕೆ **ದೇವಗಿರಿ**ಯೆಂಬ ಹೆಸರನ್ನಿಟ್ಟನು. ಈ ಪಟ್ಟಣವೇ ತರುವಾಯ ದೌಲತಾಬಾದ್ ಎಂದು ಹೆಸರಾಯಿತು. ಸಿಂಘಣರಾಜನು

ಸಿಂಘಣ

ಕಾಕತೀಯ ರಾಜರೊಡನೆ ಯುದ್ಧಮಾಡುತ್ತಲಿದ್ದು ಕಡೆಗೆ ತನ್ನ ಮಗಳನ್ನು ಮದುವೆಮಾಡಿಕೊಟ್ಟು ಸ್ನೇಹ ಸಂಬಂಧಗಳನ್ನು ಕಟ್ಟಿದನು. ಈತನ ರಾಜ್ಯದಲ್ಲಿ 84 ದುರ್ಗಗಳಿದ್ದುವಂತೆ.

ಸಿಂಘಣನ ತರುವಾಯ ಆಳಿದವರಲ್ಲಿ 1271ರಿಂದ 1310ರವರೆಗೆ ಆಳಿದ ರಾಮಚಂದ್ರದೇವನು ಪ್ರಸಿದ್ಧನು. ಹಿಂದಿನ

ರಾಮಚಂದ್ರದೇವ

ರಾಷ್ಟ್ರಕೂಟ ಸಾಮ್ರಾಜ್ಯದ ಉತ್ತರಭಾಗವನ್ನೇ ಆಳುತ್ತಿದ್ದರೂ ಕೂಡ ಯಾದವರಾಜರು ರಾಷ್ಟ್ರಕೂಟರಂತೆ ಉತ್ತರ ರಾಷ್ಟ್ರಗಳ ಸಂಬಂಧವನ್ನು ಬೆಳೆಸಲಿಲ್ಲ. ಮಹಮ್ಮದ್ ಘೋರಿಯ ಅವಾಂತರವೂ ಆ ತರುವಾಯ ಗುಲಾಮೀ ಸುಲ್ತಾನರ ಆಳ್ವಿಕೆಯೂ ನಡೆಯುತ್ತಿದ್ದಾಗ ಯಾದವರಾಜರು ತಮ್ಮ ರಾಜ್ಯವನ್ನಾಳಿಕೊಳ್ಳುವುದರಲ್ಲಿಯೇ ನಿರತರಾಗಿದ್ದು ಬಿಟ್ಟರು. ರಾಮಚಂದ್ರದೇವನು

ರಾಜ್ಯಭಾರವಮಾಡುವ ವೇಳೆಗೆ ಡಿಲ್ಲಿಯಲ್ಲಿ **ಖಿಲ್ಜಿವಂಶವು** ಸ್ಥಾಪಿತ ವಾಗಿತ್ತು; ಆ ವಂಶದ **ಅಲ್ಲಾವುದ್ದೀನ್ ಖಿಲ್ಜಿ**ಯು ಸುಲತಾನನಾಗುವ ಮೊದಲೇ 1294ರಲ್ಲಿ ವಿಂಧ್ಯಪರ್ವತವನ್ನು ದಾಟಿಬಂದು ಆಕಸ್ಮಿಕವಾಗಿ ದೇವಗಿರಿಯ ರಾಜ್ಯದಲ್ಲಿ ನುಗ್ಗಿ ರಾಜಧಾನಿಯನ್ನು ಸಮೀಪಿಸಿದನು. ಡಿಲ್ಲಿಯ ಸುಲತಾನನು ತನ್ನನ್ನು ಅನ್ಯಾಯವಾಗಿ ಓಡಿಸಿದ್ದುದರಿಂದ ಆಶ್ರಯಬೇಡಲು ಬಂದಿರುವುದಾಗಿ ಅಲ್ಲಾವುದ್ದೀನನು ಹರಡಿದ ಸಮಾಚಾರದಿಂದ ಮೋಸ ಹೋಗಿ ರಾಮಚಂದ್ರದೇವನು ಆತನನ್ನು ಬರಮಾಡಿಕೊಂಡನು. ಸಮಯವರಿತು ಅಲ್ಲಾವುದ್ದೀನನು ರಾಮಚಂದ್ರನನ್ನು ಅರಮನೆಯಲ್ಲಿಯೇ ಬಂಧಿಸಿ, ಅಪಾರವಾದ ಧನವನ್ನು ಸಂಪಾದಿಸಿ, ಪೊಗದಿಯನ್ನು ನಿಷ್ಕರ್ಷೆ ಮಾಡಿಬಿಟ್ಟನು. ಅಲ್ಲಿಂದ ಹೊರಡುವಾಗ ಅಲ್ಲಾವುದ್ದೀನನು 600 ಮಣ ಮುತ್ತುಗಳು, 2 ಮಣ ವಜ್ರ, ಕೆಂಪು, ಪಚ್ಚೆ, ನೀಲಗಳನ್ನೂ, ಸಾವಿರ ಮಣ ಬೆಳ್ಳಿ, 4000 ರೇಷ್ಮೆ ವಸ್ತ್ರ ಮುಂತಾದವುಗಳನ್ನೂ ಸಾಗಿಸಿಕೊಂಡು ಹೊರಟನಂತೆ. ತುರುಷ್ಕ ದಾಳಿಯು ಮೊದಲು ಯಾದವ ರಾಷ್ಟ್ರದಲ್ಲಿಯೇ ಸಂಭವಿಸಿತು; ರಾಮಚಂದ್ರದೇವನು ಸುಲಭವಾಗಿಯೇ ಸೋತು ಹೋದನು. ಆ ತರುವಾಯ ರಾಮಚಂದ್ರದೇವನು ತನ್ನ ಸ್ವಾತಂತ್ರ್ಯ ವನ್ನು ಸ್ಥಾಪಿಸಿಕೊಂಡು ಕೆಲವರ್ಷಗಳಾಳುವುದರಲ್ಲಿಯೇ ಸುಲ್ತಾನನಾಗಿ ಸುರಾಷ್ಟ್ರವನ್ನೂ ರಾಜಸ್ಥಾನವನ್ನೂ ಗೆದ್ದಿದ್ದ ಅಲ್ಲಾವುದ್ದೀನನು ಪೊಗದಿ ಸಲ್ಲಲಿಲ್ಲವೆಂದು ತನ್ನ ದಳಪತಿ **ಮಾಲೀಕ್ ಕಾಫೂರ**ನನ್ನು 1308ರಲ್ಲಿ ಕೊಟ್ಟು ಕಳುಹಿಸಿದನು. ಕಾಫೂರಿನೆದುರಿನಲ್ಲಿ ಯಾದವರಾಜನು ಪೂರಾ ಸೋತನು; ತನ್ನ ಗೌರವವನ್ನು ಕಳೆದುಕೊಂಡುದಲ್ಲದೆ ಮುಂದೆ ತುರುಷ್ಕರು ತೆಲುಗಾಣ್ಯವನ್ನೂ ಹೊಯಿಸಳ ರಾಜ್ಯವನ್ನೂ ಪ್ರವೇಶಿಸಿ ಜಯಶಾಲಿಗಳಾಗುವ ಪ್ರಯತ್ನದಲ್ಲಿ ಧನಧಾನ್ಯವನ್ನೊದಗಿಸಿ ಸಹಾಯ ಮಾಡಲೊಪ್ಪಬೇಕಾಯಿತು. ರಾಜ್ಯರಕ್ಷಣೆಯ ದೃಷ್ಟಿಯಿಂದ ಕಂಡಲ್ಲಿ ರಾಮಚಂದ್ರದೇವನಿಗೂ ಪ್ರತೀಹಾರ ಜಯಪಾಲ ಅಥವಾ ಚಾಹುಮಾನ ಪೃಥ್ವೀರಾಜನಿಗೂ ಅಜಗಜಾಂತರವಿದ್ದಂತೆ ಕಾಣುವುದು.

ರಾಮಚಂದ್ರದೇವನ ಆಸ್ಥಾನವು ಇತರ ರಾಜಾಸ್ಥಾನಗಳಂತೆ ಪಂಡಿತರಿಂದಲೂ ಕವಿಜನರಿಂದಲೂ ಶೋಭಿಸುತ್ತಿತ್ತು. **ವ್ರತಖಂಡ**ವೆಂಬ

ಗ್ರಂಥವನ್ನು ಬರೆದ **ಹೇಮಚಂದ್ರ ಪಂಡಿತ**ನೂ ಸಂಗೀತ ಶಾಸ್ತ್ರವನ್ನು ಬರೆದ **ಶಾರ್ಙಧರ**ನೂ ಆತನ ಆಸ್ಥಾನದಲ್ಲಿದ್ದವರು. ಆತನ ಕಾಲದಲ್ಲಿಯೇ ಮರಾಠಿ ಭಾಷೆಯು ರೂಪಗೊಂಡಿತು. ಗೋದಾವರೀ ನದಿಯ ಉತ್ತರ ಭಾಗದಲ್ಲಿ ಪೂರ್ವದಿಂದ ಬಳಕೆಯಲ್ಲಿದ್ದ ಪ್ರಾಕೃತ ಭಾಷಾ ರೂಪವೇ ಅದು.

ತೆಲುಗಾಣ್ಯ

ಚಾಲುಕ್ಯ ಚೋಳ ವಂಶಗಳು ಒಟ್ಟುಗೂಡಿ ಪೂರ್ವ ತೀರಪ್ರದೇಶವನ್ನು ಹನ್ನೊಂದನೆಯ ಶತಮಾನದಲ್ಲಿ ಏಕರಾಜ್ಯವಾಗಿ ರೂಢಿಸಿಕೊಳ್ಳುವ ಸಾಧನೆಯು ಕುಲೋತ್ತುಂಗನ ತರುವಾಯ ನಡೆಯದಾಯಿತು. **ವೆಂಗಿ ಮಂಡಲ**ದಲ್ಲಿ ಅನೇಕ ಸಾಮಂತರು ತಲೆಯೆತ್ತಿ ಅಲ್ಲಲ್ಲಿ ಸ್ವತಂತ್ರರಾದರು. ಅವರಲ್ಲೆಲ್ಲ ಪ್ರಬಲರಾದವರು **ಕಾಕತೀಯ ವಂಶಸ್ಥ**ರು; ಅವರ ರಾಜ್ಯವೇ ತೆಲುಗಾಣ್ಯವೆಂದು ಪ್ರಸಿದ್ಧವಾಯಿತು. ಈ ರಾಜ್ಯಕ್ಕೆ ಪಶ್ಚಿಮದಲ್ಲಿ ಯಾದವ ರಾಜ್ಯವೂ ಉತ್ತರದಲ್ಲಿ ಕಳಿಂಗ ರಾಜ್ಯವೂ ದಕ್ಷಿಣದಲ್ಲಿ ಚೋಳ ಮಂಡಲವೂ ಇದ್ದವು.

ಕಾಕತೀಯ ರಾಜರು

ಈ ವಂಶದವರು **ಹನುಮಕೊಂಡ** ಎಂಬಲ್ಲಿ ಮೊದಲು ಪ್ರಬಲರಾದರು. ಸು. 1100ರಲ್ಲಿ ಅಲ್ಲಿ ಆಳುತ್ತಿದ್ದ **ತ್ರಿಭುವನಮಲ್ಲ**ನನ್ನೇ ಈ ವಂಶಕ್ಕೆ ಮೂಲಪುರುಷನೆಂದು ಭಾವಿಸಬಹುದು. ಆತನ ತರುವಾಯ ಅರಸಾದ **ಪ್ರೋಲರಾಜ**ನು ಸು. 1150ರಲ್ಲಿ **ಓರುಗಲ್ಲಿ**ನಲ್ಲಿ ನೆಲೆಮಾಡಿ ಕಲ್ಯಾಣಿಯ ಚಾಲುಕ್ಯರೊಡನೆ ಹೆಣಗಾಡುತ್ತಲಿದ್ದು ಸ್ವತಂತ್ರನೆನಿಸಿದನು. ಈತನು ತನ್ನ ಮಗನಿಂದಲೇ ಹತನಾದನಂತೆ. ಆ ಮಗನೇ **ಪ್ರತಾಪ ರುದ್ರ**ನೆಂದು ಪ್ರಸಿದ್ಧನಾಗಿ ಪಿತೃ ಸಂಹಾರದ ಪ್ರಾಯಶ್ಚಿತ್ತರೂಪವಾಗಿ ಹನುಮಕೊಂಡೆಯಲ್ಲಿ ಸಾವಿರ ಕಂಭಗಳುಳ್ಳ ದೇವಾಲಯವನ್ನು 1162ರಲ್ಲಿ ಕಟ್ಟಿಸಿದನು. ಪ್ರತಾಪರುದ್ರನು ಕಳಿಂಗರಾಜನೊಡನೆಯೂ ಯಾದವರಾಜನೊಡನೆಯೂ ಯುದ್ಧಮಾಡಿ ಜಯಶಾಲಿಯಾದನು. ಕಡೆಗೆ ತನ್ನ ತಮ್ಮ ಮಹಾದೇವನೆಂಬಾತನಿಂದಲೇ ಹತನಾದನು. **ಮಹಾದೇವ**ನು ಪ್ರತಾಪ ರುದ್ರನ ಮಗ ಗಣಪತಿದೇವನನ್ನೇ ಯುವರಾಜನನ್ನಾಗಿ ನಿಯಮಿಸಿ ತಾನು

ಯಾದವ ಜೈತುಗಿದೇವನೊಡನೆ ಯುದ್ಧಕ್ಕೆ ಹೊರಟು ಯುದ್ಧದಲ್ಲಿಯೇ ಪ್ರಾಣವನ್ನು ನೀಗಿದನು.

ರುದ್ರಾಂಬೆ

ಗಣಪತಿದೇವನು 1223ರಲ್ಲಿ ಪಟ್ಟಾಭಿಷಿಕ್ತನಾದನು. ಪಟ್ಟವನ್ನೇರಿದ ಕೂಡಲೆ ಈತನು ಸಿಂಘಣದೇವನೊಡನೆ ಯುದ್ಧಕ್ಕೆ ಹೊರಟು ಆ ರಾಜನನ್ನು ಸೋಲಿಸಿ ಕಡೆಗೆ ಆ ರಾಜನ ಮಗಳನ್ನು ಮದುವೆಯಾದನು. ಶೂರನಾಗಿದ್ದ **ಗಣಪತಿದೇವನ** ಆಳ್ವಿಕೆಯು ಕೀರ್ತಿಯುತವಾಯಿತು. ಶಿವಭಕ್ತನಾಗಿದ್ದ ಈ ರಾಜನು ಓರುಗಲ್ಲಿಗೆ ಬಲವಾದ ಕೋಟೆಯನ್ನು ಕಟ್ಟಿಸಿದನು; ಏಕಶಿಲಾನಗರಿಯೆಂಬ ಹೆಸರನ್ನು ಆ ನಗರವು ಪಡೆಯಿತು. ದುರ್ಗ ರಚನೆಯು ಮುಗಿಯುವುದರೊಳಗೇ ರಾಜನು ಮೃತನಾದನು. ಆಗ ಆತನ ಮಹಿಷಿ **ರುದ್ರಾಂಬೆಯು** ರಾಜ್ಯ ಸೂತ್ರಗಳನ್ನು ಹಿಡಿದು ಸಾಮರ್ಥ್ಯದಿಂದ ಆಳಿದಳು. ಮುಂದೆ ರಾಜನಾಗಿರಬೇಕಾಗಿದ್ದ ಆಕೆಯ ಮೊಮ್ಮಗನು ಸಣ್ಣ ವಯಸ್ಸಿನವನಾಗಿದ್ದುದರಿಂದ ರುದ್ರಾಂಬೆಯೇ ಆಳ್ವಿಕೆಯನ್ನು ವಹಿಸಿ ರಾಯಚೂರುವರೆಗೂ ರಾಜ್ಯವಿಸ್ತಾರಗೊಳಿಸಿದಳು. ಮೊಮ್ಮಗನು ವಯಸ್ಕನಾದ ತರುವಾಯ ಇಮ್ಮಡಿ **ಪ್ರತಾಪರುದ್ರದೇವನೆಂಬ** ಹೆಸರಿನಿಂದ ಆಳಿದನು. ಆಳ್ವಿಕೆಯು ನಡೆಯುತ್ತಿದ್ದಾಗಲೇ ಕಾಫೂರನ ದಂಡಯಾತ್ರೆಯು ನಡೆಯಿತು. 1309ರಲ್ಲಿ ತುರುಷ್ಕ ಸೈನ್ಯವು ತೆಲುಗಾಣ್ಯದಲ್ಲಿ ನುಗ್ಗಿತು; ತೆಲುಗಾಣ್ಯದವನೇ ಆಗಿದ್ದ ಕಾಫೂರನು ದೇಶವನ್ನು ಬಲ್ಲವನಾಗಿ ಸೈನ್ಯವನ್ನು ನಡೆಸಿದನು. ಪ್ರತಾಪರುದ್ರನು ಸೋತುಹೋಗಿ ಹೇರಳವಾದ ಧನವನ್ನೊಪ್ಪಿಸಿ ಪೊಗದಿ ಕೊಡಲೊಪ್ಪಬೇಕಾಯಿತು. ಆ ತರುವಾಯ ಪೊಗದಿಯನ್ನು ಕೊಡದೆ ಕಾಕತೀಯರಾಜರು ಸ್ವತಂತ್ರರಾಗಿಯೇ ವರ್ತಿಸಿದರು.

ಕಲ್ಯಾಣಿ ಚಾಲುಕ್ಯರು ಕನ್ನಡ ನಾಡಿಗೆ ಹೇಗೋ ಆಂಧ್ರದೇಶಕ್ಕೆ ಕಾಕತೀಯರು ಹಾಗೆ. ಆಂಧ್ರ ಭಾಷೆಯ ಸಾಹಿತ್ಯವು ಈ ವಂಶದ ರಾಜರಿಂದ ಪ್ರೋತ್ಸಾಹವನ್ನು ಪಡೆಯಿತು. ಹದಿನಾಲ್ಕನೆ ಶತಮಾನದಲ್ಲಿ ತಘಲಖ ವಂಶದ ಸುಲ್ತಾನನ ದಂಡು ತೆಲುಗಾಣ್ಯವನ್ನು ಪ್ರವೇಶಿಸಿದಾಗ ರಾಜನಾಗಿದ್ದ ಪ್ರತಾಪರುದ್ರನನ್ನು ಸೆರೆಹಿಡಿದರು; ಆ ಸಂದರ್ಭದಲ್ಲಿ ಮಂತ್ರಿ

ಪದವಿಯಲ್ಲಿದ್ದ **ಯುಗಂಧರ**ನೆಂಬಾತನು ಅತಿಜಾಣ್ಮೆಯಿಂದ ವರ್ತಿಸಿ ರಾಜನನ್ನು ಬಿಡಿಸಿಕೊಂಡು ಬಂದ ವಿವರವು ಆಂಧ್ರರಲ್ಲಿ ಪ್ರಸಿದ್ಧವಾಗಿದೆ. 15ನೆ ಶತಮಾನದವರೆಗೂ ಕಾಕತೀಯ ರಾಜರು ಆಳುತ್ತಲೇ ಇದ್ದು ಆ ಶತಮಾನದ ಆದಿ ಭಾಗದಲ್ಲಿ ಬಹಮನೀ ಸುಲ್ತಾನರಿಂದ ನಾಶವನ್ನು ಹೊಂದಿದರು.

ಕಳಿಂಗ

ತೆಲುಂಗಾಣ್ಯಕ್ಕೆ ಉತ್ತರದಲ್ಲಿ **ಕಳಿಂಗ** ಅಥವಾ **ಉತ್ಕಲ**ವೆಂದು ಹೆಸರು ಪಡೆದ ರಾಜ್ಯವಿದ್ದಿತು. ಅನೇಕ ರಾಜ ವಂಶಗಳು ಅಲ್ಲಿ ಆಳಿದವು; ಅವುಗಳಲ್ಲಿ ಪ್ರಖ್ಯಾತಿ ಪಡೆದವರು ಕಳಿಂಗ **ಗಂಗವಂಶ**ದವರು. ಆ ವಂಶಜರಲ್ಲಿ 1076ರಿಂದ 1147ರವರೆಗೆ ದೀರ್ಘಕಾಲವಾಳಿದ **ಅನಂತ ವರ್ಮ ಚೋಡಗಂಗರಾಜ**ನು ಪುರಿ ಅಥವಾ ಜಗನ್ನಾಥ ಕ್ಷೇತ್ರದಲ್ಲಿ ದೇವಮಂದಿರವನ್ನು ಕಟ್ಟಿಸಿದನು. **ಭುವನೇಶ್ವರಿ** ಮತ್ತು **ಕೋಣಾರ್ಕ**ದ ದೇವಾಲಯಗಳೂ ಈ ರಾಜರಿಂದಲೇ ನಿರ್ಮಿತವಾದವುಗಳು.

ಹೊಯಿಸಳ ಬಲ್ಲಾಳರು

ಚಾಲುಕ್ಯ ಸಾಮ್ರಾಜ್ಯದ ತೆಂಕಣ ಭಾಗವನ್ನು ವಶಪಡಿಸಿಕೊಂಡು ಕೀರ್ತಿಯುತರಾಗಿ ಕರ್ಣಾಟಕದಲ್ಲಿ ಆಳಿದ ಹೊಯ್ಸಳ ಬಲ್ಲಾಳರು ತಮ್ಮ ರಾಜ್ಯವನ್ನು ಮಲೆನಾಡಿನಲ್ಲಿ ಮೊದಲುಮಾಡಿದರು. ಈ ವಂಶದವರು ಶುದ್ಧ ದೇಶೀಯರೇ ಆಗಿದ್ದರು. ಈಗಿನ ಸೊಸವೂರು ಎಂಬ ಗ್ರಾಮದಲ್ಲಿ ಸುದತ್ತನೆಂಬ ಜೈನ ಯತಿಯಿಂದ ಆಜ್ಞಪ್ತನಾಗಿ, ಊರಿನವರಿಗೆ ಭಯ ವನ್ನುಂಟುಮಾಡುತ್ತಿದ್ದ ಒಂದಾನೊಂದು ಹುಲಿಯನ್ನು ಕೊಂದು ಸಳ ನೆಂಬಾತನು ಪ್ರಬಲನಾದನು. ಅಕ್ಕಪಕ್ಕದ ಗ್ರಾಮಗಳು ಈತನ ಒಡೆತನ ವನ್ನೊಪ್ಪಿಕೊಂಡುದೇ ರಾಜ್ಯಕ್ಕೆ ಮೂಲವಾಯಿತು. **ಸಳ**ನೇ ಮೊದಲ ನೆಯವನು; ಆತನ ಕಾಲದಲ್ಲಿ ರಾಜ್ಯವು ವಿಸ್ತಾರವಾಗಿರಲಿಲ್ಲ. ಆತನ

ವಿನಯಾದಿತ್ಯ

ವಂಶದಲ್ಲಿ ಹುಟ್ಟಿ 1060ರಿಂದ 1099ರವರೆಗೆ ಆಳಿದ **ವಿನಯಾದಿತ್ಯ**ನು ರಾಜ್ಯವನ್ನು ವಿಸ್ತರಿಸಿ ದನು. ಆಗ ಉತ್ತರದಲ್ಲಿ ಕಲ್ಯಾಣಿ ಚಾಲುಕ್ಯರೂ ದಕ್ಷಿಣದಲ್ಲಿ ಚೋಳರಸರೂ ಸಾಮ್ರಾಜ್ಯ ಕಟ್ಟಿ ಬಲಿಷ್ಠರಾಗಿದ್ದರು. ಅವರ

ವಿರೋಧವನ್ನು ಕಟ್ಟಿಕೊಳ್ಳದಂತೆ ರೂಢಿಸಿಕೊಳ್ಳಬಹುದಾದಷ್ಟು ಕ್ಷೇತ್ರವನ್ನು ಮಾತ್ರ ವಿನಯಾದಿತ್ಯನು ಗೆದ್ದು ರಾಜ್ಯವನ್ನು ವಿಸ್ತಾರಗೊಳಿಸಿದನು. 1076ರಲ್ಲಿ ಕಲ್ಯಾಣಿಗೆ ಅಧಿಪತಿಯಾದ ವಿಕ್ರಮಾದಿತ್ಯನ ಎದುರುಬೀಳದೆ ವಿನಯಾದಿತ್ಯನು ಸಮ್ಮತಿಯಿಂದ ಆತನಲ್ಲಿ ನಡೆದುಕೊಂಡು ಸಾಮಂತರಲ್ಲಿ ಎಣಿಕೆಯಾದನು. ವಿನಯಾದಿತ್ಯನ ಮಗ **ಎರೆಯಂಗ**ನೆಂಬ ಯುವರಾಜನು ವಿಕ್ರಮಾದಿತ್ಯನ ಬಳಿಯಲ್ಲಿಯೇ ಇದ್ದುಕೊಂಡು ಆ ಪ್ರಭುವು ನಡೆಸಿದ ಯುದ್ಧಗಳಲ್ಲಿ ಶೂರನೆನಿಸಿದನು. ಎರೆಯಂಗನು ರಾಜನಾಗುವ ಮೊದಲೇ ಕಾಲವಾದನು; ಆದ್ದರಿಂದ ವಿನಯಾದಿತ್ಯನ ತರುವಾಯ 1100ರಲ್ಲಿ **ಬಲ್ಲಾಳ**ನೆಂಬ ಮೊಮ್ಮಗನು ಪಟ್ಟವನ್ನೇರಿದನು. ಹಾಸನ ಮತ್ತು ಮೈಸೂರು ಜಿಲ್ಲೆಯ ಸ್ವಲ್ಪ ಭಾಗವು ಬಲ್ಲಾಳನ ರಾಜ್ಯವಾಗಿದ್ದಿತು; ಬೇಲೂರೇ ಪ್ರಾಯಶಃ ನೆಲೆವೀಡಾಗಿದ್ದಿತು.

ಎರೆಯಂಗ

ಚಾಲುಕ್ಯ ಚೋಳರ ಸಾಮ್ರಾಜ್ಯ ದ್ವಂದ್ವವು ಹೊಯಿಸಳರ ಅಭಿವೃದ್ಧಿಗೆ ಅನುಕೂಲವಾಗಿತ್ತು. ವಿಕ್ರಮಾದಿತ್ಯನು ಚೋಳರನ್ನು ತನ್ನ ವಶದಲ್ಲಿಯೇ ಇಟ್ಟುಕೊಂಡು ಅತಿಪ್ರಬಲನಾಗಿದ್ದ ವೇಳೆಯಲ್ಲಿ ಹೊಯಿಸಳರಿಗೆ ಸ್ವತಂತ್ರ ಪದವಿಯು ಘಟಿಸುವುದು ಅಸಂಭವವಾಗಿತ್ತು. ಬಲ್ಲಾಳನ ತರುವಾಯ 1106ರಲ್ಲಿ ರಾಜ್ಯಾಧಿಕಾರವನ್ನು ವಹಿಸಿದ ಆತನ ಮಗ **ವಿಷ್ಣುವರ್ಧನ**ನು ಯುವರಾಜಪದವಿಯಲ್ಲಿದ್ದಾಗಲೇ ಪರಾಕ್ರಮಿಯೆನಿಸಿ ಪೇರಾಸೆಯನ್ನು ಕಟ್ಟಿದ್ದನು. ಹಳೇಬೀಡು ಅಥವಾ **ಧೋರಸಮುದ್ರ**ಕ್ಕೆ ಈತನು ಕೋಟೆಕೊತ್ತಳಗಳನ್ನು ಕಟ್ಟಿಸಿ ಸಮರ್ಥವಾದ ಸೈನ್ಯಗಳನ್ನು ಕೂಡಿಹಾಕಿದನು. 1116ರ ತರುವಾಯ ಈತನ ದಂಡನಾಯಕರು ಕ್ರಮವಾಗಿ **ಗಂಗವಾಡಿ, ನೀಲಗಿರಿ, ಉಚ್ಚಂಗಿ, ಹೆಂಜೇರು** ಪ್ರಾಂತಗಳನ್ನು ಸಾಧಿಸಿದರು. ವಾಯುವ್ಯದಲ್ಲಿ ಬನವಾಸಿ ಪ್ರಾಂತವೊಂದು ವಿನಾ ಉಳಿದ ಮೈಸೂರು ಸಂಸ್ಥಾನದ ಭಾಗವೆಲ್ಲವೂ ವಿಷ್ಣುವರ್ಧನನ ಅಧೀನವಾಯಿತು. 1116ರಲ್ಲಿ ಈ ರಾಜನ ಸೈನ್ಯಕ್ಕೂ ಚಕ್ರೇಶ್ವರ ವಿಕ್ರಮಾದಿತ್ಯನ ಸೈನ್ಯಕ್ಕೂ ಕಣ್ಣೆಗಾಲವೆಂಬಲ್ಲಿ ಹೋರಾಟವಾಯಿತು; ಅಲ್ಲಿ ಅಪಜಯವು

ಬಿಟ್ಟಿದೇವ

ಸ್ಥಿರವಾಗಿ ಸಂಭವಿಸದಿದ್ದಾಗ್ಯೂ 1122ರಲ್ಲಿ ವಿಷ್ಣುವರ್ಧನನು ಯಾದವ ಕುಲದ ಸಾಮಂತನನ್ನಿದುರಿಸಬೇಕಾಗಿ ಬಂದು ಸೋತುಹೋದನು. ವಿಕ್ರಮಾದಿತ್ಯನು ಆಳುತ್ತಿದ್ದವರೆಗೂ ಹೊಯಿಸಳರಾಜನಿಗೆ ಸ್ವಾತಂತ್ರ್ಯ ಸ್ಥಾಪನೆಗೆ ಅವಕಾಶವಿರಲಿಲ್ಲ. 1126ರಲ್ಲಿ ಆತನ ಮಗ ಭೂಲೋಕಮಲ್ಲನು ರಾಜ್ಯಾರೂಢನಾದಾಗ ಸಮಯವೊದಗಿತು; ಅಂದಿನಿಂದ ವಿಷ್ಣುವರ್ಧನನು ಸ್ವತಂತ್ರನಾಗಿಯೇ ವರ್ತಿಸುತ್ತ ಬನವಾಸಿ ಪ್ರಾಂತವನ್ನು ಗೆದ್ದುಕೊಳ್ಳಲು ಹವಣಿಸಿದನು. ಅದೇ ವೇಳೆಯನ್ನೇ ಸಾಧಿಸಿ ಇತರ ಸಾಮಂತರೂ ಸ್ವತಂತ್ರ ಪ್ರಯತ್ನಮಾಡುತ್ತ ಹೊಯಿಸಳರಲ್ಲಿ ಅಸೂಯೆಯಿಂದ ತೊಂದರೆಯನ್ನುಂಟುಮಾಡಿದರು. ಯಾದವರು, ಶಿಲಾಹಾರರು, ಕದಂಬರು, ರಟ್ಟರು, ಗುತ್ತರು, ಸಿಂದರು ಹೊಯಿಸಳರಲ್ಲಿ ಬಹುಕಾಲ ವಿರೋಧವನ್ನು ಸಾಧಿಸಲಾಗಲಿಲ್ಲ. 1144ರಲ್ಲಿ ಸಿಂದರಸನು ಘೋರಸಮುದ್ರದವರೆಗೂ ದಂಡೆತ್ತಿಬಂದಿದ್ದನು. ವಿಷ್ಣುವರ್ಧನನ ರಾಜ್ಯಕ್ಕೆ ಇದರಿಂದ ಲೋಪವುಂಟಾಗಲಿಲ್ಲ. ಆತನ ಪ್ರತಾಪದಿಂದ ರಾಜ್ಯವು ವಿಸ್ತಾರ ಪಡೆದು ಕೊಂಗು, ನಂಗಲಿ, ತಲಕಾಡು, ಗಂಗವಾಡಿ, ನೊಳಂಬವಾಡಿ, ಬನವಾಸಿ, ಹಾನುಗಲ್ಲು, ಹಲಾಸಿಗೆ ಮತ್ತು ಬೆಳ್ವೊಲಗಳನ್ನೊಳಗೊಂಡಿತ್ತು.

ಆಸ್ಥಾನ

ವಿಷ್ಣುವರ್ಧನ ರಾಜನ ಆಸ್ಥಾನವು ಪಂಡಿತ ಜನರಿಂದಲೂ ಶೂರರಾದ ದಂಡನಾಯಕರಿಂದಲೂ ಕೂಡಿತ್ತು. ರಾಜನು **ಗರುಡ**ರೆಂಬ ವೀರೋದಾತ್ತರಿಂದ ಪರಿವೃತನಾಗಿ ಓಲಗಮಾಡುತ್ತಲಿದ್ದನು; ಅಂಗರಕ್ಷೆಗಾಗಿದ್ದ ಗರುಡರು ಸ್ವಾಮಿಯು ಮರಣವನ್ನು ಪಡೆದಾಗಲೇ ತಾವೂ ತಮ್ಮ ಪ್ರಾಣಗಳನ್ನರ್ಪಿಸುತ್ತಿದ್ದರು. ವಿಷ್ಣುವರ್ಧನನ ರಾಜ್ಯದಲ್ಲಿ ಜೈನಮತವೇ ಪೂರ್ವದಿಂದಲೂ ಹರಡಿತ್ತು; ಆತನ ಪೂರ್ವಿಕರು ಜೈನರಾಗಿಯೇ ಇದ್ದರು. ಆದರೆ ಚೋಳದೇಶದಲ್ಲಿ ಹುಟ್ಟಿ ಚೋಳರಾಜನ ಆಗ್ರಹಕ್ಕೆ ಗುರಿಯಾದ **ಶ್ರೀ ರಾಮಾನುಜಾಚಾರ್ಯ**ರು ಮೇಲುಕೋಟೆಯ ಬಳಿಗೂ ತರುವಾಯ ಘೋರಸಮುದ್ರಕ್ಕೂ ಬಂದು ರಾಜಾಸ್ಥಾನದ ಜೈನಗುರುಗಳನ್ನು ವಾದದಲ್ಲಿ ಖಂಡಿಸಿದ ತರುವಾಯ ಜೈನಮತದ ಪ್ರಾಶಸ್ತ್ಯಕ್ಕೆ ಲೋಪವೊದಗಿತು.

ವಿಷ್ಣುವರ್ಧನ ರಾಜನೇ ರಾಮಾನುಜಾಚಾರ್ಯರ ಶಿಷ್ಯನಾಗಿ ವೈಷ್ಣವ ಮತವನ್ನು ಸ್ವೀಕರಿಸಿದನು. ಪ್ರಖ್ಯಾತವಾದ ಬೇಲೂರಿನ **ಚನ್ನಕೇಶವ ದೇವಾಲಯವು** 1117ರಲ್ಲಿ ವಿಷ್ಣುವರ್ಧನ ರಾಜನಿಂದಲೇ ಆರಂಭವಾಯಿತು. ಸರಿಸುಮಾರು ಅದೇ ಕಾಲದಲ್ಲಿಯೇ ಕೇತಮಲ್ಲನೆಂಬ ವರ್ತಕ ಶ್ರೇಷ್ಠಿಯು ಧೋರಸಮುದ್ರದಲ್ಲಿ ಪ್ರಸಿದ್ಧ **ಹೊಯಿಸಳೇಶ್ವರ ದೇವಾಲಯವನ್ನು** ಮೊದಲಿಟ್ಟನು. ಇತರ ಮತಸ್ಥರಲ್ಲಿಯೂ ಔದಾರ್ಯವನ್ನು ತೋರುತ್ತಿದ್ದ ಈ ರಾಜನ ಕಾಲದಲ್ಲಿ ಜೈನ ಮಂದಿರಗಳೂ ವೃದ್ಧಿಯಾದವು. ಪಟ್ಟಮಹಿಷಿ **ಶಾಂತಲಾದೇವಿಯೂ** ದಳಪತಿಗಳೂ ಜೈನಮತವನ್ನೇ ಅವಲಂಬಿಸಿದ್ದು ಶ್ರವಣಬೆಳುಗೊಳ, ಧೋರಸಮುದ್ರಗಳಲ್ಲಿ ಜೈನ ಬಸದಿಗಳನ್ನು ನಿರ್ಮಿಸಿದರು.

1141ರಲ್ಲಿ ವಿಷ್ಣುವರ್ಧನನು ಕಾಲಗತಿಯನ್ನು ಹೊಂದಿದಾಗ ಆತನ ಮಗ ಮೊದಲನೆ **ನರಸಿಂಹನು** ರಾಜನಾದನು.

ಯುವರಾಜ ವೀರಬಲ್ಲಾಳ ಈತನು ಸುಖಲೋಲನಾಗಿಯೇ ಇದ್ದಾಗ್ಗೂ ಪ್ರಭುಭಕ್ತರಾಗಿದ್ದ ದಳಪತಿಗಳೂ ಅಧಿಕಾರಿಗಳೂ ರಾಜ್ಯವನ್ನು ರೂಢಿಸಿಕೊಳ್ಳುವುದರಲ್ಲಿ ಉದ್ಯುಕ್ತರಾದರು. ಚಾಲುಕ್ಯ ಪ್ರಭುಗಳು ದುರ್ಬಲರಾಗಿದ್ದುದರಿಂದ ಹೊರಗಿನ ತೊಂದರೆಯಿಲ್ಲವಾಯಿತು. ಹೀಗಿರಲು ವಿಷಯಮತ್ತನಾಗಿದ್ದ ರಾಜನಿಗೂ ಶೂರನೂ ಯುವರಾಜನೂ ಆಗಿದ್ದ ವೀರಬಲ್ಲಾಳನಿಗೂ ವೈಷಮ್ಯ ಬೆಳೆದು ಇಬ್ಬರಿಗೂ ಯುದ್ಧವೇ ನಡೆಯಿತು. ಪ್ರಭುಭಕ್ತರಾಗಿದ್ದ ದಂಡಾಧಿಪತಿಗಳು ಅನರ್ಥವುಂಟಾಗದಂತೆ ಸಮಾಧಾನ ಪಡಿಸಿದರು. 1173ರಲ್ಲಿ ನರಸಿಂಹನು ಮೃತನಾದನು; **ವೀರಬಲ್ಲಾಳನು** ಪಟ್ಟವನ್ನೇರಿ ರಾಜ್ಯವನ್ನು ವಿಸ್ತಾರಪಡಿಸುವ ಸಂಕಲ್ಪವನ್ನು ಮಾಡಿಕೊಂಡನು. ಉತ್ತರದಲ್ಲಿದ್ದ ಬನವಾಸಿ ಮತ್ತು ರಟ್ಟಪಾಡಿ ಪ್ರಾಂತಗಳನ್ನು ಗೆಲ್ಲತಕ್ಕದ್ದೆಂದು ಈತನು ಮನಸ್ಸುಮಾಡಿ ಮೊದಲು ಸ್ವಂತ ರಾಜ್ಯದಲ್ಲಿ ತುಂಟತನಮಾಡಿದ ಸಾಮಂತರ ಬಲವನ್ನು ಮುರಿದನು.

ಆ ವೇಳೆಗೆ ಚಾಲುಕ್ಯರ ಬಲವೂ ಮಾಯವಾಗುತ್ತಿತ್ತು. 1150ರ ವರೆಗೆ ರಾಜ್ಯವನ್ನು ರಕ್ಷಿಸಿಕೊಂಡಿದ್ದ ಚಾಲುಕ್ಯ ಚಕ್ರೇಶ್ವರರು ಹೊಯಿಸಳ ರಾಜನನ್ನು ಮಹಾಮಂಡಲೇಶ್ವರನೆಂದೇ ಗೌರವಿಸುತ್ತಿದ್ದರು. ಆ

ತರುವಾಯ ಕಲ್ಯಾಣಿಯಲ್ಲಿ ನಡೆದ ಕಲಚೂರ್ಯ ಬಿಜ್ಜಳ ದಂಡೇಶನ ರಾಜ್ಯಾಪಹಾರ ಪ್ರಯತ್ನದಲ್ಲಿ ಹೊಯಿಸಳರಂತಹ ಸಾಮಂತರಿಗೆ ಅವಕಾಶವು ಲಭಿಸಿತು. ಕಲಚೂರ್ಯ ಪಕ್ಷದವರಿಗೂ ಚಾಲುಕ್ಯ ಪಕ್ಷದವರಿಗೂ ನಡೆದ ಯುದ್ಧ ಪ್ರತಿಯುದ್ಧಗಳಲ್ಲಿ ಉತ್ತರದಲ್ಲಿ ಸೇವುಣ ಪ್ರಾಂತದ ಯಾದವರೂ ದಕ್ಷಿಣದಲ್ಲಿ ಹೊಯಿಸಳರೂ ಸ್ವಾತಂತ್ರ್ಯವನ್ನು ಸ್ಥಾಪಿಸಿಕೊಂಡುದೇ ಅಲ್ಲದೆ ತಮ್ಮ ಆಧಿಪತ್ಯಗಳನ್ನೂ ವಿಸ್ತಾರಗೊಳಿಸಿಕೊಂಡರು. ವೀರಬಲ್ಲಾಳನು ಈ ಸಂದರ್ಭದಲ್ಲಿಯೇ ಬನವಾಸಿ ಪ್ರಾಂತವನ್ನು ಸಾಧಿಸಿದನು. ಕೃಷ್ಣಾನದಿಗೆ ಉತ್ತರದಲ್ಲಿ ಪ್ರಬಲರಾಗುತ್ತಿದ್ದ ಯಾದವರೂ ಈ ಹೊಯಿಸಳರೂ ಚಾಲುಕ್ಯ ಸಾಮ್ರಾಜ್ಯವನ್ನು ಈ ರೀತಿ ತಾವೇ ಆಕ್ರಮಿಸಿಕೊಂಡರು. ಸ್ವಲ್ಪಕಾಲ ದಲ್ಲಿಯೇ ಕೃಷ್ಣಾನದಿಯ ಪ್ರದೇಶದಲ್ಲಿ ಯಾದವರಿಗೂ ಹೊಯಿಸಳರಿಗೂ ಘರ್ಷಣೆಯುಂಟಾಯಿತು. ಯಾದವರ ಭಿಲ್ಲಮದೇವನಿಗೂ ವೀರಬಲ್ಲಾಳ ನಿಗೂ ಪ್ರಬಲವಾದ ದ್ವಂದ್ವವೇ ಮೊದಲಾಯಿತು; ಕಡೆಗೆ 1193ರಲ್ಲಿ ಗದುಗಿನ ಬಳಿ **ಸೊರಟೂರೆಂ**ಬಲ್ಲಿ ದೊಡ್ಡ ಯುದ್ಧವಾಗಿ ವೀರಬಲ್ಲಾಳನೇ ಜಯಶಾಲಿಯಾಗಿ, ಕೃಷ್ಣಾನದಿಯೇ ಉತ್ತರದ ಮೇರೆಯಾಯಿತು. ಹೊಸ ಪ್ರಾಂತಗಳನ್ನು ವಶಗೊಳಿಸಿಕೊಂಡು ರಾಜ್ಯಭಾರವನ್ನು ಭದ್ರಗೊಳಿಸುವು ದಕ್ಕಾಗಿಯೇ ವೀರಬಲ್ಲಾಳನು ತುಂಗಭದ್ರೆಗೆ ಉತ್ತರದಲ್ಲಿ **ಅಣ್ಣಿಗೇರಿ** ಯೆಂಬಲ್ಲಿ ರಾಜಧಾನಿಯನ್ನು ಕಟ್ಟಿ ಅಲ್ಲಿಯೇ ಓಲಗಮಾಡುತ್ತಿದ್ದನು. ಮಹಾರಾಜಾಧಿರಾಜ ಪರಮೇಶ್ವರನೆಂಬ ಬಿರುದನ್ನು ಹೊಯಿಸಳರಲ್ಲಿ ಈತನೇ ಮೊದಲು ತಾಳಿದವನು. ವಿಷ್ಣುವರ್ಧನನು ಆರಂಭಮಾಡಿದ ಕಾರ್ಯ ವನ್ನು ಈತನು ಮುಂದರಿಸಿ 1220ರಲ್ಲಿ ಕಾಲವಾದನು.

ರಾಜ್ಯ ವಿಸ್ತಾರ

ವೀರಬಲ್ಲಾಳನ ಬಳಿಕ 1220ರಿಂದ 1254ರ ವರೆಗೆ ಆಳಿದ **ಇಮ್ಮಡಿ ನರಸಿಂಹ** ಮತ್ತು **ವೀರ ಸೋಮೇಶ್ವರ**ರು ಮೂಡಲಲ್ಲಿಯೂ ತೆಂಕಲಲ್ಲಿಯೂ ಚೋಳಮಂಡಲ ದಲ್ಲಿ ಪ್ರವೇಶಿಸಿ ರಾಜ್ಯವಿಸ್ತಾರವನ್ನು ದಕ್ಷಿಣದಲ್ಲಿ ನೆರವೇರಿಸಿದರು. ಕೃಷ್ಣಾನದಿಯ ಉತ್ತರದಲ್ಲಿ ಯಾದವರು ಪ್ರಬಲರಾಗಿದ್ದು ದರಿಂದ ಉತ್ತರದಲ್ಲಿ ರಾಜ್ಯ ವಿಸ್ತಾರಕ್ಕೆ ಅಡ್ಡಿಯಾಗಿತ್ತು. ಚೋಳಮಂಡಲ

ತೆಂಕಣ ವಿಸ್ತಾರ

ದಲ್ಲಿಯಾದರೋ ವಿಸ್ತಾರವಾಗಿದ್ದ ಚೋಳ ಸಾಮ್ರಾಜ್ಯವು ಕುಲೋತ್ತುಂಗ ಚೋಳದೇವನ ತರುವಾಯ ಕ್ರಮವಾಗಿ ಕ್ಷೀಣಿಸುತ್ತಲಿದ್ದಿತು. ಉತ್ತರದ ಆಂಧ್ರ ಭಾಗದಲ್ಲಿ ಕಾಕತೀಯರಾಜ್ಯವು ವಿಸ್ತಾರವಾದುದಲ್ಲದೆ ಅನೇಕ ಸಾಮಂತರು ಸ್ವತಂತ್ರರಾದರು. ಪಾಂಡ್ಯರಾಜರು ಈ ಸಮಯ ದಲ್ಲಿಯೇ ಚೋಳರೊಡನೆ ಸ್ಪರ್ಧಿಸಿ ಸಾಮ್ರಾಜ್ಯ ಪ್ರಯತ್ನದಲ್ಲಿ ತೊಡಗಿದರು. ಚೋಳಮಂಡಲದಲ್ಲಿ ಅಧೀನರಾಗಿದ್ದ ಪಲ್ಲವ ವಂಶಸ್ಥರು ದುರ್ಬಲ ರಾಗಿದ್ದ ಚೋಳರಾಜರನ್ನು ಅಡಗಿಸುವವರಾದರು. ಚೋಳ, ಪಲ್ಲವ ಮತ್ತು ಪಾಂಡ್ಯವಂಶಸ್ಥರ ಪರಸ್ಪರ ಕಲಹ ಸ್ಪರ್ಧೆಗಳಲ್ಲಿ ಈ ಹೊಯಿಸಳ ರಾಜರಿಬ್ಬರು ತಮ್ಮ ಸಮಯವನ್ನು ಕಂಡುಕೊಂಡರು. ಮೊದಲು ಚೋಳ ಕುಲಸ್ಥನ ಪಕ್ಷವನ್ನು ಹಿಡಿದು ಬಾಣರಸರ ರಾಜ್ಯವೆನಿಸಿದ್ದ ಮಹಾರಾಜವಾಡಿಯನ್ನೂ ಪಲ್ಲವರ ರಾಜ್ಯವೆನಿಸಿದ್ದ ತುಂಡೀರವಿಷಯವನ್ನೂ ಕೊಂಗುನಾಡನ್ನೂ ಸಾಧಿಸಿದರು; ತರುವಾಯ ಪಾಂಡ್ಯರಾಜನ ಪಕ್ಷವನ್ನು ವಹಿಸಿ ಚೋಳ ಮಂಡಲದ ಭಾಗಗಳನ್ನೂ ಆಕ್ರಮಿಸಿದರು. ಈ ಕಾಲದಲ್ಲೆಲ್ಲ ಯಾದವ ರೊಡನೆ ಆಗಿಂದಾಗ್ಗೆ ಕದನಗಳು ನಡೆಯುತ್ತಲೇ ಇದ್ದವು; ಯಾದವರ ಸಿಂಘಣದೇವನು ತಾನೇ ದಂಡೆತ್ತಿ ಬಂದು ಸೋತುಹೋಗಿ ಹಿಂತಿರುಗಿದನು. ಆದ್ದರಿಂದ ಉತ್ತರದ ಮೇರೆಗೆ ಚ್ಯುತಿಯಿಲ್ಲದೆ ಹೊಯಿಸಳ ಸಾಮ್ರಾಜ್ಯವು ವಿಸ್ತಾರವಾಗುತ್ತಿತ್ತು.

ಸೋದರ ವ್ಯಾಜ್ಯ

ವಿಸ್ತಾರಗೊಂಡ ಸಾಮ್ರಾಜ್ಯವನ್ನು ಆಳಲು ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ನೆಲೆವೀಡುಗಳನ್ನು ಕಟ್ಟಬೇಕಾಗಿತ್ತು. ವೀರ ಸೋಮೇಶ್ವರನ ಕಾಲದಲ್ಲಿಯೇ ಸಾಮ್ರಾಜ್ಯವು ಪೂರ್ವ ಪಶ್ಚಿಮಗಳೆಂದು ವಿಭಾಗವಾಗಿ ಇಬ್ಬರು ರಾಜಕುಮಾರರ ಆಳ್ವಿಕೆಯಲ್ಲಿತ್ತು. ವೀರ ಸೋಮೇಶ್ವರನು ಕಾಲವಾದ ಕೂಡಲೆ ಆ ಇಬ್ಬರು ರಾಜಕುಮಾರರು ತಮ್ಮಲ್ಲಿಯೇ ಅಸೂಯೆಯನ್ನು ಬೆಳೆಸಿಕೊಂಡು ಅಂತಃಕಲಹವನ್ನು ಹೆಚ್ಚಿಸಿಕೊಂಡರು. ಅಣ್ಣತಮ್ಮಂದಿರು ಪದೇ ಪದೇ ಕಾದಾಡುತ್ತ ಸಾಮ್ರಾಜ್ಯ ನಾಶಕ್ಕೆ ಕಾರಣಭೂತರಾದರು. **ಮುಮ್ಮಡಿ ನರಸಿಂಹ** ಮತ್ತು **ರಾಮನಾಥ**ರೆಂಬ ಆ ಸೋದರರಿಬ್ಬರ ಕಾಲದಲ್ಲಿ ಪ್ರಭುಭಕ್ತರಾಗಿದ್ದ ದಂಡನಾಯಕರಿಂದ ಶತ್ರುಗಳಿಗಾಸ್ಪದ

ವಿಲ್ಲದಿತ್ತು. ಯಾದವ ರಾಮಚಂದ್ರದೇವನ ಪಡೆಯೊಂದು ಹೊಯಿಸಳ ರಾಜ್ಯವನ್ನು ಪ್ರವೇಶಿಸಿ **ಮಾಲಿದೇವ ದಂಡನಾಯಕ**ನೆಂಬ ಪ್ರಭು ಭಕ್ತನ ದೆಸೆಯಿಂದ ಸೋತು ಹಿಂತಿರುಗಿತು. ಈ ಕಾಲದಲ್ಲಿ ದಕ್ಷಿಣದಲ್ಲಿ ಪಾಂಡ್ಯರಾಜನು ಪ್ರಬಲನಾಗಿ ಹೊಯಿಸಳ ಸೈನ್ಯವನ್ನು ಸೋಲಿಸಿ ಬಿಟ್ಟನು. ಹೊಯಿಸಳರ ಆಧಿಪತ್ಯವು ಕ್ಷಯವಾಗಲು ಮೊದಲಾಯಿತು.

**ಮುಮ್ಮಡಿ ಬಲ್ಲಾಳ**

1294ರಲ್ಲಿ **ಮುಮ್ಮಡಿ ಬಲ್ಲಾಳ**ನು ಪಟ್ಟವನ್ನೇರಿ ಸ್ವಲ್ಪ ಕಾಲ ದಲ್ಲಿಯೇ ಸ್ವಂತ ರಾಜ್ಯವನ್ನು ಸ್ವಾಧೀನಗೊಳಿಸಿ ಕೊಂಡನು. ಈತನ ಕಾಲದಲ್ಲಿಯೇ ತುರುಷ್ಕರ ದಾಳಿಯು ಸಂಭವಿಸಿತು. 1310ರಲ್ಲಿ ಓರುಗಲ್ಲನ್ನು ವಶಪಡಿಸಿಕೊಂಡ ಮೇಲೆ **ಮಾಲೀಕ್ಕಾಫೂರ**ನು ಧೋರಸಮುದ್ರದ ಕಡೆ ಹೊರಟು 12 ದಿನಗಳು ತೆರಪಿಲ್ಲದೆ ಸಂಚರಿಸಿ ಆಕಸ್ಮಿಕವಾಗಿ ರಾಜ ಧಾನಿಯ ಬಳಿ ಕಾಣಿಸಿಕೊಂಡನು. ಸಿದ್ಧತೆಯಿಲ್ಲದಿದ್ದ ಮುಮ್ಮಡಿ ಬಲ್ಲಾಳನು ಸಂಧಿಗೆ ಒಡಂಬಟ್ಟು ಹೇರಳವಾದ ಧನವನ್ನೊಪ್ಪಿಸಿದ್ದಲ್ಲದೆ ಪೊಗದಿಯನ್ನು ಕೊಡುವುದಕ್ಕೂ ಒಪ್ಪಿಕೊಂಡು, ಅದರ ನಿಷ್ಕರ್ಷೆಗಾಗಿ ತನ್ನ ಯುವರಾಜ ನನ್ನು ಡಿಲ್ಲಿಗೆ ಕೊಟ್ಟುಕಳುಹಿಸಿದನು. ಯುವರಾಜನು 1313ರಲ್ಲಿ ಹಿಂತಿರುಗಿದನು. ಚೋಳ ಪಾಂಡ್ಯರಾಜ್ಯಗಳಲ್ಲಿ ಬಿಟ್ಟುಹೋಗಿದ್ದ ಪ್ರದೇಶ ಗಳನ್ನು ಸಾಧಿಸಬೇಕೆಂದು ಯೋಚಿಸುತ್ತಿದ್ದ ರಾಜನಿಗೆ ಹಟಾತ್ತಾಗಿ ಒದಗಿದ ಈ ಪರಾಭವದಿಂದ ಬೇರೆ ಯೋಚನೆಗಳು ಹುಟ್ಟಿದವು. ಕಾಫೂ ರನು ದಕ್ಷಿಣದಲ್ಲಿ ರಾಮೇಶ್ವರದವರೆಗೂ ಹೊರಟು ಅಲ್ಲಿಯೂ ಜಯವನ್ನೂ ಧನವನ್ನೂ ಪಡೆದಿದ್ದನು. ಆತನು ಹಿಂತಿರುಗಿ ಹೊರಟುಹೋದ ತರುವಾಯ ಕೇರಲರಾಜನು ತನಗೆ ಸುಸಮಯವೆಂದು ತನ್ನ ರಾಜ್ಯ ವಿಸ್ತಾರದಲ್ಲಿ ತೊಡ ಗಿದನು. ಮಧುರೆಯಲ್ಲಿಯೇ ಉಳಿದುಕೊಂಡಿದ್ದ ಕೆಲವು ತುರುಷ್ಕರು ದೇವಾಲಯಗಳನ್ನು ಲೂಟಿಮಾಡುವುದಲ್ಲದೆ ನಿರ್ಮಾನುಷ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದರು. ಇಂತಹ ಸಮಯದಲ್ಲಿ ಬಲ್ಲಾಳರಾಯನು ಉತ್ತರ ದಲ್ಲಿಯೂ ಪೂರ್ವದಲ್ಲಿಯೂ ದುರ್ಗನಿರ್ಮಾಣವನ್ನು ಪೂರ್ತಿಗೊಳಿಸಿಕೊಂಡು ಓರುಗಲ್ಲಿನ ತುರುಷ್ಕರೂ ಮಧುರೆಯ ತುರುಷ್ಕರೂ ಒಟ್ಟುಗೂಡದಂತೆ ಸನ್ನಾಹಪಡುತ್ತಿದ್ದನು. ಈ ಸನ್ನಾಹ ಮಧ್ಯದಲ್ಲಿಯೇ **ಕಣ್ಣಾನೂರಿ**ನಲ್ಲಿ

ತುರುಷ್ಕರ ದಂಡೊಂದು ಬಲ್ಲಾಳನಿಗೆ ಸೋತುಹೋಯಿತು. ಆ ದಂಡಿನ ನಾಯಕರು ಮೋಸವೇ ಉಪಾಯವೆಂದು ಅನಿರೀಕ್ಷ್ಯವಾದ ಸಮಯದಲ್ಲಿ ಬಲ್ಲಾಳನ ಸಿಬಿರವನ್ನು ಮುತ್ತಿ, ರಾಜನನ್ನು ಸೆರೆಹಿಡಿದು, ಆಭರಣಗಳನ್ನು ಸುಲಿದು ಆತನ ತಲೆಯನ್ನು ಕತ್ತರಿಸಿ ಮಧುರೆಯ ಗೋಡೆಗೆ ಕಟ್ಟಿದರು.

ವಿಜಯನಗರ

ತುರುಷ್ಕರ ಆಕ್ರಮಣ ಪ್ರಯತ್ನದಲ್ಲಿ ಯುದ್ಧದ ನೀತಿಯೇ ಬದಲಾಗಬೇಕಾಯಿತು. ಉತ್ತರದಲ್ಲಿಯೂ ದಕ್ಷಿಣದಲ್ಲಿಯೂ ಭಾರತೀಯರು ಮುಗ್ಧತೆಯಿಂದಿದ್ದು ಸುಲಭವಾಗಿ ಮೋಸಹೋಗಿ ರಾಜ್ಯಗಳನ್ನು ನೀಗಿಕೊಂಡರು. ಉತ್ತರದಲ್ಲಿ ಇನ್ನೂರು ವರ್ಷಕಾಲ ಯುದ್ಧವಾಡಿ ಪ್ರಸ್ಥಭೂಮಿಯನ್ನು ಸೇರಿಕೊಂಡ ರಾಜಪುತ್ರಕುಲಗಳು ದ್ವಂದ್ವವನ್ನು ನಡೆಸುತ್ತಿದ್ದಾಗ ದಕ್ಷಿಣದಲ್ಲಿ ಸಾಮಂತಾಧಿಪತಿಗಳು ಧರ್ಮ ಹಾನಿಯಾದುದನ್ನು ಕಂಡು ಸ್ವಧರ್ಮ ರಕ್ಷಣಾರ್ಥವಾಗಿ ಸಾಮ್ರಾಜ್ಯವನ್ನೇ ಕಟ್ಟಿದರು. ಅದೇ **ವಿಜಯನಗರ ಸಾಮ್ರಾಜ್ಯ**; ಹೊಯಿಸಳರ ಸಾಮ್ರಾಜ್ಯವಾಗಿದ್ದುದೇ ಆ ರೂಪವನ್ನು ಪಡೆಯಿತು. ಅದರ ವಿವರವು ಹದಿನಾಲ್ಕನೆಯ ಶತಮಾನದ್ದು; ಮುಂದಿನ ವಿಭಾಗಕ್ಕೆ ಸೇರಿದ್ದು.

## ಸಾಮಾನ್ಯ ವಿಚಾರಗಳು

ಬ್ರಾಹ್ಮಣ ಪ್ರಾಬಲ್ಯ

ರಾಜಪುತ್ರಕುಲಗಳಲ್ಲಿ ಕೆಲವು ಪುರಾತನ ಕ್ಷತ್ರಿಯ ಸಂತತಿಗಳವರೆಂದೂ, ಮತ್ತೆ ಕೆಲವು ಸ್ವೀಕೃತ ಸಾಹಸಿಗಳ ವಂಶಗಳೆಂದೂ ನಿರ್ಣಯವಾಗಿದೆ. ಈ ರಾಜಪುತ್ರರಿಗೆ ಕ್ಷತ್ರಿಯ ಮರ್ಯಾದೆಯು ಸಲ್ಲಲು ಬ್ರಾಹ್ಮಣ ಕುಲಸ್ಥರೂ ಆಸ್ಥಾನ ಪುರೋಹಿತರೂ ಕಾರಣರು. ಬ್ರಾಹ್ಮಣರ ಸಂಬಂಧವನ್ನು ಪಡೆದ ರಾಜಕುಲಗಳೂ ಬ್ರಾಹ್ಮಣರಿಂದಲೇ ಸ್ಥಾಪಿತಗಳಾದ ಕೆಲವು ವಂಶಗಳೂ ಈ ಕಾಲದಲ್ಲಿ ಕಂಡುಬರುತ್ತವೆ. ಒಟ್ಟಿನಲ್ಲಿ ಪ್ರಭುತ್ವಮಾಡಿದವರೆಲ್ಲರೂ ರಾಜಪುತ್ರರೆಂಬ ಹೆಸರನ್ನು ತಾಳಿ ತಮ್ಮ ಆಳ್ವಿಕೆಯಲ್ಲಿ ಧರ್ಮಶಾಸ್ತ್ರಗಳನ್ನನುಸರಿಸಿದರು. ಮಹಾಭಾರತ ಕಾಲದ ಕ್ಷತ್ರಿಯರ ಅನುಕರಣವನ್ನೇ ಈ ರಾಜಪುತ್ರರು ಮಾಡಿದರೆಂದು ಸ್ಥೂಲವಾಗಿ ಹೇಳಬಹುದು.

ಪ್ರತಿ ರಾಜಾಸ್ಥಾನದಲ್ಲಿಯೂ **ಪುರೋಹಿತ**ನಿದ್ದುಕೊಂಡು ಮಂತ್ರಿಗಳಲ್ಲಿ ಮುಖ್ಯನಾಗಿದ್ದುದಲ್ಲದೆ ನ್ಯಾಯತೀರ್ಮಾನದಲ್ಲಿ ಮುಖ್ಯಾಧಿಕಾರವನ್ನು ವಹಿಸುತ್ತಿದ್ದನು. ಅತಿವಿಸ್ತಾರವಾದ ಭಾರತವರ್ಷದಲ್ಲಿ ರಾಜಪುರುಷರಿಗೆ ಸಾಮ್ರಾಜ್ಯ ಕಟ್ಟುವ ಅಪೇಕ್ಷೆಯು ಅನಿವಾರ್ಯವಾಗಿಯೂ ಮತ್ತು ಸಹಜವಾಗಿಯೂ ಜನಿಸಿ ಬಲಿಷ್ಠನಾದ ರಾಜನು ತೋರಿಕೊಂಡ ಕಾಲದಲ್ಲಿ **ಯಥಾಶಕ್ತಿ ಸಾಮ್ರಾಜ್ಯ**ವೂ ತೋರಿಕೊಳ್ಳುವುದು. ಇದೇ ನೀತಿಯೇ ರಾಜಪುತ್ರ ಕಾಲದಲ್ಲಿಯೂ ವ್ಯಕ್ತವಾಯಿತು. **ಲಲಿತಾದಿತ್ಯ, ಮಿಹಿರ ಭೋಜ, ಭೀಮದೇವ, ಪೃಥ್ವೀರಾಜ** ಮುಂತಾದವರು ಉತ್ತರದಲ್ಲಿಯೂ, **ಮುಮ್ಮಡಿ ಗೋವಿಂದ, ರಾಜರಾಜ, ರಾಜೇಂದ್ರ, ವಿಕ್ರಮಾದಿತ್ಯ** ಮುಂತಾದವರು ದಕ್ಷಿಣದಲ್ಲಿಯೂ ಇದಕ್ಕೆ ನಿದರ್ಶನ.

ರಾಜಪದವಿ

ರಾಜ್ಯದ ಒಳಾಡಳಿತದಲ್ಲಿ ಹಿಂದಿನ ಪದ್ಧತಿಗಳೇ ನಡೆದವು. ರಾಜರ ಬಿರುದುಗಳು ಹೆಚ್ಚಿದವು, ಸಾಮಂತರ ಮತ್ತು ಮಾಂಡಲಿಕರ ಬಿರುದುಗಳೂ ಹೆಚ್ಚಿದವು, ಭೋಗ ವೈಭವಗಳೂ ಹೆಚ್ಚಿದವು. ರಾಜರು ಒಬ್ಬರೊಡನೊಬ್ಬರು ಕೀರ್ತಿ ಪ್ರತಾಪಗಳಲ್ಲಿ ಸ್ಪರ್ಧಿಸುತ್ತ ಓಲಗಗಳನ್ನು ನಡೆಸುತ್ತಿದ್ದರು. ಪ್ರತಿ ರಾಜಾಸ್ಥಾನದಲ್ಲಿಯೂ ಕವಿಗಳಿರಬೇಕೆಂಬ ಅಪೇಕ್ಷೆಯು ಆಚಾರವಾಗಿ ಪರಿಣಮಿಸಿ ಸಾಹಿತ್ಯ ಪುಷ್ಟಿಗೆ ಅನುಕೂಲವಾಯಿತು. ಅಯೋಗ್ಯರಾದ ರಾಜರು ಆಳಿದಾಗ ತೊಂದರೆಗಳು ಉಂಟಾಗಬಹುದಾಗಿತ್ತು; ಅರಮನೆಯಲ್ಲಿಯೇ ನಡೆಯಬಹುದಾದ ಪಿತೂರಿಯು ಅದಕ್ಕೆ ಚಿಕಿತ್ಸೆಯಾಗಿತ್ತು. ಈ ಕಾಲದ ಚರಿತ್ರೆಯಲ್ಲಿ ದುಷ್ಟರೂ ಅಸಮರ್ಥರೂ ಆದ ಕೆಲವರು ರಾಜರುಗಳು ಕಾಣುತ್ತಾರೆ; ಪಿತೂರಿಗಳೂ ಅಂತಹ ಸಂದರ್ಭಗಳಲ್ಲಿ ಕಾಣುತ್ತವೆ. ರಾಜನೆಷ್ಟು ದುಷ್ಟನಾದರೂ ಇತರ ದೇಶಗಳಲ್ಲಿದ್ದಂತೆ ಸ್ವಚ್ಛಂದಗಾಮಿಯಾಗಿರಲು ಅವಕಾಶವಿರಲಿಲ್ಲ. ನೀತಿಯನ್ನೂ ಧರ್ಮವನ್ನೂ ಬದಲಾಯಿಸುವ ಅಧಿಕಾರವು ರಾಜನಿಗಿರಲಿಲ್ಲ.

ರಾಜಪುತ್ರ ಕಾಲದಲ್ಲಿ ನಮಗೆ ರಾಜತ್ವವೇ ಎಲ್ಲೆಲ್ಲಿಯೂ ಕಾಣುವುದು. ಹಿಂದಿನ ಕಾಲಗಳಲ್ಲಿದ್ದ ಗಣರಾಜ್ಯಗಳು ಕಾಣುವುದಿಲ್ಲ. ಗುಪ್ತಸಾಮ್ರಾಜ್ಯ ವಿಸ್ತಾರದಲ್ಲಿ ಗಣರಾಜ್ಯಗಳ ಆಧಿಪತ್ಯವು ನಾಶಗೊಂಡಿತಾದಕಾರಣದಿಂದ

ದೇಶದ ಏಳಿಗೆಗೆ ಬೇಕಾದ ಸಾಹಸಿಗಳು ಜನಿಸಲು ಅನುಕೂಲವಾದ ಕ್ಷೇತ್ರಗಳು ನಷ್ಟವಾದವೆಂದು ಒಬ್ಬ ಪಂಡಿತರು ಅಭಿಪ್ರಾಯಪಡುತ್ತಾರೆ.

ಗಣರಾಜ್ಯಗಳ ನಾಶ

ರಾಜತ್ವವೇ ಸಾಮಾನ್ಯವಾದಾಗ್ಗೂ ಹಿಂದಿನಿಂದ ನಡೆದುಬಂದ **ಜನಾಧಿಪತ್ಯಕ್ಷೇತ್ರ**ಗಳು ಹಿಂದಿನಂತೆಯೇ ನಡೆದುಬಂದವು. ಗ್ರಾಮ ವ್ಯವಸ್ಥೆ, ಶ್ರೇಣಿಗಳ ವ್ಯವಸ್ಥೆ ಮತ್ತು ಜಾತಿಗಳ ಕಟ್ಟುನಿಯಮಗಳು ಸ್ವತಂತ್ರವಾಗಿಯೇ ನಡೆಯುತ್ತಿದ್ದವು. ಗ್ರಾಮಗಳ ಮಹಾಜನರು, ಹದಿನೆಂಟು ಕರ್ಮಕಾರರು ಮತ್ತು ನಗರದ ಸೆಟ್ಟಿ ಪ್ರಮುಖರು ಎಲ್ಲೆಲ್ಲಿಯೂ ತಮ್ಮ ಕ್ಷೇತ್ರಗಳಲ್ಲಿ ಸ್ವತಂತ್ರರಾಗಿಯೇ ಇರುತ್ತಿದ್ದರು. ದಕ್ಷಿಣದಲ್ಲಿ ಹೇರಳವಾಗಿರುವ ಶಾಸನಗಳಿಂದ ಗ್ರಾಮಗಳ ಆಡಳಿತದ ವಿವರವು ಲಬ್ಧವಾಗಿದೆ. ಚೋಳಮಂಡಲದ ಗ್ರಾಮಸ್ಥರು ಪಂಚಾಯತದಾರರನ್ನು ಹೇಗೆ ವರಿಸುತ್ತಿದ್ದರೆಂಬ ವಿವರವು ಶಾಸನಗಳಲ್ಲಿ ದೊರೆತು ಆಶ್ಚರ್ಯವನ್ನೇ ಉಂಟು ಮಾಡುತ್ತದೆ. 700ರಿಂದ 1200ರವರೆಗೆ ನಡೆದ 5 ಶತಮಾನಗಳ ಕಾಲದಲ್ಲಿ ವ್ಯವಸಾಯ ವ್ಯಾಪಾರೋದ್ಯೋಗಗಳಿಗೆ ಜಲಾಶಯಗಳು, ಸಂಚಾರ ಸೌಕರ್ಯಗಳು ಮುಂತಾದ ಅನುಕೂಲಗಳು ರಾಜರಿಂದಲೂ ಶ್ರೀಮಂತರಿಂದಲೂ ಕಲ್ಪಿತವಾದವು. ಉದ್ಧೃತವಾಗಿ ವ್ಯಾಪ್ತಿಪಡೆದ ಆರ್ಯಧರ್ಮದಲ್ಲಿ **ದ್ವಾತ್ರಿಂಶದ್ದಾನ**ಗಳೆಂದು ರೂಢಿಯಾದ ದಾನಗಳಿಂದ ಜನಜೀವನದ ಸೌಕರ್ಯಗಳೇ ಹೆಚ್ಚಿದವು.

ಕ್ಷಾತ್ರ ನೀತಿ

ರಾಜಪುತ್ರ ಕುಲದವರೆಂದು ಹೆಮ್ಮೆಗೊಂಡವರು ಪ್ರಭುತ್ವದಲ್ಲಿ, ಇಲ್ಲವೇ ಯುದ್ಧಗಳಲ್ಲಿ ಮಾತ್ರವೇ ಆಸಕ್ತರಾಗಿದ್ದು ಹಿಂದಿನ ಸಾರ್ವಭೌಮರ ಆದರ್ಶವನ್ನೇ ಸ್ಮರಿಸುತ್ತಿದ್ದುದರಿಂದ ಅವರ ಪ್ರಭುತ್ವ ನಿರ್ವಾಹದಲ್ಲಿ ಬ್ರಾಹ್ಮಣ ಮಂತ್ರಿಗಳ ಸಹಾಯವೂ, ಯುದ್ಧದಲ್ಲಿ ವಿಶೇಷವೆನಿಸಿದ ನೀತಿಯೂ ರೂಢಮೂಲವಾಗಿ ಅಭಿವೃದ್ಧಿಯಾದವು. ಅಶ್ವಮೇಧ ರಾಜಸೂಯ ಯಜ್ಞಗಳನ್ನು ನೆರವೇರಿಸಲು ಆಸೆಪಡುತ್ತಿದ್ದ ರಾಜಪುತ್ರರು **ಸ್ವಯಂವರ ಪದ್ಧತಿ**ಯನ್ನು ತಮ್ಮಲ್ಲಿ ಅವಲಂಬಿಸಿದರು. ಸ್ತ್ರೀಯರು **ಸಹಗಮನ**ವನ್ನಾಚರಿಸುವುದೂ, **ಜೋಹಾರ್** ವ್ರತವನ್ನವಲಂಬಿಸು

ವುದೂ, ಸಮಯಬಂದಾಗ ಯುದ್ಧವನ್ನೂ ಮಾಡಿ ರಾಜ್ಯಪಾಲನೆ ಮಾಡು ವುದೂ ರಾಜಪುತ್ರರಲ್ಲಿ ಸಾಮಾನ್ಯ ಲಕ್ಷಣಗಳಾದವು. ವರ್ಣಾಶ್ರಮ ಧರ್ಮವು ಬೇರೂರಿದಂತೆ ಜಾತಿಗೌರವವೆಂಬುದು ವೃದ್ಧಿ ಹೊಂದುತಲಿ ದ್ದುದರಿಂದ ರಾಜಪುತ್ರರಲ್ಲಿ ಜಾತಿಯ ಪ್ರಜ್ಞೆಯೇ ಬಲವತ್ತರವಾಗಿತ್ತು. ಸ್ತ್ರೀಯರ ಮಾನರಕ್ಷಣೆಯು ರಾಜಪುತ್ರನಿಗೆ ಪರಮ ಕರ್ತವ್ಯವಾದುದೂ ಆ ಧರ್ಮದ ವ್ಯವಸ್ಥೆಯಿಂದಲೇ. ರಾಜಪುತ್ರರು ಪ್ರಾಣವನ್ನು ತೃಣಪ್ರಾಯ ವಾಗಿ ಎಣಿಸುತ್ತ ಯುದ್ಧಮಾಡುತ್ತಿದ್ದುದೂ ಆ ವ್ಯವಸ್ಥಾಬಲದಿಂದಲೇ. " ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾ । ಕ್ಷಣ ವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ ॥ " ಎಂಬುದೇ ರಾಜಪುತ್ರರ ಮಂತ್ರ ವಾಯಿತು. ರಾಜಪುತ್ರರು ಪರಸ್ಪರವಾಗಿ ನಡೆಸುತ್ತಿದ್ದ ಯುದ್ಧಗಳಲ್ಲಿ ಸಾಮಾನ್ಯ ಜನರಿಗೆ ತೊಂದರೆ ಇರಲಿಲ್ಲ.

ರಾಜಪುತ್ರ ದೌರ್ಬಲ್ಯ

ರಣಕುಶಲರಾದ ರಾಜಪುತ್ರರ ಕಾಲದಲ್ಲಿ ಸಂಭವಿಸಿದ ತುರುಷ್ಕರ ಆಕ್ರಮಣ ಪ್ರಯತ್ನಗಳನ್ನು ಚಿರಕಾಲವೂ ಏಕೆ ರಾಜಪುತ್ರರು ತಡೆಯದೆ ಹೋದರು ? ಈ ಪ್ರಶ್ನೆಗೆ ಸಮಾಧಾನವೇನೆಂದು ಯೋಚಿಸುವ ಮೊದಲು ಒಂದೆರಡು ಸಂಗತಿಗಳನ್ನು ನೆನಪಿಸಲ್ಲಿಡಬೇಕು. ತುರುಷ್ಕ ಕುಲದವರು ಇಸ್ಲಾಮಿ ಧರ್ಮವನ್ನವಲಂಬಿಸಿದ ಮೇಲೆ ಅವರಲ್ಲಿ ಹುಟ್ಟಿದ ತೇಜಸ್ಸು ಎಲ್ಲೆಲ್ಲಿಯೂ ಅಜೇಯವಾಗಿಯೇ ಇತ್ತು. ಇಸ್ಲಾಮೀಮತ ವ್ಯಾಪ್ತಿಯು ನೂರು ವರ್ಷಗಳ ಅವಧಿಯಲ್ಲಿಯೇ ಮೂರು ಖಂಡಗಳಲ್ಲಿಯೂ ವಿಸ್ತಾರ ವಾಯಿತು. ಪರಂಪರಾಗತವಾದ ಸಂಸ್ಕೃತಿ ವಿಶಿಷ್ಟರಾಗಿದ್ದ ಮಾನವ ರಾಶಿಗಳು ಇಸ್ಲಾಮಿ ಮತವನ್ನು ಸ್ವೀಕರಿಸಿ ಪೂರ್ವದ ಹುಟ್ಟನ್ನೇ ಮರೆತುಬಿಟ್ಟುದು ಸೋಜಿಗದ ಸಂಗತಿ. ಇಸ್ಲಾಮಿ ಘರ್ಷಣೆಗೊಳಗಾದ ಇತರ ರಾಷ್ಟ್ರಗಳು 50–60 ವರ್ಷಗಳೊಳಗಾಗಿ ತಮ್ಮ ಸ್ವರೂಪವನ್ನೇ ಬದಲಾಯಿಸಿದವು ; ಭರತವರ್ಷವೊಂದು ಮಾತ್ರ ಬದಲಾಗದೆ ಉಳಿಯಿತು. ಪ್ರವೇಶಮಾಡಿ ನೆಲೆಸುವ ಪ್ರಯತ್ನವೇ 200–300 ವರ್ಷಕಾಲ ಹಿಡಿಯಿತು. ಭಾರತೀಯರು ಸುಲಭರಾಗಿ ತುರುಷ್ಕರಿಗೆ ಸೋತುಹೋದರೆನ್ನುವುದು ತಥ್ಯವಲ್ಲ; ದೇಶಕ್ಕಾಗಿ ಹೋರಾಡದೆ ತಟಸ್ಥರಾಗಿದ್ದರೆನ್ನುವುದೂ ಸರಿಯಲ್ಲ.

ಎದುರುಬದುರಾಗಿ ನಿಂತು ಹೋರಾಡಿದ ಸಂದರ್ಭಗಳಲ್ಲಿ ರಾಜಪುತ್ರರು ಪರಾಜಿತರಾದುದಕ್ಕೆ ಬೇರೆ ಕಾರಣಗಳುಂಟು. ಕುಲಾಭಿಮಾನದಿಂದ ಯಾವ ಗುಣಗಳನ್ನು ಬೆಳೆಸಿದ್ದರೋ ಆ ಗುಣಗಳೇ ಅವರ ಜಯಕ್ಕೆ ಅಡ್ಡಿಯಾದವು. ರಾಜಪುತ್ರರ ಯುದ್ಧನೀತಿಯನ್ನು ತುರುಷ್ಕರು ಲಕ್ಷಿಸಲಿಲ್ಲ; ಆ ನೀತಿಯ ಕಟ್ಟುಗಳು ತುರುಷ್ಕರಿಗೆ ಅನುಕೂಲವಾಗಿಯೇ ಇದ್ದವು. ರಾಜಪುತ್ರರಾಜರು ಚಂದ್ರಗುಪ್ತಮೌರ್ಯನಂತೆ ಸದಾ ಸನ್ನದ್ಧ ಸೈನ್ಯಗಳನ್ನಿಟ್ಟಿರಲಿಲ್ಲ; ಇದು ಕ್ಷಿಪ್ರಕಾರಿತೆಗೆ ಅಡ್ಡಿಯಾಗಿಯೇ ಇತ್ತು. ಸ್ವಕುಲಾಭಿಮಾನದಲ್ಲಿಯೇ ಬೆಳೆದ ರಾಜಪುತ್ರರಲ್ಲಿ ಆನುವಂಶಿಕವಾದ ವೈರಗಳು ಹುಟ್ಟಿ ಬಲಗೊಂಡಿದ್ದು ಒಟ್ಟಿನಲ್ಲಿ ದೌರ್ಬಲ್ಯವನ್ನುಂಟುಮಾಡಿದ್ದವು. ದೇಶಭಕ್ತಿಗಿಂತಲೂ ಸ್ವಾಮಿಭಕ್ತಿಯೇ ವಿಶೇಷವಾಗಿತ್ತು. ತಾರತಮ್ಯ ಜ್ಞಾನವೆನ್ನುವುದು ಅವರಲ್ಲಿ ಹೆಚ್ಚಾಗಿರಲಿಲ್ಲ; ನಿಷ್ಠಾವೈಪರೀತ್ಯವು ಮೌಢ್ಯದಲ್ಲಿಯೂ ಮೂರ್ಖತೆಯಲ್ಲಿಯೂ ಪರಿಣಾಮವಾಯಿತು. ಅಭಿಮಾನಧನರಾಗಿ ವೀರಶ್ರೇಷ್ಠರಾಗಿದ್ದ ರಾಜಪುತ್ರರು ಅನೇಕ ವಿಚಾರಗಳಲ್ಲಿ ಮುಗ್ಧರಾಗಿ ಸುಲಭವಾಗಿ ಮೋಸಹೋಗುತ್ತಿದ್ದರು. ಯುದ್ಧಭೂಮಿಯ ವ್ಯವಸ್ಥೆಯಲ್ಲಿ ಸಮಯಕ್ಕೆ ತಕ್ಕಂತೆ ವ್ಯೂಹಕಟ್ಟುವ ಯೋಚನೆಯೇ ಅವರಿಗೆ ಸ್ಫುರಿಸಲಿಲ್ಲ; ಜಯಪಾಲ, ಆನಂದಪಾಲ, ಗಂಡದೇವ ಮುಂತಾದ ರಾಜರು ಸೋತುಹೋಗಲು ಆ ಮುಗ್ಧತೆಯೇ ಕಾರಣ. ಎಷ್ಟೋಬಾರಿ ಆನೆಗಳನ್ನು ನಂಬಿಯೇ ಕೆಟ್ಟರು. ಇವುಗಳಲ್ಲದೆ ಕೀಳುಕುಲದವರೆನಿಸಿದವರೂ ಸಮಾಜ ಬಾಹಿರರಾದವರೂ ಇಸ್ಲಾಮೀ ಧರ್ಮದಲ್ಲಿ ತಮ್ಮ ಮೇಲನ್ನು ಸಹಜವಾಗಿ ಕಂಡರು. ಹೀಗಿದ್ದರೂ ಪ್ರಚಂಡ ವೇಗದಿಂದ ವ್ಯಾಪ್ತಿ ಪಡೆಯುತ್ತಿದ್ದ ಇಸ್ಲಾಮೀ ಧರ್ಮವನ್ನು ಇವರು ನೂರಾರು ವರ್ಷಕಾಲ ತಡೆದರು.

ಮೊದಲು ಸಿಂಧುದೇಶದಲ್ಲಿ ಪ್ರಯತ್ನಮಾಡಿದ ಅರಬ್ಬೀ ಜನರಿಗೂ, ತರುವಾಯ ವಾಯುವ್ಯ ದಿಕ್ಕಿನಿಂದ ನುಗ್ಗಿದ ತುರುಷ್ಕರಿಗೂ ಇದ್ದ ಭೇದವು ಸ್ಮರಣಾರ್ಹವಾದುದು. ಅರಬ್ಬೀ ಜನರು ಸಂಸ್ಕೃತರಾಗಿದ್ದು ಭಾರತೀಯರ ಸಂಬಂಧದಿಂದ ಶಾಸ್ತ್ರಲಾಭವನ್ನು ಪಡೆದರು. ತುರುಷ್ಕರು ಮೊದಲು ಕೊಳ್ಳೆಯನ್ನು ಹೊರತು ಮತ್ತೇನನ್ನೂ ಆಶಿಸಲಿಲ್ಲ; ಪಡೆಯಲೂ ಇಲ್ಲ.

ದೇವಾಲಯಗಳನ್ನು ನಿರ್ಮಿಸಿ ಭೂಷಿಸುವ ಪದ್ಧತಿಯು ಭಾರತೀಯರಲ್ಲಿ ವಿಪರೀತವಾಗಿಯೇ ಬೆಳೆದಿತ್ತು; ದೇಶದ ರತ್ನಗಳೆಲ್ಲವೂ ದೇವಸ್ಥಾನಗಳಿಗೆ ಬಂದು ಸೇರುತ್ತಿದ್ದವು. ತುರುಷ್ಕ ಜನರಿಗೆ ಐಶ್ವರ್ಯವನ್ನು ಬಾಚಿಕೊಳ್ಳಲು ಇದರಿಂದ ಸುಲಭವಾಯಿತು.

ರಾಜಪುತ್ರ ತುರುಷ್ಕ ದ್ವಂದ್ವದ ಆರಂಭ

ಹತ್ತನೆ ಮತ್ತು ಹನ್ನೊಂದನೆ ಶತಮಾನಗಳಲ್ಲಿ ತುರುಷ್ಕರು ನಡೆಸಿದ ಪ್ರಯತ್ನದ ಫಲವಾಗಿ ಸಿಂಧು ಮತ್ತು ಗಂಗಾ ನದಿಗಳ ಬಯಲುಗಳು ಮಾತ್ರ ವಶವಾದವು; ಇದನ್ನು ದೇಶದ ವಶ್ಯತೆಯೆಂದು ಭಾವಿಸುವುದು ತಪ್ಪು. ಮುಗ್ಧರಾದ ರಾಜಪುತ್ರರು ತಮ್ಮ ಮೇರೆಯನ್ನು ದಾಟಿ ಶತ್ರುವಿನ ಮನೆಯಲ್ಲಿಯೇ ಪ್ರವೇಶಮಾಡಿ ಶತ್ರುವನ್ನು ನಿಗ್ರಹಿಸುವ ಯೋಚನೆಮಾಡಲಿಲ್ಲ. ಇದ್ದಲ್ಲಿಯೇ ಇದ್ದು ಹೋರಾಡುತ್ತಿದ್ದ ರಾಜಪುತ್ರ ಕುಲಸ್ಥರು ಸ್ವಲ್ಪ ಸ್ವಲ್ಪವಾಗಿ ಹಿಮ್ಮೆಟ್ಟಿ ಬಯಲು ಪ್ರಾಂತವನ್ನು ಬಿಟ್ಟುಕೊಟ್ಟು, ಎತ್ತರವಾದ ಭಾಗಗಳಲ್ಲಿ ರಾಜ್ಯಗಳನ್ನು ಕಟ್ಟಿಕೊಂಡು ಸಮಯ ನಿರೀಕ್ಷಣೆಯಲ್ಲಿದ್ದರು. 1206ರಲ್ಲಿ ಡಿಲ್ಲಿಯಲ್ಲಿ ಕುತ್ಬುದ್ದೀನನು ಪ್ರತಿಷ್ಠಿತನಾದಾಗ ತುರುಷ್ಕರ ಆಳ್ವಿಕೆಯು ಮೊದಲಾಯಿತೆನ್ನುವುದಕ್ಕಿಂತ ರಾಜಪುತ್ರ ತುರುಷ್ಕ ದ್ವಂದ್ವವು ಮೊದಲಾಯಿತೆಂದು ಹೇಳುವುದು ಯುಕ್ತ. ಅಕ್ಬರ್ ಬಾದಷಹನು ರಾಜಪುತ್ರರನ್ನು ತನ್ನವರನ್ನಾಗಿ ಮಾಡಿಕೊಳ್ಳುವ ವರೆಗೆ ಆ ದ್ವಂದ್ವವು ನಡೆಯುತ್ತಲೇ ಇತ್ತು. ಅದರ ವಿಚಾರವು ಮುಂದಿನ ಕಾಲಕ್ಕೆ ಸೇರಿದುದು.

ದೇಶದ ಕೀರ್ತಿ

ತುರುಷ್ಕರ ಆಕ್ರಮಣವೆಂಬೊಂದು ಸಂಗತಿಯಲ್ಲಿ ಮಾತ್ರ ದೇಶದ ಗೌರವಕ್ಕೆ ಹಾನಿಯೂ ಐಶ್ವರ್ಯಕ್ಕೆ ನಷ್ಟವೂ ಕಾಣುತ್ತದೆ. ಉಳಿದ ವಿಚಾರಗಳಲ್ಲಿ ದೇಶದ ಗೌರವವು ಉನ್ನತವಾಗಿಯೇ ಇತ್ತು. ಶಾಂತಿ ಭಿಕ್ಷೆಗಾಗಿ ಬಂದ ಜನರಲ್ಲದೆ ದೇಶದಲ್ಲಿ ಪ್ರಯಾಣಮಾಡಿದ ಅರಬ್ಬೀ ಪರ್ಯಟಕರು ದೇಶವನ್ನೂ ದೇಶದ ಜನರನ್ನೂ ಕಂಡು ಅಚ್ಚರಿಯನ್ನೇ ಪಟ್ಟರು. ಪೂರ್ವ ದಿಕ್ಕಿನಲ್ಲಿ ಉಪಭಾರತವರ್ಷಗಳ ಜನರು ಆರ್ಯಭೂಮಿಯನ್ನು ಸ್ಮರಿಸುತ್ತಲಿದ್ದರು; ಚೀನಾ ತಿಬ್ಬತ್ ದೇಶಗಳಿಂದ ಯಾತ್ರಾರ್ಥವಾಗಿಯೂ

ಶಿಕ್ಷಾರ್ಥವಾಗಿಯೂ ಜನರು ಹನ್ನೊಂದನೆ ಶತಮಾನದವರೆಗೆ ಬರುತ್ತಲೇ ಇದ್ದರು. ಜವ, ಸುಮಾತ್ರಾ, ಬೋರ್ನಿಯೋ, ಶ್ಯಾಮ, ಕಾಂಬುಜ, ಚಂಪಾಕ್ಷೇತ್ರಗಳಲ್ಲಿ ರಾಜ್ಯ ಕಟ್ಟಿದ್ದ ರಾಜವಂಶಗಳು ಆರ್ಯಧರ್ಮವನ್ನೂ ಸಂಸ್ಕೃತ ಭಾಷೆಯನ್ನೂ ವ್ಯಾಪ್ತಿಗೊಳಿಸಿದ್ದಲ್ಲದೆ ಅದ್ಭುತವಾದ ದೇವಾಲಯಗಳನ್ನೇ ಕಟ್ಟಿದರು. **ಪ್ರಂಬಾನಂ, ಅಂಕರ್‌ವಾಟ್, ಬೊರೊಬೊದೂರ**ರೆಂಬೆಡೆಗಳಲ್ಲಿರುವ ದೇವಮಂದಿರಗಳು ಪ್ರಸಿದ್ಧವಾಗಿಯೇ ಇವೆ. ಜಪಾನಿನಲ್ಲಿ ಬೌದ್ಧಮತ ಪ್ರಚಾರವಾಗಿ ದೃಢವಾದುದೂ ಈ ಕಾಲದಲ್ಲಿಯೇ. ತಿಬ್ಬತ್ ದೇಶಕ್ಕೂ ನೇಪಾಲ ಕಾಮರೂಪದೇಶಗಳಿಗೂ ನಿಕಟವಾದ ಸಂಬಂಧಗಳು ಬೆಳೆದಿದ್ದವು. ಪಾಲವಂಶದ ದೊರೆಗಳು ಬೌದ್ಧ ಪಂಡಿತರನ್ನು ಪ್ರೋತ್ಸಾಹಿಸಿ ತಿಬ್ಬತ್ತಿಗೆ ಕಳುಹುತ್ತಿದ್ದರು.

ಸಂಸ್ಕೃತ ಸಾಹಿತ್ಯ

ಸಂಸ್ಕೃತ ಭಾಷೆಯಲ್ಲಿ ಗ್ರಂಥ ನಿರ್ಮಾಣವೂ ಕಾವ್ಯ ರಚನೆಯೂ ಈ ಕಾಲದಲ್ಲಿ ಸಮೃದ್ಧವಾಗಿ ನಡೆಯಿತು. ರಾಜಪುರುಷರೇ ವಿದ್ವಾಂಸರಾಗಿ ಕಾವ್ಯಗಳನ್ನು ಓದಿಸಿ ಕೇಳುವುದಲ್ಲದೆ ತಾವೂ ಕಾವ್ಯ ರಚನೆಯಲ್ಲಿ ತೊಡಗುತ್ತಿದ್ದರು. ಅಂತಹ ರಾಜರಲ್ಲೆಲ್ಲ ಧಾರಾನಗರದ ಭೋಜರಾಜನು ವಿಖ್ಯಾತನು. ಅನೇಕ ಕಾವ್ಯಗಳನ್ನು ರಚಿಸಿದ ಆತನು ತನ್ನ ಪೋಷಣೆಯಲ್ಲಿದ್ದ ವಿದ್ಯಾನಿಲಯದ ಗೋಡೆಗಳಮೇಲೆಯೇ ವಿದ್ಯಾರ್ಥಿಗಳಿಗಾಗಿ ಸಂಸ್ಕೃತ ನಾಟಕಗಳನ್ನು ಬರೆಸಿದ್ದನಂತೆ. ಯಶೋವರ್ಮನ ಆಸ್ಥಾನದಿಂದ ಲಲಿತಾದಿತ್ಯ ಮಹಾರಾಜನ ಆಸ್ಥಾನಕ್ಕೆ ಹೊರಟ ಭವಭೂತಿ ಕವಿಯಿಂದ ಮೊದಲ್ಗೊಂಡು ಲಕ್ಷ್ಮಣಸೇನ ಮಹಾರಾಜನ ಆಸ್ಥಾನದಲ್ಲಿದ್ದ ಜಯದೇವ ಕವಿಯವರೆಗೆ ಸಾವಿರಾರು ಕವಿಗಳು ಇದ್ದು ಕಾವ್ಯ ರಚನೆ ಮಾಡಿದರು. ಪ್ರಾಕೃತ ಭಾಷೆಯೂ ಅಪರೂಪವಾಗಿ ಮಾತ್ರ ಅವರ ಕಾವ್ಯಗಳಲ್ಲಿ ತೋರಿಕೊಳ್ಳುತ್ತದೆ. ಈ ಕಾಲದ ಕಾವ್ಯಗಳು ಸುಂದರವೂ ಲಲಿತವೂ ಆದಾಗ್ಯೂ ಉನ್ನತವೆಂದಾಗಲಿ ಉದ್ದಾಮವೆಂದಾಗಲಿ ವಿಮರ್ಶಕರು ಒಪ್ಪುವುದಿಲ್ಲ. ಅಲಂಕಾರ ನೈಪುಣ್ಯವೇ ಈ ಕಾಲದ ಕವಿಗಳಲ್ಲಿ ಹೆಚ್ಚು. ಚಂದೇಲವಂಶದ ಕೀರ್ತಿವರ್ಮ ಮಹಾರಾಜನ ಆಸ್ಥಾನದಲ್ಲಿ ಕೃಷ್ಣಮಿಶ್ರನೆಂಬ ಕವಿಯಿಂದ ರಚಿತವಾದ ಪ್ರಬೋಧಚಂದ್ರೋದಯವೆಂಬ ರೂಪಕವೇ ಈ ಕಾಲದ

ಕಾವ್ಯಗಳ ಮಾದರಿಯನ್ನು ಸೂಚಿಸುತ್ತದೆ. **ಭರ್ತೃಹರಿ, ಬಾಣ, ಭವಭೂತಿ** ಕವಿಗಳ ಅನಂತರ **ವಿಶಾಖದತ್ತ, ಭಟ್ಟನಾರಾಯಣ, ರಾಜಶೇಖರ, ದಾಮೋದರಮಿಶ್ರ, ಕೃಷ್ಣಮಿಶ್ರ, ಶ್ರೀಹರ್ಷ, ಬಿಲ್ಹಣ, ಕಲ್ಹಣ, ಸೋಮದೇವ, ಕ್ಷೇಮೇಂದ್ರ, ಜಯದೇವ** ಮುಂತಾದ ಅನೇಕಾನೇಕ ಕವಿಗಳು ಹೆಸರು ಪಡೆದರು. ವಾಕಾಟಕ ಗುಪ್ತಕಾಲದಲ್ಲಿ ಪೌರುಷವೂ ಗಾಂಭೀರ್ಯವೂ ಸಹಜ ಲಕ್ಷಣಗಳಾಗಿದ್ದವು; ರಾಜಪುತ್ರ ಕಾಲದಲ್ಲಿ ಲಾಲಿತ್ಯವೂ ಅಲಂಕಾರವೂ ಲಕ್ಷಣಗಳಾದವು.

**ಪ್ರಾಂತ ಭಾಷೆಗಳು**

ರಾಜಾಸ್ಥಾನಗಳಲ್ಲಿಯೂ ವಿದ್ಯಾಪೀಠಗಳಲ್ಲಿಯೂ ಸಂಸ್ಕೃತ ಭಾಷೆಯೇ ಬಳಕೆಯಲ್ಲಿದ್ದಾಗ್ಯೂ ಸಾಮಾನ್ಯ ಜನರಲ್ಲಿ ಪೂರ್ವದ ಪ್ರಾಕೃತ ಭೇದಗಳು ಬಲವನ್ನೂ ಕ್ರಮವನ್ನೂ ಪಡೆದು ಪ್ರಾಂತ ಭಾಷೆಗಳು ಸಿದ್ಧವಾಗಿ, ಕ್ರಮವಾಗಿ ಸಾಹಿತ್ಯ ಪುಷ್ಟಿಯನ್ನು ಹೊಂದಿದವು. ದಖನ್ನಿನಲ್ಲಿ **ತಮಿಳು ಮಲೆಯಾಳ**ಗಳಲ್ಲದೆ **ಕನ್ನಡ** ಮತ್ತು **ತೆಲುಗು** ಭಾಷೆಗಳು ಈ ಕಾಲದಲ್ಲಿಯೇ ವಿಶೇಷವಾದ ಅಭಿವೃದ್ಧಿಯನ್ನು ಪಡೆದವು. ಕನ್ನಡ ನಾಡಿನಲ್ಲಿ ರಾಷ್ಟ್ರಕೂಟ, ಚಾಲುಕ್ಯ ಮತ್ತು ಹೊಯಿಸಳ ಪ್ರಭುಗಳ ಆಶ್ರಯದಲ್ಲಿಯೇ **ಪಂಪ, ಪೊನ್ನ, ರನ್ನ**ರೆಂಬ ಮೂರ್ವರು ಪ್ರಸಿದ್ಧ ಕವಿಗಳು ಗ್ರಂಥ ರಚನೆ ಮಾಡಿದರು. ರಾಜಸ್ಥಾನದಲ್ಲಿಯೂ ಮಧ್ಯದೇಶದಲ್ಲಿಯೂ **ಹಿಂದೀ** ಎಂಬ ಭಾಷೆಯು 12ನೆ ಶತಮಾನದಲ್ಲಿಯೇ ತಲೆಯೆತ್ತಿತು; ಪೃಥ್ವೀರಾಜನ ಆಸ್ಥಾನ ಕವಿ **ಚಾಂದಭಟ್ಟ**ನು ಪೃಥ್ವೀರಾಜ ರಾಸಾ ಅಥವಾ ಪೃಥ್ವೀರಾಜ ವಿಜಯವೆಂಬುದನ್ನು ಹಿಂದೀ ಭಾಷೆಯಲ್ಲಿಯೇ ರಚಿಸಿದನು. ಯಾದವರ ರಾಷ್ಟ್ರದಲ್ಲಿ **ಮಹಾರಾಷ್ಟ್ರ ಭಾಷೆ**ಯು ರೂಪಗೊಂಡಿತು. ತುರುಷ್ಕರ ಆಧಿಪತ್ಯದಲ್ಲಿ ರಾಜ್ಯಗಳ ಪರಸ್ಪರ ಸಂಬಂಧಗಳು ಸಂಕೋಚಗೊಂಡ ಕಾರಣದಿಂದ ಪ್ರಾಂತ ಭಾಷೆಗಳು ಪ್ರತ್ಯೇಕವಾಗಿಯೇ ಇದ್ದು ಮತ್ತಷ್ಟು ಪುಷ್ಟಿಪಡೆಯಲು ಅನುಕೂಲವಾಯಿತು.

ಶಾಸ್ತ್ರಕ್ಷೇತ್ರದಲ್ಲಿಯೂ ರಾಜಪುತ್ರರ ಕಾಲವು ಹಿರಿಯದೇ. ಸಿದ್ಧವಾದ ಶಾಸ್ತ್ರ ಸಂಬಂಧವಾದ ಗ್ರಂಥಗಳ ರಾಶಿಯು ಅಮೇಯವಾಗಿದೆ.

ಧರ್ಮಶಾಸ್ತ್ರ ಗ್ರಂಥಗಳಲ್ಲಿ ವ್ಯಾಖ್ಯಾನಗಳೇ ಹೆಚ್ಚು; ಸ್ವತಂತ್ರರಾಗಿ ಬರೆಯುತ್ತಿದ್ದವರೂ ಕೂಡ ಸಂಪ್ರದಾಯಬದ್ಧರಾಗಿ ಹಿಂದಿನ ಗ್ರಂಥಗಳನ್ನೇ ವಿಸ್ತಾರಗೊಳಿಸುತ್ತಲಿದ್ದರು. **ವಿಜ್ಞಾನೇಶ್ವರ** ಪಂಡಿತನು ಧರ್ಮಶಾಸ್ತ್ರಜ್ಞರಲ್ಲಿ ಹೆಸರು ಪಡೆದಂತೆ ಗಣಿತ ಶಾಸ್ತ್ರದಲ್ಲಿ ಹಳೇಬೀಡಿನಲ್ಲಿ ಹೊಯ್ಸಳರ ಆಶ್ರಯದಲ್ಲಿದ್ದ **ಭಾಸ್ಕರಾಚಾರ್ಯ**ನು ಪ್ರಸಿದ್ಧನು. ವರ್ಣಾಶ್ರಮ ಧರ್ಮದ ವಿಸ್ತಾರ ಭದ್ರತೆಗಳೇ ಶಾಸ್ತ್ರಕಾರರ ಲಕ್ಷ್ಯವಾಗಿದ್ದುದು ಗುಪ್ತರ ಕಾಲದ ಪರಿಣಾಮವೆಂದೇ ಇತಿಹಾಸದಲ್ಲಿ ಭಾವಿಸಬೇಕು.

ಶಾಸ್ತ್ರ ವೃದ್ಧಿ

ಒಟ್ಟಿನಲ್ಲಿ ರಾಜಪುತ್ರರ ಕಾಲವೆನ್ನುವುದು ಕ್ಷಾತ್ರ ಪದ್ಧತಿಗಳಿಗೂ ಶಾಸ್ತ್ರ ಸಾಹಿತ್ಯಗಳ ವ್ಯಾಸಂಗಕ್ಕೂ ಪೋಷಕವಾದುದಲ್ಲದೆ ಐಶ್ವರ್ಯ ಭೋಗಗಳಿಗೂ ಹೆಸರಾದುದು. ಶತಮಾನಗಳ ಕಾಲದ ವ್ಯಾಪಾರದ ಪರಿಣಾಮವಾಗಿ ಇತರ ದೇಶಗಳ ಚಿನ್ನ ಬೆಳ್ಳಿಗಳು ಭಾರತಭೂಮಿಯಲ್ಲಿ ಶೇಖರವಾಗಿದ್ದವು. ಇದರಿಂದ ಕಲಾಪೋಷಣೆಯು ಎಲ್ಲೆಲ್ಲಿಯೂ ನಡೆಯಿತು. ಅನೇಕ ನಗರಗಳೂ ದೇವಾಲಯಗಳೂ ನಿರ್ಮಿತವಾಗಿ ಲೋಕರಂಜಕವಾದವು. **ಚತುಷ್ಷಷ್ಟಿ** ಕಲೆಗಳು ಅರಮನೆಗಳಲ್ಲಿಯೂ ದೇವಾಲಯಗಳಲ್ಲಿಯೂ ಪ್ರಕಾಶಗೊಂಡವು. ಹಿಂದಿನ ಕಾಲದ ವಿಹಾರಗಳ ಸ್ಥಾನವನ್ನೇ ದೇವಾಲಯಗಳು ಪಡೆದವು. ಉತ್ತರದಲ್ಲಿ ಸಿದ್ಧವಾದ ದೇವಾಲಯಗಳು ತುರುಷ್ಕಜನರ ಧ್ವಂಸಕ್ಕೆ ಸಿಕ್ಕಿ ನಾಶವಾದವು; ದಕ್ಷಿಣ ಭಾಗದಲ್ಲಿ ಉಳಿದುಕೊಂಡವು. ರಾಷ್ಟ್ರಕೂಟ, ಚೋಳ, ಚಾಲುಕ್ಯ ಮತ್ತು ಹೊಯಿಸಳವಂಶಜರ ಪ್ರೋತ್ಸಾಹದಿಂದ ಸಿದ್ಧವಾದ ದೇವಾಲಯಗಳು ಪ್ರಸಿದ್ಧ. ದೇವಮಂದಿರ ನಿರ್ಮಾಣವೇ ಈ ಕಾಲದ ಮುಖ್ಯ ಲಕ್ಷಣವಾಗಿತ್ತು. ಮಹಾಜನರ ಸಭೆಗೆ, ವಿದ್ಯಾಭ್ಯಾಸಕ್ಕೆ, ಅನ್ನದಾನ ಭೈಷಜ್ಯದಾನಕ್ಕೆ, ಉತ್ಸವಾದಿ ವಿನೋದಗಳಿಗೆ, ಕಲಾಚಾತುರ್ಯ ಪ್ರದರ್ಶನಕ್ಕೆ ದೇವಾಲಯಗಳೇ ಸ್ಥಾನಗಳಾಗಿದ್ದುದರಿಂದ ಭಗವದಾರಾಧನೆಗೆ ಮಾತ್ರವೇ ಅವು ನಿರ್ಮಿತವಾಗಲಿಲ್ಲ. ಈ ಕಾಲದ ಸಾಹಿತ್ಯದಲ್ಲಿ ಮುಖ್ಯ ಲಕ್ಷಣವೆನಿಸಿದ ಅಲಂಕಾರ ಪ್ರೀತಿ ನೈಪುಣ್ಯಗಳೇ ದೇವಾಲಯಗಳಲ್ಲಿಯೂ ಪ್ರಧಾನ

ದೇವಾಲಯ ನಿರ್ಮಾಣ



37. ಹೊಯಿಸಳ ಕಾಲದ ಶಾಸನ

ಲಕ್ಷಣಗಳಾದವು. ಅಲಂಕಾರದ ಸೊಬಗನ್ನು ಶಾಸನಗಳ ಲಿಪಿ ಲೇಖನಗಳಲ್ಲಿಯೂ ಕಾಣಬಹುದು.

ಭಾರತೀಯತ್ವ

ವರ್ಣಾಶ್ರಮ ಧರ್ಮವೇ ಭಾರತಭೂಮಿಗೆ ಅನಿವಾರ್ಯವಾದ ಮತ್ತು ಸಹಜವಾದ ಬಂಧನವಾಗಿ ದೃಢವಾಗುವ ಉದ್ಯಮದಲ್ಲಿ ಕುಲ, ಸ್ಥಲ, ವೃತ್ತಿ, ಭಾಷೆ ಮತ್ತು ಮತಾಚಾರಗಳನ್ನನುಸರಿಸಿ ಜಾತಿಭೇದಗಳು ವೃದ್ಧಿಯಾದವು. ಅನೇಕ ಮಾನವಕುಲಗಳಿಗೆ ಸಂಧಿಸ್ಥಾನವಾದ ಭಾರತಭೂಮಿಯಲ್ಲಿ ಪ್ರತಿ ವಿಭಾಗವೂ ವಿಶಿಷ್ಟತೆಯನ್ನು ನೀಗದೆ ಸೌಶೀಲ್ಯವನ್ನು ಪಡೆಯಲು ಅದೇ ಮಾರ್ಗವೆನಿಸಿತು. ಅದಕ್ಕನುಸಾರವಾಗಿಯೇ ಮತಾಚಾರಗಳಲ್ಲಿ ಅನೇಕಾನೇಕ ಭೇದಗಳೂ ಸಹಜವೆನಿಸಿದವು. ತಳಹದಿಯು ಒಂದೇ ಆದರೂ ಮೇಲ್ಕಟ್ಟಡದಲ್ಲಿ ವಿವಿಧವಾದ ಭಾಗಗಳು ತೋರಿಕೊಳ್ಳುವಂತೆ ಅತ್ಯುನ್ನತ ಶಿಖರ ರೂಪವಾಗಿ ಸಂನ್ಯಾಸಿಗಳೂ ಇತರ ಭಾಗಗಳಲ್ಲಿ ನಾನಾ ರೂಪ ರೀತಿಗಳನ್ನು ತಾಳಿದ ಸಾಮಾನ್ಯ ಜನರೂ ಭಾರತೀಯ ಸಮಾಜದಲ್ಲಿ ಸಿದ್ಧರಾದರು. ರಾಜಕೀಯ ಐಕ್ಯತೆಯು ಸಂತತ ಪ್ರಯತ್ನಕ್ಕೊಳಗಾಗಿದ್ದರೂ ಪೂರ್ಣವಾಗಿ ಸಿದ್ಧವಾಗಲಿಲ್ಲ; ಸಾಂಸ್ಕೃತಿಕ ಐಕ್ಯತೆಯು ಲಬ್ಧವಾಯಿತು.

ಸಂನ್ಯಾಸ ಮಹತ್ವ

ಶಂಕರಾಚಾರ್ಯರು ಸಂನ್ಯಾಸವನ್ನು ತಾಳಿ ಅದ್ವೈತ ಮತಸ್ಥಾಪನೆ ಮಾಡಿ ಆರ್ಯಧರ್ಮವನ್ನು ಶುದ್ಧಿಗೊಳಿಸಿದಮೇಲೆ ಸಂನ್ಯಾಸವು ಎಲ್ಲ ಜನರಿಗೂ ಗೌರವನೀಯವಾಗಿ ಪರಿಣಮಿಸಿತು. ಭೋಗವು ಹೆಚ್ಚಿದಂತೆಲ್ಲ ಸಂನ್ಯಾಸವು ಹೆಚ್ಚುವುದೇ ಭಾರತಭೂಮಿಯ ಸಹಜ ಲಕ್ಷಣವಾದುದರಿಂದ ರಾಜಪುತ್ರ ಕಾಲದಲ್ಲಿ ಸಂನ್ಯಾಸವು ಬಲಗೊಂಡಿತು. ವೇದಗಳ ಕಾಲದಲ್ಲಿ ಋಷಿಜನರಿಗಿದ್ದ ಸ್ಥಾನ ಮರ್ಯಾದೆಗಳು ಸಂನ್ಯಾಸಿಗಳಿಗೆ ಸಂದವು. ಸಂನ್ಯಾಸವು ಅಥವಾ ಜ್ಞಾನಮಾರ್ಗವು ಕಠಿಣವಾಗಿ ತೋರಿ ಕರ್ಮಮಾರ್ಗ ಮತ್ತು ಭಕ್ತಿಮಾರ್ಗಗಳು ಹಿಂದೆಯೇ ತೋರಿಕೊಂಡಿದ್ದವು. ಭಕ್ತಿಮಾರ್ಗವನ್ನುದ್ಧರಿಸಿದ **ಶ್ರೀ ರಾಮಾನುಜಾಚಾರ್ಯರು** ಈ ರಾಜಪುತ್ರ ಕಾಲದವರು. ಚೋಳಮಂಡಲದಲ್ಲಿ ಜನಿಸಿ ಪ್ರಸಿದ್ಧ ಕಾಂಚೀನಗರದಲ್ಲಿ

ಶಿಕ್ಷೆಯನ್ನು ಪಡೆದು ಆತನು ಶ್ರೀರಂಗದಲ್ಲಿ ಆಚಾರ್ಯಪದವಿಯನ್ನು ಪಡೆದು ವಿಶಿಷ್ಟಾದ್ವೈತವೆಂಬ ವಾದವನ್ನು ಘೋಷಿಸಿದನು. ಅದೇ ಹನ್ನೆರಡನೆಯ ಶತಮಾನದಂತ್ಯದಲ್ಲಿ ಉಡುಪಿಯಲ್ಲಿ 1199ರಲ್ಲಿ ಜನಿಸಿದ **ಶ್ರೀ ಮಧ್ವಾಚಾರ್ಯರು** ಸಂನ್ಯಾಸವನ್ನು ಸ್ವೀಕರಿಸಿ ದ್ವೈತಮತವನ್ನು ದ್ಧಾರಮಾಡಿದರು. ಬ್ರಾಹ್ಮಣ ಪಂಗಡದಲ್ಲಿ ಈ ಮತತ್ರಯಗಳು ಸಾಮಾನ್ಯವಾದವು; ಇತರರಲ್ಲಿಯೂ ಸಂನ್ಯಾಸಿಗಳೇ ಮತೋದ್ಧಾರಕರಾದರು. ವೀರಶೈವ ಮತವನ್ನುದ್ಧಾರಮಾಡಿದ **ಬಸವೇಶ್ವರ**ರಂತೆಯೇ ಇತರೆಡೆಗಳಲ್ಲಿಯೂ ಇತರ ಜನರಲ್ಲಿಯೂ ಮತೋದ್ಧಾರಕರು ಆಗಿಂದಾಗ್ಗೆ ಕೃತಕಾರ್ಯರಾಗುತ್ತಿದ್ದರು. ಭಾರತೀಯ ಜೀವನದಲ್ಲಿ ಸಂನ್ಯಾಸದ ಮಹತ್ವವು ಈ ರೀತಿಯಲ್ಲಿ ಬೇರೂರಿತು.

——— ———

# 700–1200

632 ಪೈಗಂಬರ್ ಮರಣ
ಅಬೂಬಕರ್
ಉಮರ್
ಉಸ್ಮಾನ್
ಅಲಿ
} ದಮಾಸ್ಕಸ್ (ಉಮಯಿಯಾ)

00

750 ಬಗದಾದ್
ಅಬ್ಬಾಸೀ ಖಲೀಫರು

786
809 ಹಾರೂನ್ ಅಲ್‌ರಷೀದ್

00

0

ತುರುಷ್ಕರು

967 ಅಲುಪ್ತೆಕಿನ್
976 ಸೆಬುಕ್ತೆಕಿನ್
997
1030 } ಮಹಮ್ಮೂದ್

0

0

1157 ಅಲ್ಲಾವುದೀನ್ ಘೋರಿ
1170
1206 } ಮಹಮ್ಮದ್

## ಹರ್ಷವರ್ಧನನ ಸಾಮ್ರಾಜ್ಯ

### ಸಿಂಧುತೀರ

712 ದಾಹಿರ
|
ಜಯಸಿಂಹ

ಪ್ರತೀಹಾರಿ
ಜಯಪಾಲ
ಆನಂದಪಾಲ
ತ್ರಿಲೋಚನಪಾಲ
ಭೀಮಪಾಲ
ರಾಯಸಾಲ

736
769 ಲಲಿತಾದಿತ್ಯ

ಚಾಹುಮಾನಕುಲ
ವೀಸಲದೇವ
ಪೃಥ್ವೀರಾಜ
ಹೇಮರಾಜ

### ಗಂಗಾತೀರ

ಯಶೋವರ್ಮ
|
ಚಕ್ರಾಯುಧ

ಗೂರ್ಜರ ವಂಶ
840
890 ಮಿಹಿರಭೋಜ
ದೇವಪಾಲ
ರಾಜ್ಯಪಾಲ
ಗಾಹಡವಾಲಕುಲ
ಜಯಚಂದ್ರ

ಧರ್ಮಪಾಲ

ಚಂದೇಲವರ್ಮ
ಯಶೋವರ್ಮ
ಧಂಗರಾಜ
ಗಂಡರಾಜ
ಕೀರ್ತಿವರ್ಮ
ಮಂತ್ರಿ ಅಜದೇವ

ಹೈಹಯ (ಚೇದಿ)
ಕರ್ಣದೇವ

### ಸೌರಾಷ್ಟ್ರ

ಸೋಲಂಕೀ ಭೀಮ
ನಾಯಕೀದೇವಿ
ಭೋಳಾ ಭೀಮದೇವ

ಪರಮಾರ (ಮಾಳವ)
ಮುಂಜರಾಜ
ಭೋಜರಾಜ

ಪುಲಿಕೇಶಿ II
ಚಾಲುಕ್ಯ

### ಕರ್ಣಾಟಕ

753 ರಾಷ್ಟ್ರಕೂಟ
ದಂತಿದುರ್ಗ
ಕೃಷ್ಣ
784 ಗೋವಿಂದ III
815 ನೃಪತುಂಗ
915 ಇಂದ್ರ III
940 ಕೃಷ್ಣ III
973 ಚಾಲುಕ್ಯ ತೈಲಪ
1076 ವಿಕ್ರಮಾದಿತ್ಯ
|
ಯಾದವ ಹೊಯಿಸಳ

ಮಹಾಮಲ್ಲ
ಪಲ್ಲವ

### ದ್ರವಿಡ

ಚೋಳ ಪರಾಂತಕ
|
ರಾಜರಾಜ
|
ರಾಜೇಂದ್ರ ಚೋಳ
|
ಕುಲೋತ್ತುಂಗ

### ಪ್ರಸಿದ್ಧ ಪುರುಷರು

ಶ್ರೀ ಶಂಕರಾಚಾರ್ಯ
ಭವಭೂತಿ
ಕವಿರಾಜಶೇಖರ
ದಾಮೋದರಮಿಶ್ರ
ಕೃಷ್ಣಮಿಶ್ರ
ಶ್ರೀ ರಾಮಾನುಜ
ಭಾಸ್ಕರಾಚಾರ್ಯ
ಜಯದೇವ ಕವಿ
ಶ್ರೀ ಮಧ್ವ

# 1. ಮುಖ್ಯ ಇಸವಿಗಳು

ಪೂ.

642—ಶೈಶುನಾಗ ವಂಶ ಸ್ಥಾಪನೆ
599—ವರ್ಧಮಾನನ ಜನನ
581—ಬುದ್ಧದೇವನ ಜನನ
553— ,, ವೈರಾಗ್ಯ
546— ,, ನಿರ್ವಾಣ
527—ವರ್ಧಮಾನನ ಕೈವಲ್ಯ
521—ದಾರಾಯುವುಷ್
501—ಬುದ್ಧದೇವನ ಪರಿನಿರ್ವಾಣ
486—ದಾರಾಯುವುಷನ ಮರಣ
485—ಕ್ಷಯಾರ್ಷಾ (ಷೇರ್)
479—ಪ್ಲಟೀಯ ಕದನ
413—ನಂದ ವಂಶ ಸ್ಥಾಪನೆ
326—ಸಿಕಂದರನ ದಾಳಿ
322—ಚಂದ್ರಗುಪ್ತ ಮೌರ್ಯನ ಸಾಮ್ರಾಜ್ಯ ಸ್ಥಾಪನೆ
298—ಬಿಂದುಸಾರನ ಪಟ್ಟಾಭಿಷೇಕ
273—ಅಶೋಕನ ಸಿಂಹಾಸನಾರೋಹಣ
263—2—ಕಳಿಂಗ ಯುದ್ಧ
260—ಅಶೋಕನ ಸಂಘ ಪ್ರವೇಶ
256— ,, ಯಾತ್ರೆ
240—3ನೆ ಬೌದ್ಧ ಮಹಾಸಭೆ
246—40—ಆರ್ಸಕೀಸನ ಸ್ವಾತಂತ್ರ್ಯ
,, ಡಯೊಡೋಟಸನ ಸ್ವಾತಂತ್ರ್ಯ
233—ಅಶೋಕನ ಮರಣ
230—ಶಾತವಾಹನರ ಸ್ವಾತಂತ್ರ್ಯ
190—ಡಿಮೆಟ್ರಿಯಸ್ಸನ ದಾಳಿ
188—ಪುಷ್ಯಮಿತ್ರ—ಶುಂಗ ವಂಶ ಸ್ಥಾಪನೆ

ಕ್ರಿ. ಪೂ.

150—ಮಿನಾಂಡರ್
76—ದೇವಭೂತಿ-ವಾಸುದೇವಕಾಣ್ವ
,, —ಗೌತಮಿಪುತ್ರ ಶಾತಕರ್ಣಿ
31—ಸುಶರ್ಮನ್ ಕಾಣ್ವನ ಕೊನೆ
30—ರೋಮಕರಿಗೆ ಮಿಶ್ರದೇಶದ ಲಾಭ

ಕ್ರಿಸ್ತಶಕ

48—ಕುಜೂಲ
68—ಕಶ್ಯಪ ಮತಂಗ
78—ಶಕಪ್ರತೀಪ
78—ವಿಮ
120—144—ಕನಿಷ್ಕ
130—150—ರುದ್ರದಾಮ
180—ಕುಶೀಕುಲದ ನಾಶ
175—210—ಭಾರಶಿವ ವಂಶ
226—ಅರ್ತಕ್ಷತ್ರಸಾಪಕಾನ್
236—ಆಭೀರ ಈಶ್ವರಸೇನ
248—284—ವಿಂಧ್ಯಶಕ್ತಿ
284—ಮಹಾರಾಜ ಪ್ರವರಸೇನ I
290—ಭವನಾಗ ಮಹಾರಾಜ
320—ಚಂದ್ರಗುಪ್ತ I
340—375—ಸಮುದ್ರಗುಪ್ತ
344—ರುದ್ರಸೇನ I (ಅಭಿಷೇಕ)
,, —ಕೌಶಾಂಬಿಯ ಯುದ್ಧ
345—6—ಕುರಾಳ ಯುದ್ಧ
348—ಏರಿಕಿಣ ಕದನ
375—ರಾಮಗುಪ್ತ
,, —ಚಂದ್ರಗುಪ್ತ II
390—ಕುಮಾರಜೀವ

ಕ್ರಿಸ್ತಶಕ

395—ರುದ್ರಸೇನ (II) ಮರಣ
399—414—ಫಾಹಿಯನ್ ಪ್ರವಾಸ
413—ಕುಮಾರಗುಪ್ತ
415—ಪ್ರವರಸೇನ II
435— ,, ಮರಣ
455—ಸ್ಕಂದಗುಪ್ತ
480—ಹೂಣ ಯುದ್ಧ
490—ವಾಕಾಟಕ ಹರಿಷೇಣ
502—ಹೂಣ ಗೋಪರಾಜ—ತೋರಮಾನ
528—ಯಶೋವರ್ಮ > < ಮಿಹಿರಗುಲ
550—ಹಿರೇ ಪುಲಿಕೇಶಿ
566—ಹಿರೇ ಕೀರ್ತಿವರ್ಮ
575—ಸಿಂಹವಿಷ್ಣುಪಲ್ಲವ
597—ಮಂಗಳೇಶ
606—ಹರ್ಷವರ್ಧನನ ಆಳ್ವಿಕೆಯು ಆರಂಭ
609—ಇಮ್ಮಡಿ ಪುಲಿಕೇಶಿಯ ಆಳ್ವಿಕೆಯ ಆರಂಭ
612—ವೆಂಗಿಯಲ್ಲಿ ಕುಬ್ಜವಿಷ್ಣು ವರ್ಧನನ ಸ್ಥಾಪನೆ
639—ನರ್ಮದಾ ಸಂಧಿ
629—644—ಹಿಯನ್ತ್ಸಾಂಗನ ಪ್ರವಾಸ
630—ಮಹಾಮಲ್ಲನ ಆಳ್ವಿಕೆಯ ಪ್ರಾರಂಭ
642—ಪುಲಿಕೇಶಿ (II)ಯ ಮರಣ
645—ದೀವಾಜಿಯ ಮರಣ
646—ಹರ್ಷವರ್ಧನನ ಮರಣ
,, —ಸಾಹಸೀರಾಜನ ಮರಣ
668—ಮಹಾಮಲ್ಲನ ಮರಣ
650—700—ಕುಮಾರಿಲಭಟ್ಟ

ಕ್ರಿಸ್ತಶಕ

700—732—ಶಂಕರಾಚಾರ್ಯ
700—ಕನ್ಯಾಕುಬ್ಜದ ಯಶೋವರ್ಮ
712—ಇಮಾಮುದ್ದೀನ್ ಮಹಮ್ಮದ್ > < ದಾಹಿರ
730—ಗೋಪಾಲ, ಪಾಲವಂಶ ಸ್ಥಾಪನೆ
733—ಲಲಿತಾದಿತ್ಯ ಮಹಾರಾಜನ ಆಳ್ವಿಕೆಯ ಪ್ರಾರಂಭ
753—ದಂತಿದುರ್ಗ ರಾಷ್ಟ್ರಕೂಟ
753—775—ಅಕಾಲವರ್ಷ ಶುಭತುಂಗ ಕೃಷ್ಣ I
794—ನಿರುಪಮ ಧ್ರುವ
,, —ಗೋವಿಂದ ಪ್ರಭೂತವರ್ಷ-ಆಳ್ವಿಕೆಯ ಪ್ರಾರಂಭ
800—ಧರ್ಮಪಾಲ ಮಹಾರಾಜ-ಆಳ್ವಿಕೆಯ ಪ್ರಾರಂಭ
810—ನಾಗಭಟ—ಆಳ್ವಿಕೆಯ ಪ್ರಾರಂಭ
815—ನೃಪತುಂಗ-ಆಳ್ವಿಕೆಯ ಪ್ರಾರಂಭ
820—ಉಪೇಂದ್ರರಾಜನ (ಪರಮಾರ) ಆಳ್ವಿಕೆಯ ಪ್ರಾರಂಭ
840—ಮಿಹಿರಭೋಜ-ಆಳ್ವಿಕೆಯ ಪ್ರಾರಂಭ
850—ದೇವಪಾಲ-ಆಳ್ವಿಕೆಯ ಪ್ರಾರಂಭ
855—ಅವಂತಿವರ್ಮ-ಆಳ್ವಿಕೆಯ ಪ್ರಾರಂಭ
871—ಸುಮಾತ್ರಕುಲಸ್ಥರ ಸ್ವಾತಂತ್ರ್ಯ
880—ಶ್ರೀ ಪುರುಂಬಿಯಂ ಕದನ
906—ಪರಾಂತಕ ಚೋಳ
910—ಮಹೀಪಾಲ ಪರಿಹಾರ

ಕ್ರಿಸ್ತಶಕ

915—ಮುಮ್ಮಡಿ ಇಂದ್ರ, ರಾಷ್ಟ್ರಕೂಟ
949—ತಕ್ಕೋಲದ ಕಾಳಗ
960—ಅಲುಪ್ತೆಕೀನನ ಮರಣ
961—ಮೂಲರಾಜ ಸೋಲಂಕೀ
973—ಚಾಲುಕ್ಯ ತೈಲಪ
978—ಮಹೀಪಾಲ
986—ಲುಂಘಾನ್ ಕಣಿವೆಯ ಸಂಧಿ
983—ಗೋಮಟೇಶ್ವರ ವಿಗ್ರಹ ಸ್ಥಾಪನೆ
985—ರಾಜರಾಜದೇವನ ಆಳ್ವಿಕೆಯ ಆರಂಭ
993—ಢಿಲ್ಲಿಕಾ ನಗರಿಯ ಸ್ಥಾಪನೆ
1001—ಪುರುಷಪುರದ ಕದನ
1004—ಗಂಗರಸರ ಕೊನೆ
,, —ವಜ್ರರಾಜನ ಆತ್ಮಬಲಿ
1008—ಅಟಕ್ ಕದನ
1013—ರಾಜೇಂದ್ರ ಚೋಳದೇವನ ಆಳ್ವಿಕೆಯ ಆರಂಭ
1014—ತೌಷೀ ಕದನ
1018–60—ಭೋಜರಾಜ ಪರಮಾರ
1019—ರಾಜ್ಯಪಾಲನ ನಾಶ
1019—ಸಾಯ್‌ನದೀ ಕದನ
1024—ಸೋಮನಾಥ ನಾಶ
1040—ಕರ್ಣದೇವ ಹೈಹಯ
1043—ಚಾಲುಕ್ಯ ಸೋಮೇಶ್ವರ I
1054—ಕೊಪ್ಪದ ಕಾಳಗ

ಕ್ರಿಸ್ತಶಕ

1076—ಅನಂತವರ್ಮ ಚೋಡ ಗಂಗರಾಜನ ಆಳ್ವಿಕೆಯ ಆರಂಭ
,, —ತ್ರಿಭುವನಮಲ್ಲ ವಿಕ್ರಮಾದಿತ್ಯನ ಆಳ್ವಿಕೆಯ ಆರಂಭ
1089—ಕಾಶ್ಮೀರದ ಹರ್ಷದೇವನ ಆಳ್ವಿಕೆಯ ಆರಂಭ
1106—ವಿಷ್ಣುವರ್ಧನ ಹೊಯಿಸಳನ ಆಳ್ವಿಕೆಯ ಆರಂಭ
1178—ಗದಾಧರಘಟ್ಟದ ಯುದ್ಧ
1179—ಭೋಳಾ ಭೀಮದೇವನ ಆಳ್ವಿಕೆಯ ಆರಂಭ
1191—ಸೊರಟೂರ ಕದನ
,, —ತರಾವರಿಯ 1ನೆ ಕದನ
1192— ,, 2ನೆ ಕದನ
1193—ಚಂದ್ವಾರದ ಕದನ
1194—ಹೇಮರಾಜನ ಆತ್ಮಬಲಿ
1202—ಅಜದೇವನ ಸಾಹಸ
,, —ಲಕ್ಷ್ಮಣಸೇನನ ರಾಜ್ಯ ನಷ್ಟ
1204—ಇಖ್ತ್ಯಾರುದ್ದೀನನ ತೇಜೋಭಂಗ
1206—ಸುಲತಾನ್ ಮಹಮ್ಮದ್ ಘೋರಿಯ ಮರಣ
1308–11—ಮಾಲೀಕ್ ಕಾಫೂರನ ದಕ್ಷಿಣ ದಂಡಯಾತ್ರೆಗಳು
1336—ವಿಜಯನಗರ ಸ್ಥಾಪನೆ

## 2. ರಾಜ ವಂಶಗಳು

### 1. ಶೈಶುನಾಗ ನಂದ ಸಂತತಿಗಳು




### 2. ಮೌರ್ಯ ವಂಶ



## 3. ಶಾತವಾಹನ ವಂಶ

(ಕ್ರಿ. ಪೂ. 230ರಿಂದ 460 ವರ್ಷಗಳು)

| | ವರ್ಷ |
|---|---|
| 1. ಶಿಶುಕ, ಸಿಂಧುಕ, ಸಿಪ್ರಕ | 23 |
| 2. ಕೃಷ್ಣ | 10 |
| 3. ಶಾತಕರ್ಣಿ | 10 |
| 4. ಪೂರ್ಣೋತ್ಸಂಗ | 18 |
| 5. ಸ್ಕಂದಸ್ತಂಭಿ | 18 |
| 6. ಶಾತಕರ್ಣಿ | 56 |
| 7. ಲಂಬೋದರ | 18 |
| 8. ಆಪೀಲಕ | 12 |
| 9. ಮೇಘಸ್ವಾತಿ | 18 |
| 10. ಸ್ವಾತಿ | 18 |
| 11. ಸ್ಕಂದಸ್ವಾತಿ | 7 |
| 12. ಮೃಗೇಂದ್ರ ಸ್ವಾತಿಕರ್ಣ | 3 |
| 13. ಕುಂತಲ ಸ್ವಾತಿಕರ್ಣ | 8 |
| 14. ಸ್ವಾತಿಕರ್ಣ | 1 |
| 15. ಪುಲುಮಾಯಿ I | 36 |
| 16. ಅರಿಷ್ಟಕರ್ಣ | 25 |
| 17. ಹಾಲ | 5 |
| 18. ಮಂತಲಕ | 5 |
| 19. ಪುರಿಕಸೇನ | 21 |
| 20. ಸುಂದರ ಶಾತಕರ್ಣಿ | 1 |
| 21. ಚಕೋರ ಶಾತಕರ್ಣಿ | $\frac{1}{2}$ |
| 22. ಶಿವಸ್ವಾತಿ | 28 |
| 23. ಗೌತಮಿಪುತ್ರ (ಕ್ರಿ. ಶ. 106) | 21 |
| 24. ಪುಲೋಮ | 28 |
| 25. ಶಾತಕರ್ಣಿ | 29 |
| 26. ಶಿವಶ್ರೀ ಪುಲೋಮ | 7 |
| 27. ಶಿವಸ್ಕಂದ ಶಾತಕರ್ಣಿ | 13 |
| 28. ಯಜ್ಞಶ್ರೀ ಶಾತಕರ್ಣಿ | 29 |
| 29. ವಿಜಯಶ್ರೀ | 6 |
| 30. ಚಂದ್ರಶ್ರೀ | 10 |
| 31. ಪುಲೋಮ IV | 7 |

## ಶಾತವಾಹನರು (ಗೊತ್ತಾದ ಇಸವಿಗಳು)

| | | |
|---|---|---|
| 1. ಸಿಮುಕ | .. | 205—182 / 213—190 |
| 2. ಕೃಷ್ಣ | .. | 182 / 190 —172 |
| 3. ಶಾತಕರ್ಣಿ I | .. | 172—162 |
| 4. ಪೂರ್ಣೋತ್ಸಂಗ | .. | 162—144 |
| 5. ಸ್ಕಂದಸ್ತಂಭಿ | .. | 144—126 |
| 6. ಲಂಬೋದರ | .. | 126—118 |
| 7. ಮೇಘಸ್ವಾತಿ | .. | 118—100 |
| 8. ಗೌತಮೀಪುತ್ರ | .. | 100— 44 |
| 9. ವಾಸಿಷ್ಠೀಪುತ್ರ | .. | 44— 8 |
| 10. ಕೃಷ್ಣ | .. | 8—ಕ್ರಿ.ಶ. 17 |
| 11. ಹಾಲ | .. | 17— 21 |
| 12. ಮಂತಲಕ | .. | 21— 26 |
| 13. ಪುರಿಕಸೇನ | .. | 26— 47 |
| 14. ಸ್ವಾತಿ | .. | 47— 65 |
| 15. ಸ್ಕಂದಸ್ವಾತಿ | .. | 65— 72 |
| 16. ಮಹೇಂದ್ರ | .. | 72— 75 |
| 17. ಕುಂತಲ | .. | 75— 83 |
| 18. ಸುಂದರ | .. | 83— 84 |
| 19. ವಾಸಿಷ್ಠೀಪುತ್ರ II | .. | 84— 88 |
| 20. ಮಾಠರಿಪುತ್ರ | .. | 88—116 |
| 21. ಗೌತಮೀಪುತ್ರ | .. | 116—144 |
| 22. ವಾಸಿಷ್ಠೀಪುತ್ರ | .. | 144—157 |
| 23. ಯಜ್ಞಶ್ರೀ | .. | 157—186 |
| 24. ಶಾತಕರ್ಣಿ | .. | 186—215 |
| 25. ವಾಸಿಷ್ಠೀಪುತ್ರ | .. | 215—222 |
| 26. ಶಿವಸ್ಕಂದ | .. | 222 |
| 27. ವಿಜಯ | .. | 222—228 |
| 28. ಚಂದ್ರಶ್ರೀ | .. | 228—231 |
| 29. ಪುಲುಮಾಯಿ | .. | 231—238 |

## 4. ಭಾರಶಿವ ವಂಶ

ನವನಾಗ (140—170)

1. ವೀರಸೇನ (175)
2. ಹಯನಾಗ (210—245)
3. ಬರ್ಹಿಣನಾಗ (250—260)
4. ಚರ್ಜನಾಗ (260—290)
5. ಭವನಾಗ (290—315)

ವಾಕಾಟಕ ಪ್ರವರಸೇನ

|

ಕುಮಾರಿ . . . . . . . . . . . . . ಗೌತಮೀಪುತ್ರ

|

ರುದ್ರಸೇನ I ವಾಕಾಟಕ (344—348)

## 5. ವಿಂಧ್ಯಕ ವಂಶ


ವಿಂಧ್ಯಶಕ್ತಿ
(248–284)
ಪ್ರವರಸೇನ I
(284–344)
ಗೌತಮೀಪುತ್ರ
ರುದ್ರಸೇನ I
(344–348)
ಪೃಥಿವೀಷೇಣ I
(348–375)
ರುದ್ರಸೇನ II ; ಪ್ರಭಾವತೀದೇವಿ
(375–395)
ದಿವಾಕರಸೇನ
ಪ್ರವರಸೇನ II
(405–435)
ನರೇಂದ್ರಸೇನ
(435–470)
ಪೃಥಿವೀಷೇಣ
(470–485)
ದೇವಸೇನ
(485–490)
ಹರಿಷೇಣ
(490–520)

## 6. ಗುಪ್ತ ವಂಶ


ಶ್ರೀಗುಪ್ತ
ಘಟೋತ್ಕಚ
ಚಂದ್ರಗುಪ್ತ I ; ಲಿಚ್ಛವಿ ಕುಮಾರದೇವಿ
ಸಮುದ್ರಗುಪ್ತ ; ದತ್ತಾದೇವಿ
ರಾಮಗುಪ್ತ
ಚಂದ್ರಗುಪ್ತ II ವಿಕ್ರಮಾದಿತ್ಯ
1. ಧ್ರುವಾದೇವಿ
2. ಕುಬೇರನಾಗಾ
ಗೋವಿಂದಗುಪ್ತ
ಕುಮಾರಗುಪ್ತ
(ಮಹೇಂದ್ರಾದಿತ್ಯ)
ಕದಂಬ ಕುಮಾರಿ
ಪ್ರಭಾವತಿದೇವಿ
ರುದ್ರಸೇನ II ವಾಕಾಟಕ
ಸ್ಕಂದಗುಪ್ತ
ಪುರಗುಪ್ತ
ಬುಧಗುಪ್ತ
ನರಸಿಂಹಗುಪ್ತ
(ಬಾಲಾದಿತ್ಯ)
ತಥಾಗತಗುಪ್ತ
ಕುಮಾರಗುಪ್ತ II
(ಕ್ರಮಾದಿತ್ಯ)
ಭಾನುಗುಪ್ತ
(ಬಾಲಾದಿತ್ಯ II)
ವಜ್ರ

## 7. ವರ್ಧನ ಮೌಖರಿ ಗುಪ್ತ ವಂಶಗಳು

**ಗುಪ್ತ**

- ಕೃಷ್ಣಗುಪ್ತ
  - ಹರ್ಷಗುಪ್ತ
    - ಜೀವಿತಗುಪ್ತ I
      - ಕುಮಾರಗುಪ್ತ III
        - ದಾಮೋದರಗುಪ್ತ
          - ಮಹಾಸೇನಗುಪ್ತ
            - ಕುಮಾರಗುಪ್ತ
          - ಮಹಾಸೇನಗುಪ್ತಾ . . . . . . . . . . . . ಆದಿತ್ಯವರ್ಧನ
            - ಮಾಧವಗುಪ್ತ
              - ಆದಿತ್ಯಸೇನ
                - ದೇವಗುಪ್ತ
                  - ವಿಷ್ಣುಗುಪ್ತ
                    - ಜೀವಿತಗುಪ್ತ II
  - ಹರ್ಷಗುಪ್ತಾ . . . . . . . . . . . . . . . . . . . ಆದಿತ್ಯವರ್ಮ

**(ವರ್ಧನ ಅಥವಾ ಪುಷ್ಯಭೂತಿ ವಂಶ)**

- ಆದಿತ್ಯವರ್ಧನ
  - ಪ್ರಭಾಕರ ವರ್ಧನ
    - ರಾಜ್ಯವರ್ಧನ
    - ಹರ್ಷವರ್ಧನ
      - ಕುಮಾರಿ = ಧ್ರುವಭಟ (ವಲ್ಲಭಿ)
    - ರಾಜ್ಯಶ್ರೀ . . . ಗೃಹವರ್ಮ

**ಮೌಖರಿ**

- ಹರಿವರ್ಮ
  - ಆದಿತ್ಯವರ್ಮ
    - ಈಶ್ವರವರ್ಮ
      - ಈಶಾನವರ್ಮ
        - ಶರ್ವವರ್ಮ
          - ಆದಿತ್ಯವರ್ಮ
            - ಗೃಹವರ್ಮ

## 8. ಪಲ್ಲವ ವಂಶ

ಕುಮಾರವಿಷ್ಣು ವೀರಕೂರ್ಚವರ್ಮ
(265–280)

|

ಶಿವಸ್ಕಂದವರ್ಮ I
(280–295)

|

ವೀರವರ್ಮ
(295–297)

|

ಸ್ಕಂದವರ್ಮ II
(297–332)

|

| | | |
|---|---|---|
| ಸಿಂಹವರ್ಮ I (332–344) | ವಿಷ್ಣುಗೋಪ I (346) | ಕುಮಾರವಿಷ್ಣು II |
| ಸ್ಕಂದವರ್ಮ III (344–346) | ಸಿಂಹವರ್ಮ II (346–360) | |

(ಸ್ಕಂದವರ್ಮ III ರಿಂದ)

|

ಸಿಂಹವಿಷ್ಣು

|

ಮಹೇಂದ್ರವರ್ಮ I
(600–630)

|

ಮಹಾಮಲ್ಲ ನರಸಿಂಹವರ್ಮ I
(630–655)

(ಪಲ್ಲವ ವಂಶ)

ಮಹೇಂದ್ರವರ್ಮ II
(655—660)
|
ಪರಮೇಶ್ವರವರ್ಮ I
(660—680)
|
ನರಸಿಂಹವರ್ಮ II
(680—700)
|
ಪರಮೇಶ್ವರವರ್ಮ II
(700—710)
|
ನಂದಿವರ್ಮ
(710—775)
|
ಅಪರಾಜಿತ

## 9. ಬಾದಾಮಿಯ ಚಾಲುಕ್ಯರು

ಜಯಸಿಂಹ
|
ರಣರಾಗ
|
ಪುಲಿಕೇಶಿ I ರಣವಿಕ್ರಮ
|
ಕೀರ್ತಿವರ್ಮ I ರಣಪರಾಕ್ರಮ (566—597) — ಮಂಗಳೇಶ ರಣವಿಕ್ರಾಂತ

ಕೀರ್ತಿವರ್ಮ I ರಣಪರಾಕ್ರಮ
|
ಪುಲಿಕೇಶಿ II ರಣವಿಕ್ರಮ (609—642) — ಕುಬ್ಜವಿಷ್ಣುವರ್ಧನ (ವೆಂಗಿ) — ಜಯಸಿಂಹ

ವಿಕ್ರಮಾದಿತ್ಯ I ರಣರಸಿಕ (ಬಾದಾಮಿಯ ಚಾಲುಕ್ಯರು)
(655–680)
|
ವಿನಯಾದಿತ್ಯ
(680–696)
|
ವಿಜಯಾದಿತ್ಯ
(696–733)
|
ವಿಕ್ರಮಾದಿತ್ಯ II
(733–746)
|
ಕೀರ್ತಿವರ್ಮ II
(746–757)

## 10. ರಾಷ್ಟ್ರಕೂಟರು



(ರಾಷ್ಟ್ರಕೂಟ ವಂಶ)

ಅಮೋಘವರ್ಷ ನೃಪತುಂಗ
(815—878)
|
ಅಕಾಲವರ್ಷ ಕೃಷ್ಣ II
(878—914)
|
ಜಗತ್ತುಂಗ
|
- ನಿತ್ಯವರ್ಷ ಇಂದ್ರ III (915—917)
  - ಅಮೋಘವರ್ಷ II (917—918)
  - ಸುವರ್ಣವರ್ಷ ಗೋವಿಂದ IV (918—933)
- ಅಮೋಘವರ್ಷ (934—940)
  - ಅಕಾಲವರ್ಷ ಕೃಷ್ಣ III (940—969)
    - ಇಂದ್ರ IV
  - ಖೊಟ್ಟಿಗ (969—971)
  - ನಿರುಪಮ
    - ಕಕ್ಕ (971—973)

## 11. ಪಾಂಚಾಲ–ಗೂರ್ಜರ ಪರಿಹಾರ

ಮೂಲಪುರುಷ
|
- ನಾಗಭಟ I
- (ಅಜ್ಞಾತ)
  - ಕಾಕುಸ್ಥ
  - ದೇವಶಕ್ತಿ
    - |




## 12. ಪ್ರತೀಹಾರಿ ಸಂತತಿ

1. ಲಲ್ಲಿಯ (880—900)
2. ಸಾಮಂತಪಾಲ
3. ಭೀಮಪಾಲ (940)
4. ಜಯಪಾಲ (960—1001)

5. ಆನಂದಪಾಲ (1001–1008)
6. ತ್ರಿಲೋಚನಪಾಲ
7. ಭೀಮಪಾಲ

## 13. ಚಂದೇಲ ವಂಶ

1. ಹರ್ಷದೇವ (920–925)
2. ಯಶೋವರ್ಮ (925–965)
3. ಧಂಗರಾಜ (950–999)
4. ಗಂಡರಾಜ (999–1025)
5. ಕೀರ್ತಿವರ್ಮನ್ (1040–1100)

## 14. ಪರಮಾರ ವಂಶ

1. ಕೃಷ್ಣರಾಜ
2. ವಿಗ್ರಹರಾಜ
3. ಸೀಯಕ
4. ಮುಂಜರಾಜ
5. ಸಿಂಧುರಾಜ
6. ಭೋಜರಾಜ

## 15. ಪಾಲ ವಂಶ






## 16. ಕಲ್ಯಾಣಿಯ ಚಾಲುಕ್ಯರು

ಆಹವಮಲ್ಲ ತೈಲಪ
(973–996)

ಇರಿವಬೆಡಂಗ ಸತ್ಯಾಶ್ರಯ
(997–1008)

ಜಗದೇಕಮಲ್ಲ
(1018–1042)

(ಕಲ್ಯಾಣಿ ಚಾಲುಕ್ಯರು)

ಸೋಮೇಶ್ವರ I
(1042—1068)

ಭುವನೈಕಮಲ್ಲ
ಸೋಮೇಶ್ವರ II
(1069—1076)

ತ್ರಿಭುವನಮಲ್ಲ
ವಿಕ್ರಮಾದಿತ್ಯ VI
(1076—1126)

ಜಯಸಿಂಹ

ಭೂಲೋಕಮಲ್ಲ
ಸೋಮೇಶ್ವರ III
(1126—1139)

ಜಗದೇಕಮಲ್ಲ II
(1139—1149)

ತೈಲಪ III
(1150—1161)

ಬಿಜ್ಜಳ (1163—1167)

ಸೋಮೇಶ್ವರ IV
(1189)

## 17. ಚೋಳ ವಂಶ



(ಚೋಳ ವಂಶ)

ಪರಾಂತಕ II
(949–966)

- ಆದಿತ್ಯ II (965–970)
- ರಾಜರಾಜದೇವ I (985–1013)
  - ರಾಜೇಂದ್ರಚೋಳದೇವ I (1012–1045)
    - ಅಮ್ಮಾಂಗದೇವಿ=ಚಾಲುಕ್ಯ ರಾಜರಾಜ
      - ಕುಲೋತ್ತುಂಗ ಚೋಳದೇವ I (1070—1120)
        - ವಿಕ್ರಮ ಚೋಳ (1118—1135)
          - ರಾಜರಾಜ II (1146—1172)
            - ಕುಲೋತ್ತುಂಗ ಚೋಳ III
              - ರಾಜರಾಜ III (1216—1257)
  - ರಾಜಾಧಿರಾಜ I (1012–1055)

## 18. ಹೊಯಿಸಳ ವಂಶ




(ಹೊಯ್ಸಳ)
ವಿನಯಾದಿತ್ಯ
(1047—1095)
ಎರೆಯಂಗ
1095—(1100)
ಬಲ್ಲಾಳ I
(1100—1106)
ವಿಷ್ಣುವರ್ಧನ
(1116—1141)
ಉದಯಾದಿತ್ಯ
ನರಸಿಂಹ I
(1141—1173)
ವೀರಬಲ್ಲಾಳ II
(1173—1220)
ನರಸಿಂಹ II
(1220—1235)
ವೀರಸೋಮೇಶ್ವರ
(1235—1254)
ನರಸಿಂಹ III
(1254—1294)
ರಾಮನಾಥ
(1254—1295)
ಬಲ್ಲಾಳ III
(1294—1342)
ವಿಶ್ವನಾಥ
(1295—1297)
ಬಲ್ಲಾಳ IV
(1342—1346 ?)

## 19. ಯಾದವ ವಂಶ


ಸೇವುಣ
ಭಿಲ್ಲಮ
(1187—1191)
ಜೈತುಗಿ
(1191—1210)
ಸಿಂಘಣ
(1210--1247)
ಜೈತುಗಿ
(1247—1260)
ಕೃಷ್ಣ
(1260—1271)
ಮಹಾದೇವ
ರಾಮಚಂದ್ರ
(1271—1309)
ಶಂಕರ
ಮಗಳು=ಹರಪಾಲದೇವ

## 3. ಟಿಪ್ಪಣಿ

ಮೌರ್ಯ ಚಂದ್ರಗುಪ್ತನು ಭದ್ರಬಾಹುವಿನ ಶಿಷ್ಯನಾಗಿ ಶ್ರವಣಬೆಳುಗೊಳಕ್ಕೆ ಬಂದು ವ್ರತವನ್ನು ನಡೆಸಿದ ವೃತ್ತಾಂತವು ಸಿದ್ಧಾಂತವೆಂದು ಹೇಳಲಾಗುವುದಿಲ್ಲ. ಈ ಅಂಶ ವನ್ನು ಓದುಗರು ನೆನಪಿನಲ್ಲಿಟ್ಟುಕೊಳ್ಳುವುದಲ್ಲದೆ ಕಾರಣಾಂತರದಿಂದ Z ಎಂಬ ಶಬ್ದಕ್ಕೆ ಕನ್ನಡದ ಸಕಾರವೇ ಪ್ರಯೋಗವಾಗಿರುವುದನ್ನೂ ತಿಳಿದು ಉಚ್ಚಾರಣೆಯಲ್ಲಿ ತಿದ್ದಿಕೊಳ್ಳ ಬೇಕಾಗುವುದು.

ಕ್ರಿ.ಶ. 528ರಲ್ಲಿ ಹೂಣರನ್ನು ಸೋಲಿಸಿದ ರಾಜನ ಹೆಸರು ಯಶೋಧರ್ಮನೆಂದಿದೆ; ಯಶೋವರ್ಮದೇವನೆಂದು ತಿದ್ದಿಕೊಳ್ಳಬೇಕು.

# 4. ಅಕಾರಾದಿ ಕೋಶ

2·34.— ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಟಿ. ಸುಬ್ರಹ್ಮಣ್ಯ ಅಯ್ಯರವರಿಂದ ಮುದ್ರಿಸಲ್ಪಟ್ಟಿತು.